# ಕರ್ನಾಟಕದಲ್ಲಿ ಸತಿಪದ್ಧತಿ

ಸಂಶೋಧಕರು :
ಬಿ. ಎಸ್. ಶೀಶೆ
ಕನ್ನಡ ಅಧ್ಯಾಪಕರು,
ನ್ಯೂ ಆರ್ಟ್ಸ್ ಕಾಲೇಜ, ವಿಜಾಪುರ

ಮಾರ್ಗದರ್ಶಕರು :
ಡಾ. ಎಂ. ಎಂ. ಕಲಬುರ್ಗಿ,
ಎಂ ಎ., ಪಿಎಚ್. ಡಿ.
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪಿಎಚ್. ಡಿ. ಪದವಿಗಾಗಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ.

೧೯೮೮

Certificate

## ಪ್ರಮಾಣ ಪತ್ರ

ಶ್ರೀ ಬಿ.ಎಸ್.ಶೀರೆ ಅವರು ಬರೆದು ಸಾದರಪಡಿಸಿದ 'ಕರ್ನಾಟಕದಲ್ಲಿ ಸತಿಪದ್ಧತಿ' ಮಹಾಪ್ರಬಂಧ ಮೂಲ ಸಂಶೋಧನಾಕೃತಿಯಾಗಿದೆ. ಶ್ರೀಯುತರು ನನ್ನ ಮಾರ್ಗದರ್ಶನದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದಲ್ಲಿ ಸಂಶೋಧನೆ ಕೈಕೊಂಡಿದ್ದಾರೆ. ಈ ಮಹಾಪ್ರಬಂಧ ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಹೇಳುತ್ತ ಈ ಪ್ರಮಾಣಪತ್ರ ನೀಡುತ್ತೇನೆ.

ಧಾರವಾಡ.

ದಿನಾಂಕ: 15-3-1988.

(ಡಾ.ಎಂ.ಎಂ.ಕಲಬುರ್ಗಿ)
ಮಾರ್ಗದರ್ಶಕರು.



## ಕೃತಜ್ಞತೆ

ಡಾ.ಎಂ.ಎಂ.ಕಲಬುರ್ಗಿ ಅವರ ಮಾರ್ಗದರ್ಶನದ ಫಲ ಈ ಮಹಾಪ್ರಬಂಧ. ವಿಷಯದ ಆಯ್ಕೆ, ಅಧ್ಯಯನದ ಮುಂದುವರಿಕೆ, ಸಾಮಗ್ರಿಯ ಸಂಗ್ರಹ — ವರ್ಗೀಕರಣ — ವ್ಯಾಖ್ಯಾನ, ಪ್ರಬಂಧದ ವಿನ್ಯಾಸ–ಬರವಣಿಗೆ–ತಿದ್ದುಪಡಿ ಈ ಎಲ್ಲ ಮಜಲುಗಳಲ್ಲಿ ಅವರು ನನ್ನನ್ನು ದುಡಿಸಿದ ತಾವೂ ದುಡಿದ ಸಂದರ್ಭಗಳು ನೆನಪಾದಾಗಲೆಲ್ಲ 'ಧನ್ಯತೆ' ತುಂಬಿ ಬರುತ್ತದೆ. ಈ ಪ್ರಬಂಧವನ್ನು ತಿದ್ದುವ ಮೂಲಕ ನನ್ನನ್ನೇ ತಿದ್ದಿದ, ನನ್ನಿಂದ ಕನ್ನಡದ ಕೆಲಸ ಮಾಡಿಸಿದ ಡಾ.ಎಂ.ಎಂ.ಕಲಬುರ್ಗಿ ಅವರಿಗೆ ಕೃತಜ್ಞನಾಗಿದ್ದೇನೆ.

ವಿಸ್ತಾರವಾದ ಕ್ಷೇತ್ರಕಾರ್ಯವನ್ನು ಅವಲಂಬಿಸಿರುವ ಈ ಅಧ್ಯಯನಕ್ಕೆ ಹಣಕಾಸಿನ ನೆರವು ಮುಖ್ಯ. ಅದನ್ನು ಪೂರೈಸಿಕೊಟ್ಟ ಸಹೋದರರಾದ ಶ್ರೀ.ಅಪ್ಪಾಸಾಹೇಬ, ಶ್ರೀ.ರೇವಣಸಿದ್ದ, ಮಾವನವರಾದ ಶ್ರೀ.ಎಸ್.ಕೆ.ಬಿರಾದಾರ ಹಾಗೂ ಶ್ರೀ.ಎನ್.ಸಿ.ಬಿರಾದಾರಪಾಟೀಲ ಅವರನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬೇಕು. ಯಾವುದಕ್ಕೂ ನಗು–ನಗುತ್ತ ನೆರವು ನೀಡಿದ ಇವರು ಈ ಪ್ರಬಂಧದ ಹಿನ್ನೆಲೆಯಲ್ಲಿರುವ ಆರ್ಥಿಕ ಶಕ್ತಿಗಳು. Government of India, Ministry of Education and Culture (Department of Culture) —ವಿಭಾಗವು ಅಧ್ಯಯನಾವಧಿಯಲ್ಲಿ ನನಗೆ ಧನಸಹಾಯವನ್ನು ನೀಡಿ ಸಹಕರಿಸಿರುವುದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬೇಕು. ಡಾ.ಕಲಬುರ್ಗಿ ಅವರ ಸಮರ್ಥ ಮಾರ್ಗದರ್ಶನದ ಲಾಭ, ಮೇಲಿನ ಶಕ್ತಿಗಳ ಹಣಕಾಸಿನ ಸಹಾಯ —ಹೀಗೆ ದ್ವಿಮುಖ ನೆರವನ್ನು ಪಡೆದು ನಮ್ಮ ಮಹಾಪ್ರಬಂಧ ರೂಪಗೊಂಡುದೊಂದು ಯೋಗಾಯೋಗವೆಂದೇ ಹೇಳಬೇಕು.

ಪ್ರಬಂಧ ಸಿದ್ಧತೆಯ ಮೊದಲಿನಿಂದಲೂ ಆಸಕ್ತಿವಹಿಸಿ ಸಲಹೆ–ಸೂಚನೆಗಳನ್ನು ನೀಡುತ್ತ ಬಂದ ಗುರುಗಳಾದ ಡಾ.ಬಿ.ಆರ್.ಹಿರೇಮಠ ಅವರ ಸಹಕಾರ ಅಪೂರ್ವವಾದುದು. ಅಧ್ಯಯನ ಕಾಲದಲ್ಲಿ ಉಂಟಾದ ಹಲವು ಬಗೆಯ ತೊಂದರೆಗಳನ್ನು ಅವರಲ್ಲಿ ತೋಡಿಕೊಂಡಾಗ ಸೂಕ್ತ ಪರಿಹಾರ ಸೂಚಿಸಿದವರು ಅವರು. ಡಾ.ದೇವೇಂದ್ರಕುಮಾರ ಹಕಾರಿ, ಡಾ.ಬಿ.ವಿ.ಮಲ್ಲಾಪುರ, ಹಾಗೂ ಡಾ.ಚನ್ನಕ್ಕ ಎಲಿಗಾರ ಅವರು ಪ್ರಬಂಧದುದ್ದಕ್ಕೂ ಆಸಕ್ತಿ–ಪ್ರೀತಿಯನ್ನು ತೋರಿಸಿರುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳದಿರಲಾರೆ. ಪ್ರಕಟಿಸುವ ಪೂರ್ವದಲ್ಲಿ ತಾವು ಸಂಗ್ರಹಿಸಿರುವ ಜನಪದ ಗೀತೆಗಳನ್ನು ನನಗೆ ಒದಗಿಸಿದ ಶ್ರೀ.ಕೃಷ್ಣಮೂರ್ತಿ ಹನೂರ

ಅವರ ಉಪಕಾರ ಮರೆಯಲು ಸಾಧ್ಯವಿಲ್ಲ. ಅವರಿಗೆ ನನ್ನ ಅನಂತ ಕೃತಜ್ಞತೆಗಳು.

ವಿಜಾಪುರದ ಬಿ.ಎಲ್.ಡಿ.ಇ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳೂ, ಕರ್ನಾಟಕ ರಾಜ್ಯದ ಮಾಜಿ ಮಂತ್ರಿಗಳೂ, ಪ್ರಸ್ತುತದಲ್ಲಿ ವಿಧಾನಸಭೆಯ ಸದಸ್ಯರೂ ಆಗಿರುವ ಶ್ರೀ.ಬಿ.ಎಂ ಪಾಟೀಲ ಅವರು, ಇನ್ನೊಬ್ಬ ವಿಧಾನಸಭೆಯ ಸದಸ್ಯರಾದ ಶ್ರೀ.ಎನ್.ಎಸ್.ಖೇಡ ಅವರು, ಬಿ.ಎಲ್.ಡಿ.ಇ ಸಂಸ್ಥೆಯ ಚೇರಮನ್ನರಾದ ಶ್ರೀ.ಜಿ.ಆರ್.ಪಾಟೀಲ (ಲಿಂಗದಳ್ಳಿ) ಅವರು ಈ ಪ್ರಬಂಧ ರಚನೆಯ ಬಗ್ಗೆ ವಹಿಸಿದ ಕಾಳಜಿ, ಕೊಟ್ಟ ಉತ್ತೇಜನ ಅಷ್ಟಿಷ್ಟಲ್ಲ. ಅವರಿಗೆ ನನ್ನ ಕೃತಜ್ಞತೆಗಳು. ಪ್ರಬಂಧ ಸಿದ್ಧತೆಯ ದೀರ್ಘ ಅವಧಿಯುದ್ದಕ್ಕೂ ಸಹಕರಿಸಿದ ಬಿ.ಎಲ್.ಡಿ.ಇ. ಸಂಸ್ಥೆಯ ಪ್ರಾಚಾರ್ಯರುಗಳಾದ ಶ್ರೀ.ಬಿ.ಬಿ.ಬನ್ನೂರ, ಶ್ರೀ.ಎಸ್.ಎಸ್.ಕಬ್ಬಿನ, ಶ್ರೀ.ಜಿ.ಕೆ.ಪಾಟೀಲ, ಶ್ರೀ.ಸಿ.ಬಿ.ಕಾಜಾಪುರ, ಶ್ರೀ.ಎನ್.ಜಿ.ಕರೂರ, ಶ್ರೀ.ಪಿ.ಬಿ.ಪುರಾಣಿಕಮಠ ಅವರನ್ನೂ, ಸಿಂದಗಿ ನೂತನ ಕಾಲೇಜಿನ ಪ್ರಾಚಾರ್ಯರಾದ ಶ್ರೀ.ಟಿ.ಕೆ.ಕಲ್ಯಾಣಪ್ಪಗೋಳ ಅವರನ್ನೂ, ಅಧ್ಯಾಪಕ ಮಿತ್ರರಾದ ಶ್ರೀ.ವಿ.ಎಂ.ಕುಸೂರ, ಶ್ರೀ.ಎ.ಬಿ.ಬೂದಿಹಾಳ, ಶ್ರೀ.ಗೋಪಾಲನ್, ಶ್ರೀ.ಬಿ.ಎಸ್.ಸಾರಂಗಮಠ, ಶ್ರೀ.ವಾಯ್.ಎಚ್.ಕಲಾಲ ಅವರನ್ನೂ, ಗುರುಗಳಾದ ಶ್ರೀ.ಸಂಗಮನಾಥ ಹಂಡಿ, ಶ್ರೀ.ಎಸ್.ಎಸ್.ಕನಮಡಿ, ಶ್ರೀ.ಎ.ಎಸ್.ಹಿಪ್ಪರಗಿ, ಶ್ರೀ.ಎನ್.ಆರ್.ಬಿರಾದಾರ ಅವರನ್ನೂ ತುಂಬು ಹೃದಯದಿಂದ ಈ ಪ್ರಸಂಗದಲ್ಲಿ ನೆನಸಿಕೊಳ್ಳುತ್ತೇನೆ.

ಕ್ಷೇತ್ರಕಾರ್ಯದಲ್ಲಿ ಕರ್ನಾಟಕದ ಗ್ರಾಮೀಣ ಜನ ಪ್ರೀತಿ–ವಿಶ್ವಾಸದಿಂದ ನನ್ನನ್ನು ಕಂಡಿದ್ದಾರೆ. ಅವರನ್ನು ಎಷ್ಟು ಸ್ಮರಿಸಿದರೂ ಸಾಲದು. ಪರಕೀಯನಾದ ನನ್ನನ್ನು ತಮ್ಮವನನ್ನಾಗಿ ಕಂಡ ಅವರ ಸುಸಂಸ್ಕೃತ ಮನಸ್ಸು ನನ್ನನ್ನು ಮೂಕನನ್ನಾಗಿಸಿದೆ. ಕ್ಷೇತ್ರಕಾರ್ಯದಲ್ಲಿ ನನ್ನೊಡನೆ ಹಲವೆಡೆ ಹಳ್ಳಿ–ಕಾಡುಗಳಿಗೆ ಸುತ್ತಿ ಕಷ್ಟಪಟ್ಟ ಅಧ್ಯಾಪಕಮಿತ್ರ ಶ್ರೀ.ಡಿ.ಎನ್.ನಡಗೇರಿ ಅವರನ್ನು ನೆನಪಿಸಿಕೊಳ್ಳುವುದೇ ಒಂದು ಹಿತವಾದ ಅನುಭವ. ಕ್ಷೇತ್ರಕಾರ್ಯದಲ್ಲಿ ನಾನು ಸಂಗ್ರಹಿಸಿದ ಮಾಸ್ತಿಸ್ಮಾರಕ ಶಿಲ್ಪಗಳ ಚಿತ್ರಗಳನ್ನಲ್ಲದೆ, ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ವೀರಗಲ್ಲುಗಳು –ಮಾಸ್ತಿಕಲ್ಲುಗಳು, ಮಹಾಸತಿ ಆಚರಣೆ ಒಂದು ಅಧ್ಯಯನ, ಕರ್ನಾಟಕದ ವೀರಗಲ್ಲುಗಳು –ಈ ಗ್ರಂಥಗಳಲ್ಲಿ ಈಗಾಗಲೇ ಪ್ರಕಟಗೊಂಡ ಚಿತ್ರಗಳನ್ನೂ ಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ. ಈ ಗ್ರಂಥಕರ್ತೃಗಳಿಗೆ ನಾನು ಋಣಿಯಾಗಿದ್ದೇನೆ. ಪ್ರಬಂಧದಲ್ಲಿಯ ಭಾವಚಿತ್ರಗಳನ್ನು ಸಕಾಲಕ್ಕೆ ಒದಗಿಸಿಕೊಟ್ಟ ವಿಜಾಪುರದ ಶ್ರೀ.ಮಹಾಲಕ್ಷ್ಮಿ ಫೋಟೋ

ಸುಬ್ಬಡಿಂತಿರೋದ ಮಾಲೀಕರಾದ ಶ್ರೀ·ಗುರುರಾಜ·ಪಿ·ಬಿದರಿ ಅವರನ್ನು, ಬೆರಳಚ್ಚಿನ ಕಾರ್ಯವನ್ನು ಅತೀ ಶೀಘ್ರದಲ್ಲಿ ಸಿದ್ಧಮಾಡಿಕೊಟ್ಟ ಶ್ರೀ·ಬಸವರಾಜ·ಚ·ಕರಕರಡ್ಡಿ ಅವರನ್ನು, ಪ್ರಬಂಧದ ಪ್ರತಿಗಳನ್ನು ನನ್ನೊಡನೆ ಬರೆದು ತಿದ್ದಿದ ನನ್ನ ಶ್ರೀಮತಿ·ಶೀಲಾ ಮತ್ತು ವಿದ್ಯಾರ್ಥಿಮಿತ್ರರಾದ ಶ್ರೀ·ಎಂ·ಆರ್·ಚಿಂತಾಮಣಿ, ಶ್ರೀ·ಎಸ್·ಎಸ್·ಅಂಗಡಿ ಅವರನ್ನು ಸ್ಮರಿಸಿಕೊಳ್ಳುವುದೇ ಒಂದು ಸಂತಸ·

ವಿಜಾಪುರ·

ದಿನಾಂಕ :15—3—1988·

—ಬಿ·ಎಸ್·ಶೀಠಿ·





Contents

# ಪರಿವಿಡಿ

o–o

# ಅಧ್ಯಾಯ – 1

## ಅಧ್ಯಯನದ ಅಗತ್ಯ ಮತ್ತು ಸ್ವರೂಪ

ಮಾನವ ಜನಾಂಗದಲ್ಲಿ ಗಂಡು–ಹೆಣ್ಣಿನ ಸಂಬಂಧ ವಿಶಿಷ್ಟವಾದುದು. ಈ ಸಂಬಂಧದ ಹಿನ್ನೆಲೆಯಲ್ಲಿ ಹಲವು ವಿಧಿ–ವಿಧಾನಗಳು, ಆಚಾರ–ವಿಚಾರಗಳು, ಸಂಪ್ರದಾಯ – ಪದ್ಧತಿಗಳು ಜನ್ಮತಾಳಿದವು. ಇವು ಮಾನವ ಬದುಕನ್ನು ವ್ಯವಸ್ಥಿತಗೊಳಿಸುತ್ತ, ನಿಯಂತ್ರಿಸುತ್ತ ಬಂದವು. ಇವುಗಳಲ್ಲಿ ಸತಿಪದ್ಧತಿಯೂ ಒಂದು. 'ಸತಿ' ಪದ ವಿಶಾಲಾರ್ಥದಲ್ಲಿ 'ಸ್ತ್ರೀ' ಎಂಬುದನ್ನು ಸೂಚಿಸುವುದಾಗಿದ್ದರೂ ಮಿತವಾದ ಅರ್ಥದಲ್ಲಿ ಅದು ಗಂಡನ ಮರಣದ ತಕ್ಷಣ ನಿಧನ ಹೊಂದುವ ಪತ್ನಿಯನ್ನು ಸೂಚಿಸುವುದಾಗಿದೆ. ಸ್ತ್ರೀಯರು ಹೀಗೆ ನಿಧನಹೊಂದುವ ಪದ್ಧತಿ ಜಗತ್ತಿನ ವಿವಿಧ ಭಾಗಗಳಲ್ಲಿ ಬೆಳೆದುಬಂದುದಾಗಿದೆ. ಭಾರತದಲ್ಲಿ, ಅದರ ಭಾಗವಾದ ಕರ್ನಾಟಕದಲ್ಲಿಯೂ ಅದು ನಡೆದುಕೊಂಡು ಬಂದಿದೆ. ಪ್ರಸ್ತುತ ಮಹಾಪ್ರಬಂಧವು ಕರ್ನಾಟಕದಲ್ಲಿಯ ಸತಿಪದ್ಧತಿಯನ್ನು ಮುಖ್ಯವಾಗಿಟ್ಟುಕೊಂಡು ರಚಿಸಿದುದಾಗಿದೆ.

ಕರ್ನಾಟಕದ ರಾಜಕೀಯ ಇತಿಹಾಸ ಕುರಿತು ಹಲವಾರು ಗ್ರಂಥ–ಲೇಖನಗಳು ಪ್ರಕಟಗೊಂಡಿವೆ. ಆದರೆ ಕನ್ನಡಿಗರ ಸಾಂಸ್ಕೃತಿಕ ಬದುಕಿನ ಕುರಿತಾಗಿ ರಚನೆಗೊಂಡ ಗ್ರಂಥಗಳು ತುಂಬ ವಿರಳವೆಂದೇ ಹೇಳಬೇಕು. ಈ ದಿಕ್ಕಿನಲ್ಲಿ ಮೊದಲು ಗಮನಹರಿಸಿ, ಅದರ ಕೊರತೆ ನೀಗಿಸಲು ಪ್ರಯತ್ನಿಸಿದವರು ಡಾ. ಎಂ. ಚಿದಾನಂದಮೂರ್ತಿ ಅವರು. 1966ರಲ್ಲಿ ಪ್ರಕಟಗೊಂಡ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾಪ್ರಬಂಧ ಕರ್ನಾಟಕ ಇತಿಹಾಸದ ಅಧ್ಯಯನದಲ್ಲಿ ಒಂದು ಮೈಲುಗಲ್ಲು. ಅವರು ತಮ್ಮ ಗ್ರಂಥದ ಪ್ರಾರಂಭದಲ್ಲಿ ಹೇಳಿದ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. "ಒಂದು ನಾಡಿನ ಇತಿಹಾಸವೆಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೆಂಬ ಭಾವನೆ ಬಹು ಪ್ರಚಲಿತವಾಗಿದೆ. ಇತಿಹಾಸವನ್ನು ಚಿತ್ರಿಸುವ ಗ್ರಂಥಗಳಲ್ಲಿ ಈ ರಾಜಕೀಯ ಇತಿಹಾಸವೇ ಪ್ರಧಾನವಾಗಿದ್ದು ಗ್ರಂಥದ ಕೊನೆಯಲ್ಲಿ ಆ ನಾಡಿನ ಕಲೆ, ಧರ್ಮ –ಇತ್ಯಾದಿಗಳನ್ನು ಕುರಿತ ವಿಷಯಗಳು ಒಂದು ಅನುಬಂಧದ ರೂಪದಲ್ಲಿರುವುದುಂಟು. ಅಥವಾ ಅವುಗಳನ್ನು ನಿರೂಪಿಸುವ ಕೆಲವು ಅಧ್ಯಾಯಗಳು ಬಂದಿರುವುದುಂಟು. ಒಂದು ನಾಡು ಎಂ ಅದನ್ನು ಆಳಿದ ರಾಜರು ಅಲ್ಲ, ಅಲ್ಲಿ ಬದುಕಿದ ಜನ. ಹೀಗೆ ಬದುಕಿದ ಜನದ ಒಂದು ಗಣನೀಯವಾದ ಭಾಗ ಆ ನಾಡನ್ನಾಳಿದ ರಾಜಸಮೂಹ. ಒಂದು ದೇಶದ ನಿಜವಾದ ಇತಿಹಾಸವೆಂದರೆ, ಆ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅದರ ಜೀವನ

ಸಮಸ್ಯೆಗಳು, ಅದರ ಜೀವನ ಮೌಲ್ಯಗಳು —ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ.[1] ಈ ದೃಷ್ಟಿಯಿಂದಲೇ ಪ್ರಾಚೀನ ಕರ್ನಾಟಕದ ಸಾಮಾಜಿಕ ಜೀವನದ ಒಂದು ಮಹತ್ವದ ಭಾಗವಾಗಿರುವ ಸತಿ ಪದ್ಧತಿಯನ್ನು ಕುರಿತು ಇಲ್ಲಿ ಅಧ್ಯಯನ ನಡೆಸಲಾಗಿದೆ.

1934 ರಲ್ಲಿ ಪ್ರಕಟಗೊಂಡ ಡಾ.ಬಿ.ಎ ಸಾಲೆತೊರೆ ಅವರ 'ಸೋಷಿಯಲ್ ಆ್ಯಂಡ್ ಪೊಲಿಟಿಕಲ್ ಲೈಫ್ ಇನ್ ವಿಜಯನಗರ ಎಂಪಾಯರ್' ಎಂಬ ಗ್ರಂಥದಲ್ಲಿ ವಿಜಯನಗರದಲ್ಲಿ ಜರುಗಿದ ಸತಿ ಘಟನೆಗಳನ್ನು ಕುರಿತು ವಿವರಿಸಲಾಗಿದೆ.[2] 1941ರಲ್ಲಿ ಪ್ರಕಟವಾದ 'ಸಂಭಾವನೆ' ಗ್ರಂಥದಲ್ಲಿ ಶ್ರೀ.ತೀ.ತಾ ಶರ್ಮ ಅವರು 'ವೀರಗಲ್ಲು—ಮಾಸ್ತಿಗಲ್ಲು' ಎಂಬ ಉಪಯುಕ್ತ ಲೇಖನವನ್ನು ಬರೆದಿದ್ದಾರೆ.[3]

'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಗ್ರಂಥದಲ್ಲಿ ಆತ್ಮಬಲಿಯ ಪ್ರಕಾರಗಳನ್ನು ವಿವರಿಸುವಾಗ 'ಸಹಗಮನ' ದ ಕುರಿತು ಡಾ.ಎಂ.ಚಿದಾನಂದಮೂರ್ತಿ ಅವರು ಸಂಕ್ಷಿಪ್ತವಾಗಿಯಾದರೂ ಬೆಲೆಯುಳ್ಳ ಚಿಂತನೆ ಮಾಡಿದ್ದಾರೆ. 'ಸಹಗಮನ' ದ ವಿಷಯದಲ್ಲಿ ಮುಂದೆ ಕೆಲಸ ಮಾಡುವವರಿಗೆ ಅದು ತೋರುಬೆರಳಾಗಿ ಕಾಣಿಸಿಕೊಂಡಿದೆ. ಡಾ.ಚಿದಾನಂದಮೂರ್ತಿ ಅವರ ಇನ್ನೊಂದು ಗ್ರಂಥ 'ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು' ಎಂಬುದು ಎಳೆಯರಿಗಾಗಿ ಬರೆದ ಚಿಕ್ಕ ಗ್ರಂಥ. ಮಾಸ್ತಿಕಲ್ಲುಗಳ ಪಾಠ ಮತ್ತು ಶಿಲ್ಪಗಳನ್ನು ಅಚ್ಚುಕಟ್ಟಾಗಿ ಈ ಗ್ರಂಥದಲ್ಲಿ ಬಳಸಿಕೊಳ್ಳಲಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ವಿಸ್ತರಣ ವಿಭಾಗದಿಂದ 1977ರಲ್ಲಿ ಪ್ರಕಟವಾಗಿರುವ ಚೆನ್ನಕ್ಕ ಎಲಿಗಾರ ಅವರ 'ಮಾಸ್ತಿಕಲ್ಲು' ಎಂಬ ಪುಸ್ತಕವನ್ನು ಇಲ್ಲಿ ಸ್ಮರಿಸಬಹುದಾಗಿದೆ. ಈ ಪುಸ್ತಕದಲ್ಲಿ ಮಾಸ್ತಿಕಲ್ಲುಗಳ ವಿಷಯವನ್ನು ಗ್ರಂಥಸಾಹಿತ್ಯ, ಜನಪದ ಸಾಹಿತ್ಯ, ಪ್ರವಾಸಸಾಹಿತ್ಯದ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇದನ್ನೇ ಅವರು "ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ" ಎಂಬ ತಮ್ಮ ಮಹಾಪ್ರಬಂಧದ ಒಂದು ಅಧ್ಯಾಯದಲ್ಲಿ ವಿಸ್ತರಿಸಿ ವಿವರಿಸಿದ್ದಾರೆ.[4]

ಡಾ ಎಂ.ಎಂ.ಕಲಬುರ್ಗಿ ಅವರ 1980ರಲ್ಲಿ ಪ್ರಕಟಗೊಂಡ ಸಮಾಧಿ—ಬಲಿದಾನ—ವೀರಮರಣ ಸ್ಮಾರಕಗಳು ಎಂಬ ಗ್ರಂಥ ಸತಿಪದ್ಧತಿಯ ವಿಷಯ ನಿರೂಪಣೆಯಲ್ಲಿ ತುಂಬ ಬೆಲೆಯುಳ್ಳ ಪಾತ್ರ ವಹಿಸುತ್ತದೆ. ಶಾಸನ, ಶಿಲ್ಪ, ಕಾವ್ಯ, ಜನಪದ ಸಾಹಿತ್ಯ, ಪ್ರವಾಸಸಾಹಿತ್ಯ

ಈ ಮೊದಲಾದವುಗಳಿಂದ ದೊರಕುವ ಸತಿಸಂಗತಿಗಳನ್ನು ಸಂಗ್ರಹಿಸಿ ಈ ಗ್ರಂಥದಲ್ಲಿ ವಿಶ್ಲೇಷಿಸಲಾಗಿದೆ. ಅಲ್ಲದೆ, ಅಪೂರ್ವವಾದ ಕೆಲವು ಶಿಲ್ಪಗಳ ಭಾವಚಿತ್ರಗಳನ್ನು ಈ ಗ್ರಂಥದಲ್ಲಿ ಕೊಡಲಾಗಿದೆ. ಡಾ. ಆರ್. ಶೇಷಶಾಸ್ತ್ರಿ ಅವರ 1982ರಲ್ಲಿ ಪ್ರಕಟಗೊಂಡ 'ಕರ್ನಾಟಕದ ವೀರಗಲ್ಲುಗಳು' ಎಂಬ ಮಹಾಪ್ರಬಂಧ ವೀರಗಲ್ಲುಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಿದುದಾಗಿದೆ. ಹೀಗಿದ್ದೂ ಈ ಗ್ರಂಥದಲ್ಲಿ ವೀರಗಲ್ಲುಗಳಲ್ಲಿಯ ಮಾಸ್ತಿಪಾತ ಮತ್ತು ಮಾಸ್ತಿಶಿಲ್ಪಗಳನ್ನು ವಿಶ್ಲೇಷಿಸುವಾಗ ಸತಿ ವಿಷಯವನ್ನು ಉಪಯುಕ್ತವಾದ ರೀತಿಯಲ್ಲಿ ವಿವರಿಸಲಾಗಿದೆ.

1985ರಲ್ಲಿ ಪ್ರಕಟಗೊಂಡ ಡಾ. ಬಸವರಾಜ ಕಲ್ಗುಡಿ, ಅವರ 'ಮಹಾಸತಿ ಆಚರಣೆ ಒಂದು ಅಧ್ಯಯನ' ಎಂಬ ಗ್ರಂಥ ಸತಿ ವಿಷಯವಾಗಿ ಮಾಹಿತಿಗಳನ್ನು ಒದಗಿಸುವ ಶಾಸನ, ಜನಪದ ಗೀತೆ, ಪ್ರವಾಸಿಗರ ವರದಿ –ಇತ್ಯಾದಿಗಳನ್ನು ಒಂದೆಡೆಗೆ ಸಂಗ್ರಹಿಸುವ ಪ್ರಯತ್ನ ಮಾಡಿದೆ. ಡಾ. ಕಲ್ಗುಡಿ ಅವರು ತಮ್ಮ ಇತಿ–ಮಿತಿಯಲ್ಲಿ ಕ್ಷೇತ್ರಕಾರ್ಯವನ್ನು ಕೈಕೊಂಡು ಕೆಲವು ಹೊಸ ವಿಷಯಗಳನ್ನು ಈ ಗ್ರಂಥದಲ್ಲಿ ತಿಳಿಸಿದ್ದಾರೆ. ಡಾ. ಎಸ್. ಶೆಟ್ಟರ ಮತ್ತು ಸೊಂತಿಮೈಯರ್ ಅವರು ಸಂಪಾದಿಸಿದ 'ಮೆಮೊರಿಯಲ್ ಸ್ಟೋನ್ಸ್' ಎಂಬ ಗ್ರಂಥ ಪ್ರಾಚೀನ ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಜರುಗಿದ ಸತಿ ಘಟನೆಗಳ ಸ್ಮಾರಕ ಅಧ್ಯಯನವನ್ನೊಳಗೊಂಡಿದ್ದು, ಹಲವು ಸತಿಶಿಲ್ಪಗಳ ಭಾವಚಿತ್ರಗಳನ್ನು ಹೊಂದಿರುವುದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಎಡ್ವರ್ಡ್ ಥಾಮ್ಸನರ 'ಸತಿ', ಪಿ. ವಿ. ಕಾಣೆ ಅವರ 'ಹಿಸ್ಟರಿ ಆಫ್ ಧರ್ಮಶಾಸ್ತ್ರ', ಡಾ. ಎ. ಎಸ್. ಅಲ್ತೇಕರ ಅವರ 'ದಿ ಪೊಜಿಶನ್ ಆಫ್ ವುಮೆನ್ ಇನ್ ಹಿಂದು ಸಿವಿಲೈಜೇಶನ್', ವಿ. ಎನ್. ದತ್ತ ಅವರ 'ಸತಿ' –ಈ ಮೊದಲಾದ ಗ್ರಂಥಗಳು ಸತಿಪದ್ಧತಿಯ ಕುರಿತಾಗಿ ವಿವರವಾದ ವಿಷಯ ನಿರೂಪಣೆ ಮಾಡುತ್ತವೆ. ಈ ಗ್ರಂಥಗಳಲ್ಲಿ ಜಗತ್ತಿನಲ್ಲಿಯ ಮತ್ತು ಭಾರತದಲ್ಲಿಯ ಸತಿಪದ್ಧತಿಯ ಕುರಿತಾಗಿ ಉಪಯುಕ್ತ ಮಾಹಿತಿಗಳಿವೆ. 'ದಿ ಇಲ್ಲುಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ', 'ಸಂಡೇ ಸ್ಟ್ಯಾಂಡರ್ಡ್ ಮ್ಯಾಗಝಿನ್', 'ಮಿರರ್', 'ಉತ್ಥಾನ', 'ಸಾಧನೆ', 'ಜಯಕರ್ನಾಟಕ', 'ತರಂಗ', 'ಪ್ರಜಾವಾಣಿ', 'ಸಂಯುಕ್ತ ಕರ್ನಾಟಕ' –ಮೊದಲಾದ ಪತ್ರಿಕೆಗಳಲ್ಲಿ ಕೆಲವು ಮಹತ್ವದ ಸತಿಲೇಖನಗಳು, ಸುದ್ದಿಗಳು ಪ್ರಕಟಗೊಂಡಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[5] ಇವುಗಳನ್ನು ಈ ಮಹಾಪ್ರಬಂಧದಲ್ಲಿ ಅವಶ್ಯಕತೆಗೆ ಅನುಗುಣವಾಗಿ ಬಳಸಿಕೊಳ್ಳಲಾಗಿದೆ.

“ದುರ್ದೈವದಿಂದ ನಮ್ಮ ನಾಡಿನ ಮತ್ತು ಹೊರನಾಡಿನ ಎಲ್ಲ ಮರಣಸ್ಮಾರಕಗಳ ಪರಿವೀಕ್ಷಣಾಕಾರ್ಯ ಪೂರ್ಣವಾಗಿಲ್ಲ. ಪರಿವೀಕ್ಷಿತ ಮರಣಸ್ಮಾರಕಗಳಿಗೆ ಸಂಬಂಧಿಸಿದಂತೆ ಅಲ್ಲಿಯ

ಬರವಣಿಗೆಗಳು ಪ್ರಕಟವಾಗಿರುವುದು ಹೊರತು, ಚಿತ್ರಗಳಿಲ್ಲ. ಕೇವಲ ಚಿತ್ರವಿರುವ ಮರಣಸ್ಮಾರಕಗಳನ್ನು ನಾವು ಕಣ್ಣೆತ್ತಿ ಸಹ ನೋಡಿಲ್ಲ. ಹೀಗೆ ಮೂರು ರೀತಿಯಲ್ಲಿ ಇವುಗಳ ಕ್ಷೇತ್ರಕಾರ್ಯ ಅಪೂರ್ಣವಾಗಿ ಉಳಿದಿರುವುದರಿಂದ ಮರಣ ಸ್ಮಾರಕಗಳ ಬಗೆಗೆ ವಿವೇಚಿಸುವುದು ಇಂದು ಕಷ್ಟದ ಕೆಲಸವೇ ಸರಿ".[6] ಎಂಬ ಡಾ.ಎಂ.ಎಂ.ಕಲಬುರ್ಗಿ ಅವರ ಮಾತುಗಳಿಗೆ ಮಾಸ್ತಿಕಲ್ಲುಗಳು ಹೊರತಾಗಿವೆ ಎಂದು ಹೇಳುವಂತಿಲ್ಲ. ಕರ್ನಾಟಕದ ಹಳ್ಳಿಹಳ್ಳಿಗಳಲ್ಲಿ ಮಾಸ್ತಿಕಲ್ಲುಗಳಿವೆ. ಅವುಗಳ ಪಾಠವನ್ನು ಸಂಗ್ರಹಿಸುವ ಕಾರ್ಯ ಸಂಪೂರ್ಣವಾಗಿ ನಡೆಯದಿದ್ದರೂ ಬಹುಮಟ್ಟಿಗೆ ನಡೆದಿದೆ. ಆದರೆ ಅವುಗಳ ಶಿಲ್ಪವನ್ನು ಲಕ್ಷಿಸುವ, ಪ್ರಕಟಿಸುವ, ವಿಶ್ಲೇಷಿಸುವ ಕಾರ್ಯ ತೃಪ್ತಿಕರವಾಗಿ ನಡೆದಿಲ್ಲವೆಂದೇ ಹೇಳಬೇಕು. ಪ್ರಸ್ತುತ ಮಹಾಪ್ರಬಂಧವು ವೈವಿಧ್ಯಮಯ ಮಾಸ್ತಿಶಿಲ್ಪಗಳನ್ನು ಸಂಗ್ರಹಿಸುವಲ್ಲಿ ಮತ್ತು ಅವುಗಳನ್ನು ವಿಶ್ಲೇಷಿಸುವಲ್ಲಿ ಮುಖ್ಯ ಗಮನನೀಡಿದೆ. ಮಾಸ್ತಿಕಲ್ಲಿನ ಪಾಠದಿಂದ ವಿವರವಾದ ಮಾಹಿತಿ ದೊರಕದಿರುವುದು ದುರದೃಷ್ಟಕರ ಸಂಗತಿಯಾಗಿದೆ. ಆದರೂ ದೊರಕಿದ ಮಾಹಿತಿಗಳನ್ನು ಶಿಲ್ಪಗಳ ಆಧಾರದಿಂದ ಅರ್ಥೈಸಲು ಈ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ.

ಪ್ರಾಚೀನ ಕನ್ನಡ ಕಾವ್ಯಗಳು ಹಲವು ಸತಿಸಂಗತಿಗಳನ್ನು ನಿರೂಪಿಸಿವೆ. ವಿಕ್ರಮಾರ್ಜುನ ವಿಜಯ, ಕರ್ಣಾಟಕ ಕಾದಂಬರಿ, ಅಜಿತ ಪುರಾಣ, ಅನಂತನಾಥಪುರಾಣ, ಕರ್ಣಾಟಕ ಭಾರತ ಕಥಾಮಂಜರಿ, ತೊರವೆ ರಾಮಾಯಣ, ಮೋಹನ ತರಂಗಿಣಿ, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ರಾಮನಾಥ ಚರಿತೆ, ಸಿರುಮಣನಾಯಕನ ಸಾಂಗತ್ಯ —ಈ ಮೊದಲಾದ ಕಾವ್ಯಗಳು ಕರ್ನಾಟಕದಲ್ಲಿಯ ಸತಿಪದ್ಧತಿಯ ಮೇಲೆ ಬೆಳಕನ್ನು ಬೀರುತ್ತವೆ.[7] ಬಸವಣ್ಣ, ಅಕ್ಕಮಹಾದೇವಿ, ಮದಾರ ಧೂಳಯ್ಯ, ಷಣ್ಮುಖಸ್ವಾಮಿ ಈ ವಚನಕಾರರ ವಚನಗಳು ಸತಿ ವಿಷಯವನ್ನು ಹೇಳುತ್ತವೆ.[8] ಇವೆಲ್ಲವು ನಿರೂಪಿಸುವ ಸತಿ ವಿಷಯವನ್ನು ಪ್ರಸ್ತುತ ಪ್ರಬಂಧದಲ್ಲಿ ಗಮನಿಸಲಾಗಿದೆ. ಜನಪದಸಾಹಿತ್ಯ ಈ ದೃಷ್ಟಿಯಿಂದ ಇನ್ನೂ ಹೆಚ್ಚಿನ ಸಹಾಯವನ್ನು ಒದಗಿಸಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಕತ್ತಾಲದಾರಿ ದೂರ, ಜನಪದ ಖಂಡಕಾವ್ಯಗಳು, ವಡ್ಡಗೆರೆ ನಾಗಮ್ಮ, ಮಹಾಸತಿ ಆಚರಣೆ ಒಂದು ಅಧ್ಯಯನ, ಬಯಲು ಸೀಮೆಯ ಲಾವಣಿಗಳು, ಅವರು ನೀಡಿದ ದೀಪ, ಆಯ್ದ ಜನಪದ ಕಥೆಗಳು, ಕರ್ನಾಟಕ ಜನಪದ ಕಥೆಗಳು, ಕನ್ನಡ ಐತಿಹ್ಯಗಳು —ಈ ಮೊದಲಾದ ಗ್ರಂಥಗಳು ಸತಿ ಕುರಿತಾದ ಹಾಡು, ಕಥೆ, ವದಂತಿಗಳನ್ನು ಒಳಗೊಂಡಿವೆ.[9] ಹೀಗೆ ಸತಿ ವಿಷಯವಾಗಿ ವಿಪುಲ ಸಾಮಗ್ರಿ ಹೊಂದಿದ ಜನಪದ ಸಾಹಿತ್ಯವನ್ನು ಬಳಸಿಕೊಂಡು ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದ ಸತಿಪದ್ಧತಿಯನ್ನು ಕುರಿತು ಚಿಂತಿಸುವ — ವಿಶ್ಲೇಷಿಸುವ ಅವಶ್ಯಕತೆ ಇದ್ದಿತು. ಅದನ್ನು ತುಂಬ ವ್ಯಾಪಕವಾಗಿ ಈ ಮಹಾಪ್ರಬಂಧ ಸಮಾಲೋಚಿಸಿದೆ

ಕ್ಷೇತ್ರಕಾರ್ಯದ ಕುರಿತು ಒಂದೆರಡು ಮಾತುಗಳನ್ನು ಈ ಸಂದರ್ಭದಲ್ಲಿ ಹೇಳಬಹುದಾಗಿದೆ. ಸತಿ ವಿಷಯವನ್ನು ತಿಳಿಸುವ ಮಾಸ್ತಿಕಲ್ಲುಗಳ ಜೊತೆಗೆ ಸತಿವಿಷಯಕ ವಾಗಿರುವ ಕಥೆ, ಗಾದೆಮಾತು, ಜಾತ್ರೆ–ಉತ್ಸವ –ಈ ಮೊದಲಾದವುಗಳನ್ನು ಸತಿಪದ್ಧತಿಯ ಅಧ್ಯಯನದ ಹಿನ್ನೆಲೆಯಲ್ಲಿ ಗಮನಿಸುವುದು ಅವಶ್ಯಕವಾಗಿದ್ದಿತು. ಕರ್ನಾಟಕದ ಬಹುತರ ಹಳ್ಳಿ ಹಳ್ಳಿಗಳನ್ನು ಸುತ್ತಿ ಇಂಥ ವಿಷಯಗಳನ್ನು ಸಂಗ್ರಹಿಸಲಾಯಿತು. ಕೆಲವೆಡೆ ಸತಿಯರು ಕೊಂಡಕ್ಕೆ ಬಿದ್ದ ಪ್ರಸಂಗಗಳನ್ನು ಈಗಲೂ ಜಾತ್ರೆ ಸಂದರ್ಭದಲ್ಲಿ ಆಚರಿಸಿ ತೋರಿಸುತ್ತಾರೆ. ಅಂಥ ಪ್ರಸಂಗಗಳು ಸತಿಪದ್ಧತಿಯ ವಿಷಯಕ್ಕೆ ನೆರವಾಗುವುದರಿಂದ ಅವುಗಳನ್ನು ಪ್ರತ್ಯಕ್ಷ ನೋಡುವುದು ಅವಶ್ಯ. ಹೀಗೆ ಆಡಿತೋರಿಸುವ ಪ್ರಸಂಗಗಳು ಜನಪದ ಜೀವನದಲ್ಲಿ ಇನ್ನು ಮುಂದಿನ ಕೆಲವು ದಿನಗಳಲ್ಲಿ ಮಾಯವಾಗುವ ಸೂಚನೆಗಳು ಈಗಾಗಲೇ ಕಂಡುಕೊಳ್ಳುತ್ತಿವೆ. ಹೀಗಾಗಿ ಅವು ಗಳನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡುವ ಅಗತ್ಯವಿದ್ದಿತು. ಈ ದೃಷ್ಟಿಯಿಂದ ಹಳ್ಳಿ–ಹಳ್ಳಿಗಳನ್ನು ಸುತ್ತಿ ಈ ಘಟನೆಗಳನ್ನು ಇಲ್ಲಿ ದಾಖಲಿಸಲಾಗಿದೆ.

ಕರ್ನಾಟಕದ ಹಳ್ಳಿಗಳಲ್ಲಿ ಅನೇಕ ಸ್ವರೂಪದ ಸತಿಸ್ಮಾರಕಗಳು ಅನೇಕ ಸಂಖ್ಯೆಯಲ್ಲಿ ಬಿದ್ದುಕೊಂಡಿವೆ. ಮಾಸ್ತಿಕಲ್ಲುಗಳಂತೆ ಶಿಲೆ, ಗುಡಿ, ಸಮಾಧಿ, ಗೊಂಬೆ, ಹೊಂಡ, ಕಾಡು, ಮರ, ಹಳ್ಳ, ಕೆರೆ, ಕನ್ನಡಿ, ಬಳೆ, ಕಳಸ, ಸೀರೆ –ಈ ಮೊದಲಾದವುಗಳು ಸತಿಸ್ಮಾರಕಗಳಾಗಿರುವು ದನ್ನು ಕಾಣುತ್ತೇವೆ. ಇವುಗಳನ್ನು ಕಂಡು, ಛಾಯಾಚಿತ್ರ ಸಹಿತ ಪ್ರಸ್ತುತ ಪ್ರಬಂಧದಲ್ಲಿ ವಿವರಿಸಲಾಗಿದೆ. ಹೀಗೆ ಈ ಮಹಾಪ್ರಬಂಧವು ಹಲವು ಆಕರಗಳನ್ನು –ಕಾವ್ಯ, ಜನಪದ ಸಾಹಿತ್ಯ, ಪ್ರವಾಸ ಸಾಹಿತ್ಯ, ದಂತಕಥೆ, ಸ್ಮಾರಕ ಈ ಮೊದಲಾದವುಗಳನ್ನು –ಬಳಸಿಕೊಂಡು ಸಿದ್ಧಗೊಂಡಿದೆ.

ವೇಳವಾಳಿಗಳಾಗಿ ಆತ್ಮಬಲಿದಾನ ಮಾಡಿಕೊಂಡಿರುವ ಗಂಡಂದಿರೊಂದಿಗೆ ಪತ್ನಿಯರೂ ಮಡಿದಿರುವುದುಂಟು. ಇಂಥ ವಿಷಯಗಳನ್ನು ನಿರೂಪಿಸುವ ಶಾಸನಪಾಠ ಮತ್ತು ಶಿಲ್ಪಗಳನ್ನು ಸಂಪೂರ್ಣವಾಗಿ ವಿವೇಚಿಸಲಾಗದಿದ್ದರೂ ಆವಶ್ಯಕತೆ ಕಂಡಲ್ಲಿ ಅವುಗಳನ್ನು ಬಳಸಿಕೊಂಡು ವಿವರಿಸ ಲಾಗಿದೆ.

ಪ್ರಬಂಧದಲ್ಲಿ ಹತ್ತು ಅಧ್ಯಾಯಗಳನ್ನು ಕಲ್ಪಿಸಿಕೊಳ್ಳಲಾಗಿದೆ. ಮೊದಲನೆಯ ಈ ಅಧ್ಯಾಯವು ಪ್ರಬಂಧ ವಿಷಯ ಅಧ್ಯಯನದ ಆವಶ್ಯಕತೆ ಮತ್ತು ಅದರ ಸ್ವರೂಪಕ್ಕೆ ಸಂಬಂಧಿಸಿದುದಾಗಿದೆ. ಎರಡನೆಯ ಅಧ್ಯಾಯವು ಸತಿಪದ್ಧತಿಯ ಉಗಮ ಮತ್ತು ವಿಕಾಸದ ಕುರಿತು

ವಿವರಿಸುತ್ತದೆ. ಇದು ಮಹಾಪ್ರಬಂಧಕ್ಕೆ ಪೀಠಿಕೆ ರೀತಿಯಲ್ಲಿದೆ. ವಿದ್ವಾಂಸರು ಸತಿಪದ್ಧತಿಯ ಮೂಲವನ್ನು ಕುರಿತು ಚರ್ಚಿಸಿದ್ದನ್ನು ಈ ಅಧ್ಯಾಯದಲ್ಲಿ ಕೊಡಲಾಗಿದೆ. ಜಗತ್ತಿನಲ್ಲಿ ಭಾರತದಲ್ಲಿ ಸತಿಪದ್ಧತಿಯ ಕುರುಹುಗಳು ಕ್ರಿ.ಶ.ಪೂರ್ವ ಕಾಲದಿಂದಲೂ ಕಂಡುಬಂದಿರುವುದನ್ನು ಈ ಭಾಗದಲ್ಲಿ ವಿವರಿಸಲಾಗಿದೆ. ಅಲ್ಲದೆ ಭಾರತದಲ್ಲಿ ಅದು ಬೆಳೆದುಬಂದ ಬಗೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಈ ಭಾಗವು ಜಗತ್ತಿನ ವಿವಿಧ ಭಾಗಗಳಲ್ಲಿ ಸತಿಪದ್ಧತಿಯು ಪ್ರಚಲಿತದಲ್ಲಿದ್ದುದನ್ನು ಮತ್ತು ಭಾರತದಲ್ಲಿ ಅದು ವಿಕಾಸಗೊಂಡ ರೀತಿಯಲ್ಲಿ ತಿಳಿಸುತ್ತದೆ.

ಮೂರನೆಯ ಅಧ್ಯಾಯವು ಪ್ರಬಂಧದ ಮೂಲಸಾಧನಗಳನ್ನು ಕುರಿತು ವಿವರಿಸುವುದಾಗಿದೆ. ಗ್ರಂಥಸಾಹಿತ್ಯ, ಜನಪದ ಸಾಹಿತ್ಯ, ಪ್ರವಾಸ ಸಾಹಿತ್ಯ, ವದಂತಿ, ಸ್ಮಾರಕ ಈ ಮೊದಲಾದ ಆಕರಗಳ ಸ್ವರೂಪ, ವಿಷಯ ವೈವಿಧ್ಯ, ಅವು ನೆರವಾಗುವ ಬಗೆ ಅವುಗಳ ಪ್ರಾಮುಖ್ಯತೆ ಮತ್ತು ಅವುಗಳ ಇತಿ-ಮಿತಿ ಇತ್ಯಾದಿಗಳನ್ನು ಕುರಿತು ಈ ಭಾಗದಲ್ಲಿ ಚಿಂತಿಸಲಾಗಿದೆ. ನಾಲ್ಕನೆಯ ಅಧ್ಯಾಯವು ಸತಿಪದ್ಧತಿಯು ಉಗಮಗೊಳ್ಳಲಿಕ್ಕೆ ಮತ್ತು ಅದು ವಿಕಾಸಗೊಳ್ಳಲಿಕ್ಕೆ ಕಾರಣವಾದ ಅಂಶಗಳನ್ನು ಕುರಿತು ವಿವರಿಸುವುದಾಗಿದೆ. ಕರ್ನಾಟಕದಲ್ಲಿಯ ಸತಿಪದ್ಧತಿಯ ಕಾರಣಗಳನ್ನು ಮುಖ್ಯವಾಗಿ ಈ ಅಧ್ಯಾಯದಲ್ಲಿ ವಿವರಿಸಿದ್ದರೂ, ಅದಕ್ಕೆ ಹಿನ್ನೆಲೆಯಾಗಿ ಜಗತ್ತಿನಲ್ಲಿಯ ಸತಿಪದ್ಧತಿಯ ಕಾರಣಗಳನ್ನೂ ಇಲ್ಲಿ ಆಲೋಚಿಸಲಾಗಿದೆ. ಲೌಕಿಕ ಕಾರಣಗಳು ಮತ್ತು ಅಲೌಕಿಕ ಕಾರಣಗಳು ಎಂದು ಎರಡು ಭಾಗಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಇಲ್ಲಿ ಮಾಡಿಕೊಳ್ಳಲಾಗಿದೆ. ಲೌಕಿಕದಲ್ಲಿ ವೈಯಕ್ತಿಕ—ಸಾಮಾಜಿಕ ಕಾರಣಗಳು, ಅಲೌಕಿಕದಲ್ಲಿ ಪರಲೋಕ—ಪುನರ್ಜನ್ಮ ಕಲ್ಪನೆಗಳ ಕಾರಣಗಳು ಎಂದು ಗುರುತಿಸಿಕೊಂಡು ವಿವರಿಸುವ ಪ್ರಯತ್ನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಜರುಗಿದ ಸತಿಘಟನೆಗಳನ್ನು ಸಂಗ್ರಹಿಸಿ ವಿವೇಚಿಸಲಾಗಿದೆ. ಕರ್ನಾಟಕದಲ್ಲಿ ಸತಿ ಆಚರಣೆ ಐತಿಹಾಸಿಕವಾಗಿ, ಪ್ರಾದೇಶಿಕವಾಗಿ, ಜಾನಾಂಗಿಕವಾಗಿ ಪ್ರಸಾರಗೊಂಡ ಬಗೆಯನ್ನು ಇಲ್ಲಿ ಚಿಂತಿಸಲಾಗಿದೆ. ಆರನೆಯ ಅಧ್ಯಾಯವು ಸತಿಸಂದರ್ಭದ ವಿಧಿಗಳನ್ನು ವಿವರಿಸುವುದಾಗಿದೆ. ಸತಿಘಟನೆಯು ಜರುಗುತ್ತಿದ್ದ ಸಮಯದಲ್ಲಿ ಸತಿಹೋಗುವವಳಿಂದ ಹಾಗೂ ಅವಳ ಬಂಧುವರ್ಗದವರಿಂದ ಆಚರಿಸಲ್ಪಡುತ್ತಿದ್ದ ವಿಧಿಗಳನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಸತಿಯು ಚಿತೆಗೆ ಹೊರಡುವುದು, ಅವಳು ಸಿಂಗರಿಸಿಕೊಳ್ಳುವುದು, ಚಿತೆಯನ್ನು ಸಿದ್ಧಗೊಳಿಸುವುದು, ಅವಳು ದಾನಧರ್ಮಗಳನ್ನು ಮಾಡುವುದು ಇತ್ಯಾದಿಗಳ ವಿವರಣೆ ಇಲ್ಲಿದೆ. ಅಲ್ಲದೆ ಮೃತನ ಪತ್ನಿ ಸತಿಹೋದ ನಂತರ, ಅವಳಿಗಾಗಿ ಗುಡಿ ಕಟ್ಟಿಸುವುದು, ಜಾತ್ರ—

ಉತ್ಸವಗಳನ್ನು ನಡೆಸುವುದು, ಕೆಲವೊಮ್ಮೆ ಜರುಗುತ್ತಿದ್ದಿತೆಂದು ಇಲ್ಲಿ ಸ್ಪಷ್ಟಪಡಿಸಲಾಗಿದೆ.

ಏಳನೆಯ ಅಧ್ಯಾಯವು ಮೃತನ ಪತ್ನಿಯು ಸತಿಯಾಗುತ್ತಿದ್ದ ವಿಧಾನಕ್ಕೆ ಸಂಬಂಧಪಟ್ಟದ್ದಾಗಿದೆ. ಮುಖ್ಯವಾಗಿ ಅವಳು ಚಿತಾಪ್ರವೇಶ — ಸಮಾಧಿ ಪ್ರವೇಶಗಳ ಮೂಲಕ ಸತಿಹೋಗುತ್ತಿದ್ದಳು. ಅಲ್ಲದೆ ಕೆಲವು ಸಲ ಅವಳು ಜೀವನಸಮಾಧಿ ಮರಣ, ಕಮ್ಮರಿಯಿಂದ ಹಾರಿಕೊಳ್ಳುವುದು ಇತ್ಯಾದಿ ವಿಧಾನಗಳ ಮೂಲಕ ಸತಿಹೋಗುತ್ತಿದ್ದುದುಂಟು. ಈ ಎಲ್ಲ ವಿಧಾನಗಳ ಪರಿಚಯವನ್ನು ಈ ಅಧ್ಯಾಯ ಮಾಡಿಕೊಡುತ್ತದೆ. ಎಂಟನೆಯ ಅಧ್ಯಾಯವು ಮಾಸ್ತಿಕಲ್ಲುಗಳು ಮತ್ತು ಅವುಗಳ ಪಾಠಕ್ಕೆ ಸಂಬಂಧಪಟ್ಟದ್ದಾಗಿದೆ. ಮಾಸ್ತಿಕಲ್ಲುಗಳನ್ನು ಯಾವ ಉದ್ದೇಶದಿಂದ ಯಾರು, ಯಾವಾಗ ನೆಡುತ್ತಿದ್ದರು ಎಂಬುದನ್ನು ಈ ಭಾಗದಲ್ಲಿ ವಿವರಿಸಲಾಗಿದೆ. ಮತ್ತು ಮಾಸ್ತಿಕಲ್ಲುಗಳ ಪಾಠದ ಸ್ವರೂಪ, ಭಾಷೆ, ಸಾಹಿತ್ಯ ಇತ್ಯಾದಿಗಳ ಕುರಿತು ಇಲ್ಲಿ ನಿರೂಪಿಸಲಾಗಿದೆ.

ಒಂಬತ್ತನೆಯ ಅಧ್ಯಾಯವು ಮಾಸ್ತಿಕಲ್ಲುಗಳ ಶಿಲ್ಪವನ್ನು ಕುರಿತುದಾಗಿದೆ. ಮಾಸ್ತಿಕಲ್ಲಿನ ಶಿಲ್ಪಗಳು, ಅಪೂರ್ವವಾದ ಮಾಸ್ತಿಕಲ್ಲುಗಳು, ಗಂಡ ಮಡಿದ ಕಾರಣವನ್ನು ಅಭಿವ್ಯಕ್ತಿಸುವ ಮಾಸ್ತಿ ಶಿಲ್ಪಗಳು, ಸೌಭಾಗ್ಯ ಚಿಹ್ನೆಯುಳ್ಳ ಮಾಸ್ತಿ ಶಿಲ್ಪಗಳು, ಮಾಸ್ತಿಕಲ್ಲುಗಳ ವರ್ಗೀಕರಣ, ಮಾಸ್ತಿಕಲ್ಲಿನ ತೋಳಗೈಕಂಬದ ಸಮಸ್ಯೆ —ಇತ್ಯಾದಿ ವಿಷಯಗಳ ನಿರೂಪಣೆ ಈ ಭಾಗದಲ್ಲಿದೆ. ಮಾಸ್ತಿಕಲ್ಲಿನ ಅಚ್ಚುಕಟ್ಟಾದ ವರ್ಗೀಕರಣ ಮತ್ತು ವಿಶ್ಲೇಷಣೆ ಈ ಅಧ್ಯಾಯದಲ್ಲಿ ನಡೆದಿದೆ.

ಕೊನೆಯ ಅಧ್ಯಾಯ ಸಮಾರೋಪ. ಇದು ಪ್ರಬಂಧದ ಸಾಧನೆಗಳನ್ನು ಮತ್ತು ಈ ವಿಷಯದ ಕುರಿತು ಇನ್ನೂ ಮುಂದೆ ಮಾಡಬೇಕಾದ ಕೆಲಸ-ಕಾರ್ಯಗಳನ್ನು ಕುರಿತು ವಿವರಿಸುವುದಾಗಿದೆ. ಹೀಗೆ ಈ ಒಂದು ಚೌಕಟ್ಟಿನ ವ್ಯಾಪ್ತಿ ಮತ್ತು ಮಿತಿಯಲ್ಲಿ ಈ ಪ್ರಬಂಧವು ರಚನೆಗೊಂಡಿದೆ.

o—o

<u>ಅಡಿಟಿಪ್ಪಣಿಗಳು :</u>

1· ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ·ಎಂ·ಚಿದಾನಂದಮೂರ್ತಿ ಪುಟ–1·

2· ಸೋಷಿಯಲ್ ಆ್ಯಂಡ್ ಪೊಲಿಟಿಕಲ್ ಲೈಫ್ ಇನ್ ವಿಜಯನಗರ ಎಂಪಾಯರ್ :
ಡಾ·ಬಿ·ಎ·ಸಾಲೆತೊರೆ, ಪುಟ–84–96·

3· ಸಂಭಾವನೆ – 'ವೀರಗಲ್ಲು – ಮಾಸ್ತಿಗಲ್ಲು' : ಶ್ರೀ· ತಾ· ಶರ್ಮ, ಪು 154–164·

4· ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ : ಚನ್ನಕ್ಕ – ಎಲಿಗಾರ, ಪುಟ·417–459·

5· ದಿ ಇಲುಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ, ಜನೇವರಿ, 18–24, 1981;
ಸಂಡೆ ಸ್ಟ್ಯಾಂಡರ್ಡ್ ಮ್ಯಾಗಝಿನ್, ಜನೇವರಿ 11, 1981, ಮಿರರ್, ಜನೇವರಿ, 1981;
ಉತ್ಥಾನ, ಅಗಸ್ಟ, 1980; ಸಾಧನೆ, 4–2; ಜಯಕರ್ನಾಟಕ, ಸಂ–26, ಸಂ–9, 1958;
ತರಂಗ, 4 ಅಕ್ಟೋಬರ, 1987; ಪ್ರಜಾವಾಣಿ, 10–5–1981; ಸಂಯುಕ್ತ ಕರ್ನಾಟಕ,
4–12–1980·

6· ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು: ಡಾ·ಎಂ·ಎಂ·ಕಲಬುರ್ಗಿ, ಪುಟ–3·

7· ಪಂಪಕವಿ ವಿರಚಿತ ಪಂಪಭಾರತಂ : ಗದ್ಯಾನುವಾದ ಎನ್·ಅನಂತರಂಗಾಚಾರ್; ನಾಗವರ್ಮ
ವಿರಚಿತ ಕರ್ಣಾಟಕ ಕಾದಂಬರಿ : (ಸಂ) ಎನ್·ಅನಂತರಂಗಾಚಾರ; ಮಹಾಕವಿ ರನ್ನ ವಿರಚಿತಮಪ್ಪ
ಅಜಿತತೀರ್ಥಂಕರ ಪುರಾಣ ತಿಲಕಂ : (ಸಂ) ಮಂ·ಆ·ರಾಮಾನುಜಯ್ಯಂಗಾರ್ಯ; ಕವಿಚಕ್ರವರ್ತಿ
ಜನ್ನಕವಿರಚಿತ ಅನಂತನಾಥ ಪುರಾಣಂ : (ಸಂ) ಬಿ·ಬಿ·ಮಹೀಶವಾಡಿ; ಕುಮಾರವ್ಯಾಸ
ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ: (ಸಂ) ಕುವೆಂಪು ಮತ್ತು ಮಾಸ್ತಿವೆಂಕಟೇಶ
ಅಯ್ಯಂಗಾರ್; ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ : ಸಂ–1: (ಸಂ) ಎನ್·
ಬಸವಾರಾಧ್ಯ; ಕನಕದಾಸರ ಮೋಹನತರಂಗಿಣೀ ಸಂಗ್ರಹ : (ಸಂ) ಬಿ·ಎಸ್·ಸಣ್ಣಯ್ಯ;
ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ : (ಸಂ) ಡಾ ಎಂ·ಎಂ·ಕಲಬುರ್ಗಿ, ಬಿ·ಆರ್·ಹಿರೇಮಠ;
ನಂಜುಂಡಕವಿ ವಿರಚಿತ ರಾಮನಾಥ ಚರಿತ (ಉತ್ತರಾರ್ಧ) (ಸಂ–3) : (ಸಂ) ಎಚ್·ದೇವೀರಪ್ಪ;
ಸಿರುಮಣನಾಯಕನ ಸಾಂಗತ್ಯ : (ಸಂ) ಡಾ·ಎಂ ಎಂ·ಕಲಬುರ್ಗಿ·

8· ಬಸವಣ್ಣನವರ ವಚನಗಳು : (ಸಂ) ಆರ್·ಸಿ·ಹಿರೇಮಠ, ಶಿವಶರಣೆಯರ ವಚನಗಳು : (ಸಂ)
ಆರ·ಸಿ·ಹಿರೇಮಠ; ಸಕಲ ಪುರಾತನರ ವಚನಗಳು : (ಸಂ) ಆರ್·ಸಿ·ಹಿರೇಮಠ;
ಅಖಂಡೇಶ್ವರ ವಚನ : (ಸಂ) ಸಿದ್ಧವೀರದೇವರು ಹೊಸಮಠ·

9· ಕತ್ತಾಲದಾರಿ ದೂರ : (ಸಂ) ಕೃಷ್ಣಮೂರ್ತಿ ಹನೂರ, ಜನಪದ ಖಂಡಕಾವ್ಯಗಳು : (ಸಂ) ಜೀ·ಶಂ·ಪರಮಶಿವಯ್ಯ, ವಡ್ಡಗೆರೆ ನಾಗಮ್ಮ : (ಸಂ) ವೈಜಯಂತಿಮಾಲ, ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ·ಬಸವರಾಜ ಕಲ್ಗುಡಿ; ಬಯಲು ಸೀಮೆಯ ಲಾವಣಿಗಳು : (ಸಂ) ಕಾಳೇಗೌಡ ನಾಗವಾರ; ಅವರು ನೀಡಿದ ದೀಪ : (ಸಂ) ಕೆ·ವಿ· ಸುಬ್ಬಣ್ಣ; ಆಯ್ದ ಜನಪದ ಕಥೆಗಳು : (ಸಂ) ಜೀ·ಶಂ·ಪರಮಶಿವಯ್ಯ; ಕರ್ನಾಟಕ ಜನಪದ ಕಥೆಗಳು: (ಸಂ) ರಾಗೌ; ಕನ್ನಡ ಐತಿಹ್ಯಗಳು:(ಸಂ) ಜೆ·ವಿ·ಡಿ·



## ಅಧ್ಯಾಯ – 2

## ಸತಿಪದ್ಧತಿ : ಉಗಮ ಮತ್ತು ವಿಕಾಸ

'ಸತಿ' ಶಬ್ದ ಪರಿಮಿತ ಅರ್ಥದಲ್ಲಿ ಗಂಡನ ಮರಣದ ನಂತರ ಪತ್ನಿ ಸ್ವ ಇಚ್ಛೆಯಿಂದ ಮರಣಹೊಂದುವದನ್ನು ಸೂಚಿಸುತ್ತದೆ. ಸತಿ – ಇದು ಪದ್ಧತಿಯಾಗಿ ರೂಪುಗೊಂಡು ಇತಿಹಾಸದ ಬಹು ಮುಖ್ಯಭಾಗವಾಗಿ ಪರಿಣಮಿಸಿದೆ. ಇಂಥ ಸತಿ ಪದ್ಧತಿ ಮಾನವ ಇತಿಹಾಸದಲ್ಲಿ ಉಗಮಗೊಂಡು ಬೆಳೆದುಬಂದಿರುವುದು, ಅತ್ಯಂತ ಕುತೂಹಲಕಾರಿಯೆನಿಸುವುದರ ಜೊತೆಗೆ ಸೋಜಿಗವೂ, ವೈಭವಪೂರ್ಣವೂ ಪೂಜನೀಯವೂ ಎನಿಸಿದೆ. ವಿಶ್ವದ ಹಲವೆಡೆಗಳಲ್ಲಿ ಕಂಡು ಬಂದ ಇದು ಇನ್ನೂ ಅಪರೂಪವಾಗಿ ಕೆಲವೆಡೆಕಾಣಿಸಿಕೊಳ್ಳುತ್ತ ಮಾನವಜನಾಂಗ ವನ್ನು ಬೆರಗುಗೊಳಿಸುತ್ತಲಿ ಇದೆ. ಇದು ಯಾವಾಗ ?, ಎಲ್ಲಿ ?, ಹೇಗೆ ? ರೂಪುಗೊಂಡಿತೆಂದು ನಿಖರವಾಗಿ ಹೇಳಲಾಗದಿದ್ದರೂ ಅದು ನಡೆದುಬಂದ ದಾರಿಯನ್ನು ಕಂಡುಕೊಳ್ಳಬಹುದಾಗಿದೆ. "ಸತಿಪದ್ಧತಿ ಉಗಮ ಮತ್ತು ವಿಕಾಸ" ಈ ಅಧ್ಯಾಯದಲ್ಲಿ ಕರ್ನಾಟಕದಲ್ಲಿಯ ಸತಿಪದ್ಧತಿಯ ಅಧ್ಯಯನಕ್ಕೆ ಹಿನ್ನೆಲೆಯಾಗಿ ಪ್ರಪಂಚದಲ್ಲಿ ಮತ್ತು ಭಾರತದಲ್ಲಿ ಅದು ಕಾಣಿಸಿಕೊಂಡ ಬಗೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

**ಸತಿಪದ್ಧತಿ – ಉಗಮ :-**

ಸತಿ ಪದ್ಧತಿಯ ಉಗಮ ಕುರಿತು ವಿದ್ವಾಂಸರಲ್ಲಿ ವಾದ–ವಿವಾದಗಳು ವಿರಳ ವಾಗಿ ನಡೆದಿದ್ದರೂ ನಿಶ್ಚಿತ ಸಿದ್ಧಾಂತಕ್ಕೆ ಬಂದು ಮುಟ್ಟಲು ವಿದ್ವಾಂಸರಿಗೆ ಸಾಧ್ಯವಾಗಿಲ್ಲ. ಜಗತ್ತಿನ ವಿವಿಧ ಭಾಗಗಳಲ್ಲಿ, ವಿವಿಧ ಜನರಲ್ಲಿ ಇದು ಆಚರಣೆಯಲ್ಲಿರುವುದೇ ಇದಕ್ಕೆ ಕಾರಣ ವಾಗಿದೆ. ಭಾರತದಲ್ಲಿಯೂ ಇದು ವ್ಯಾಪಕಸ್ವರೂಪದಲ್ಲಿ ಕಂಡುಕೊಂಡ ಕಾರಣದಿಂದಾಗಿ ಕೆಲವು ವಿದ್ವಾಂಸರು ಭಾರತದಲ್ಲಿ ಇದು ಉಗಮಗೊಂಡ ಕುರಿತಾಗಿ ಚರ್ಚಿಸಿದ್ದಾರೆ. ವಿ.ಎ.ಸ್ಮಿತ್, ದುಬೆ, ಎಡ್ವರ್ಡ ಥಾಮ್ಸನ್, ಈ ಮೊದಲಾದವರು ಸತಿ ಆಚರಣೆ ಉಗಮಗೊಂಡ ಬಗೆಯನ್ನು ಚಿಂತಿಸಿದವರಲ್ಲಿ ಮುಖ್ಯರು. ಇವರ ಚರ್ಚೆಯ ಹಿನ್ನೆಲೆಯಲ್ಲಿ ಮುಖ್ಯವಾಗಿ ಎರಡು ವಾದಗಳು ಎದ್ದುಕಾಣುತ್ತವೆ, ಒಂದು ವಾದದ ಪ್ರಕಾರ, ಭಾರತದಲ್ಲಿ ಮೂಲತಃ ಸತಿ ಆಚರಣೆ ಇರಲಿಲ್ಲವೆಂದೂ, ಪರದೇಶದಿಂದ ಇದು ಭಾರತದಲ್ಲಿ ರೂಢಿಯಲ್ಲಿ ಬಂದಿತೆಂದೂ ಹೇಳಲಾಗಿದೆ. ಇನ್ನೊಂದು ವಾದದ ಪ್ರಕಾರ ಸತಿ ಆಚರಣೆ ಮೂಲತಃ ಭಾರತದಲ್ಲಿಯೇ ಇದ್ದಿತೆಂದೂ ಪರದೇಶದಿಂದ ಇದು ಬಂದದ್ದಲ್ಲವೆಂದೂ ಹೇಳಲಾಗಿದೆ. ಈಗ ಇಲ್ಲಿ ವಿದ್ವಾಂಸರ ಅಭಿಪ್ರಾಯಗಳನ್ನು ಸೂಚಿಸಿ ಸತಿ ಪದ್ಧತಿ ಉಗಮದ ನಿಶ್ಚಿತ ಸ್ವರೂಪವನ್ನು ಕಂಡುಕೊಳ್ಳಲು ಯತ್ನಿಸಲಾಗಿದೆ.

ವಿ.ಎ. ಸ್ಮಿತ್ ಅವರು ಸತಿಪದ್ಧತಿ ಮೂಲತಃ ಸಿಥಿಯನ್ನರದಾಗಿರಬೇಕು ಎಂದು ವಾದಿಸುತ್ತಾರೆ. ಸಿಥಿಯನ್ ರಾಜರು ಕ್ರಿಸ್ತಶಕದ ಪ್ರಾರಂಭದಲ್ಲಿ ಸತಿಪದ್ಧತಿಯನ್ನು ಅನುಸರಿಸುತ್ತಿದ್ದರು. ಅವರ ಪ್ರಭಾವವಾದಂಥ ಭಾರತದ ಭಾಗಗಳಲ್ಲಿ ಸತಿ ಆಚರಣೆ ಪ್ರಾರಂಭವಾಗಿರಬೇಕೆಂದು ಇವರು ಹೇಳುತ್ತಾರೆ. ತಕ್ಷಶಿಲೆಯ ಜನರ ನಾಗರಿಕತೆಯಲ್ಲಿ ಸಿಥಿಯನ್ನರ ಪ್ರಭಾವವನ್ನು ಗುರುತಿಸಿ ತಮ್ಮ ವಾದವನ್ನೂ ಸಮರ್ಥಿಸುತ್ತಾರೆ.[1]

ಸ್ಮಿತ್ ಅವರು ತಮ್ಮ ವಾದಕ್ಕೆ ಇನ್ನೊಂದು ಮುಖ್ಯವಾದ ಆಧಾರವನ್ನು ಕೊಡಲು ಪ್ರಯತ್ನಿಸಿದ್ದಾರೆ. ಭಾರತದ ಒಂದೇ ಎನಿಸುವ ಕಾರಣದಿಂದ ಭಾರತದ ಸತಿಪದ್ಧತಿ ಸಿಥಿಯನ್ನು ಮೂಲವೆನ್ನುತ್ತಾರೆ. ಸಿಥಿಯನ್ನು ಹಾಗೂ ಥ್ರೇಸಿಯನ್ ರಾಜರಲ್ಲಿದ್ದ ಸತಿ ಪದ್ಧತಿಯಲ್ಲಿ ಸಾಮ್ಯವಿದೆ ಎಂದೂ ಹೇಳಿ ಥ್ರೇನಿಯನ್ನರ ಸತಿ ಆಚರಣೆಯನ್ನು ಹೀಗೆ ವಿವರಿಸುತ್ತಾರೆ: ''ಪ್ರತಿಯೊಬ್ಬ ಥ್ರೇಸಿಯನನಿಗೂ ಅನೇಕ ಪತ್ನಿಯರಿರುತ್ತಾರೆ. ಪತಿ ಮೃತನಾದಾಗ ಅವನು ಯಾರನ್ನು ಹೆಚ್ಚು ಪ್ರೀತಿಸುತ್ತಿದ್ದ ಎನ್ನುವದರ ಕುರಿತಾಗಿ ಇವರಲ್ಲಿ ಸ್ಪರ್ಧೆ ಉಂಟಾಗುತ್ತದೆ. ಕೊನೆಗೆ ಗೆದ್ದವಳೊಬ್ಬಳನ್ನು ಎಲ್ಲರೂ ಹೊಗಳಿ ಪತಿಯ ಗೋರಿಯ ಮೇಲೆ ಅವಳನ್ನು ಹತ್ಯೆಮಾಡಿ ಹುಗಿಯುತ್ತಾರೆ'' — ಈ ರೀತಿ ವಿವರಣೆಯನ್ನು ಸ್ಮಿತ್ ನೀಡಿ, ಭಾರತದ ಸತಿಪದ್ಧತಿಯ ಮುಖ್ಯ ಲಕ್ಷಣವೂ ರಾಣಿಯರ ಸ್ಪರ್ಧೆ ಹಾಗೂ ಮೃತಗಂಡನ ಹಿಂದೆ ಸಾಯುವುದೇ ಆಗಿದೆ ಎಂದು ಹೇಳುತ್ತಾರೆ. ಈ ಕಾರಣದಿಂದಾಗಿ ಸ್ಮಿಥ ಅವರು ಭಾರತದ ಸತಿ ಆಚರಣೆ ಸಿಥಿಯನ್ ಮೂಲವೆಂದು ಸಾಧಿಸಲು ಪ್ರಯತ್ನಿಸುತ್ತಾರೆ.[2]

ದುಬೆ ಅವರ ಪ್ರಕಾರ, ಸತಿ ಆಚರಣೆ ಸಿಥಿಯನ್ನರ ಪ್ರಭಾವದಿಂದ ಬಂದದ್ದಲ್ಲ. ಅದು ಭಾರತದ್ದೇ ಆಗಿದೆ. ಅದು ಹೊರಗಿನಿಂದ ಬಂದದ್ದಲ್ಲ. ಅದು ಭಾರತದ್ದೇ ಆಗಿದೆ. ಅದು ಹೊರಗಿನಿಂದ ಬಂದದ್ದಾಗಿದ್ದರೆ ಅದಕ್ಕೆ ಬ್ರಾಹ್ಮಣರು ಒಪ್ಪಿಗೆಯನ್ನು ಕೊಡಬೇಕಾಗಿತ್ತು. ಅಲ್ಲದೆ ಅವರಲ್ಲಿಯೂ ಸತಿ ಪದ್ಧತಿ ಆಚರಣೆಯಲ್ಲಿರಬೇಕಾಗಿತ್ತು. ಆದರೆ ಬ್ರಾಹ್ಮಣರು ಹತ್ಯವಿಧಿಗಳ ಪೌರೋಹಿತವಹಿಸಿ ದಕ್ಷಿಣೆಯನ್ನು ವಸೂಲು ಮಾಡುತ್ತಿದ್ದರೇ ಹೊರತು ಈ ಸತಿ ಆಚರಣೆ ಅವರಲ್ಲಿರಲಿಲ್ಲ. ಈ ರೀತಿ ವಾದ ಮುಂದಿಟ್ಟು ಸತಿಪದ್ಧತಿ ಭಾರತದಲ್ಲಿಯೇ ಉಗಮಗೊಂಡದ್ದೆಂದು ಹೇಳುತ್ತಾರೆ.[3]

ಎಡ್ವರ್ಡ್ ಥಾಮ್ಸನ್ ಅವರು ಸತಿ ಪದ್ಧತಿಯ ಉಗಮವನ್ನು ಭಾರತದ ಪ್ರಾಚೀನ ಬುಡಕಟ್ಟು ಜನಾಂಗಗಳಲ್ಲಿ ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಅವರು, ಸತಿ

ಆಚರಣೆ ಮೊದಲು ಭಾರತದ ಪ್ರಾಚೀನ ಬುಡಕಟ್ಟು ಬಣಗಳಲ್ಲಿ ಇತ್ತು, ಈ ಬಣಗಳು ಹಿಂದೂ ಧರ್ಮದಲ್ಲಿ ಕೂಡಿಕೊಂಡಾಗ ಅವರ ಆಚರಣೆಗಳು ಇಲ್ಲಿಗೂ ಬಂದವು — ಎಂದು ಅಭಿಪ್ರಾಯಪಡುತ್ತಾರೆ.[4]

ವಿದ್ವಾಂಸರ ಈ ಮೇಲಿನ ವಿವರಣೆಗಳ ಹಿನ್ನೆಲೆಯಲ್ಲಿ ಸತಿಪದ್ಧತಿ ಉಗಮದ ಕುರಿತು ನಿರ್ದಿಷ್ಟ ಅಭಿಪ್ರಾಯಪಡುವದು ಸಾಧ್ಯವಿಲ್ಲವೆನಿಸುತ್ತದೆ. ಅಲ್ಲದೇ ಆರ್ಯಪೂರ್ವ ಜನಾಂಗದಲ್ಲಿ ಸತಿ ಆಚರಣೆಯ ಕುರುಹುಗಳು ( ಗಂಡು — ಹೆಣ್ಣಿನ ಜೋಡಿಶವಗಳು) ಲೋಥಾಲದ ( ಗುಜುರಾತ) ಭೂ ಶೋಧನೆಯಲ್ಲಿ ದೊರಕಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ( ಚಿತ್ರ — 1 ) 1978 ರ ಭೂ ಶೋಧನೆಯ ಕಾಲಕ್ಕೆ ಉತ್ತರ ಪ್ರದೇಶದ ಪ್ರತಾಪಗಡ ಜಿಲ್ಲೆಯ ಮಹಾದಹ ( Maha daha ) ಎಂಬ ಹಳ್ಳಿಯಲ್ಲಿ ಎರಡು ಗೋರಿಗಳಲ್ಲಿ ಗಂಡು — ಹೆಣ್ಣಿನ ಎರಡು ಜೋಡಿಗಳ ಅಸ್ಥಿ ಪಂಜರಗಳು ಸಿಕ್ಕ ಹಿನ್ನೆಲೆಯಲ್ಲಿ ಸತಿಪದ್ಧತಿಯು ಕ್ರಿ.ಶ.ಪೂ. 10,000 ಅಂದರೆ 'ಮೆಸೊಲಿಥಿಕ್ ಯುಗ' ದಲ್ಲಿ ಇತ್ತೆಂದು ಅಭಿಪ್ರಾಯ ಪಡಲು ಸಾಧ್ಯವಾಗುತ್ತದೆ.[5] ಈ ಕಾರಣದಿಂದ ಸ್ಮಿಥ್ ಹೇಳುವ ಸಿಥಿಯನ್ನರ ಸತಿ ಆಚರಣೆಯ ಪ್ರಭಾವವು ಭಾರತದಲ್ಲಿ ಮೊದಲೇ ನೆಲೆಯೂರಿದ ಸತಿ ಆಚರಣೆಯನ್ನು ಮತ್ತಷ್ಟು ಬಲಪಡಿಸಿತೆಂದು ಮಾತ್ರ ಹೇಳಬಹುದಾಗಿದೆ. ಈ ರೀತಿ ಸತಿಪದ್ಧತಿ ಉಗಮದ ಇತಿಹಾಸ ಬಹುದೂರಕ್ಕೆ ಅಂದರೆ ಐತಿಹಾಸಿಕವಾಗಿ ಅದರ ಉಗಮದ ಸ್ವರೂಪವನ್ನು ಗುರುತಿಸಲು ಸಾಧ್ಯವಾಗಲಾರದಷ್ಟು ಪೂರ್ವಕ್ಕೆ ಹೋಗುತ್ತದೆ. ಭಾರತದಲ್ಲಿ ಅಷ್ಟೇ ಅಲ್ಲದೆ, ಜಗತ್ತಿನ ಇನ್ನುಳಿದ ಪ್ರಾಚೀನ ಸಂಸ್ಕೃತಿಗಳಾದ ಈಜಿಪ್ತ, ಸುಮೇರಿಯನ್ ಮೊದಲಾದವುಗಳಲ್ಲಿಯೂ ಸತಿ ಪದ್ಧತಿಯ ಕುರುಹುಗಳನ್ನು ಕಾಣುತ್ತೇವೆ. ಮತ್ತು ಜಗತ್ತಿನ ವಿವಿಧ ಪ್ರದೇಶ, ವಿವಿಧ ಜನಾಂಗಗಳಲ್ಲಿಯೂ ಸತಿ ಆಚರಣೆ ಕಾಣುತ್ತೇವೆ. ಈ ರೀತಿ ಪ್ರಾಚೀನತೆ ಹಾಗೂ ವ್ಯಾಪ್ತಿ — ವೈವಿಧ್ಯಗಳನ್ನು ಹೊಂದಿದ ಸತಿಪದ್ಧತಿಯ ಉಗಮದ ಕುರಿತು ನಿರ್ದಿಷ್ಟವಾಗಿ ಹೇಳುವದು ಸಾಧ್ಯವಾಗುವುದಿಲ್ಲ. ಬಹುಶಃ ಯಾವುದೊಂದು ಜನಾಂಗದಿಂದ ಮಾತ್ರ ಇದು ಜಗತ್ತಿನ ಇನ್ನುಳಿದ ಭಾಗಕ್ಕೆ ಹಬ್ಬಿಕೊಂಡಿತೆಂದು ಹೇಳುವುದಾಗಲಿ, ಒಮ್ಮೆಲೇ ಒಂದು ಕಾಲದಲ್ಲಿ ಇದು ಮೂರ್ತರೂಪದಲ್ಲಿ ಬಂದಿತೆಂದು ಹೇಳುವುದಾಗಲಿ ಸರಿ ಎನಿಸುವುದಿಲ್ಲ.

**ಪ್ರಪಂಚದಲ್ಲಿ ಸತಿಪದ್ಧತಿ :—**

ಪ್ರಾಚೀನ ಕಾಲದ ಪ್ರಪಂಚದ ಹಲವೆಡೆಗಳಲ್ಲಿ ಸತಿ ಪದ್ಧತಿ ಕಾಣಬರುವುದಾದರೂ ಹೆಚ್ಚು ವಿವರಗಳು ಸಿಗುವುದಿಲ್ಲ, ಸಿಕ್ಕ ವಿವರಗಳೂ ಸಂಕ್ಷಿಪ್ತವಾಗಿವೆ. ಸತಿ ಘಟನೆಗಳು ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ನಡೆದುಕೊಂಡು ಬಂದ ಬಗೆಗೆ ಸಿಗುವ ಆಧಾರಗಳ ಬಲದಿಂದ ವಿದ್ವಾಂಸರು ಸತಿಪದ್ಧತಿಯ

ಪ್ರಾಚೀನತೆ ಮತ್ತು ಸ್ವರೂಪವನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಸುಮೇರಿಯನ್ನರ 'ಉರ' ನಗರದಲ್ಲಿ ಭೂಶೋಧನೆಯ ಕಾಲದಲ್ಲಿ ಕಂಡುಕೊಂಡ ಕ್ರಿ.ಶ.ಪೂ. 4000 ವರ್ಷಗಳ ಕಾಲದ ರಾಜರ ಸಮಾಧಿಗಳು ಸತಿ ಪದ್ಧತಿಯ ಕುರುಹುಗಳನ್ನುಳ್ಳವಾಗಿವೆ.[6] 'ಉರ' ನಲ್ಲೂ ಸತ್ತ ರಾಜನನ್ನು ಅವನ ಲಾಂಛನಗಳ ಸಹಿತ ರಥದಲ್ಲಿ ತಂದು ಸಮಾಧಿಯಲ್ಲಿ ಸಾಗಿಸುತ್ತಾರೆ. ಪ್ರಾಣಿಗಳಷ್ಟೇ ಅಲ್ಲದೆ, ಸಾರಥಿಗಳು, ಸೈನಿಕರು, ಆಸ್ಥಾನಿಕರು, ಗಾಯಕರು, ಅಂತಃಪುರದ ರಾಣಿಯರು ಇವನ ಹಿಂದೆ ಸಮಾಧಿಗೆ ಸಾಗಬೇಕು. ರಾಜನ ಸಮಾಧಿಯ ಹೊರಗೆ ಹೊಗೆಯ ಚಾವಣಿಯ ಹತ್ತಿರ 59 ಕ್ಕೂ ಕಡಿಮೆ ಇಲ್ಲದ ಹಾಗೆ ಮೃತದೇಹಗಳಿವೆ. ಇವುಗಳಲ್ಲಿ ಆರುಜನ ಸೈನಿಕರು, ಒಂಬತ್ತುಜನ ಆಭರಣಗಳಿಂದ ಅಲಂಕೃತಗೊಂಡ ರಾಣಿಯರೂ ಇದ್ದಾರೆ.[7] ಕ್ರಿ.ಶ.ಪೂ. 3000 ವರ್ಷಗಳ ಕಾಲದ ಪ್ರಸಿದ್ಧವಾದ ಚಿಯೋಪ್ಸ (cheops) ಪಿರಾಮಿಡ್ಡವು ರಾಣಿಯರಿಗಾಗಿ ಬೇರೆಕೋಣೆಯನ್ನು ಹೊಂದಿದೆ.[8] ಈಜಿಪ್ಟಿನ 'ರೆಯ್ಮರನ ಸಮಾಧಿಗೆ ಹೊಂದಿದಂತೆ ಇರುವ ಸಮಾಧಿಯಲ್ಲಿ 275 ಅಂತಃಪುರದ ರಾಣಿಯರೂ, ರಾಜಮನೆತನದ 43 ಜನರೂ ಹಾಗೂ ಒಂದು ಮೈಲು ಅಂತರದಲ್ಲಿ 269 ಜನರೂ ಹುಗಿಯಲ್ಪಟ್ಟಿದ್ದಾರೆ.[9] ''(ಮಾರಿ) ಸಿರಿಯಾದಲ್ಲಿ ಇಶ್ತರ್ ದೇವಾಲಯ ಹತ್ತಿರ ಇರುವ ಮೂರು ದೊಡ್ಡ ಸಮಾಧಿಗಳು ದೊಡ್ಡ ಕಲ್ಲುಗಳಿಂದ ಕೂಡಿ ಬೋದಿಗೆ ಕಟ್ಟಡದ (corbelled) ಆಕಾರವನ್ನು ಹೊಂದಿವೆ. (ಇಶ್ತರ್ ದೇವಾಲಯದ ಒಳಗೆ) ಕಮಾನ ಚಾವಣಿಯುಳ್ಳ ಒಂದು ಕೋಣೆಯಲ್ಲಿ ಬಂಗಾರದ ಆಭರಣ, ಬೆಳ್ಳಿ, ಕನ್ನಡಿ, ಕೊರಳಿಗೆ ಹಾಕಿಕೊಂಡ ಎರಡು ತಾಮ್ರದ ಪಿನ್ನುಗಳನ್ನುಳ್ಳ ಅಸ್ಥಿಪಂಜರದ ಸ್ವಲ್ಪ ಭಾಗ ಇವುಗಳೆಲ್ಲ ಇವೆ. ಈ ಅಸ್ಥಿಪಂಜರ ರಾಜನ ಹೆಂಡತಿಯದೇ. ಸತ್ತ ಗಂಡನ ಹಿಂದೆ ಮಡಿದವಳು ಇವಳು. ಮೆಸಪೊಟೇಮಿಯಾದಲ್ಲೂ ಕೂಡ ಇಂಥ ಹೂಳುವ ವಿಧಾನವನ್ನು ನಾವು ಕಾಣಬಹುದು''.[10]

ಪ್ರಾಚೀನ ಗ್ರೀಕರಲ್ಲಿ 'ಎವಡ್ನೆ (Evadne) ರಾಣಿಯ ಕುರಿತು ಒಂದು ಐತಿಹ್ಯವಿದೆ. ಈ ಐತಿಹ್ಯ ಪ್ರಕಾರ 'ಎವಡ್ನೆ ರಾಣಿಯು ತನ್ನ ಗಂಡನ ಚಿತೆಯಲ್ಲಿ ಹಾರಿಕೊಂಡು ಪ್ರಾಣಬಿಡುತ್ತಾಳೆ.[11] ಈ ಉಲ್ಲೇಖವು ಗ್ರೀಕ್ ರಾಜರ ಆಡಳಿತೆಯ ಕಾಲದಲ್ಲಿ ಸತಿಯ ಘಟನೆಗಳು ನಡೆದಿರಬಹುದು ಎಂಬುದನ್ನು ತೋರಿಸುವಂತಿದೆ. ಜೂಲಿಯಸ್ ಸೀಜರನು ಕ್ರಿ.ಶ.ಪೂ. ಮೊದಲನೆಯ ಶತಮಾನದಲ್ಲಿ ಗೌಲ್ಸ್‌ರಲ್ಲಿ ಸತಿಯಾಗುವುದನ್ನು ಕಂಡುಕೊಂಡಿದ್ದಾನೆ.[12] ಸತಿಪದ್ಧತಿ ಸಿಥಿಯನ್ನ (Scythian) ರಲ್ಲಿ ಸರ್ವಸಾಮಾನ್ಯವಾಗಿತ್ತು.[13] ಚೀನಾದಲ್ಲಿ ವಿಧವೆಯಾದವಳು ತನ್ನ ಗಂಡನೊಡನೆ ಸ್ವರ್ಗಕ್ಕೆ ಹೋಗಲೆಂದು ತನ್ನನ್ನು ತಾನು ಕೊಂದುಕೊಂಡರೆ, ಅವಳ ಶವವನ್ನು ದೊಡ್ಡ ಮೆರವಣಿಗೆಯಲ್ಲಿ ತೆಗೆದುಕೊಂಡು ಹೋಗಲಾಗುತ್ತಿತ್ತು.[14]



ಸತಿಪದ್ಧತಿಯು ಗೋಲರು ನಾರ್ವೇಜಿಯನ್ನರು, ಗೋಥರು, ಕೆಲ್ಟರು, ಸ್ಲಾವರು ಮತ್ತು ಥ್ರೇಸಿಯನ್ನರಲ್ಲಿ ಇರುವುದರ ಹಿನ್ನೆಲೆಯಲ್ಲಿ ಈ ಪದ್ಧತಿ ಇಂಡೋ — ಯುರೋಪಿಯನ್ನರಲ್ಲಿ ಇತ್ತೆಂದು ಡಾ: ಎ.ಎಸ್. ಅಳ್ತೇಕರರು ಗುರುತಿಸಿದ್ದಾರೆ.[15] ರಾಲ್ಸನ್ ಅವರು ಸ್ಲಾವೋನಿಕ್ ಪ್ರದೇಶದ ವಿಧವೆಯರು ಸತ್ತಗಂಡನೊಡನೆ ಮರಣಹೊಂದಲು ಇಷ್ಟಪಡುವುದನ್ನು ಸೂಚಿಸುತ್ತಾರೆ[16] ಪ್ರಾಚೀನ ಇಂಡೋ — ಜರ್ಮನ್ನರಲ್ಲಿ ಸತ್ತಗಂಡನೊಡನೆ ವಿಧವೆಯನ್ನು ದಹನ ಮಾಡುವುದು ಒಂದು ಪ್ರಾಚೀನ ಆಚರಣೆ ಎಂದು ಪೆಂಜೀರ್ ಹೇಳುತ್ತಾರೆ.[17] ಅಮೇರಿಕದ ಇಂಡಿಯನ್ ಬಣಗಳಲ್ಲಿ ನಡೆಯುವ ಅಂತ್ಯಸಂಸ್ಕಾರದ ವಿಧಿಗಳಲ್ಲಿ ಸಹಗಮನ ಕುರುಹುಗಳನ್ನು ಕಾಣಬಹುದು ಎಂದು ಥಾಮ್ಸನ್ ಗುರುತಿಸುವುದರ ಜೊತೆಗೆ ಟೊಂಗಾ, ಫಿಜಿಯನ್, ಮಾರಿಸ್ ಮುಂತಾದ ಆಫ್ರಿಕಾದ ಗುಂಪುಗಳಲ್ಲಿಯೂ ಸಹಗಮನ ಪದ್ಧತಿಯು ಇತ್ತೆಂದು ಹೇಳುತ್ತಾರೆ. ಆಫ್ರಿಕಾದ ದಾಹೋಮೇ ಮತ್ತು ದಾಫಿಯೋಟ್ ಬುಡಕಟ್ಟುಗಳಲ್ಲಿ ಈ ಪದ್ಧತಿ ಇತ್ತೀಚಿನವರೆಗೂ ನಡೆದು ಬಂದಿರುವುದಾಗಿ ದಾಖಲೆಗಳಿವೆ. 1859 ರಲ್ಲಿ ದಕ್ಷಿಣ ನೈಜೀರಿಯಾದ ಅರಸು ಓಯೊ ಸತ್ತಾಗ ಅವನ ನಲವತ್ತೆರಡು ಜನ ಹೆಂಡಂದಿರು ಆತ್ಮಹತ್ಯೆ ಮಾಡಿಕೊಂಡರು.[19] ಕ್ರಿ.ಶ. 921–922 ರಲ್ಲಿ ಸಂದರ್ಶನ ಕೊಟ್ಟ ಅರಬಪ್ರವಾಸಿಕ ಫಾಯ್ಲಾನ ವೋಲ್ಗಾದ ಬಲ್ಗೇರಿಯನ್ ಜನಾಂಗದಲ್ಲಿ ಸತಿ ಹೋಗುವುದನ್ನು ಕಂಡುಕೊಂಡಿದ್ದಾನೆ.[20] ರಾವಿ ನದಿಯ ದಡದಲ್ಲಿದ್ದ ಕಥೈಓ ( Kathaio ) ಜನಾಂಗದವರಲ್ಲೂ ಸತಿಯ ಆಚರಣೆ ಇತ್ತೆಂದು ತಿಳಿಯುತ್ತದೆ.[21]

ಈ ಮೇಲಿನ ನಿರೂಪಣೆಯಿಂದ ಈ ಕೆಲವು ವಿಷಯಗಳು ಸ್ಪಷ್ಟಗೊಳ್ಳುತ್ತವೆ. ಸತಿಪದ್ಧತಿ ಯಾವುದೊಂದು ಜನಾಂಗಕ್ಕೆ ಅಥವಾ ಯಾವುದೊಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗಿಲ್ಲ ವೆಂಬುದು ಸ್ಪಷ್ಟವಾಗುವುದರ ಜೊತೆಗೆ ಯಾವುದೊಂದು ಕಾಲಕ್ಕೆ ಒಮ್ಮೆಲೇ ಇದು ಅಸ್ತಿತ್ವ ದಲ್ಲಿ ಬಂದದ್ದಲ್ಲವೆಂದೂ ಮನವರಿಕೆಯಾಗುತ್ತದೆ. ಜಗತ್ತಿನ ಬೇರೆ ಬೇರೆ ಜನಾಂಗಗಳಲ್ಲಿ ಮತ್ತು ಬೇರೆ ಬೇರೆ ಪ್ರದೇಶಗಳಲ್ಲಿ ಸತಿಪದ್ಧತಿ ಆಚರಣೆಯಲ್ಲಿದ್ದುದು ತಿಳಿಯುತ್ತದೆ. ಪ್ರಪಂಚದ ಪ್ರಾಚೀನ ಸಂಸ್ಕೃತಿಗಳಾದ ಸಿಂಧು, ಸುಮೇರಿಯನ್, ಈಜಿಪ್ತ ಮೊದಲಾದವುಗಳಲ್ಲಿ ಸತಿ ಯಾದುದರ ಕುರುಹುಗಳು ಕಂಡು ಬರುವುದರ ಜೊತೆಗೆ, ಅದರ ಇತಿಹಾಸದ ಪ್ರಾಚೀನತೆ ಕ್ರಿ.ಶ. ಪೂ. 10,000 ವರ್ಷಗಳ ಕಾಲಕ್ಕೆ ಹೋಗುವುದನ್ನು ಗುರುತಿಸಲು ಸಾಧ್ಯವಾಗುತ್ತದೆ.

**ಭಾರತದಲ್ಲಿ ಸತಿಪದ್ಧತಿ :–**

ವಿಶಾಲ ಭಾರತದಲ್ಲಿ ಅತಿ ಪೂರ್ವಕಾಲದಿಂದಲೂ ಸತಿ ಆಚರಣೆ ನಡೆದುಕೊಂಡ ಬಂದ ಬಗೆಗೆ ಆಧಾರಗಳು ದೊರಕುತ್ತವೆ. ಭೂ ಶೋಧನೆಯ ಸಾಮಗ್ರಿಗಳು, ವೇದ — ಶಾಸ್ತ್ರ —ಪುರಾಣಗಳು, ಮಹಾಕಾವ್ಯ — ಕಾವ್ಯಗಳು, ಸತಿಕಲ್ಲುಗಳು — ಈ ಮೊದಲಾದ ಆಧಾರಗಳ ಹಿನ್ನೆಲೆಯಲ್ಲಿ

ಕ್ರಿ.ಶ.ಪೂ.10,000 ವರ್ಷಗಳ ಕಾಲದಿಂದ ಆಧುನಿಕ ಭಾರತದ ಇಂದಿನವರೆಗೂ ಭಾರತೀಯರಲ್ಲಿ ಆಚರಣೆಯಲ್ಲಿ ಉಳಿದುಕೊಂಡು ಬಂದ ಸತಿಪದ್ಧತಿಯ ಕುರಿತು ಒಂದು ಸ್ಪಷ್ಟಚಿತ್ರ ಕೊಡಲು ಸಾಧ್ಯವಿದೆ. ಈಗ, ಅಧ್ಯಯನದ ಅನುಕೂಲತೆಗಾಗಿ ಭಾರತದಲ್ಲಿಯ ಸತಿಪದ್ಧತಿಯ ವಿಕಾಸವನ್ನು — ಕ್ರಿ.ಶ.ಪೂ.ದಿಂದ ಕ್ರಿ.ಶ.1200, ಕ್ರಿ.ಶ.1200 ರಿಂದ ಕ್ರಿ.ಶ.1829, ಕ್ರಿ.ಶ. 1829 ರಿಂದ ಸ್ವತಂತ್ರ ಭಾರತದ ಇಂದಿನವರೆಗೂ — ಹೀಗೆ ಒಟ್ಟು ಮೂರು ಭಾಗಗಳಲ್ಲಿ ವಿವರಿಸಬಹುದು.

## ಭಾಗ — 1.

ಉತ್ತರ ಪ್ರದೇಶದ 'ಮಹಾದಹ' ಎಂಬ ಹಳ್ಳಿಯಲ್ಲಿ ಕ್ರಿ.ಶ.1978 ರ ಭೂಶೋಧನೆಯ ಕಾಲಕ್ಕೆ ಎರಡುಗೋರಿಗಳಲ್ಲಿ ಹೆಣ್ಣು — ಗಂಡಿನ ಎರಡು ಜೋತೆಗಳ ಅಸ್ಥಿಪಂಜರಗಳು ದೊರಕಿವೆ. ಇದರ ಕಾಲ ಕ್ರಿ.ಶ.ಪೂ.10,000 ವರ್ಷಗಳಿಂದೂ, ಅದು 'ಮೆಸೊಲಿಥಿಕ್‌ಯುಗ'ಕ್ಕೆ ಸೇರುತ್ತದೆಂದು ಹೇಳಲಾಗುತ್ತಿದೆ. ಸು.4,500 ವರ್ಷಗಳ ಪ್ರಾಚೀನ ಪಟ್ಟಣವೆಂದು ಹೇಳಲಾಗುತ್ತಿರುವ ಗುಜರಾತದ 'ಲೋಥಾಲ'ದಲ್ಲಿ ಭೂಶೋಧನೆಯ ಕಾಲಕ್ಕೆ ಒಟ್ಟು 14 ಅಸ್ಥಿಪಂಜರಗಳು ದೊರಕಿವೆ. ಅದರಲ್ಲಿ ಗಂಡು — ಹೆಣ್ಣಿನ ಮೂರು ಜೋತೆಗಳಿರುವುದರಿಂದ, ಲೋಥಾಲದ ಹರಪ್ಪಾ ಜನರಲ್ಲಿ ಸತಿಪದ್ಧತಿ ಆಚರಣೆಯಲ್ಲಿತ್ತೆಂದು ಅಭಿಪ್ರಾಯಪಡಲಾಗಿದೆ. ''ಮೆಸೊಲಿಥಿಕ್' ಯುಗ'' ದಲ್ಲಿ ಅಥವಾ ಲೋಥಾಲದ ಹರಪ್ಪಾ ಜನರಲ್ಲಿ ಸತಿಪದ್ಧತಿ ಆಚರಣೆಯಲ್ಲಿತ್ತೆಂದು ಹೇಳುವುದಕ್ಕೆ ಇನ್ನು ಹೆಚ್ಚಿನ ಆಧಾರಗಳ ಅವಶ್ಯಕತೆ ಇದೆಯಾದರೂ, ಈಗ ಸಿಕ್ಕಿರುವ ಗಂಡು — ಹೆಣ್ಣಿನ ಜೋಡಿ ಅಸ್ಥಿಪಂಜರಗಳು ಧ್ವನಿಸುವ ಸತಿ ಕುರುಹುಗಳನ್ನು ಅಲ್ಲಗಳೆಯುವಂತೆಯೂ ಇಲ್ಲ.

ಋಗ್ವೇದವು ಭಾರತದ ಅತೀ ಪ್ರಾಚೀನ ಗ್ರಂಥವಾಗಿದೆ. ಅದರಲ್ಲಿಯ ಅಂತ್ಯೇಷ್ಟಿ ಸಂಸ್ಕಾರಕ್ಕೆ ಸಂಬಂಧಪಟ್ಟ ಎರಡು ಋಕ್ಕುಗಳು ಹೀಗೆ ಬರುತ್ತವೆ:[22]

1. इमा नारीरविधवाः सपत्नीरांजनेन सर्पिषा सं विशन्तु
अनश्रवोऽनमीवाः सुरत्ना आरोहन्तु जनयो योनिमग्रे

( ಮಾಂಗಲ್ಯವುಳ್ಳವರೂ ಉತ್ತಮವಾದ ಪತಿಗಳುಳ್ಳವರೂ ಆದ ಈ ಸ್ತ್ರೀಯರು ಅಂಜನಯುಕ್ತವಾದ ಕಾಡಿಗೆಗಳಿಂದ ಅಲಂಕರಿಸಿಕೊಂಡು ಗೃಹಗಳಿಗೆ ಪ್ರವೇಶಿಸಲಿ. ಕಣ್ಣೀರಿಲ್ಲದವರಾಗಿಯೂ ರೋಗರಹಿತರಾಗಿಯೂ ಉತ್ತಮವಾದ ಆಭರಣಗಳುಳ್ಳವರಾಗಿಯೂ ಇರುವ ಪತ್ನಿಯರು ಎಲ್ಲರಿಗಿಂತಲೂ ಮೊದಲೇ ಗೃಹವನ್ನು ಪ್ರವೇಶಿಸಲಿ.)

2. उदीर्ष्व नार्यभि जीवलोकं गतासुमेतमुप शेष एहि ।
हस्तग्राभस्य दिधिषोस्तवेदं पत्युर्जनित्वमभि सं बभूथ ॥

( ಸ್ತ್ರೀಯೇ ನಿನ್ನ ಜೀವಲೋಕಕ್ಕೆ (ಪುತ್ರಪೌತ್ರಾದಿಗಳ ಸಾಧನವಾದ ಗೃಹಕ್ಕೆ ) ಇಲ್ಲಿಂದ ಎದ್ದುಹೊರಡು ಕಳೆದುಹೋದ ಜೀವವುಳ್ಳ ಈ ಪತಿಯ ಹತ್ತಿರ ನೀನು ಮಲಗಿರುವೆ. ಮನೆಗೆ ಬಾ. ನಿನ್ನ ಪಾಣಿಗ್ರಹಣವನ್ನು ಮಾಡಿದವನೂ ಗರ್ಭಕಾರಕನೂ ಆದ ನಿನ್ನ ಪತಿಯೊಡನೆ ನಿನ್ನ ಪತ್ನಿತ್ವವನ್ನು ಗೌರವಿಸಿ ಅವನೊಡನೆ ಮರಣಹೊಂದಲು ನಿಶ್ಚಯಿಸಿರುವೆ )

ಈ ಎರಡೂ ಋಕ್ಕುಗಳ ಕುರಿತಾಗಿ ವಿದ್ವಾಂಸರು ಚರ್ಚಿಸಿದ್ದಾರೆ. ಮೊದಲನೆಯ ಋಕ್ಕ 'ಇಮಾ ನಾರಿ' : ಇದರ ಮೇಲೆ ಸಾಯಣನು ಭಾಷ್ಯ ಬರೆಯುವಾಗ ಸತಿಯಾಗುವುದನ್ನು ಇದು ಸೂಚಿಸುತ್ತದೆ ಎಂದು ಹೇಳಿಲ್ಲ.[23] ಪಿ.ವಿ. ಕಾಣೆಯವರು, ಮೊದಲನೆಯ ಶ್ಲೋಕವು ಸತಿ ಆಚರಣೆಗೆ ವೇದದ ಮನ್ನಣೆ ನೀಡುವುದಕ್ಕಾಗಿ ಅನಂತರದಲ್ಲಿ ಇದನ್ನು ಬಳಸಲಾಯಿತೆಂದು ಹೇಳುತ್ತಾರೆ.[24]

'ಇಮಾ ನಾರೀ :' ಋಕ್ಕಿನ ಕೊನೆಯಲ್ಲಿರುವ 'ಅಗ್ರೇ' ಎಂಬುದನ್ನು 'ಅಗ್ನೇಃ' ಎಂದು ತಿದ್ದಿ ಆರೋಹಂತು ಜನಯೋ ಯೋನಿಂ ಅಗ್ನೇ : ಎಂದು ಮಾರ್ಪಾಟು ಮಾಡಿಕೊಳ್ಳಲಾಗಿದೆ. ಎಂಬ ಅಭಿಪ್ರಾಯವಿದೆ [25] ಪ್ರೊಫೆಸರ್ ವಿಲ್ಸನ್, ಮಾಕ್ಸಮುಲ್ಲರ್ ಅವರೂ ಕೂಡ ಇದೇ ಮಾತನ್ನು ಹೇಳುತ್ತಾರೆ [26] ಅಗ್ರೇ' ಎನ್ನುವುದನ್ನು 'ಅಗ್ನೇಃ ಎಂದು ಮಾಡಿಕೊಂಡಾಗ, 'ಪತ್ನಿಯರು ಎಲ್ಲರಿಗಿಂತಲೂ ಮೊದಲೆ ಗೃಹವನ್ನು ಪ್ರವೇಶಿಸಲಿ ಎಂಬುದರ ಬದಲಾಗಿ 'ಪತ್ನಿಯರು ಚಿತಾ (ಅಗ್ನಿ) ಗೃಹವನ್ನು ಪ್ರವೇಶಿಸಲಿ' ಎಂದು ಅರ್ಥವಾಗುತ್ತದೆ. ಡಾ: ಎ.ಎಸ್. ಅಳ್ತೇಕರ ಅವರು ಸತಿ ಪದ್ಧತಿಗೆ ವೇದಗಳ ಅಧಿಕೃತ ಮನ್ನಣೆ ಪಡೆಯಲು ಹೀಗೆ ತಿದ್ದುಪಡಿಮಾಡಲಾಗಿದೆ ಎಂದು ಹೇಳಿ, ವಿಲಿಯಂ ಬೆಂಟಿಂಕನ ಕಾಲದಲ್ಲಿ ಸತಿಯ ಕುರಿತು ವಿರೋಧ ನಡೆದಾಗ ಸತಿಯನ್ನು ಬೆಂಬಲಿಸುವವರು ಹೀಗೆ ಮಾರ್ಪಾಟನ್ನು ಮಾಡಿದ್ದಾರೆಂದು ಹೇಳುತ್ತಾರೆ. ಅಲ್ಲದೆ ಅವರು ಇನ್ನು ಮುಂದುವರೆದು, ಪ್ರಶ್ನಾರ್ಥಕವಾಗಿರುವ ಶ್ಲೋಕ ಅಗ್ನಿಗೆ ಬೀಳುವ ಮಾತನ್ನೇನೂ ಹೇಳುವುದಿಲ್ಲ, ಅದರ ಬದಲಾಗಿ ಮುತ್ತೈದೆಯರು ಸತ್ತವನಿಗೆ ಮಾಡುವ ಅಗ್ನಿ ಸಂಸ್ಕಾರವಾಗುವುದಕ್ಕೆ ಪೂರ್ವದಲ್ಲಿ ಕೆಲವು ವಿಧಿಗಳನ್ನು ಪೂರೈಸಲು ಮುಂದೆ ಬರಬೇಕೆಂದು ಹೇಳುತ್ತದೆ ಎಂದು ಅಭಿಪ್ರಾಯಪಡುತ್ತಾರೆ.[27]

ಇಮಾ ನಾರೀ: ' ಋಕ್ಕಿನ ಕುರಿತು ಚಿಂತನೆ ಮಾಡಿದ ಎಚ್.ಎಚ್.ವಿಲ್ಸನ್ ಮತ್ತು ಎಫ್. ಇ. ಹಾಲ್ ಅವರು, ಹದಿನೈದನೆಯ ಶತಮಾನದ ಮಧ್ಯದಲ್ಲಿ ರಘುನಂದನ ಎಂಬವನೊಬ್ಬನಿಂದ ಈ ಕಳ್ಳ ಕೈಬರಹದ ತಪ್ಪು ಜರುಗಿರಬೇಕು ಎಂದು ಸಾಧಿಸಲು ಪ್ರಯತ್ನಿಸಿದ್ದಾರೆ.[28]

ಈ ವಿದ್ವಾಂಸರ ಚರ್ಚೆಯ ಹಿನ್ನೆಲೆಯಲ್ಲಿ ಕೆಲವು ವಿಚಾರಗಳನ್ನು ಹೀಗೆ ಸ್ಪಷ್ಟಗೊಳಿಸಬಹುದಾಗಿದೆ: 'ಇಮಾ ನಾರೀ:' — ಋಕ್ಕಿನ 'ಅಗ್ರೇ' ಎಂಬುದನ್ನು 'ಅಗ್ನೇ:' ಎಂದು ತಿದ್ದಿ, ಉದ್ದೇಶಪೂರ್ವಕವಾದ ವಾಕ್ಯ ರಚನೆಯನ್ನು ಮಾಡಿಕೊಳ್ಳಲಾಗಿದೆ. ಈ ತಿದ್ದುಪಡಿಯ ಕಾರಣವೆಂದರೆ ಸತಿ ಪದ್ಧತಿಗೆ ವೇದಗಳ ಮನ್ನಣೆಯನ್ನು ಪಡೆಯುವುದೇ ಆಗಿದೆ. ಆದರೆ ಈ ತಿದ್ದುಪಡಿ ಯಾವ ಕಾಲದಲ್ಲಿ ನಡೆಯಿತೆಂದು ಹೇಳುವಲ್ಲಿ ವಿದ್ವಾಂಸರು ಬೇರೆ ಬೇರೆ ನಿಲುವನ್ನು ತಾಳಿದ್ದಾರೆ. ಪಿ.ವಿ.ಕಾಣೆ ಅವರು 'ಇಮಾ ನಾರೀ:' ಋಕ್ಕನ್ನು ವೇದದ ಮನ್ನಣೆಗಾಗಿ ಅನಂತರದಲ್ಲಿ ಬಳಸಲಾಯಿತೆಂದು ಹೇಳುತ್ತಾರೆ. ಡಾ: ಎ. ಎಸ್. ಅಲ್ತೇಕರ್ ಅವರು, ಬೆಂಟಿಂಕನ ಕಾಲದಲ್ಲಿ ಸತಿಯನ್ನು ಬೆಂಬಲಿಸುವವರಿಂದ ಈ ತಿದ್ದುಪಡಿ ಜರುಗಿರಬೇಕೆಂದು ಅಭಿಪ್ರಾಯಪಡುತ್ತಾರೆ. ಎಚ್.ಎಚ್.ವಿಲ್ಸನ್ ಮತ್ತು ಎಫ್. ಇ. ಹಾಲ್ ಅವರು ಹದಿನೈದನೆಯ ಶತಮಾನದಲ್ಲಿ, ಅದೂ ರಘುನಂದನನಿಂದ ಈ ತಿದ್ದುಪಡಿ ನಡೆಯಿತೆಂದು ಹೇಳುವ ಪ್ರಯತ್ನ ಮಾಡುತ್ತಾರೆ. ಈ ತಿದ್ದುಪಡಿ ನಡೆದ ಕಾಲವನ್ನು ಗುರುತಿಸುವಲ್ಲಿ ಇರುವ ಆಧಾರಗಳ ಕೊರತೆ, ಅಸ್ಪಷ್ಟತೆಗಳ ಕಾರಣದಿಂದ ಒಂದು ನಿಶ್ಚಿತ ನೆಲೆಗೆ ಬರಲು ಸಾಧ್ಯವಾಗದಿದ್ದರೂ, ತಿದ್ದುಪಡಿ ನಡೆದ ಕುರಿತು ವಿದ್ವಾಂಸರನೇಕರಲ್ಲಿ ಒಮ್ಮತವಿದೆ. ಈ ಕಾರಣದಿಂದ ಋಗ್ವೇದದ 'ಇಮಾ ನಾರಿ:' ಋಕ್ಕು ಸತಿ ಆಚರಣೆಯನ್ನು ಹೇಳುವುದಿಲ್ಲವೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಅಲ್ಲದೆ ಇದು ನಿಯೋಗವನ್ನಾಗಲೀ, ಮರುವಿವಾಹವನ್ನಾಗಲೀ ಸೂಚಿಸುವಂಥದ್ದಲ್ಲ. ಸತ್ತವನಿಗೆ ಸಂಬಂಧಪಟ್ಟ ಮನೆಯ 'ಸುಪತ್ನಿಯರು' ಎಲ್ಲರಿಗಿಂತಲೂ ಮೊದಲೇ ಮನೆಯನ್ನು ಪ್ರವೇಶಿಸಲಿ ಎಂಬುದನ್ನು ಈ ಋಕ್ಕು ಸೂಚಿಸುವಂಥದ್ದಾಗಿದೆ.

ಋಗ್ವೇದದ 'ಉದೀರ್ಷ್ವನಾರಿ' ಎಂಬ ಋಕ್ಕು, ಪತಿಯ ಶವದೊಡನೆ ಪತ್ನಿ ಮಲಗಿಕೊಂಡು ಮರಣಹೊಂದಲು ನಿಶ್ಚಯಿಸಿದ್ದನ್ನು ಸೂಚಿಸುವುದರ ಜೊತೆಗೆ ಅವಳನ್ನು ಎದ್ದು ಬರುವಂತೆ ಆಗ್ರಹಿಸುವುದನ್ನು ಸೂಚಿಸುತ್ತದೆ. ಸಾಯಣನು ಇದರ ಮೇಲೆ ಭಾಷ್ಯ ಬರೆದುದರ ಅಭಿಪ್ರಾಯ ಹೀಗಿದೆ. ಅಶ್ವಲಾಯನಗೃಹ್ಯಸೂತ್ರದ — ತಾಮುತ್ಥಾಪಯೇದ್ದೇವರ: ಪತಿಸ್ಥಾನೀಯೋ ನ್ತೇವಾಸಿ ಜರದ್ದಾಸೋ ವೋದೀರ್ಷ್ವ ನಾರ್ಯಭಿ ಜೀವಲೋಕಂ — ಎಂಬ ಸೂತ್ರದಿಂದ ( ಆ. ಗೃ. 4 — 2 — 18 ) ಮೃತನ ಶರೀರವನ್ನು ಅಪ್ಪಿಕೊಂಡು

ಸಹಗಮನ ಮಾಡಲುದ್ಯುಕ್ತಳಾಗಿರುವ ಅವನ ಪತ್ನಿಯನ್ನು ಸತ್ತವನ ಪತ್ನಿಯ ಮೈದುನನೇ ಮೊದಲಾದವರು 'ಉದೀರ್ಷ್ವನಾರಿ' ಎಂಬ ಋಕ್ಕಿನಿಂದ ಆ ಮೃತಶರೀರದ ಸಮೀಪದಿಂದ ಎಬ್ಬಿಸಿ ಕರೆತರಬೇಕೆಂದು ವಿವೃತವಾಗಿರುವುದು.[29] ಸಾಯಣನ ವಿವರಣೆಯಿಂದ ಮೃತನ ಪತ್ನಿಯನ್ನು 'ಉದೀರ್ಷ್ವನಾರಿ' ಎಂದು ಸಂಬೋಧಿಸುವವನು ಆಕೆಯ ಮೈದುನನೆಂದು ಸ್ಪಷ್ಟವಾಗುತ್ತದೆ.

ಈ ಋಕ್ಕಿನ ಕುರಿತು ವಿವೇಚಿಸುತ್ತ ಪಿ.ವಿ.ಕಾಣೆ ಅವರು, ಋಗ್ವೇದ ಕಾಲದಲ್ಲಿ ಸತಿ ಆಚರಣೆ ಪೂರ್ಣವಾಗಿ ನಿಂತುಹೋಗಿತ್ತೆಂದೂ, ಆದರೆ ಅದರ ಸಾಂಕೇತಿಕ ಅನುಕರಣೆ ವಾಡಿಕೆಯಲ್ಲಿ ಬಂದಿತ್ತೆಂದೂ ಅಭಿಪ್ರಾಯ ಪಡುತ್ತಾರೆ.[30]

ಉದೀರ್ಷ್ವನಾರಿ' — ಋಕ್ಕಿನಲ್ಲಿರುವ 'ಉದೀರ್ಷ್ವ' 'ಏಹಿ' — ಈ ಪದಗಳು ಸಹಗಮನ ಮಾಡಲುದ್ಯುಕ್ತಳಾದ ಪತ್ನಿಯನ್ನು ಹಾಗೆ ಮಾಡದಂತೆ ಆಗ್ರಹಿಸುವುದನ್ನು ಸೂಚಿಸುತ್ತವೆ. ಆದರೆ 'ಉಪಶೇಷೇ' 'ಇದಂ ಜನಿತ್ವಂ ಅಭಿ' 'ಸಂ ಬಭೂಥ' — ಈ ಪದಗಳು ಋಗ್ವೇದ ಕಾಲದಲ್ಲಿ ಮರಣಹೊಂದಿದ ಪತಿಯನ್ನು ಅನುಸರಿಸಿ, ಪತ್ನಿತ್ವವನ್ನು ಗೌರವಿಸಿ ಸಹಗಮನ ಮಾಡಲು ಪತ್ನಿ ಇಚ್ಛಿಸುವುದನ್ನು ಸ್ಪಷ್ಟವಾಗಿ ದೃಢಪಡಿಸುತ್ತವೆ ಎಂಬುದನ್ನು ಮರೆಯಬಾರದು. ಋಗ್ವೇದ ಕಾಲದಲ್ಲಿ ಸತಿಪದ್ಧತಿಯು ಅನುಕರಣೆ ಮಾತ್ರವಾಗಿ ಉಳಿದಿತ್ತೆಂದು ಹೇಳುವದರ ಜೊತೆಗೆ ಪತ್ನಿತ್ವವನ್ನು ಗೌರವಿಸಿ ಕೆಲವರಾದರೂ ಸಹಗಮನವನ್ನು ಹೊಂದುತ್ತಿದ್ದಿರಬೇಕು ಎಂದು ಹೇಳಿದರೆ ಅದನ್ನು ಅಲ್ಲಗಳೆಯುವಂತೆಯೂ ಇಲ್ಲ.

ಕ್ರಿ.ಶ.ಪೂ.400 ರ ವರೆಗೆಸತಿಪದ್ಧತಿಯು ಎಲ್ಲಿಯೂ ಕಾಣಿಸಿಕೊಂಡಿಲ್ಲವೆಂಬ ಅಭಿಪ್ರಾಯವಿದೆ. ಬ್ರಾಹ್ಮಣಗಳಲ್ಲಿಯೂ (ಕ್ರಿ.ಶ.ಪೂ.1500 ರಿಂದ ಕ್ರಿ.ಶ.ಪೂ. 700), ಗೃಹ್ಯಸೂತ್ರಗಳಲ್ಲಿಯೂ (ಕ್ರಿ.ಶ.ಪೂ. 600 ರಿಂದ ಕ್ರಿ.ಶ.ಪೂ 300) ಸಹಗಮನವನ್ನು ಹೇಳಿಲ್ಲ.[31] ವಿಧವೆಯನ್ನು ಶವಸಂಸ್ಕಾರದ ಚಿತೆಯಿಂದ ಮೃತನ ಸಹೋದರನಾಗಲಿ, ನಂಬಿಗಸ್ಥ ಸೇವಕನಾಗಲಿ, ಶಿಷ್ಯನಾಗಲಿ, ಮರಳಿ ಕರೆತರುತ್ತಿದ್ದನೆಂದು ಗೃಹ್ಯಸೂತ್ರಗಳಿಂದ ತಿಳಿಯುತ್ತದೆ.[32] ವಿಧವೆಯು ಶವಸಂಸ್ಕಾರದ ಚಿತೆಯಿಂದ ಮರಳುವಾಗ ಗಂಡನ ಕೈಯಿಂದ ಬಿಲ್ಲು, ಬಂಗಾರ, ರತ್ನ ಮುಂತಾದವುಗಳನ್ನು ತರುವುದನ್ನು, ಅವಳು ಮತ್ತು ಅವಳ ಸಂಬಂಧಿಕರು ಸಂತೋಷ ಮತ್ತು ಸಮೃದ್ಧ ಜೀವನವನ್ನು ಕಳೆಯಲೆಂದು ಬಯಸುವುದನ್ನು ತೈತ್ತರೀಯ ಅರಣ್ಯಕದಿಂದ ತಿಳಿಯುತ್ತದೆ.[33] ಇಂಥ ಆಚರಣೆಗಳ ಹಿನ್ನೆಲೆಯಲ್ಲಿ 'ಬಹು ಹಿಂದೆಯೇ ಸತಿಪದ್ಧತಿ ಸತ್ತಿತ್ತೆಂದು ಸ್ಪಷ್ಟವಾಗುತ್ತದೆ. ಎಂದು ಡಾ: ಎ.ಎಸ್. ಅಳ್ತೇಕರ ಅವರು ಅಭಿಪ್ರಾಯಪಡುತ್ತಾರೆ.[34]

ಬುದ್ಧ ಮತ್ತು ಮಹಾವೀರರು ಸತಿಯಾಗುವುದರ ಕುರಿತಾಗಿ ಹೇಳಿಲ್ಲ. ಅರ್ಥಶಾಸ್ತ್ರದಲ್ಲಿಯೂ ಸತಿಯಾದುದರ ಉಲ್ಲೇಖವಿಲ್ಲ. ಯಜ್ಞಗಳಲ್ಲಿ ಪಶುವಧೆಯನ್ನು ವಿರೋಧಿಸಿದ ಬುದ್ಧನು ತನ್ನ ಕಾಲದಲ್ಲಿ ಸಹಗಮನ ಪದ್ಧತಿಯು ಇದ್ದಿದ್ದರೆ ಅದನ್ನು ಖಂಡಿತವಾಗಿ ವಿರೋಧಿಸುತ್ತಿದ್ದನು.[35] ಮಹಾವೀರನ ಕಾಲದಲ್ಲಿ ಸತಿ ಆಚರಣೆ ಕುರಿತು ವಿವರಗಳು ಇಲ್ಲದಿದ್ದರೂ ಮುಂದೆ 'ಮಹಾನಿಸಿಹ' ಎಂಬಂಥ ಜೈನಗ್ರಂಥಗಳಲ್ಲಿ ಸತಿ ಆಚರಣೆಯ ಉಲ್ಲೇಖ ಕಾಣುತ್ತೇವೆ. ಈ ''ಗ್ರಂಥದಲ್ಲಿ ಒಬ್ಬ ರಾಜಕುಮಾರನ ಪತ್ನಿ ವಿಧವೆಯಾದ ಕೂಡಲೇ ಸಹಗಮನ ಮಾಡುವ ನಿಶ್ಚಯ ಮಾಡುತ್ತಾಳೆ. ಆದರೆ ಅವಳ ತಂದೆ ಅವಳ ಸಹಗಮನವನ್ನು ವಿರೋಧಿಸುತ್ತಾನೆ, ಆ ಪದ್ಧತಿ ನಮ್ಮ ಕುಟುಂಬದಲ್ಲಿ ಇಲ್ಲವೆನ್ನುವುದು ಇವನ ಪ್ರಮುಖವಾದ.[36] ಕೌಟಿಲ್ಯನು ಸತಿಯಾಗುವುದರ ಬಗ್ಗೆ ಏನನ್ನು ಹೇಳುವುದಿಲ್ಲ. ಅಷ್ಟೇ ಅಲ್ಲ, ಗಂಡನು ಸತ್ತಿದ್ದರೆ ಮರು ಮದುವೆಯಾಗಬಹುದು ಎಂದು ಒಂದೆಡೆಯಲ್ಲಿ ಹೇಳಿದರೆ, ಇನ್ನೊಂದೆಡೆಯಲ್ಲಿ ಗಂಡ ಸತ್ತಿದ್ದರೆ ಏಳು ತಿಂಗಳುಗಳ ಕಾಲ ಕಾಯ್ದು ನಂತರ ಮದುವೆಯಾಗಬೇಕೆಂದೂ ಹೇಳುತ್ತಾನೆ [37] ಮೆಗಾಸ್ತನೀಸನು ಕೂಡ ಸತಿಯಾಗುವುದರ ಕುರಿತು ಹೇಳುವುದಿಲ್ಲವೆಂಬುದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾಗಿದೆ.

ಕ್ರಿ.ಶ.ಪೂ.300 ರಿಂದ ಸತಿಯಾಗುವದರ ಉಲ್ಲೇಖಗಳನ್ನು ಹೆಚ್ಚು ಹೆಚ್ಚಾಗಿ ನಮಗೆ ಗುರುತಿಸಲು ಸಾಧ್ಯವಾಗುತ್ತದೆ. ಮಹಾಭಾರತದಲ್ಲಿ ಕೆಲವರು ಸತಿಯಾದುದರ ವಿವರಗಳು ಸಿಗುತ್ತವೆ ಮೌಸಲಪರ್ವ' ದಲ್ಲಿ ವಾಸುದೇವನ ಚಿತೆಯ ಮೇಲೆ ಅವನ ನಾಲ್ಕು ಜನ ಪತ್ನಿಯರಾದ ದೇವಕಿ, ಬಧ್ರ, ರೋಹಿಣಿ, ಮದಿರಾ, ಇವರು ಏರುತ್ತಾರೆ.[38] ಕೃಷ್ಣನ ಸಾವು ಹಸ್ತಿನಾಪುರಕ್ಕೆ ತಿಳಿದು ಬರಲಾಗಿ, ಅವನ ಶವವಿಲ್ಲದೆ ಅವನ ಐದು ಜನ ಪತ್ನಿಯರಾದ ರುಕ್ಮಿಣಿ ಗಾಂಧಾರಿ, ಸಹ್ಯಾ, ಹೇಮಾವತಿ, ಜಾಂಬವತಿಯರು ಚಿತೆ ಹತ್ತುತ್ತಾರೆ.[39] ಆದಿಪರ್ವದಲ್ಲಿರುವ ಮಾದ್ರಿಯ ಸಹಗಮನವೇ ಮಹಾಭಾರತದಲ್ಲಿರುವ ಸತಿ ವಿವರಣೆಗಳಲ್ಲಿ ಮುಖ್ಯವಾದುದು ಅವಳನ್ನು ಸತಿಯಾಗದಂತೆ ತಡೆಯಲಾಯಿತಾದರೂ ಅವಳು ಅದಕ್ಕೆ ಒಪ್ಪಲಿಲ್ಲ. ಈ ಸಂಧರ್ಭದಲ್ಲಿ ಮಹಾಭಾರತ ಹೀಗೆ ವಿವರಿಸುತ್ತದೆ.[40]

अहमेवानुयास्यामि भर्तारमपलायिनम् ।
न हि तृप्तास्मि कामानां ज्येष्ठा मामनुमन्यताम् ॥
वर्तेयं न क्षमां वृत्तिं जानाहं न सुतेषु ते ।

ಮಾದ್ರಿ ಸಹಗಮನವಾಗಲು ಕೊಡುವ ಕಾರಣಗಳು ಹೀಗಿವೆ: ಮೊದಲನೆಯದಾಗಿ ಗಂಡನ ಸಾವಿಗೆ ಕಾರಣಳಾಗಿದ್ದೆನೆ. ಎರಡನೆಯದಾಗಿ ಕಾಮವಿಕಾರವನ್ನು ನಿಗ್ರಹಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಮೂರನೆಯದಾಗಿ ತನ್ನ ಮಕ್ಕಳನ್ನು, ಮಲಮಕ್ಕಳನ್ನು ಸಮನಾಗಿ ನೋಡಿಕೊಳ್ಳಲು ತನ್ನಿಂದ ಸಾಧ್ಯವಿಲ್ಲ. ಈ ಕಾರಣಗಳಿಂದಾಗಿ ಮಾದ್ರಿ ಮಹಾಭಾರತದಲ್ಲಿ ಗಂಡನ

ಶವದೊಡನೆ ಚಿತೆ ಏರುತ್ತಾಳೆ.

ಹೀಗೆ ಸತಿಯಾದುದರ ಕೆಲವು ವಿವರಗಳು ಮಹಾಭಾರತದಲ್ಲಿ ದೊರಕಿದರೂ, ಕೃಷ್ಣನ ಪತ್ನಿ ಸತ್ಯಭಾಮೆ ವಿಧವೆಯಾಗಿ, ಯಾದವರ ಸಾವಿರಾರು ಪತ್ನಿಯರು ವಿಧವೆಯರಾಗಿ ನೂರಾರು — ಸಾವಿರಾರು ಜನ ಮಡಿದ ಯೋಧರ ಪತ್ನಿಯರು ವಿಧವೆಯರಾಗಿ ಮಹಾಭಾರತ ದಲ್ಲಿ ಇದ್ದುದನ್ನು ಕಾಣುತ್ತೇವೆ.

ಮೂಲ ರಾಮಾಯಣದಲ್ಲಿ ಸತಿ ಆಚರಣೆಯ ವಿವರಗಳಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ರಾಮಾಯಣದ ಉತ್ತರಕಾಂಡದಲ್ಲಿ (17.5) ಬ್ರಹ್ಮರ್ಷಿಯ ಹೆಂಡತಿಯಾದ ವೇದವತಿಯು ತಾನು ಬ್ರಾಹ್ಮಣ ಸ್ತ್ರೀಯು ರಾವಣನ ಪೀಡೆ ತಾಳಲಾರದೆ ಸಹಗಮನ ಮಾಡಿಕೊಳ್ಳುತ್ತಾಳೆ. ಇದು ಐತಿಹಾಸಿಕವೆನ್ನುವುದಕ್ಕಿಂತ ಪೌರಾಣಿಕವೇ ಆಗಿದೆ ಎಂದು ಡಾ: ಅಲ್ತೇಕರರು ತಿಳಿಸುತ್ತಾರೆ. ರಾವಣನು ಸೀತೆಗೆ ರಾಮನನ್ನು ಕೊಂದುದಾಗಿ, ಆತನ ಪ್ರತಿಕೃತಿಯನ್ನು ಮಾಯೆಯಿಂದ ತೋರಿಸಲಾಗಿ, ಸೀತೆಯು ತನ್ನನ್ನು ಗಂಡನ ಜೊತೆಗೆ ಸುಟ್ಟುಬಿಡಲು ಕೇಳಿಕೊಳ್ಳುವ ಭಾಗವೂ ಪ್ರಕ್ಷಿಪ್ತವಾಗಿರಬೇಕೆಂದು ಡಾ: ಅಲ್ತೇಕರರು ತರ್ಕಿಸುತ್ತಾರೆ.[41] ಕೌಸಲ್ಯೆ ಮಾತ್ರ ತಾನು ರಾಜನ ದೇಹವನ್ನು ಅಪ್ಪಿ ಬೆಂಕಿಯಲ್ಲಿ ಸಹಗಮನಮಾಡುತ್ತೇನೆಂದು ಹೇಳುವ ಮಾತುಗಳು ಸತಿಯ ಆಚರಣೆಯ ಕುರುಹುಗಳನ್ನು ಹೇಳಿದರೂ ಇಲ್ಲಿಯೂ ಕೌಸಲ್ಯೆ ಸಹಗಮನ ಮಾಡುವುದಿಲ್ಲವೆನ್ನುವುದನ್ನು ಗಮನಿಸಬೇಕು.[42]

ಕ್ರಿ.ಶ.ಪೂ. 4ನೆಯ ಶತಮಾನದಲ್ಲಿ ಭಾರತದ ವಾಯುವ್ಯ (ಪಂಜಾಬಪ್ರಾಂತ) ದಲ್ಲಿ ಸತಿಘಟನೆಗಳು ಜರುಗಿದ ಕುರಿತಾಗಿ ಗ್ರೀಕರು ಉಲ್ಲೇಖ ಮಾಡಿದ್ದಾರೆ. ಓನಿಸಿಕ್ರಿಟಿಸ್ ( Onesicritus ) ಕಥೈ ಜನಾಂಗದಲ್ಲಿ ಸತಿ ಇರುವುದನ್ನು ಗುರುತಿಸಿದ್ದಾನೆ.[43] ಕ್ರಿ.ಶ.ಪೂ. 316 ರಲ್ಲಿ ಹಿಂದೂ ಸೇನಾನಾಯಕ, ಕೆತ್ಯುಸನು ಯುಮೇನಿಸನ ಪರವಾಗಿ ಅಂಟಿಗೋನಸನೊಡನೆ ಹೋರಾಡಿ ಮರಣಹೊಂದಲು ಅವನ ಕಿರಿಯ ಪತ್ನಿ ಸಹಗಮನ ಮಾಡಿಕೊಳ್ಳುತ್ತಾಳೆ. ಡಾ: ಎಂ. ಚಿದಾನಂದಮೂರ್ತಿಯವರು ಈ ಘಟನೆಯನ್ನು ಸಹಗಮನದ ಮೊದಲನೆಯ ಐತಿಹಾಸಿಕ ನಿದರ್ಶನವೆಂದು ಸ್ಪಷ್ಟಗೊಳಿಸಿದ್ದಾರೆ.[44] ಈ ಸಹಗಮನವನ್ನು ನೋಡಿದವರಾದ ಅರಿಸ್ಟೊಬುಲಸ್ ಮತ್ತು ಡಿಯೊಡರಸ್ ಸಿಕುಲ್ಯಾಲಸ್ — ಈ ಇಬ್ಬರು ಪ್ರವಾಸಿಗಳು ಈ ಘಟನೆಯನ್ನು ವಿವರವಾಗಿ ಉಲ್ಲೇಖಿಸಿದ್ದಾರೆ. ಡಿಯೊಡರಸ್ ಸಿಕುಲ್ಯಾಲಸ್ ಕೊಡುವ ವಿವರಗಳನ್ನು ಹೀಗೆ ಸಂಗ್ರಹಿಸಿ ಕೊಡಬಹುದಾಗಿದೆ : ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿ ಕೆತ್ಯುಸನು ಮಡಿದಾಗ, ಅವನೊಡನೆ ಬಂದ ಹೆಂಡತಿಯರಿಬ್ಬರೂ ಸಹಗಮನ ಮಾಡಲು ಬಯಸಿದರು. ಗಂಡನೊಡನೆ ಸಾಯಲು ಒಬ್ಬಳಿಗೆ ಮಾತ್ರ ಅವಕಾಶವಿತ್ತು.

ಸೇನಾನಾಯಕರಿಗೆ ಇಬ್ಬರೂ ಸಹಗಮನವಾಗುವ ವಿಷಯ ತಿಳಿದಾಗ ಅವರು ಈ ಕುರಿತು ತೀರ್ಮಾನಕೊಡಬೇಕಾಯಿತು. ಹಿರಿಯ ಹೆಂಡತಿ, ಗರ್ಭಿಣಿಯಾಗಿರುವುದರಿಂದ ಕಟ್ಟಳೆಯಂತೆ ಆಕೆ ಚಿತೆಯನ್ನೇರಲು ಅವಕಾಶವಿಲ್ಲವೆಂದು ಕಿರಿಯ ಹೆಂಡತಿವಾದಿಸಿದಳು. ತಾನು ವಯಸ್ಸಿನಲ್ಲಿ ಹಿರಿಯವಳಾದ್ದರಿಂದ ಚಿತೆ ಏರುವ ಗೌರವ ತನಗೆ ಸಲ್ಲಬೇಕೆಂದು ಹಿರಿಯವಳು ವಾದಿಸಿದಳು. ಹಿರಿಯವಳು ಗರ್ಭಿಣಿಯೆಂದು ಖಚಿತಪಡಿಸಿಕೊಂಡ ಮೇಲೆ ಕಿರಿಯವಳಿಗೆ ಸಹಗಮನವಾಗಲು ಅವಕಾಶಕೊಡಲಾಯಿತು. ಇದನ್ನು ಕೇಳಿ ಹಿರಿಯ ಹೆಂಡತಿ ಮುಖದ ಮುಸುಕನ್ನು ಹರಿದು ತಲೆಯ ಕೂದಲನ್ನು ಕಿತ್ತುಕೊಂಡು ಬಿಕ್ಕ ಬಿಕ್ಕ ಅಳುತ್ತಾ ಹೋದಳು. ಕಿರಿಯವಳು ಸಂತೋಷಭರಿತಳಾಗಿ ತಲೆಗೆ ಕಿರೀಟಧರಿಸಿ, ಮೈಗೆಲ್ಲ ಆಭರಣಗಳನ್ನು ತೊಟ್ಟು, ಮದುವಣಗಿತ್ತಿಯಂತೆ ತನ್ನ ಬಂಧು ಬಳಗದೊಡಗೂಡಿ ವಾದ್ಯಸಮೇತ ಚಿತಾಗ್ನಿಯ ಕಡೆಗೆ ಹೊರಟಳು. ನೆರೆದ ಜನ ಸಮೂಹ ಆಕೆಯ ಹಿರಿಮೆಯನ್ನು ಹೊಗಳಿ ಹಾಡುತ್ತಿತ್ತು. ಚಿತಾಗ್ನಿಯನ್ನು ಸಮೀಪಿಸಿದ ನಂತರ ಆಕೆ ತನ್ನ ವಸ್ತ್ರಾಭರಣಗಳನ್ನೆಲ್ಲ ತೆಗೆದು ನೆಂಟರಿಷ್ಟರಿಗೂ ಸೇವಕ ಸೇವಕಿಯರಿಗೂ ದಾನಮಾಡಿ ಆಪ್ತರಿಂದ ಬೀಳ್ಕೊಂಡಳು. ತನ್ನ ಸಹೋದರನ ಕೈಯನ್ನು ಹಿಡಿದು ಆಕೆ ಚಿತಾಗ್ನಿಯನ್ನು ಏರಿದಳು. ನೆರೆದ ಜನ ಸಮೂಹ ಉಘೇ ಎಂದಿತು ಅಗ್ನಿ ಸ್ಪರ್ಶಮಾಡುವ ಮುನ್ನ ಇಡೀ ಸೈನ್ಯವು ಚಿತಾಗ್ನಿಯ ಸುತ್ತ ಮೂರುಬಾರಿ ಪ್ರದಕ್ಷಿಣೆ ಬಂದಿತು. ಆ ವೀರರಮಣಿ ಚಿತೆಯ ಮೇಲೆ ಗಂಡನ ಪಕ್ಕದಲ್ಲಿ ಮಲಗಿದಳು. ಚಿತೆಯನ್ನಿಟ್ಟ ಬಳಿಕ, ಬೆಂಕಿಯ ಜ್ವಾಲೆ ಆಕೆಯನ್ನು ಆವರಿಸಿತು. ಆದರೂ ತನ್ನ ಗೌರವಕ್ಕೆ ಕುಂದು ಬರಬಾರದೆಂದು ಒಂದಿಷ್ಟು ಕಿರಿಚಿಕೊಳ್ಳಲಿಲ್ಲ. ಆಕೆ ಚಿತೆಯಲ್ಲಿ ಐಕ್ಯವಾದಳು. ಇದನ್ನು ನೋಡಿ ಕೆಲವರು ಕನಿಕರದಿಂದ ಕಣ್ಣೀರಿಟ್ಟರು. "ಕೆಲವರು ಹೊಗಳಿದರು. ಈ ಪದ್ಧತಿ ಅನಾಗರಿಕವೆಂದೂ ಅಮಾನುಷವೆಂದೂ ಕರೆಯುವ ಗ್ರೀಕರಿಗೇನೂ ಕಡಿಮೆ ಇರಲಿಲ್ಲ [45]

ಡಿಯೋಡರಸ್ ಸಿಕ್ಯೂಲಸನ ಈ ವಿವರಣೆ ಕ್ರಿ.ಶ.ಪೂ.4—3 ನೇ ಶತಮಾನಗಳಲ್ಲಿದ್ದ ಸಹಗಮನದ ಚಿತ್ರಕೊಡಲು ಪ್ರಯತ್ನಿಸುತ್ತದೆ. ಇದನ್ನು ಸಹಗಮನದ ಮೊದಲನೆಯ ಐತಿಹಾಸಿಕ ನಿದರ್ಶನವೆಂದು ತಿಳಿದರೂ ಈ ಕಾಲದಲ್ಲಿ — 'ಈ ಕಾಲದ ಪೂರ್ವದಲ್ಲಿ ಸಹಗಮನಗಳೇ ನಡೆದಿಲ್ಲ' ವೆಂದು ಹೇಳುವಂತಿಲ್ಲ. ಡಿಯೋಡರಸ್ ಸಿಕ್ಯೂಲಸನೇ, ಗಂಡ ಸತ್ತರೆ ಹೆಂಡತಿಯೂ ಸಾಯಬೇಕೆಂಬ ಕಟ್ಟಳೆ ಇತ್ತೆಂದು ಹೇಳುತ್ತಾನೆ, ಸಹಗಮನಕ್ಕೆ ಅವಕಾಶ ಸಿಗದ್ದಕ್ಕಾಗಿ ಕೆತಿಯಸನ ಹಿರಿಯ ಹೆಂಡತಿ ದುಃಖಿಸುವುದನ್ನು, ಕಿರಿಯ ಹೆಂಡತಿ ಅವಕಾಶ ಸಿಕ್ಕಿದ್ದಕ್ಕಾಗಿ ಸಂತೋಷಪಡುವುದನ್ನು ನೋಡಿದರೆ ಆ ಕಾಲದಲ್ಲಿ ಸ್ತ್ರೀಯರು ಸಹಗಮನವನ್ನು ಗೌರವಿಸುತ್ತಿದ್ದರೆಂದು

ತಿಳಿಯುತ್ತದೆ, ಅಲ್ಲದೆ ಓನಿಸಿಕ್ರಿಟಸ್, ಸ್ಟ್ರಾಬೊ, ಅರಿಸ್ಟೊಬುಲಸ್ ಮೊದಲಾದವರು ಸತಿಯಾಗುವುದನ್ನು ಹೇಳುವುದರ ಹಿನ್ನೆಲೆಯಲ್ಲಿ ಸಹಗಮನವು ಪ್ರಚಾರಕ್ಕೆ ಬರುತ್ತಿತ್ತೆಂದು ಹೇಳಬಹುದಾಗಿದೆ. ವೇದಪೂರ್ವದಲ್ಲಿದ್ದ ಸತಿ ಆಚರಣೆ ವೇದಕಾಲದಲ್ಲಿ ಮನ್ನಣೆ ಪಡೆಯದೇ ಮುಂದೆ ಬ್ರಾಹ್ಮಣಗಳ ಗೃಹ್ಯಸೂತ್ರಗಳ ಕಾಲದಲ್ಲಿ ಅವಶೇಷಮಾತ್ರವಾಗಿ ಆಚರಣೆಯಲ್ಲಿದ್ದು, ಬುದ್ಧ — ಮಹಾವೀರರ ಕಣ್ಣಿಗೆ ಕಾಣಿಸಿಕೊಳ್ಳದೆ ಕ್ರಿ.ಶ.ಪೂ. 4 — 3 ನೇ ಶತಮಾನದಲ್ಲಿ ಮತ್ತೆ ಪ್ರಚಾರಪಡೆದಂತೆ ಕಾಣುತ್ತದೆ

ಮನು ( ಕ್ರಿ.ಶ.ಪೂ.600 ರಿಂದ 300 ) ಯಾಜ್ಞವಲ್ಕ್ಯರು ( ಕ್ರಿ.ಶ.400) ಈ ಪದ್ಧತಿ ಕುರಿತು ಮೌನವಾಗಿದ್ದಾರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[46] ಮೊದಲಿನ ಸ್ಮೃತಿಕಾರರ ಒಪ್ಪಿಗೆ ದೊರಕಿಲ್ಲವೆಂಬುದು ಇವರ ಅಭಿಪ್ರಾಯವಾಗಿದೆ. ವಿಧವೆಯು ನಿಯೋಗದಿಂದ ಮಕ್ಕಳನ್ನು ಪಡೆಯುವುದನ್ನು, ಮೃತಗಂಡನ ಸಹೋದರನೊಡನೆ ವಿವಾಹವಾಗುವುದನ್ನು ಮನು ಹೇಳುತ್ತಾನೆ.[47] ಜೊತೆಗೆ ಮನು ಹೇಳುವ ಒಂದು ಮುಖ್ಯ ಶ್ಲೋಕ ಹೀಗಿದೆ [48]

ಪತಿಂ ಯಾ ನಾಭಿಚರತಿ ಮನೋವಾಗ್ದೇಹಸಂಯುತಾ |
ಸಾ ಭರ್ತೃಲೋಕಾನಾಪ್ನೋತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ||
(ಯಾವಳು ಮನಸ್ಸು, ವಚನ, ದೇಹಗಳಿಂದ ಪತಿಯನ್ನು
ಅತಿಕ್ರಮಿಸುವುದಿಲ್ಲವೋ ಅವಳು ಸಾಧ್ವಿಶಿರೋಮಣಿಯು :
ಮರಣಾನಂತರವೂ ಪತಿಯ ಬೆನ್ನು ಬಿಡುವುದಿಲ್ಲ )

ಮನು ಸಾಧ್ವಿಯಾದವಳು ಮರಣಾನಂತರವೂ ಪತಿಯ ಬೆನ್ನು ಬಿಡುವುದಿಲ್ಲ ಎಂದು ಅಭಿಪ್ರಾಯಪಡುತ್ತಾನೆ. ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ಮನು ತನ್ನ ಕಾಲದಲ್ಲಿದ್ದ ಸಹಗಮನ ಪದ್ಧತಿಯನ್ನು ಸೂಚಿಸುತ್ತಾನಲ್ಲದೆ, ಸಹಗಮನ ಹೊಂದುವ ಸ್ತ್ರೀಯನ್ನು 'ಸಾಧ್ವಿ' ಎಂದು ಗೌರವಿಸುತ್ತಾನೆಂದು ಹೇಳಬಹುದಾಗಿದೆ. ಕಾರಣ ಮನುವಿನ ಕಾಲದಲ್ಲಿ ಗಂಡನ ಮರಣದ ನಂತರ ವಿಧವೆಯರು ಮರುಮದುವೆಯಾಗಿಯೋ ನಿಯೋಗ, ಹೊಂದಿಯೋ ಇರುತ್ತಿದ್ದುದರ ಜೊತೆಗೆ ಕೆಲವು 'ಸಾಧ್ವಿ' ಯರು ಸತಿಯಾಗುತ್ತಿದ್ದರಿಂದಲೂ ಹೇಳಬಹುದಾಗಿದೆ.

ಪತ್ನಿಯ ಕರ್ಮಫಲವು ಯಾವುದಾದರೂ ಇರಲಿ ಮೃತ ಪತಿಯ ಜೊತೆಗೆ ಸತಿಯು ಪ್ರಾಣತ್ಯಾಗ ಮಾಡಿ ಅವನ ಆತ್ಮದ ಹಿಂದೆ ಹೋಗಬೇಕೆಂದು ಎಂದು ವಿಷ್ಣು ( ಕ್ರಿ.ಶ.100) ವಿವರಿಸುತ್ತಾನೆ. ವಿಷ್ಣುವಿನ ದೃಷ್ಟಿಯಲ್ಲಿ ಸಹಗಮನವು ತರ್ಕಬದ್ಧವಾಗಿದೆ, ಇನ್ನೊಂದೆಡೆಗೆ ಈ ಸ್ಮೃತಿಕಾರ ಮರುವಿವಾಹವನ್ನು ಹೇಳುತ್ತಾನೆ. ಈ ವಿಷಯವನ್ನು ವಿವರಿಸಿದ ಡಾ: ಅಳ್ತೇಕರರು ಸಹಗಮನ ಹೇಳಿದ ಮೊದಲಿನ ಲೇಖಕರಲ್ಲಿ ವಿಷ್ಣು ಒಬ್ಬನೆಂದು ಅಭಿಪ್ರಾಯಪಡುತ್ತಾರೆ.[49]

ಗರುಡ, ವಿಷ್ಣು, ಪದ್ಮ, ಮೊದಲಾದ ಪುರಾಣಗಳು, ಕಾಮಸೂತ್ರ, ಊರುಭಂಗ, ಮೃಚ್ಛಕಟಿಕ, ಕುಮಾರಸಂಭವ ಮೊದಲಾದ ಕಾವ್ಯಗಳು ಸತಿಯಾಗುವುದರ ಕುರಿತು ವಿವರಣೆ ನೀಡುವುದನ್ನು ನೋಡಿದರೆ ಕ್ರಿ.ಶ.4ನೇಯ ಶತಮಾನದಿಂದ ಸತಿಪದ್ಧತಿ ಹೆಚ್ಚು ಪ್ರಚಾರದಲ್ಲಿದ್ದುದು ತಿಳಿಯುತ್ತದೆ. ಪುರಾಣಕಾರರ, ಕವಿಗಳ ಮನಸ್ಸಿನಲ್ಲಿ ನೆಲೆನಿಲ್ಲುವಷ್ಟು ಈ ಕಾಲದಲ್ಲಿ ಸತಿ ಆಚರಣೆ ನಡೆದುಕೊಂಡು ಬಂದಿದೆ. ಗರುಡ ಪುರಾಣದಲ್ಲಿ ಸಹಗಮನ ಮತ್ತು ಪಾತಿವ್ರತ್ಯದ ಮಹಿಮೆಯನ್ನು ಹೇಳಲಾಗಿದೆ.[50] ಭಾಗವತ ಪುರಾಣವು (ಕ್ರಿ.ಶ.900) ಕೃಷ್ಣನ ಪತ್ನಿಯರಾದ ರುಕ್ಮಿಣಿ, ಸತ್ಯಾ, ಹೇಮಾವತಿ ಮತ್ತು ಜಾಂಬವತಿಯರು ಚಿತೆ ಏರುವುದನ್ನೂ, ವಸುದೇವನ ಪತ್ನಿಯರಾದ ದೇವಕಿ, ಭದ್ರೆ, ರೋಹಿಣಿ, ಮದಿರಾ, ಇವರು ಗಂಡನೊಡನೆ ಚಿತೆ ಏರುವುದನ್ನು ತಿಳಿಸುತ್ತದೆ.[51] ಅಗ್ನಿ ಪುರಾಣವು ವಿಧವೆಗೆ ಸನ್ಯಸನವೇ ಮುಖ್ಯವೆಂದು, ಸಹಗಮನವೇಸಿದರೂ ಎರಡನೆಯ ಅಮುಖ್ಯ ಕ್ರಿಯೆ ಎಂದು ಹೇಳುತ್ತದೆ.[52] ಪದ್ಮಪುರಾಣವು (ಕ್ರಿ.ಶ.1100) ಉತ್ತರಖಂಡ ಸೃಷ್ಟಿಖಂಡ, ಪಾಟಲಖಂಡಗಳಲ್ಲಿ ಸಹಗಮನದ ವಿವರಣೆಗಳನ್ನು ನೀಡುತ್ತದೆ. ಇದು ಬ್ರಾಹ್ಮಣ ಸ್ತ್ರೀಗೆ ಸಹಗಮನವನ್ನು ನಿಷೇಧಿಸುತ್ತದೆ. ಬ್ರಾಹ್ಮಣಿಗೆಚಿತೆ ಏರಲು ಸಹಾಯಮಾಡಿದವರಿಗೆ ಬ್ರಾಹ್ಮಣನನ್ನು ಕೊಂದಂಥ ಭಯಂಕರವಾದ ಮತ್ತು ಪ್ರಾಯಶ್ಚಿತ್ತಕ್ಕೆ ಮೀರಿದ ಪಾಪ ಬರುತ್ತದೆ ಎಂದು ಹೇಳುತ್ತದೆ.[53] ಪಾಟಲಖಂಡದಲ್ಲಿ ಸಹಗಮನ ಮಾಡುವ ಸ್ತ್ರೀ ಸಾಕ್ಷಮಾಡಿ ಸೌಭಾಗ್ಯದ ಆಭರಣಗಳನ್ನು ಹಂಚುವ ವಿವರಣೆ ಬರುತ್ತದೆ.[54] ಉತ್ತರಖಂಡದಲ್ಲಿ ಕೃಷ್ಣನು ಅರ್ಜುನನಿಗೆ, ನಾನು ಸ್ವರ್ಗಕ್ಕೆ ಹೋಗುತ್ತೇನೆ, ರುಕ್ಮಿಣಿ ಮೊದಲಾದ ಎಂಟು ಜನ ಮುಖ್ಯ ಹೆಂಡತಿಯರನ್ನು ಕರೆತಂದು ನನ್ನ ಶರೀರದೊಡನೆ ಕಳುಹಿಸು ಎಂದು ಹೇಳುವುದು ಸಹಗಮನವನ್ನು ಸೂಚಿಸುವಂಥದ್ದೇ ಆಗಿದೆ. ಇಲ್ಲಿಯೇ ರೇವತಿಯು ಸಹಗಮನವಾಗುವ ವಿಷಯವನ್ನು ಹೀಗೆ ವಿವರಿಸಿದೆ:

"ರೇವತೀ ಚ ಬಲಭದ್ರಶರೀರಂ ಪರಿಷ್ವಜ್ಯಾಗ್ನಿಂ
ಪ್ರವಿಶ್ಯ ತಸ್ಮಿನ್ ದೇಹೇ ಪ್ರಾಪ್ಯ ದಿವ್ಯ ವಿಮಾನಾರೂಢಾ—
ಭರ್ತುಃ ಸಾಧನಂ ಸಂಕರ್ಷಣಲೋಕಂ ದಿವ್ಯಮವಾಪ"

(ರೇವತಿಯು ಬಲಭದ್ರನ ಶರೀರವನ್ನು ಆಲಂಗಿಸಿಕೊಂಡು ಅಗ್ನಿಪ್ರವೇಶಮಾಡಿ ಆ ದೇಹದಲ್ಲಿ ಐಕ್ಯತೆಯನ್ನು ಹೊಂದಿ ವಿಮಾನವನ್ನು ಹತ್ತಿಕೊಂಡು ಗಂಡನ ಲೋಕವಾದ ಸಂಕರ್ಷಣ ಲೋಕವನ್ನು ಹೊಂದಿದಳು.)

ಅದರಂತೆಯೇ ರುಕ್ಮಿಪುತ್ರಿಯು ಪ್ರದ್ಯುಮ್ನನ ದೇಹದೊಡನೆಯೂ ಉಷೆಯು ಅನಿರುದ್ಧನ ದೇಹದೊಡನೆಯೂ ಎಲ್ಲ ಯಾದವ ಸ್ತ್ರೀಯರು ತಮ್ಮ ತಮ್ಮ ಗಂಡಂದಿರ

ಶರೀರಗಳನ್ನು ಹೊಂದಿಯೂ ಅವುಗಳೊಡನೆ ಅಗ್ನಿಪ್ರವೇಶ ಮಾಡಿದರು ಎಂದು ಪದ್ಮಪುರಾಣ ವಿವರಿಸುತ್ತದೆ.[55]

ಈ ರೀತಿಯಾದ ಪತ್ನಿಯರಲ್ಲಿ ಸಹಗಮನ ಮಾಡುವ ವಿವರ ಮಹಾಭಾರತದಲ್ಲಿ ಇಲ್ಲ. ಡಾ: ಅಳ್ತೇಕರರು ಹೇಳುವಂತೆ 'ಪುರಾಣಗಳು ಸಹಗಮನದ ಕುರಿತು ಮಾಹಾತ್ಮ್ಯ ಸೃಷ್ಟಿ ಮಾಡಿವೆ[56] ಜೊತೆಗೆ ನಮಗೆ ಒಂದು ಮಾತು ಸ್ಪಷ್ಟಗೊಳ್ಳುವುದೇನೆಂದರೆ, ಮಹಾ ಭಾರತವು ವಿವರಿಸದೇ ಇದ್ದ ಸತಿಸಂಗತಿಗಳನ್ನು ಪುರಾಣಗಳು ವಿವರಿಸುವುದನ್ನು ನೋಡಿದರೆ ಪುರಾಣಕಾರರು ಸಮಕಾಲೀನ ಸಮಾಜದಲ್ಲಿ ಹೆಚ್ಚು ಹೆಚ್ಚಾಗಿ ಸಹಗಮನ ಆಚರಣೆಗಳನ್ನು ಕಂಡಿರಬೇಕೆನಿಸುತ್ತದೆ.

ವಾತ್ಸ್ಯಾಯನನು ತನ್ನ ಕಾಮಸೂತ್ರದಲ್ಲಿ ( VI 2,53 ), ನೃತ್ಯ ಮಾಡುವ ಸ್ತ್ರೀಯರು ತಮ್ಮ ಪ್ರಿಯಕರರನ್ನು ಒಲಿಸಿಕೊಳ್ಳುವುದಕ್ಕಾಗಿ ಸಹಗಮನದ ಮಾತುಗಳನ್ನು ಹೇಳುತ್ತಿದ್ದರೆಂದು ಉಲ್ಲೇಖಿಸುತ್ತಾನೆ. ವರಾಹಮಿಹಿರನು ಪತಿಯೊಂದಿಗೆ ಸುಟ್ಟುಕೊಳ್ಳುವ ಸ್ತ್ರೀಯರ ಧೈರ್ಯವನ್ನು ಹೊಗಳುತ್ತಾನೆ.[57] ಶೂದ್ರಕನ ಮೃಚ್ಛಕಟಿಕ ನಾಟಕದಲ್ಲಿ ಚಾರುದತ್ತನ ಪತ್ನಿ ಧೂತಾದೇವಿ ಪತಿಯ ಸಾವಿನ ಅಶುಭವಾರ್ತೆ ಕೇಳುವುದಕ್ಕಿಂತ ಮುಂಚೆ ಚಿತೆ ಏರಲು ಸಿದ್ಧತೆ ಮಾಡಿಕೊಂಡಿರುತ್ತಾಳೆ.[58] ಭಾಸನ ಊರುಭಂಗ, ಧೂತಘಟೋತ್ಕಚ ನಾಟಕಗಳಲ್ಲಿ ಉತ್ತರೆ, ದುಶ್ಶಲೆ, ಪೌರವಿಯರ ಸಹಗಮನದ ವಿಷಯ ಬರುತ್ತದೆ.[59] ಊರುಭಂಗದಲ್ಲಿ ಪೌರವಿಯು ತನ್ನ ಗಂಡ ದುರ್ಯೋಧನನ ಚಿತೆಯನ್ನು ಏರುತ್ತೇನೆಂದುದು ಆಕಸ್ಮಿಕವಾಗಿ ಹೇಳಿದ ಅಭಿವ್ಯಕ್ತಿ ಎಂದೂ, ಆ ಕಾಲದಲ್ಲಿ ಸತಿಪದ್ಧತಿ ಇತ್ತು ಎಂದು ಹೇಳಲು ಇದು ಸಾಕಷ್ಟು ಪ್ರಮಾಣವಾಗಲಾರದೆಂದೂ ವಿದ್ವಾಂಸರೊಬ್ಬರು ಅಭಿಪ್ರಾಯಪಡುತ್ತಾರೆ.[60]

ಕಾಳಿದಾಸನ 'ಕುಮಾರ ಸಂಭವ'ದ ರತಿವಿಲಾಪದಲ್ಲಿ ಸಹಗಮನದ ಮಾತುಗಳನ್ನು ಗುರುತಿಸಲು ಸಾಧ್ಯವಿದೆ.[61] ಕಾಮನು ಸುಟ್ಟುಹೋದಾಗ ರತಿಯು, ಪರದ ಪಯಣದಲ್ಲಿ ನಿನ್ನ ಅನುಸರಿಸಿ ನಾನು ಬರುತ್ತೇನೆ ಎಂದೂ ಸ್ವರ್ಗಲೋಕದಲ್ಲಿ ನೀನು ಸುರವನಿತೆಯರಿಂದ ವಿಲೋಭನಗೊಳಗಾಗುವ ಮೊದಲೇ ಪುನರುತ್ಸಂಗವರ್ತಿನಿಯಾಗಲಿರುವೆನೆಂದೂ, ಮದನ ಅಳಿದಾಗ ಕ್ಷಣವಾದರೂ ರತಿ ಬದುಕಿದಳೆಂದು ನಿಂದೆ ಬರುವುದರಿಂದ ನಿನ್ನೊಡನೆ ಬರುವೆನೆಂದೂ, ಅಗ್ನಿಯಲ್ಲಿ ಈ ಶರೀರವನ್ನು ಇಡುವೆನೆಂದು ದುಃಖಿಸುತ್ತಾಳೆ. ಅಲ್ಲದೇ 'ಮಾಧವ'ನನ್ನು ಕುರಿತಾಗಿ ಹೀಗೆ ಕೇಳಿಕೊಳ್ಳುತ್ತಾಳೆ —

तदिदं क्रियतामनन्तरं भवता बन्धुजनप्रयोजनम्
विधुरां ज्वलनातिसर्जनान्ननु मां प्रापय पत्युरन्तिकम्

( ನೀನು ಬಂಧುಜನ ಕರ್ತವ್ಯಕರ್ಮವನ್ನು ಮಾಡಿ, ಬಳಿಕ ವಿಧುರೆಯನ್ನು ಅಗ್ನಿಗೆ ಆಹುತಿಕೊಟ್ಟು ಪತಿಯ ಸಾನಿಧ್ಯಕ್ಕೆ ಸೇರಿಸು ).

ಅಲ್ಲದೆ, ಮಾಧವನಿಗೆ — ಬೆಂಕಿಯ ಚಿತೆಯನ್ನು ರಚಿಸೆಂದೂ, ಕ್ಷಣವಾದರೂ ನನ್ನನ್ನು ಬಿಟ್ಟು ಕಾಮನು ಉತ್ಸಾಹಗೊಳ್ಳದ ಕಾರಣ ಚಿತೆಯನ್ನು ತ್ವರಿಸಗೊಳಿಸೆಂದೂ ರತಿ ಬೇಡಿಕೊಳ್ಳುತ್ತಾಳೆ. ಇದೇ ಸಂದರ್ಭದಲ್ಲಿ ಕಾಳಿದಾಸನು ರತಿಯ ಮೂಲಕ ಮುಖ್ಯ ಮಾತೊಂದನ್ನು ಆಡಿ ತೋರಿಸುತ್ತಾನೆ. ಅದು ಹೀಗಿದೆ.

शशिना सह याति कौमुदी सह मेघेन तडित्प्रलीयते ।
प्रमदाः पतिवर्त्मगा इति प्रतिपन्नं हि विचेतनैरपि ॥

(ಕೌಮುದಿಯು ಶಶಿಯನ್ನು ಅನುಸರಿಸುತ್ತದೆ, ಸೌದಾಮಿನಿಯು ಮೇಘ ಅಳಿದಾಗ ತಾನೂ ಅಳಿಯುತ್ತದೆ, ಪ್ರಮದೆಯರು ಪತಿವರ್ತ್ಮಗಾಮಿಗಳೆನ್ನುವ ತತ್ವವನ್ನು ವಿಚೇತನವೂ ಅರಿತಿರುವದು )

ಕಾಳಿದಾಸನು ಚಿತ್ರಿಸಿದ ಈ ರತಿ ವಿಲಾಪದಲ್ಲಿ ಸಹಗಮನ ಆಚರಣೆಯ ಹಲವು ವಿಷಯಗಳು ಸ್ಪಷ್ಟಗೊಳ್ಳುತ್ತವೆ. ಸ್ವರ್ಗಲೋಕದಲ್ಲಿ ಮೃತನಾದ ಗಂಡ ಕಾಯುತ್ತಿರುವನೆಂದೂ, ಸ್ವರ್ಗಸ್ತ್ರೀಯರು ಮೃತಪತಿಯನ್ನು ವಿಲೋಭನಕ್ಕೀಡು ಮಾಡುತ್ತಾರೆಂದೂ — ಈ ನಂಬಿಕೆಗಳ ಹಿನ್ನೆಲೆಯಲ್ಲಿ ಪತ್ನಿಯರು ಸಹಗಮನವನ್ನು ಮಾಡುತ್ತಿದ್ದರೆಂದೂ ತಿಳಿದು ಬರುತ್ತದೆ. ಸಹಗಮನಗೊಳ್ಳದಿದ್ದರೆ ನಿಂದೆಯೂ ಬರುವುದು ಎಂದು ರತಿ ಹೇಳುವುದನ್ನು ಗಮನಿಸಬಹುದಾಗಿದೆ. ಸಹಗಮನಗೊಳ್ಳುವಾಗ 'ಬಂಧು ಜನರು ಕೆಲವು ಕರ್ತವ್ಯಕರ್ಮಗಳನ್ನು ನೆರವೇರಿಸುತ್ತಿದ್ದುದು, ಚಿತೆಯನ್ನು ( ಬಹುಶಃ ವಿಶಿಷ್ಟಬಗೆಯಲ್ಲಿ) ರಚಿಸುತ್ತಿದ್ದುದು ಕಂಡುಬರುತ್ತದೆ. ಅಲ್ಲದೆ ಕಾಳಿದಾಸನಕಾಲದಲ್ಲಿ ಸಹಗಮನ ಕ್ರಿಯೆ ತತ್ವ ಎನ್ನುವಷ್ಟರ ಮಟ್ಟಿಗೆ ಗಟ್ಟಿಗೊಂಡಿದ್ದುದು ಸ್ಪಷ್ಟವಾಗುತ್ತದೆ;

ಈಗ ನಾವು ಈ ಸುಮಾರಿನಲ್ಲಿ ( classical age ) ಕೇವಲ ಕೆಲವೇ ಐತಿಹಾಸಿಕ ನಿದರ್ಶನಗಳನ್ನು ಕಂಡುಕೊಳ್ಳುತ್ತೇವೆ. ಈ ಕಾಲದಲ್ಲಿ ಭಾರತಕ್ಕೆ ಸಂದರ್ಶನ ಕೊಟ್ಟ ಚೀನಿ ಪ್ರವಾಸಿಕರು ಸತಿಪದ್ಧತಿಯನ್ನು ಹೆಸರಿಸಿಲ್ಲ. ನಾಗಾರ್ಜುನಕೊಂಡ ಪ್ರದೇಶದಲ್ಲಿ ಇತ್ತೀಚಿನ ಸಂಶೋಧನೆಯಿಂದ ಅರಸಿಯರು ಸ್ವಮೇಧ ಅಥವಾ ಸತಿಯಾಗುತ್ತಿದ್ದುದರ ಬಗ್ಗೆ ತಿಳಿದುಬರುತ್ತದೆ. ಈ ಕಾರಣದಿಂದ ಕ್ರಿ.ಶ.3ನೆಯ ಶತಮಾನದಲ್ಲಿ ಆಂಧ್ರಪ್ರದೇಶದ ಇಕ್ಷ್ವಾಕರು ( Ikshavakus ) ಸತಿಪದ್ಧತಿಯನ್ನು ಅನುಸರಿಸುತ್ತಿದ್ದರೆಂದು

ಹೇಳಬಹುದಾಗಿದೆ.[62] ಕ್ರಿ.ಶ.510 ರಲ್ಲಿ ಬೃಹದ್ಗುಪ್ತನ ಮುಖ್ಯ ಸಾಮಂತನಾದ ಗೋಪ ರಾಜನು ಹೂಣರೊಡನೆ ಹೋರಾಡುವಾಗ ಸೌಗಾರ ( Saugor ) ದ ಸಮೀಪದಲ್ಲಿರುವ ಎರನ್ ( Eran ) ದಲ್ಲಿ ಕೊಲ್ಲಲ್ಪಡುತ್ತಾನೆ. ಆಗ ಅವನ ಪತ್ನಿ ಸತಿಯಾಗುತ್ತಾಳೆ.[63] ಕ್ರಿ.ಶ. 6 — 7 ನೆಯ ಶತಮಾನದಲ್ಲಿ ನೇಪಾಳ ರಾಣಿ ರಾಜ್ಯವತಿಯು ಸತಿಯಾಗುತ್ತಾಳೆ.[64] ಸು.ಕ್ರಿ.ಶ. 604 ರಲ್ಲಿ ಹರ್ಷನ ತಾಯಿ ಯಶೋಮತಿಯು ಗಂಡ ಪ್ರಭಾಕರವರ್ಧನನು ಅಸ್ವಸ್ಥನಾಗಿ ಬದುಕುವುದು ಸಾಧ್ಯವಿಲ್ಲವೆಂದು ತಿಳಿದಾಗಿ ಸರಸ್ವತಿನದಿಯ ದಂಡೆಯ ಮೇಲೆ ಚಿತೆಯನ್ನು ಮಾಡಿಸಿ ಧುಮುಕುತ್ತಾಳೆ.[65]

ಮೇಧಾತಿಥಿ, ವಿರಾಟ, ದೇವಣಭಟ್ಟ, ಬಾಣ ಈ ಮೊದಲಾದವರು ಸತಿ ಆಚರಣೆಯನ್ನು ವಿರೋಧಿಸುವ ಧೋರಣೆಯುಳ್ಳವರಾಗಿದ್ದರೆ. ತಾಂತ್ರಿಕರನ್ನೂ ಇದೇ ವರ್ಗದಲ್ಲಿ ಸೇರಿಸಬಹುದಾಗಿದೆ. ಕವಿಗಳಲ್ಲಿ ಬಾಣನು ( ಸು.ಕ್ರಿ.ಶ. 625) ಸತಿಯಾಗುವುದನ್ನು ವಿರೋಧಿಸುತ್ತಾನೆ. ಆತನು ತನ್ನ ಒಂದು ಕೃತಿ 'ಹರ್ಷಚರಿತ' ದಲ್ಲಿ ಪ್ರಭಾಕರವರ್ಧನ ರಾಜನ ಮರಣದ ನಂತರ ಸತಿಯರು ಚಿತೆಯೇರಿ ಸಹಗಮನ ಮಾಡಿಕೊಂಡದ್ದನ್ನು ವಿವರಿಸಿದರೂ, ಇನ್ನೊಂದು ಕೃತಿ 'ಕಾದಂಬರಿ'ಯಲ್ಲಿ ಸಹಗಮನ ಪದ್ಧತಿಯನ್ನು ವಿರೋಧಿಸುತ್ತಾನೆ.[66] ಸತ್ತವನೊಡನೆ ಬೆಂಕಿಯಲ್ಲಿ ಬಿದ್ದು ಸಾಯುವವಳು ನರಕಕ್ಕೆ ಹೋಗುತ್ತಾಳೆಂದೂ, ಆತ್ಮಹತ್ಯೆ ಮಾಡಿಕೊಂಡ ಪಾಪ ಅವಳನ್ನು ನರಕಕ್ಕೆ ಸೇರುವಂತೆ ಮಾಡುತ್ತದೆ ಎಂದೂ ಹೇಳುತ್ತಾನೆ ಇನ್ನೂ ಮುಂದುವರಿದು, ಅವಳು ಸಾಯದೆ ಉಳಿದರೆ ತನ್ನ ಜೀವನದಲ್ಲಿಯೂ ಒಳಿತನ್ನು ಮಾಡಿಕೊಳ್ಳುವುದಲ್ಲದೆ, ಸತ್ತ ಗಂಡನಿಗೆ ಪ್ರಿಯವಾದ ಕಾರ್ಯಗಳನ್ನು ಮಾಡಿ, ಅವನ ಆನಂದಕ್ಕೂ ಕಾರಣವಾಗಬಹುದು, ಸಾಯುವುದರಿಂದ ಯಾವ ಪ್ರಯೋಜನವೂ ಇಲ್ಲ ಎಂದು ಬಾಣನು ವಿವರಿಸುತ್ತಾನೆ. ಸಹಗಮನ ಕಾರ್ಯ ಮೂರ್ಖರಿಂದ ಅನುಸರಿಸಲ್ಪಡುವಂಥದ್ದು, ಇದು ಕೇವಲ ಭಾವೋದ್ವೇಗದಲ್ಲಿ ಮಾಡುವಂಥ ಕಾರ್ಯವಾಗಿದೆ ಎಂದೂ ಸ್ಪಷ್ಟವಾಗಿ ಕವಿ ಅದರ ಅಸ್ತಿತ್ವವನ್ನು ಅಲ್ಲಗಳೆಯಲು ಪ್ರಯತ್ನಪಟ್ಟಿದ್ದಾನೆ. ಹರ್ಷಚರಿತದಲ್ಲೂ ಹರ್ಷನು ತನ್ನ ತಾಯಿ ಯಶೋಮತಿಯನ್ನು ಸಹಗಮನಗೊಳ್ಳದಂತೆ, ಕೇಳಿಕೊಳ್ಳುವುದನ್ನು ನೋಡಿದರೆ ಕವಿ ಬಾಣಭಟ್ಟನು ಸಹಗಮನ ಪದ್ಧತಿಯ ಉಗ್ರವಿರೋಧಿಯಾಗಿದ್ದನೆಂದು ಸಹಜವಾಗಿ ಹೇಳಬಹುದಾಗಿದೆ. ತಾಂತ್ರಿಕರು ಕೂಡ ಸಹಗಮನ ಪದ್ಧತಿಯು ತಪ್ಪು ಮಾರ್ಗ ಎಂದು ಅಭಿಪ್ರಾಯಪಡುತ್ತಾರೆ. ಮಹಾನಿರ್ವಾಣತಂತ್ರದಲ್ಲಿ ಸ್ತ್ರೀಯು ದೇವತೆಯ ರೂಪವೆಂದೂ ಅವಳನ್ನು ಯಾವನಾದರೂ ಪತಿಯೊಡನೆ ಸುಟ್ಟರೆ ಅವನು ಶಾಶ್ವತ ನರಕದ ಶಿಕ್ಷೆಗೆ ಗುರಿಯಾಗುವನೆಂದೂ ವಿವರಿಸಲಾಗಿದೆ.[67]

ಸ್ಮೃತಿಕಾರ ಮೇಧಾತಿಥಿಯು ಅಂಗೀರಸ ಸ್ಮೃತಿಯಲ್ಲಿ ಸತಿಪದ್ಧತಿಯ ಬಗ್ಗೆ ಉಲ್ಲೇಖ ವಿದ್ದರೂ ಅದಕ್ಕೆ ಶಾಸ್ತ್ರದ ಮುದ್ರೆ ಇಲ್ಲ, ವೇದಗಳ ಪಾಠಗಳು ಆತ್ಮಹತ್ಯೆಯನ್ನು ವಿರೋಧಿಸುತ್ತವೆ

ಎಂದು ಹೇಳುತ್ತಾನೆ.[68] ಇವನ ದೃಷ್ಟಿಯಲ್ಲಿ ಸತಿ ಆಚರಣೆ ಎನ್ನುವುದು ಆತ್ಮಹತ್ಯೆಯೇ ಆಗಿದೆ. ಅದಕ್ಕೆ ಮುಖ್ಯವಾಗಿ ವೇದಮನ್ನಣೆ ಇಲ್ಲವೆಂದೂ ಅಭಿಪ್ರಾಯಪಡುತ್ತಾನೆ." ವಿರಾಟ ಎನ್ನುವ ಇನ್ನೊಬ್ಬ ಸ್ಮೃತಿಕಾರ 'ವಿಧವೆಯು ಸಹಗಮನ ಮಾಡದೇ ಉಳಿದುಕೊಂಡು, ಸತ್ತ ಗಂಡನಿಗೆ ಶ್ರಾದ್ಧದ ಕಾಲಕ್ಕೆ ತಕ್ಕ ಆಚರಣೆ, ಕ್ರಿಯೆಗಳನ್ನು ಮಾಡಿದರೆ, ಅವನಿಗೆ ಉಚಿತನ್ನು ಮಾಡಿದಂತಾಗುತ್ತದೆ. ಒಂದು ವೇಳೆ ಅವಳು ಗಂಡನೊಂದಿಗೆ ಚಿತೆ ಏರಿದರೆ ಆತ್ಮಹತ್ಯೆಯ ಪಾಪವನ್ನು ಪಡೆದುಕೊಳ್ಳುತ್ತಾಳೆ — ಎಂದು ಸ್ಪಷ್ಟ ನಿಲುವನ್ನು ತಾಳುತ್ತಾನೆ.[69] ವಿಧವೆಯು ಸತಿಯಾಗದೇ ಬದುಕಿರಬೇಕೆಂಬುದೇ ಈತನ ಧೋರಣೆಯಾಗಿದೆ. ದಕ್ಷಿಣ ಭಾರತದ 12ನೆಯ ಶತಮಾನದ ದೇವಣಭಟ್ಟನು, ಸತಿ ಆಚರಣೆ ಅತ್ಯಂತ ಕೀಳು ಧಾರ್ಮಿಕ ನಡತೆಗೆ ಸಂಬಂಧಿಸಿದುದಾಗಿದೆ ಎಂದೂ ಅದನ್ನು ಯಾರೂ ಉತ್ತೇಜಿಸಬಾರದೆಂದು ಪ್ರತಿಭಟನೆಯ ಮಾತನ್ನು ಹೇಳುತ್ತಾನೆ.[70] ಸತಿಪದ್ಧತಿ ಉಗ್ರವಾಗಿ ಆಚರಣೆಯಲ್ಲಿದ್ದಾಗ ದೇವಣ್ಣಭಟ್ಟನು ಈ ಪ್ರತಿಭಟನೆಯನ್ನು ತೋರಿಸಿದ್ದು ತುಂಬ ಮಹತ್ವದ್ದಾಗಿದೆ. ದುರ್ದೈವದಿಂದ ಮುಂದಿನವರು ಈತನ ಧೋರಣೆಯನ್ನು ಅನುಸರಿಸಿಕೊಂಡು ಬರಲಿಲ್ಲ.

ಅಂಗೀರಸ, ಹಾರಿತ, ಪರಾಶರ ಈ ಮೊದಲಾದವರು ಸತಿ ಪದ್ಧತಿಯನ್ನು ಬೆಂಬಲಿಸಿ ಬರೆಯುತ್ತಾರೆ. ಕ್ರಿ.ಶ.7ನೆಯ ಶತಮಾನದಿಂದ ಸತಿಪದ್ಧತಿ ಭಾರತದಲ್ಲಿ ಹೆಚ್ಚು ಗಟ್ಟಿಗೊಳ್ಳಲು ಈ ಸ್ಮೃತಿಕಾರರೂ ಕಾರಣರಾಗಿದ್ದಾರೆಂದೇ ಹೇಳಬೇಕು. ಅಂಗೀರಸನು ಸತಿಯಾಗುವುದು ಧರ್ಮವು ವಿಧವೆಗೆ ವಿಧಿಸಿದ ಒಂದೇ ಒಂದು ದಾರಿ ಎಂದು ಹೇಳಿದರೆ, ಹಾರಿತನು ಮೃತನ ಪತ್ನಿಯು ಗಂಡನ ಹಿಂದೆಯೇ ಸುಟ್ಟುಕೊಂಡು ಸತಿಯಾದರೆ ಗಂಡನ ಘೋರ ಪಾಪಕರ್ಮಗಳನ್ನು ಪರಿಶುದ್ಧಮಾಡುವಳಲ್ಲದೆ ಇಬ್ಬರೂ ಸ್ವರ್ಗದಲ್ಲಿ ಮೂರುವರೇ ಕೋಟಿ ವರ್ಷಗಳ ವರೆಗೆ ಸುಖವಾಗಿರುತ್ತಾರೆ ಎಂದು ಹೇಳುತ್ತಾನೆ.[71] ಪರಾಶರ ಇದನ್ನೇ ದೃಷ್ಟಾಂತದ ಮೂಲಕ ಸುಂದರಗೊಳಿಸಿ, ಹುತ್ತದಿಂದ ಹಾವನ್ನು ಹಾವಾಡಿಗ ಹಿಡಿದು ಎಳೆಯುವಂತೆ ಸತಿಯಾದವಳು ಕೂಡಾ ಗಂಡನನ್ನು ನರಕದಿಂದ ಎಳೆದುಕೊಂಡು, ಇಬ್ಬರೂ ಸ್ವರ್ಗದಲ್ಲಿ ಮೂರುವರೇ ಕೋಟಿ ಸುಖವಾಗಿರುತ್ತಾರೆ — ಎಂದು ಹೇಳುತ್ತಾನೆ.[72]

ಸತಿಪದ್ಧತಿಯನ್ನು ವಿರೋಧಿಸುವ ಮತ್ತು ಬೆಂಬಲಿಸುವ ಈ ಎರಡೂ ಗುಂಪಿನ ಹಿನ್ನೆಲೆಯಲ್ಲಿ ಎರಡು ವಿಷಯಗಳು ಸ್ಪಷ್ಟಗೊಳ್ಳುತ್ತವೆ. ಒಂದು, ವಿರೋಧಿಗಳು ವಾಸ್ತವ ಲೋಕಕ್ಕೆ ಬೆಲೆಕೊಟ್ಟು ಪರಲೋಕದ ಕಲ್ಪನೆ — ನಂಬಿಕೆಗಳನ್ನು ವಿರೋಧಿಸಿ ಸಹಗಮನವನ್ನು ತಿರಸ್ಕರಿಸಿದ್ದನ್ನು ಕಾಣುತ್ತೇವೆ. ಇನ್ನೊಂದು, ಸತಿಬೆಂಬಲಿಗರು ವಾಸ್ತವಲೋಕಕ್ಕೆ ಗಮನಕೊಡದೇ ಪರಲೋಕದ ಕಲ್ಪನೆ-ನಂಬಿಕೆಗಳನ್ನು ವೈಭವೀಕರಿಸಿ ಸಹಗಮನವನ್ನು ಗಟ್ಟಿ

ಗೊಳಿಸಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ. ಸತಿಪದ್ಧತಿ ಬೆಂಬಲಿಸಿ ಬರೆದ ಸ್ಮೃತಿಕಾರ — ಧರ್ಮ ಶಾಸ್ತ್ರಕಾರರಿಂದ ಸಮಾಜದ ಮೇಲೆ ಪರಿಣಾಮವಾಗದೇ ಇರಲಿಲ್ಲ. ಕಲ್ಹಣನ ರಾಜತರಂಗಿಣಿ, ಕಥಾಸರಿತ್ಸಾಗರ, ಕುಟ್ಟನಿಮಾತನ(?) ಯೋಗಿನಿತಂತ್ರ ಈ ಮೊದಲಾದ ಗ್ರಂಥಗಳಲ್ಲಿಯ ಸತಿ ವಿವರಣೆಯಿಂದ ಇದು ಸ್ಪಷ್ಟಗೊಳ್ಳುತ್ತದೆ.[73] ಕ್ರಿ.ಶ. 842 ರಲ್ಲಿ ಚಾಹಮಾನರಾಜ ಚಾಂದಮಹಾಸೇನನ ತಾಯಿಯು, ಕ್ರಿ.ಶ. 890 ರಲ್ಲಿ ಘಟಿಯಾಲದಲ್ಲಿ ಸಂಪಲ್ಲದೇವಿಯು ಸತಿಯಾದದ್ದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ [74] ಕ್ರಿ.ಶ.700 ರಿಂದ ಕ್ರಿ.ಶ. 1100 ರ ಅವಧಿಯಲ್ಲಿ ಉತ್ತರ ಭಾರತದಲ್ಲಿ ಸತಿ ಘಟನೆಗಳು ಹೆಚ್ಚು ಸಂಭವಿಸಿದಂತೆ ತೋರುತ್ತದೆ ಎಂದೂ ಕಾಶ್ಮೀರದಲ್ಲಿ ಇದು ಸಾಮಾನ್ಯ ವಿಷಯವಾಗಿತ್ತೆಂದೂ ವಿದ್ವಾಂಸರೊಬ್ಬರು ಅಭಿಪ್ರಾಯಪಡುವದನ್ನು ಇಲ್ಲಿ ಸ್ಮರಿಸಬಹುದು[75]

ಕಲ್ಹಣನ 'ರಾಜತರಂಗಿಣಿ'ಯಲ್ಲಿ ಆತ್ಮಬಲಿದಾನದ ಪ್ರವಾಹವನ್ನೇ ಕಾಣುತ್ತೇವೆ. ಪತ್ನಿಯರು ಚಿತೆಯೇರುವದಲ್ಲದೆ ಆತನ ಉಪಪತ್ನಿಯರು ಕೂಡ ಇದನ್ನು ಅನುಸರಿಸುವುದನ್ನು ರಾಜತರಂಗಿಣಿ ವಿವರಿಸುತ್ತದೆ. ಕಲಶ, ಉತ್ಕರ್ಷ ಈ ರಾಜರು ಮೃತರಾದಾಗ ಅವನ ಪತ್ನಿಯರು ಉಪಪತ್ನಿಯರು ಚಿತೆಯೇರುತ್ತಾರೆ.[76] ತಾಯಿ ಸಹೋದರಿ, ಮಂತ್ರಿ, ಸೇವಕ, ಈ ಮೊದಲಾದವರೂ ಮೃತನ ನಂತರ ಚಿತೆ ಏರುವುದನ್ನು ಕಲ್ಹಣ ಚಿತ್ರಿಸುತ್ತಾನೆ.[77] ಇಷ್ಟಲ್ಲದೇ ಒಡೆಯ ಮೃತನಾಗಲು ಬೆಕ್ಕು ಅವನ ಚಿತೆ ಏರುವುದನ್ನು ನಿರೂಪಿಸಿದ್ದಾನೆ.[78] ಇವುಗಳೆಲ್ಲ ಮುಖ್ಯ ಮತ್ತು ಗಮನ ಸೆಳೆಯುವಂಥ ಸಂಗತಿ ಎಂದರೆ, ಉಚ್ಚಲರಾಜನ ಪತ್ನಿಯರಿಬ್ಬರು ಸಹಗಮನಗೊಳ್ಳಲು ಅಪ್ರತ್ಯಕ್ಷವಾಗಿ ವಿರೋಧಿಸಿದುದು.[79] ಉಚ್ಚಲರಾಜ ಮೃತನಾಗಲು ಅವನ ರಾಣಿಯರಾದ ದಿಡ್ಡ ಮತ್ತು ಜಯಮತಿಯರು ಸಾರ್ವಜನಿಕರಿಗೆ ಸಹಗಮನಗೊಳ್ಳುವ ವಿಷಯವನ್ನು ಪ್ರಕಟಿಸುತ್ತಾರೆ. ಆದರೆ ರಹಸ್ಯವಾಗಿ ತಮ್ಮನ್ನು ರಕ್ಷಿಸಲು ಮಂತ್ರಿಗಳಿಗೆ ಲಂಚಕೊಟ್ಟಿರುತ್ತಾರೆ ಮಂತ್ರಿಗಳು ಸಹಗಮನಗೊಳ್ಳುವ ಕಾಲಕ್ಕೆ ಬಂದು ತಮ್ಮನ್ನು ಬಲವಂತದಿಂದ ಕರೆದುಕೊಂಡು ಹೋಗುವಂತೆ ಮಾತಾಗಿರುತ್ತದೆ. ದಿಡ್ಡ ರಾಣಿಯನ್ನು ಮಂತ್ರಿ ನರವಾಹನ ರಕ್ಷಿಸಿದರೆ, ಜಯಮತಿಯನ್ನು ರಕ್ಷಿಸಲು ಮಂತ್ರಿ ಗರ್ಗ ಬರದೇ ಇದ್ದ ಕಾರಣ, ಆಕೆ ಅನಿವಾರ್ಯವಾಗಿ ಚಿತೆ ಏರುತ್ತಾಳೆ; ಈ ಪ್ರಸಂಗದ ವಿವರಣೆಯಿಂದ ಸತಿ ಆಚರಣೆ ಸಾರ್ವಜನಿಕ ರೂಪ ತಾಳಿದ್ದನ್ನು ಕಾಣುತ್ತೇವೆ. ಅಲ್ಲದೆ ಸತಿಯಾಗಲು ಸ್ತ್ರೀಯರು ಹಿಂಜರಿಯುತ್ತಿದ್ದುದನ್ನು, ವಿವಿಧ ಉಪಾಯಗಳಿಂದ ಉಳಿಯಲು ಪ್ರಯತ್ನಿಸುತ್ತಿದುದನ್ನು ಕಾಣುತ್ತೇವೆ.

ಕ್ರಿ.ಶ.ಸು.1100 ರಲ್ಲಿ ಕಾಶ್ಮೀರದಲ್ಲಿ ರಚನೆಗೊಂಡ ಕಥಾಸರಿತ್ಸಾಗರದ ಹಲವು ಕಥೆಗಳಲ್ಲಿ ಸಹಗಮನದ ವಿಷಯ ಉಲ್ಲೇಖಗೊಂಡಿದೆ. ಅಗ್ನಿದತ್ತನೆಂಬ ಬ್ರಾಹ್ಮಣನ ಪತ್ನಿ, ಮಾತೃದತ್ತ, ಚಂದ್ರಶ್ರೀ

ದೇವಶರ್ಮನ ಪತ್ನಿ ಈ ಮೊದಲಾದವರು ಗಂಡನ ಮರಣದ ನಂತರ ಅಗ್ನಿಪ್ರವೇಶ ಮಾಡಿದರೆಂದು ಕಥಾಸರಿತ್ಸಾಗರವು ವಿವರಿಸುತ್ತದೆ,[80] ಅಲ್ಲದೆ ಮನೋರಥಪ್ರಭೆ, ಮಾಯಾವತಿ, ವಿದ್ಯುಜ್ಜ್ವಲಿ — ಈ ಮೊದಲಾದವರು ಚಿತೆವಿರುವ ನಿರ್ಧಾರ ಮಾಡುವುದನ್ನು ತಿಳಿಸಲಾಗಿದೆ[81] ಇವುಗಳಲ್ಲಿ ಚಂದ್ರಶ್ರೀಯ ಕಥೆ ಬಹು ಕುತೂಹಲಕರವಾಗಿದೆ. ಬಲವರ್ಮನೆಂಬ ವರ್ತಕನ ಪತ್ನಿ ಚಂದ್ರಶ್ರೀಯು ಯುವಕನೊರ್ವನೊಡನೆ ಅನೈತಿಕ ಸಂಬಂಧ ಇಟ್ಟುಕೊಂಡಿದ್ದರೂ ಗಂಡ ಮೃತನಾಗಲು, ಪ್ರಿಯಕರನಿಗೆ ಈ ವಿಷಯ ತಿಳಿಸಿ, ಗಂಡನೊಡನೆ ಚಿತೆಯನ್ನೇರುತ್ತಾಳೆ ಈ ಪ್ರಸಂಗದಲ್ಲಿ ಗ್ರಂಥಕಾರ 'ಹೆಂಗಸರ ಮನಸ್ಸೆ ಗೊತ್ತಾಗುವುದಿಲ್ಲ. ಅನ್ಯರ ಸಹವಾಸ ಮಾಡುತ್ತಾರೆ ( ಆದರೂ ಗಂಡ ಹೋದರೆ ಅವನೊಡನೆ ಸಾಯುತ್ತಾರೆ' ಎಂದು ಉದ್ಧರಿಸುತ್ತಾನೆ. ಈ ವಿಶಿಷ್ಟ ವಿಷಯದ ಹಿನ್ನೆಲೆಯಿಂದ ಕಾಶ್ಮೀರದಲ್ಲಿ ಸತಿಪದ್ಧತಿ ಸರ್ವಸಾಮಾನ್ಯವಾಗಿದ್ದುದು ಸ್ಪಷ್ಟವಾಗುತ್ತದೆ.

ಕ್ರಿ.ಶ.ಪೂ.ಕಾಲದಿಂದ ಕ್ರಿ.ಶ. 1200 ರ ವರೆಗೆ ಭಾರತದಲ್ಲಿ ಸತಿಪದ್ಧತಿಯು ವಿಕಾಸಗೊಂಡು ಬಂದುದನ್ನು ನೋಡಿದಾಗ ಕೆಲವು ವಿಷಯಗಳು ಗಮನಕ್ಕೆ ಬರುತ್ತವೆ. ಮೊದಲನೆಯದಾಗಿ ಮೊದಮೊದಲು ಸತಿಯಾಗುವುದು ಉನ್ನತ ಮನೆತನದವರಲ್ಲಿದ್ದುದು ತಿಳಿಯುತ್ತದೆ. ಅದರಲ್ಲಿಯೂ ಕ್ಷತ್ರಿಯ ವರ್ಗದವರಲ್ಲಿ ಇದು ಹೆಚ್ಚು ನೆಲೆಗೊಂಡಂತೆ ತೋರುತ್ತದೆ. ತೈತ್ತರೀಯ ಅರಣ್ಯಕದಲ್ಲಿ, ಗಂಡನೊಡನೆ ಚಿತೆಯಲ್ಲಿ ಮಲಗಿದ್ದ ಪತ್ನಿಗೆ ಆತನ ಬಿಲ್ಲನ್ನು ತಗೆದುಕೊಂಡು ಬರಬೇಕೆಂದು ಕೇಳುವ ವಿಷಯ ಮಹಾನಿಸಿಹ ಗ್ರಂಥದಲ್ಲಿ ರಾಜಕುಮಾರನ ಪತ್ನಿ ಸಹಗಮನ ಮಾಡುವ ನಿಶ್ಚಯ, ಮಹಾಭಾರತ — ಪುರಾಣಗಳಲ್ಲಿ ರಾಜ ಮನೆತನದವರ ಸಹಗಮನ, ಕೆತುಶನನ ಪತ್ನಿಯ ಸಹಗಮನ, ನೇಪಾಲಿನ ರಾಣಿ ರಾಜ್ಯವತಿ ಮತ್ತು ಪ್ರಭಾಕರವರ್ಧನನ ಪತ್ನಿಯರ ಸಹಗಮನ, — ಈ ಮೊದಲಾದವುಗಳ ಹಿನ್ನೆಲೆಯಲ್ಲಿ ಪ್ರಾಚೀನ ಭಾರತದಲ್ಲಿ ಪ್ರಾರಂಭಕ್ಕೆ ಸಹಗಮನ ಆಚರಣೆ ಉನ್ನತ ಹಾಗೂ ಕ್ಷತ್ರಿಯರ (ಹೋರಾಟಗಾರರ ) ಮನೆತನಗಳಲ್ಲಿದ್ದುದು ಕಂಡು ಬರುತ್ತದೆ. ಎರಡನೆಯದಾಗಿ, ಮೊದಲು ಬ್ರಾಹ್ಮಣರಲ್ಲಿ ಸ್ತ್ರೀ ಸಹಗಮನ ಹೊಂದುತ್ತಿರಲಿಲ್ಲವೆನಿಸುತ್ತದೆ. ಧರ್ಮಶಾಸ್ತ್ರಕಾರರು, ಪುರಾಣಕಾರರು ಬ್ರಾಹ್ಮಣ ಸ್ತ್ರೀಗೆ ಸತಿಯಾಗುವುದು ನಿಷಿದ್ಧವೆಂದೂ ವಿವರಿಸಿದಾರೆ. ಪದ್ಮಪುರಾಣವು ಬ್ರಾಹ್ಮಣ ಸ್ತ್ರೀಗೆ ಚಿತೆ ಏರಲು ಸಹಾಯ ಮಾಡಿದವರಿಗೆ ಬ್ರಾಹ್ಮಣನನ್ನು ಕೊಂದಂಥ ಪಾಪ ಬರುತ್ತದೆ ಎಂದು ಹೇಳುತ್ತದೆ. ಪೈಥಿನಾಸಿ, ಅಂಗೀರಸ, ವ್ಯಾಘ್ರಪದ ಮೊದಲಾದವರು ಬ್ರಾಹ್ಮಣ ವಿಧವೆಯರಿಗೆ ಸಹಗಮನ ನಿಷಿದ್ಧವೆಂದು ಬರೆದುದನ್ನು ಅಪರಕನು ಉಲ್ಲೇಖಿಸುತ್ತಾನೆ.[82] ರಾಮಾಯಣದಲ್ಲಿ ವೇದವತಿಯ ತಾಯಿ ಮೃಚ್ಛಕಟಿಕದಲ್ಲಿ

ಚಾರುದತ್ತನ ಪತ್ನಿ — ಇವರ ಸಹಗಮನದ ಮಾತುಗಳು ಕಂಡರೂ, ಅಂಥವುಗಳು ತೀರ ಅಪರೂಪವೆಂದೇ ಹೇಳಬೇಕು. ಮೃಚ್ಛಕಟಿಕದಲ್ಲಿಯೇ ಚಾರುದತ್ತನ ಪತ್ನಿ ಧೂತಾದೇವಿಗೆ ಬ್ರಾಹ್ಮಣ ಸ್ತ್ರೀಗೆ ಸಹಗಮನ ನಿಷಿದ್ಧವೆಂಬ ಮಾತನ್ನು ಜ್ಞಾಪಿಸಲಾಗಿದೆ. ಈ ನಿದರ್ಶನಗಳ ಹಿನ್ನೆಲೆಯಲ್ಲಿ ಸತಿ ಆಚರಣೆ ಬ್ರಾಹ್ಮಣರಲ್ಲಿ ನಂತರದಲ್ಲಿ ಅಳವಡಿಸಿಕೊಂಡಿದ್ದೆಂದು ಹೇಳಬಹುದಾಗಿದೆ. ಮೂರನೆಯದಾಗಿ, ಹನ್ನೆರಡನೆಯ ಶತಮಾನದವರೆಗೂ ಸತಿ ಘಟನೆಗಳು ಉತ್ತರ ಭಾರತದಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತಿದ್ದರೂ ದಕ್ಷಿಣ ಭಾರತದಲ್ಲಿ ಅದು ಅಪರೂಪವೆಂದೇ ಹೇಳಬೇಕು. ಆಂಧ್ರದ ಇಕ್ಷ್ವಾಕರಲ್ಲಿ ಸಹಗಮನ ಇರಬಹುದೆಂದು ತರ್ಕಿಸಲಾಗಿದೆ. ಕರ್ನಾಟಕದಲ್ಲಿ ಕ್ರಿ. ಶ. ಸು 600 ರ ಸಂಸ್ಕೃತ ಶಾಸನದಲ್ಲಿ[83] ರವಿವರ್ಮನ ಹೆಂಡತಿ ಸಹಗಮನ ಮಾಡಿದ್ದನ್ನು ಹೇಳಿದರೂ ಕ್ರಿ.ಶ 1200 ರವರೆಗೆ ಕೆಲವೇ ನಿದರ್ಶನಗಳು ದೊರಕುತ್ತವೆ ಸಂಗಮ ಸಾಹಿತ್ಯದಲ್ಲಿ ಭೂತಪಾಂಡಿಯನ ರಾಣಿ ಸಹಗಮನ ಮಾಡಿಕೊಂಡ ವಿವರಗಳು ದೊರಕುತ್ತವೆ.[84] ಡಾ: ಅಲ್ತೇಕರರು ಹೇಳುವಂತೆ, ಪಲ್ಲವ, ಚೋಳ, ಪಾಂಡ್ಯ ರಾಜರ ಕಾಲದಲ್ಲಿ ಸುಮಾರು ಕ್ರಿ.ಶ.900 ರವರೆಗೆ ಸತಿ ಉಲ್ಲೇಖ ಶಾಸನಗಳಲ್ಲಿ ಬಹುಶಃ ಕಾಣಬರುವುದಿಲ್ಲ[85] ಈ ಕಾರಣದಿಂದಾಗಿ, ಉತ್ತರ ಭಾರತದಲ್ಲಿ ಸತಿಪದ್ಧತಿ ಉಗ್ರಸ್ವರೂಪದಲ್ಲಿದ್ದಾಗ ದಕ್ಷಿಣ ಭಾರತದಲ್ಲಿ ಅದು ಸೌಮ್ಯ ಸ್ವರೂಪದಲ್ಲಿ ಇತ್ತೆಂದೇ ಹೇಳಬೇಕು. ನಾಲ್ಕನೆಯದಾಗಿ ಕ್ರಿ.ಶ. 7ನೆಯ ಶತಮಾನದ ವರೆಗೂ ಸತಿ ಆಚರಣೆ ನಡೆದುಕೊಂಡು ಬಂದಿದ್ದರೂ ಅದಕ್ಕೆ ಶಾಸ್ತ್ರ ಸಮ್ಮತಿ ಸಿಕ್ಕಿರಲಿಲ್ಲವೆಂದೇ ಹೇಳಬೇಕು. ಧರ್ಮಶಾಸ್ತ್ರಕಾರರು, ಪುರಾಣಕಾರರು, ಅದನ್ನು ವಿರೋಧಿಸುತ್ತಲೇ ಬಂದಿದ್ದರು. ಆದರೆ 7ನೆಯ ಶತಮಾನದ ನಂತರದಲ್ಲಿ ಸತಿಪದ್ಧತಿಗೆ ಶಾಸ್ತ್ರಗಳ ಬೆಂಬಲ ದೊರಕಿತೆಂದು ನಿಖರವಾಗಿ ಗುರುತಿಸಬಹುದಾಗಿದೆ. ಸಮಾಜದಲ್ಲಿ ಹಲವು ನಂಬಿಕೆಗಳ ಹಿನ್ನೆಲೆಯಲ್ಲಿ ಮುಂದುವರೆದುಕೊಂಡ ಬರುತ್ತಿದ್ದ ಸತಿ ಆಚರಣೆಗೆ ಶಾಸ್ತ್ರಗಳ ಬೆಂಬಲ ಸಿಗಲಾಗಿ, ಅದು ಇನ್ನೂ ತನ್ನ ಭದ್ರ ಅಸ್ತಿತ್ವವನ್ನು ರೂಪಿಸಿಕೊಂಡಿತು ಮುಂದಿನ ಶತಮಾನಗಳಲ್ಲಿ ಅದು ವಿರಾಡ್ರೂಪದಲ್ಲಿ ಅಭಿವ್ಯಕ್ತಿಗೊಂಡಿತು.

## ಭಾಗ — 2.

12ನೆಯ ಶತಮಾನದ ನಂತರದಲ್ಲಿ, ಅಂದರೆ ಮಧ್ಯಕಾಲೀನ ಭಾರತದಲ್ಲಿ ಸತಿ ಪದ್ಧತಿ ಹೆಚ್ಚು ಪ್ರಚಲಿತದಲ್ಲಿದ್ದುದು ಕಂಡು ಬರುತ್ತದೆ. ಈ ಕಾಲ ಹಿಂದೂ ಸಂಸ್ಕೃತಿಯೊಡನೆ ಮುಸ್ಲಿಂ ಸಂಸ್ಕೃತಿಯ ಸಂಘರ್ಷ ಮತ್ತು ಸಮಾವೇಶದ ವಿಶಿಷ್ಟ ಕಾಲವಾಗಿದೆ. ಕ್ರಿ.ಶ.1200 ರಿಂದ 1600 ರ ಅವಧಿಯಲ್ಲಿ ರಾಜಪುತಾನದಲ್ಲಿ ಇಪ್ಪತ್ತು ಸತಿ ಘಟನೆಗಳು ನಡೆದುದಾಗಿ

ತಿಳಿಯುತ್ತದೆ. ಇವರಲ್ಲಿ ಹೆಚ್ಚಾಗಿ ಸತಿಯಾದವರು ಕ್ಷತ್ರಿಯ ವರ್ಗಕ್ಕೆ ಸೇರಿದವರಾಗಿದ್ದಾರೆ[86] ಮಹಾಕೋಸಲದಲ್ಲಿ ಸಾಗರ ಸಮೀಪದಲ್ಲಿರುವ ಸತಿಕಲ್ಲುಗಳು ಕ್ರಿ.ಶ. 1500 ರಿಂದ ಕ್ರಿ.ಶ 1800 ರ ಅವಧಿಯದಾಗಿದ್ದು, ನೇಕಾರರು, ಕ್ಷೌರಿಕರು, ಕಲ್ಲುಕುಟ್ಟಿಗರು, ಸತಿಯಾಗುತ್ತಿದ್ದುದು ಅವುಗಳಿಂದ ತಿಳಿದುಬರುತ್ತದೆ.[87] 14ನೇಯ ಶತಮಾನದ ಪೂರ್ವಾರ್ಧದಲ್ಲಿ 'ಅಮಾನ' ಎಂಬ ಅಧಿಕಾರಿ ಮೃತನಾದಾಗ ಅವನ ಪತ್ನಿ 'ಮಾಣಿಕ್ಯದೇವಿ' ಸತಿಯಾಗುತ್ತಾಳೆ.[88] ಕರ್ನಾಟಕದಲ್ಲಿ ವಿಜಯನಗರ ಕಾಲಕ್ಕೆ ಎಂದೂ ಇಲ್ಲದಷ್ಟು ಸತಿ ಘಟನೆಗಳು ನಡೆದದಾಖಲೆಗಳಿವೆ. ಡಾ: ಅಶೋಕರರು ಕ್ರಿ.ಶ.1400 ರಿಂದ ಕ್ರಿ.ಶ.1600 ರ ಅವಧಿಯಲ್ಲಿ 41 ಸತಿಕಲ್ಲುಗಳಿವೆ ಎಂದು ವಿಜಯನಗರ ಕುರಿತಾಗಿ ಹೇಳುತ್ತಾರೆ.[89] ನಿಕೋಲೋ ಡಿ ಕೊಂತಿ, ಮಾಕ್ಸನುಯೆಲ್ ಬರ್ರಾಡಾಸ್ — ಈ ಮೊದಲಾದ ಪ್ರವಾಸಿಗರ ದಾಖಲೆಗಳನ್ನು ಗಮನಿಸಿದರೆ, ವಿಜಯನಗರ ಕಾಲದ ಕರ್ನಾಟಕದಲ್ಲಿ ಬಹುಶಃ ಸತಿಪದ್ಧತಿ ತುತ್ತತುದಿಯಲ್ಲಿದ್ದುದು ಕಂಡುಬರುತ್ತದೆ.

13ನೆಯ ಶತಮಾನದಿಂದ 16ನೆಯ ಶತಮಾನದವರೆಗೆ ಹಲವು ವಿದೇಶಿಯರು ಭಾರತದಲ್ಲಿಯ ಸತಿಪದ್ಧತಿ ಕುರಿತು ವಿವರವಾಗಿ ಬರೆದಿದ್ದಾರೆ. ಮಾರ್ಕೊಪೋಲೋ (13ನೆಯ ಶತದ ಉತ್ತರಾರ್ಧ, 14ನೆಯ ಶತ.ದ ಪೂರ್ವಾರ್ಧ) ಫ್ರೈಯರ್ ಒಡೊರಿಕ್ (ಕ್ರಿ.ಶ.1321), ಸರ್ ಜಾನ್ ಮಾಂಡವಿಲ್ಲಿ (14ನೇಯ ಶತ.ದ ಪೂರ್ವಾರ್ಧ) ಇಬ್ನೆ ಬತುತಾ (ಕ್ರಿ.ಶ. 1333), ನಿಕೋಲೋ ಡಿ ಕೊಂತಿ (15ನೆಯ ಶತ.ದ ಮಧ್ಯ), ಯುರೋನಿಮೋ ದಿ ಸಾಂತೋ ಸ್ಟಿಫಾನೋ (14ನೆಯ ಶತ, ಉತ್ತರಾರ್ಧ), ದು ಆರ್ತೆ ಬಾಬೋರ್ಸಾ (ಕ್ರಿ.ಶ.1500), ಫೆರ್ರಾಂವ್ ನೂನಿಜ್ (ಕ್ರಿ.ಶ.1330), ಸೈದ್ ಅಲಿ ರೆಯಿಸ್ (ಕ್ರಿ.ಶ. 1521), ಸೀಜರ್ ಫ್ರೆಡರಿಕ್ (ಕ್ರಿ.ಶ. 1567), ಜಾನನ್ ಹ್ಯೂಘೆನ್ ಛನಲಿನ್ ಛಾಟನ್ (ಕ್ರಿ.ಶ. 1583—88) ಫ್ರೈಅರ್ ಜೋರ್ಡಾನಸ್ (ಕ್ರಿ.ಶ.1321—24) ಫಾದರ್ ಅಂತೋಣಿ ಮೊನ್ಸಿರೆಟ್ (ಅಕ್ಬರನ ಕಾಲ), ಗಾಸ್ಪರೋ ಬಾಲ್ಬಿ (ಕ್ರಿ.ಶ. 1579—88) ರಾಲ್ಫ್ ಫಿಚ್ (ಕ್ರಿ.ಶ. 1583—91) ಈ ಮೊದಲಾದ ಪ್ರವಾಸಿಕರು ತಾವು ಕಂಡು ಕೇಳಿದ ಸತಿ ಆಚರಣೆಯ ಬಗ್ಗೆ ಅತ್ಯಮೂಲ್ಯವಾದ ಮಾಹಿತಿಗಳನ್ನು ಒದಗಿಸುತ್ತಾರೆ.[90] ಇವರಲ್ಲಿ ಇಬ್ನೆ ಬತುತಾ, ಸೀಜರ್ ಫ್ರೆಡರಿಕ್, ಫ್ರೈಅರ ಜೋರ್ಡಾನಸ್ ಮುಂತಾದವರು ಸ್ವತಃ ಸತಿ ಘಟನೆಗಳನ್ನು ಕಂಡವರಾಗಿದ್ದಾರೆ. ಇಬ್ನೆ ಬತುತಾ ಹಿಂದೂ ಸ್ತ್ರೀಯೊಬ್ಬಳು ಅಜೂದಾನ್ ಎಂಬ ಹಳ್ಳಿಯಲ್ಲಿ, ಮೂವರು ಪತ್ನಿಯರು ಯುದ್ಧದಲ್ಲಿ ಪತಿ ಮಡಿದಾಗ ಧಾರ್ ಬಳಿಯ ಅಮ್‌ಝಾರಿ (ಅಮ್ಝೇರ) ಎಂಬ ಪಟ್ಟಣದಲ್ಲಿ ಸಹಗಮನ ಮಾಡಿದ್ದನ್ನು

ಉಲ್ಲೇಖಿಸುತ್ತಾನೆ. ಸೀಜರ್ ಫ್ರೆಡಿರಿಕ್ ಹಲವರು ಸತಿಯಾಗುವುದನ್ನು ಕಂಡಿದ್ದೇನೆ ಎನ್ನುತ್ತಾನೆ. ಫ್ರೈಯರ್ ಜೋರ್ಡಾನಸ್ ಗಂಡ ಮೃತನಾಗಲು ಅವನ ಹಿಂದೆ ಐದು ಜನ ಪತ್ನಿಯರು ಸತಿಯಾದುದನ್ನು ಹೇಳುತ್ತಾನೆ. ಅಲ್ಲದೇ ಗಂಡನೊಬ್ಬನು ಮೃತನಾದಾಗ ಅವನ ಹಲವು ಪತ್ನಿಯರು ಸತಿಯಾಗುತ್ತಿದ್ದರೆಂದು ನಿಕೋಲೋ ದೆ ಕೊಂತಿ, ದು ಆರ್ತೆ ಬಾರ್ಬೋಸಾ, ಜಾನನ್ ಹ್ಯೂಷೆನ್ ಥನಲಿನ್ ಛೋಟೆನ್ ಈ ಮೊದಲಾದವರು ವಿವರಿಸುತ್ತಾರೆ. ಫ್ರೈಯರ್ ಓಡೋರಿಕನು ಪೋಲುಂಬಂ ನಗರದಲ್ಲಿ, ಗಾಸ್ಪರೋ ಬಾಲ್ಬಿಯು ನಾಗಾ ಪಟ್ಟಣದಲ್ಲಿ, ನಿಕೋಲೋ ದೆ ಕೊಂತಿಯು ಕ್ಯಾಂಬೆ ನಗರದಲ್ಲಿ, ಯುರೋನಿಮೋ ದಿ ಸಾಂತೋ ಸ್ಟೆಫಾನೋನು ಕೋರೊಮಂಡಲದಲ್ಲಿ, ಜಾನನ್ ಹ್ಯೂಷೆನ್ ಥನಲಿನ್ ಛೋಟೆನನು ಗೋವಾ ದ್ವೀಪದಲ್ಲಿ, ರಾಲ್ಫ್ ಫಿಚನು ಬನಾರಸದಲ್ಲಿ ಸತಿಯಾಗುತ್ತಿದ್ದುದರ ಬಗ್ಗೆ ವರದಿ ಮಾಡುತ್ತಾರೆ. ಸತಿಪದ್ಧತಿ ಬ್ರಾಹ್ಮಣರಲ್ಲಿರುವುದಾಗಿ ನಿಕೋಲೋ ದೆ ಕೊಂತಿ, ಜಾನನ್ ಹ್ಯೂಷೆನ್ ಥನಲಿನ ಛೋಟೆನ್, ಫಾದರ್ ಅಂತೋಣಿ ಮೊನ್ಸೆರೆಟ್‌ರೂ, ಜೆಂಟೈಲರಲ್ಲಿರುವುದಾಗಿ ದು ಆರ್ತೆ ಬಾರ್ಬೋಸಾ, ಸರ್ ಥಾಮಸ್‌ರೋ, ಸೀಜರ್ ಫ್ರೆಡೆರಿಕರೂ, ತೆಲುಗ ರ ( ತೆಲುಂಗರಲ್ಲಿ ) ರಲ್ಲಿರುವುದಾಗಿ ಫೆರ್ನಾಂವ್ ನೂನಿಜ್‌ರೂ ಉಲ್ಲೇಖಿಸುತ್ತಾರೆ. ಇಬ್ನೆ ಬತೂತಾ, ನಿಕೋಲೋ ದೆ ಕೊಂತಿ, ದು ಆರ್ತೆ ಬಾರ್ಬೋಸಾ, ಸೀಜರ್ ಫ್ರೆಡೆರಿಕ್ ಈ ಮೊದಲಾದವರು ದೀರ್ಘವಾಗಿ ಸತಿ ಆಚರಣೆಯನ್ನು ವಿವರಿಸುತ್ತಾರೆ. ಇವರಲ್ಲಿ ಸೀಜರ್ ಫ್ರೆಡೆರಿಕ್ ನೀಡಿದ ವಿವರವನ್ನು ಹೀಗೆ ಸಂಗ್ರಹಿಸಿಕೊಡಬಹುದಾಗಿದೆ :

'ನಾನಿದ್ದ ಏಳು ತಿಂಗಳ ಕಾಲದಲ್ಲಿ ಜೆಂಟೈಲರು ಮಾಡುತ್ತಿದ್ದ ಅನೇಕ ವಿಚಿತ್ರ ಹಾಗೂ ಅಮಾನುಷ ಕೃತ್ಯಗಳನ್ನು ಕಂಡೆ. ಮದುವೆಯಾದ ಗಂಡಸು ಸತ್ತರೆ ಅವನ ಹೆಂಡತಿ ಚಿತೆಯಲ್ಲಿ ಬಿದ್ದು ಸಾಯುತ್ತಾಳೆ. ಗಂಡ ಸತ್ತ ಮೇಲೆ ಹೆಂಡತಿ ಒಂದು ಅಥವಾ ಮೂರು ತಿಂಗಳನಂತರ ಚಿತೆಯಲ್ಲಿ ಬೀಳುವುದಕ್ಕೆ ಸಿದ್ಧಳಾಗುತ್ತಾಳೆ. ನಿರ್ದಿಷ್ಟವಾದ ದಿನ ಬಂದಾಗ ಬಹಳ ಹೊತ್ತಿಗೆ ಮುಂಚೆ ಎದ್ದು ಕುದುರೆಯ ಮೇಲೆಯೋ, ಆನೆಯ ಮೇಲೆಯೋ, ಅಥವಾ ಎಂಟು ಜನಹೊತ್ತ ಪಲ್ಲಕ್ಕಿಯ ಮೇಲೆಯೋ ಕುಳಿತು ಚಿತೆಯ ಸ್ಥಳಕ್ಕೆ ಹೊರಡುತ್ತಾಳೆ. ಆಕೆ ವಧುವಿನಂತೆ ಅಲಂಕಾರ ಮಾಡಿಕೊಂಡಿರುತ್ತಾಳೆ. ಆಕೆ ಎಡಗೈಯಲ್ಲಿ ಕನ್ನಡಿ, ಬಲಗೈಯಲ್ಲಿ ಬಾಣ ಹಿಡಿದಿರುತ್ತಾಳೆ ಊರಿನಲ್ಲೆಲ್ಲ ಮೆರವಣಿಗೆಯಾಗುತ್ತದೆ. ಮೆರವಣಿಗೆಯಾಗುವಾಗ ಆಕೆ, ತಾನು ತನ್ನ ನಲ್ಲನೊಡನೆ ಚಿರನಿದ್ರೆ ಮಾಡಲು ಹೋಗುತ್ತಿದ್ದೇನೆಂದು ಹಾಡುತ್ತಾಳೆ.

ಮಧ್ಯಾಹ್ನ ಒಂದು ಅಥವಾ ಎರಡು ಗಂಟೆಯ ಸಮಯಕ್ಕೆ ಎಲ್ಲರೂ ಊರ ಹೊರಗಿನ 'ನಿಗೊಂದಿನ್' ಎಂಬ ವಿಧವೆಯರನ್ನು ಸುಡುವ ಸ್ಥಳಕ್ಕೆ ಸೇರುತ್ತಾರೆ. ಅಲ್ಲಿ ಚಿತೆಗಾಗಿ ಕಟ್ಟಿಗೆ ಮೊದಲಾದವು ಸಿದ್ಧವಾಗಿರುತ್ತವೆ. ಚಿತೆಗೆ ಬೀಳುವ ಮುನ್ನ ವಿಧವೆಯು ಸಂತೋಷದಿಂದ ಎಲ್ಲರೊಡನೆ ಊಟ ಮಾಡುತ್ತಾಳೆ. ಊಟದ ನಂತರ ಎಲ್ಲರೂ ಹಾಡುತ್ತ – ಕುಣಿಯುತ್ತ ಸ್ವಲ್ಪಹೊತ್ತು ಕಾಲ ಕಳೆಯುತ್ತಾರೆ. ಆ ವೇಳೆ ಚಿತೆ ಸಿದ್ಧವಾಗುತ್ತದೆ. ವಿಧವೆಯು ಗಂಡನ ಹತ್ತಿರದ ಸಂಬಂಧಿಯ ಕೈ ಹಿಡಿದು ನದಿಯ ಬಳಿಗೆ ಹೋಗಿ, ತನ್ನ ಒಡವೆ – ವಸ್ತ್ರ – ಗಳನ್ನೆಲ್ಲ ಕಳಚಿ, ತಂದೆ– ತಾಯಿ– ನೆಂಟರಿಷ್ಟರಿಗೆ ಅವನ್ನೆಲ್ಲ ಕೊಟ್ಟು, ಒಂದು ಬಟ್ಟೆಯನ್ನು ಸುತ್ತಿಕೊಂಡು ನದಿಯಲ್ಲಿ ಸ್ನಾನಮಾಡಿ, ನಂತರ ಅರಿಸಿನದ ಬಟ್ಟೆಯನ್ನು ತೊಡುತ್ತಾಳೆ. ಪುನಃ ಗಂಡನ ಕಡೆಯವನ ಕೈ ಹಿಡಿದುಕೊಂಡು ಚಿತೆಯ ಬಳಿಗೆ ಬರುತ್ತಾಳೆ, ಚಿತೆಯ ಬಳಿ ಇರುವ ವೇದಿಕೆಯ ಮೇಲೆ ನಿಂತು ಮಕ್ಕಳಿಗೂ, ನೆಂಟರಿಷ್ಟರಿಗೂ ಬುದ್ಧಿಮಾತು ಹೇಳುತ್ತಾಳೆ. ಕೆಲವು ವೇಳೆ ಬೆಂಕಿ ಕಾಣಿಸದಿರಲೆಂದು ಚಿತೆಯ ಸುತ್ತ ತಟ್ಟಿಕಟ್ಟಿರುತ್ತಾರೆ. ಕೆಲವು ಹೆಂಗಸರು ತಾವು ಬೆಂಕಿಗೆ ಹೆದರುವುದಿಲ್ಲ ಎಂಬುದನ್ನು ತೋರಿಸಲು ಇದನ್ನು ಕಿತ್ತುಹಾಕುತ್ತಾರೆ. ಆ ದಡ್ಡಳಾದ ವಿಧವೆ ತನ್ನ ಮಕ್ಕಳು–ಮರಿಗಳಿಗೂ ಹೇಳಬೇಕಾದದನ್ನೆಲ್ಲ ಹೇಳಿದ ಮೇಲೆ, ಬೇರೊಬ್ಬ ಹೆಂಗಸು ಆಕೆಯ ತಲೆಯ ಮೇಲೆ ಒಂದುಗಡಿಗೆ ಎಣ್ಣೆಯನ್ನು ಸುರಿವಿ, ಬರಿದಾದ ಗಡಿಗೆಯನ್ನು ಬೆಂಕಿಗೆ ಬಿಸಾಡುತ್ತಾಳೆ. ಹಾಗೆ ಬಿಸಾಡಿದ ಕೂಡಲೇ ವಿಧವೆ ಚಿತೆಗೆ ಹಾರಿಬಿಡುತ್ತಾಳೆ. ನೆರೆದವರು ಅತ್ತುಕರೆದು ಗೋಳೋ ಅನ್ನುತ್ತಾರೆ. ಆ ಅಳುವನ್ನು ಗಂಡಸಾದವನು ಕೇಳಲಿಕ್ಕಾಗುವುದಿಲ್ಲ.

ಸೀಜರ್ ಫ್ರೆಡೆರಿಕ್ ಇನ್ನೊಂದು ವಿಶಿಷ್ಟ ರೀತಿಯ ಸತಿ ಆಚರಣೆಯನ್ನು ಗಮನಿಸಿದ್ದಾನೆ. ಅದನ್ನು ಹೀಗೆ ವಿವರಿಸುತ್ತಾನೆ :

'ಸತ್ತ ಗಂಡನ ಶವವನ್ನು ಚಕ್ಕಲುಬೊಕ್ಕಲಾಗಿ ಕುಳ್ಳಿರಿಸಿರುತ್ತಾರೆ. ಅವನ ಹೆಂಡತಿ ಬಂದು ಅವನ ಕುತ್ತಿಗೆಯನ್ನು ತಬ್ಬಿಕೊಂಡು ಕುಳಿತುಕೊಳ್ಳುತ್ತಾಳೆ ಗಾರೆಯವರು ಸುತ್ತಲೂ ಗೋಡೆ ಕಟ್ಟುತ್ತಾರೆ. ಇನ್ನೇನು ಗೋಡೆಯನ್ನು ಮುಚ್ಚಬೇಕು, ಅಷ್ಟರಲ್ಲಿ ಗಂಡನೊಬ್ಬನು ಬಂದು ಆಕೆಯ ಕುತ್ತಿಗೆಯನ್ನು ಹಿಸುಕಿ ಸಾಯಿಸಿಬಿಡುತ್ತಾನೆ. ಆಮೇಲೆ ಗೋಡೆಯನ್ನು ಮುಚ್ಚಿ ಇಬ್ಬರನ್ನು ಸಮಾಧಿಮಾಡುತ್ತಾರೆ.''

ಸೀಜರ್ ಫ್ರೆಡೆರಿಕನ ವಿವರಗಳಿಂದ ಮುಖ್ಯವಾಗಿ, ಸತಿ ಆಚರಣೆಯೊಂದು ಉತ್ಸವದ ರೀತಿಯಲ್ಲಿ ನಡೆಯುತ್ತಿತ್ತೆಂದು ಮನವರಿಕೆಯಾಗುತ್ತದೆ. ಅಲ್ಲದೆ ಸತಿಯಾಗುವದು ಎರಡು

ರೀತಿಯಲ್ಲಿ ಎಂಬುದು ಸ್ಪಷ್ಟವಾಗುತ್ತದೆ. ಒಂದು, ಚಿಂತೆಯಲ್ಲಿ ಬಿದ್ದು ಸತಿಯಾಗುವುದು, ಇನ್ನೊಂದು, ಸಹಮಾಧಿಗೋಸ್ಕರ ಸತಿಯಾಗುವುದು. ಮತ್ತು ಗಂಡನ ಶವವಿಲ್ಲದೆ ಅನುಗಮನವನ್ನು ಗಂಡನ ಶವದೊಡನೆ ಸಹಗಮನವನ್ನು ಅನುಸರಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಸತಿಪದ್ಧತಿ ರಜಪೂತರಲ್ಲಿ ಹೆಚ್ಚು ಆಚರಣೆಯಲ್ಲಿದ್ದುದು ಕಾಣುತ್ತೇವೆ. ಮಾರವಾರ ರಾಜಾ ಅಜಿತಸಿಂಗನು ಕ್ರಿ. ಶ. 1724 ರಲ್ಲಿ ಮೃತನಾಗಲು 64 ಜನ ಸ್ತ್ರೀಯರು ಚಿತೆ ಏರುತ್ತಾರೆ.[91] ರಾಜಾ ಜಸ್ವಂತಸಿಂಗನು ಮೃತನಾದ ಸುದ್ದಿ ಕೇಳಲಾಗಿ ಅವನ ರಾಣಿಯರು ಸತಿಯಾಗಲಿಕ್ಕೆ ಸ್ನಾನಮಾಡಿ, ಉಡಿಗೆ – ತೊಡಿಗೆ ತೊಟ್ಟು – ಕೊಳ್ಳುತ್ತಾರೆ. ಮುಖ್ಯ ರಾಣಿಯು ರಾಜನ ಉಳಿದ ಪತ್ನಿಯರೊಡನೆ ಕುದುರೆಯ ಮೇಲೆ ಕುಳಿತು ಬರುತ್ತಾಳೆ. ಬೀದಿಯ ಮೇಲೆ ಬರುವಾಗ ಆಭರಣಗಳನ್ನು ಹಂಚುತ್ತಾರೆ. ಗುಡಿಸಲನಂತೆ ಮಾಡಿದ ಚಿತೆಗೆ ಪೂಜಿಸಿ, ಚಿತೆಯಲ್ಲಿ ಧುಮುಕಿ ಸತಿಹೋಗುತ್ತಾರೆ.[92] ಇಂದು ಉತ್ತರ ಭಾರತದಲ್ಲಿ ಪ್ರಸಿದ್ಧವಾಗಿರುವ ರಾಣಿ ಸತಿದೇವಿಯು ( ನಾರಾಯಣಬಾಯಿ ) ಗಂಡ ತಂಡನದಾಸಜಿಯು ಹೋರಾಟದಲ್ಲಿ ಮೃತನಾಗಲು ಸು 680 ವರ್ಷಗಳ ಹಿಂದೆ ಸತಿಯಾದಳೆಂದು ಹೇಳಲಾಗುತ್ತಿದೆ.[93] ಹೀಗೆ ರಜಪೂತರಲ್ಲಿ ಸತಿಪದ್ಧತಿ ಗಟ್ಟಿಯಾಗಿ ನೆಲೆಯೂರಿದ್ದನ್ನು ಕಾಣುತ್ತೇವೆ. ಈ ಸಂದರ್ಭದಲ್ಲಿ ಜಹಾಂಗೀರನ ಕಾಲದಲ್ಲಿ ಭಾರತಕ್ಕೆ ಸಂದರ್ಶನಕೊಟ್ಟ ' ಫ್ರಾನ್ಸಿಸ್ಕೊ ಪೆಲ್ಸಾರ್ಟ್ ( ಡಚ್ಚ ) ಹೇಳುವ '' — — — — ರಜಪೂತರೆಂಬ ಯೋಧರ ಜಾತಿಯುಂಟು — — — ಅವರ ಹೆಂಡತಿಯರು ಗಂಡ ಸತ್ತಾಗ ಚಿತೆಯಲ್ಲಿ ಬಿದ್ದು ಸಹಗಮನ ಮಾಡುತ್ತಾರೆ '' ಎಂಬ ಮಾತನ್ನು ಸ್ಮರಿಸಿದರೆ ರಜಪೂತರಲ್ಲಿ ಸತಿ ಆಚರಣೆ ಸರ್ವಸಾಮಾನ್ಯವಾಗಿದ್ದುದು ಗಮನಕ್ಕೆ ಬರುತ್ತದೆ. ರಜಪೂತ ಸ್ತ್ರೀಯೊಬ್ಬಳು ಸಹಗಮನ ಮಾಡಿಕೊಂಡದ್ದನ್ನು ಫ್ರಾನ್ಸಿಸ್ಕೊ ಪೆಲ್ಸಾರ್ಟ್ ವರ್ಣಿಸಿಯೂ ಇದ್ದಾನೆ. ಅದನ್ನು ಹೀಗೆ ಸಂಗ್ರಹಿಸಿ ಕೊಡಬಹುದು.

'' 18 ವರ್ಷದ ಸುಂದರ ಯುವತಿ ತನ್ನ ಗಂಡ ಮೃತನಾಗಲು, ತಾನು ಸಹಗಮನ ಮಾಡುವ ವಿಷಯವನ್ನು ನೆರೆಹೊರೆಯವರಿಗೆ ತಿಳಿಸಿದಳು. — — — — — ಅವಳು ನದಿಯಲ್ಲಿ ಸ್ನಾನಮಾಡಿ ಬಂದು ತನ್ನ ಒಡವೆ – ವಸ್ತ್ರಗಳನ್ನು ನೆಂಟರಿಷ್ಟರಿಗೆ ಕೊಟ್ಟು ಎಲ್ಲರಿಗೂ ಬರುತ್ತೇವೆ. ಎಂದು ಹೇಳಿ, ಒಂದು ವರ್ಷದ ತನ್ನ ಮಗುವನ್ನು ಮುದ್ದಿಟ್ಟು, ಓಡಿಹೋಗಿ ಗಂಡನನ್ನು ಇರಿಸಿದ್ದ ಕಟ್ಟಿಗೆಯ ಮೇಲೆ ಗಂಡನೊಡನೆ ಮಲಗಿ, ತನ್ನ ಕೈಯಿಂದಲೇ ಬೆಂಕಿ ಹತ್ತಿಸಿಕೊಂಡಳು. ಎಲ್ಲರೂ ರಾಮ, ರಾಮ, ರಾಮ, ಎಂದು ಕೂಗಿದರು. ಸುಟ್ಟ ಬೂದಿಯಾದ ಮೇಲೆ ಎಲ್ಲರೂ ಒಂದಿಷ್ಟು ಬೂದಿಯನ್ನು ಪ್ರಸಾದವಾಗಿ ತೆಗೆದಿಟ್ಟುಕೊಂಡರು.[94]

ಗುರುನಾನಕನು ( 1469–1538) ಸತಿಪದ್ಧತಿಯನ್ನು ಖಂಡಿಸಿದ್ದಾನೆ.[95] ಅಲ್ಲದೆ ಮೂರನೆಯ ಸಿಖ ಗುರುವಾದ ಅಮರದಾಸನೂ (1552–72 ) ಇದನ್ನು ಖಂಡಿಸಿದ್ದಾನೆ.[96] 'ಸತ್ತವನೊಡನೆ ತಮ್ಮನ್ನು ಸುಟ್ಟುಕೊಳ್ಳುವವರು ಸತಿಯರಲ್ಲ' ಎಂದು ಈತನು ಸಾರಿದರೂ, ಸಿಖ ಜನಾಂಗದಲ್ಲಿ ಸತಿ ಘಟನೆಗಳು ನಡೆದ ಕುರಿತಾಗಿ ತಿಳಿಯುತ್ತದೆ. ರಣಜಿತಸಿಂಗ್ ಸತ್ತಾಗ ನಾಲ್ಕು ಜನ ರಾಣಿಯರು ಏಳು ಜನ ದಾಸಿಯರು ( Slave girls ) ಚಿತೆ ಏರುತ್ತಾರೆ.[97] ಮಹಾರಾಜ ಖರಗ್‌ಸಿಂಗನೊಡನೆ ಮೂವರು, ಬಸಂತ ಸಿಂಗನೊಡನೆ ಐವರು, ಕಿಶೋರಿಸಿಂಗನೊಡನೆ ಹನ್ನೊಂದು, ಹಿರಾಸಿಂಗನೊಡನೆ ಇಪ್ಪತ್ತುನಾಲ್ಕು, ಸುಚೇತಸಿಂಗನೊಡನೆ ಮುನ್ನೂರಾಹತ್ತು — ಈ ರೀತಿಯಾಗಿ ಸ್ತ್ರೀಯರು ಮರಣಹೊಂದುತ್ತಾರೆ.[98]

ಮರಾಠರಲ್ಲಿ ಕೆಲವು ಸತಿಯ ಉದಾಹರಣೆಗಳು ದೊರಕುತ್ತವೆ. ಶಿವಾಜಿಯ(1680) ಒಬ್ಬ ಪತ್ನಿ, ರಾಜಾರಾಮನ (1700) ಒಬ್ಬ ಪತ್ನಿ ಸತಿಹೋಗಿದ್ದಾರೆ.[99] ಪೇಶ್ವೆಗಳಲ್ಲಿ ಮೊದಲನೆಯ ಮಾಧವರಾಯನು ಕ್ರಿ. ಶ. 1772 ರಲ್ಲಿ ಮೃತನಾಗಲು ರಮಾಬಾಯಿ ಸತಿಯಾಗುತ್ತಾಳೆ.[100] ಈ ವಿವರಣೆಗಳಿಂದಾಗಿ ಸಿಖ ಹಾಗೂ ಮರಾಠ ಜನಾಂಗಗಳಲ್ಲಿ ಸತಿಪದ್ಧತಿ ರಜಪೂತರಲ್ಲಿರುವಂತೆ ತೀಕ್ಷ್ಣ ರೀತಿಯಲ್ಲಿ ಇರಲಿಲ್ಲವೆಂದು ಸ್ಪಷ್ಟವಾಗುತ್ತದೆ.

ಮಧುರೆಯ ನಾಯಕರಲ್ಲಿಯೂ ಸತಿ ಘಟನೆಗಳು ನಡೆದ ಕುರಿತಾಗಿ ತಿಳಿಯುತ್ತದೆ. ಈ ಮನೆತನದಲ್ಲಿ ಇಬ್ಬರು ರಾಜರು ಕ್ರಿ.ಶ. 1611 ಮತ್ತು ಕ್ರಿ.ಶ. 1620 ರಲ್ಲಿ ಮೃತರಾಗಲು 400 ಮತ್ತು 700 ಜನ ಸ್ತ್ರೀಯರು ಕ್ರಮವಾಗಿ ಚಿತೆ ಏರುತ್ತಾರೆ. ಈ ಸಂಖ್ಯೆಯು ಅತಿಶಯೋಕ್ತಿಯಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[101]

17 ಮತ್ತು 18ನೆಯ ಶತಮಾನಗಳಲ್ಲಿ ಭಾರತದ ಸಾಮಾನ್ಯವಾಗಿ ಎಲ್ಲ ಭಾಗಗಳಲ್ಲಿ ಹೆಚ್ಚು ಸತಿಕಲ್ಲುಗಳು ದೊರಕುತ್ತವೆ.[102] ಇದರಿಂದಾಗಿ ಸಾಮಾನ್ಯರಿಂದಲೂ ಇದು ಆಚರಿಸಲ್ಪಡುತ್ತಿತ್ತು ಎಂಬುದಾಗಿ ತಿಳಿದು ಬರುತ್ತದೆ. ವಿದೇಶಿ ಪ್ರವಾಸಿಗರಂತೂ ಈ ಕಾಲದ ಸತಿ ಆಚರಣೆಯನ್ನು ಹೆಚ್ಚು ವಿವರವಾಗಿ ಬರೆದಿದ್ದಾರೆ. ವಿಲಿಯಂ ಹಾಕಿನ್ಸ ( ಕ್ರಿ.ಶ.1607–1613), ಸರ್ ಥಾಮಸ ರೋ ( ಕ್ರಿ.ಶ.1616–18), ಎಡ್ವರ್ಡ್ ಟೆರ್ರಿ ( ಕ್ರಿ.ಶ.1616–18), ಫ್ರಾನ್ಸ್ವಾ ಫಿರಾರ್ಡ ಲವಲ್ ( 17ನೆಯ ಶತ ), ಪೀಟರ್ ಪೆಲ್ಲೋರಿಸ ( ಕ್ರಿ. ಶ.1612), ಅಂತೋನಿ ನಿಪೋರರ ( ಕ್ರಿ. ಶ. 1609–14 ) ವಿಲಿಯಂ ಮೆಥ್ವೋಲ್ಡ್ (1618–23), ಫ್ರಾನ್ಸಿಸ್ಕೋ ಪೆಲ್ಸಾರ್ಟ್ ( ಜಹಾಂಗಿರನ ಕಾಲ ), ಮಾನುಯೆ ಬರ್ರಾಡಾಸ್ (ಕ್ರಿ.ಶ.1614), ಪೀಟರಮಂಡಿ ( ಕ್ರಿ. ಶ.1628), ಪಿಯೋತ್ರೋ ದೆಲ್ಲಾವಲ್ಲೆ ( ಕ್ರಿ ಶ. 1623) ಮಂಡೆಲ್ ಸ್ಲೋ ( ಕ್ರಿ. ಶ. 1638), ಥಾಮಸ್ ಹರ್ಬರ್ಟ್ (ಕ್ರಿ. ಶ.1627) ಫ್ರಾನ್ಸ್ವಾಸ

ಬೆರ್ನ್ಯೇ ( ಕ್ರಿ. ಶ. 1658 – 59), ಬಪ್ತಿಸ್ಟ ಟಾವರ್ನೈ ( ಕ್ರಿ. ಶ. 1641), ನಿಕೊಲಾಲೊ ಮನುಚಿ ( ಸು. 17ನೆಯ ಶತ.) ಈ ಮೊದಲಾದ ಪ್ರವಾಸಿಗರು 17ನೆಯ ಶತಮಾನದಲ್ಲಿದ್ದ ಸಹಗಮನವನ್ನು ವಿವರಿಸುತ್ತಾರೆ, ಅಲ್ಲದೆ ಅಬ್ಬೆ ಜೆ. ಎ. ಡುಬಾಯ್ಸ್ ( ಕ್ರಿ. ಶ. 1794), ವಿಲಿಯಂ ವಾರ್ಡ್ ( ಕ್ರಿ. ಶ. 1796), ಸರ್. ಡಬ್ಲ್ಯೂ. ಎಚ್. ಸ್ಲೀಮನ ( ಕ್ರಿ. ಶ. 1829) ಈ ಮೊದಲಾದವರು ನೀಡಿದ ಸತಿ ವಿವರಣೆಯನ್ನು, ಮಿಶನರಿ ನೀಡಿದ ಸತಿ ವರದಿಯನ್ನು (ಕ್ರಿ. ಶ. 1826) ಈ ಸಂಧರ್ಭದಲ್ಲಿ ಸ್ಮರಿಸಬಹುದಾಗಿದೆ.[103] ಡಾ: ಅಳ್ತೇಕರರು, ಕ್ರಿ. ಶ. 1300 – ಕ್ರಿ. ಶ. 1800 ರ ಅವಧಿಯಲ್ಲಿ ರಜಪೂತರಲ್ಲಿ ಸತಿಯಾಗುವವರು 10 ಪ್ರತಿಶತ ಎಂದೂ, ಸತಿ ಆಚರಣೆ ಉಗ್ರವಾಗಿ ನಡೆದುಕೊಂಡು ಬರುತ್ತಿದ್ದಾಗ ಸಾವಿರಕ್ಕೆ ಒಬ್ಬ ವಿಧವೆ ಸತಿಯಾಗುತ್ತಿದ್ದಳೆಂದೂ ಅಭಿಪ್ರಾಯಪಟ್ಟಿದ್ದಾರೆ.[104] ಬ್ರಿಟಿಷ ಸರ್ಕಾರವು ಈ ಸಮಯದಲ್ಲಿ ಸತಿ ಪದ್ಧತಿಯನ್ನು ತಡೆಗಟ್ಟಲು ಹೆಚ್ಚು ಆಸಕ್ತಿಯನ್ನು ತೋರಿಸಿದಂತಿಲ್ಲ. ಡಿಸೆಂಬರ 5, 1812 ರಲ್ಲಿ ಬ್ರಿಟಿಷ ಸರ್ಕಾರವು, ಹಿಂದೂ ಧರ್ಮದ ತತ್ವಗಳು ಯಾರಿಗೆ ಅನ್ವಯಿಸುತ್ತವೆಂತೋ ಅಲ್ಲಿ ಸತಿ ಆಚರಣೆಯನ್ನು ತಡೆಗಟ್ಟದೆ, ಉಳಿದ ಕಡೆಗಳಲ್ಲಿ ಅದನ್ನು ತಡೆಗಟ್ಟಬೇಕು ಎಂಬ ತೀರ್ಮಾನವನ್ನು ತೆಗೆದುಕೊಂಡಿತು.[105] ಅಂದರೆ ಬ್ರಿಟಿಷ ಸರ್ಕಾರವು ಧಾರ್ಮಿಕ ವಿಷಯದಲ್ಲಿ ಕೈಹಾಕಬಾರದೆಂಬ ಭಾವನೆಯಿಂದ ಹೀಗೆ ತೀರ್ಮಾನ ಕೈಗೊಂಡಂತಿದೆ. ಕ್ರಿ. ಶ. 1800– ಕ್ರಿ. ಶ. 1829 ರ ಅವಧಿಯಲ್ಲಿ ನಡೆದ ಸತಿ ಘಟನೆಗಳನ್ನು ಬ್ರಿಟಿಷ ಸರ್ಕಾರ ದಾಖಲಿಸಿಕೊಂಡಿದೆ. ಈ ಕಾಲದ ಎಲ್ಲ ಸತಿಘಟನೆಗಳೂ ದಾಖಲೆ ಆಗಿವೆ ಎಂದೂ ಹೇಳುವಂತಿಲ್ಲ. ಎಡ್ವರ್ಡ ಥಾಮ್ಸನ್ ಈ ಅಂಕಿ ಸಂಖ್ಯೆಗಳನ್ನು ಕೊಡುತ್ತಾರೆ. ( Suttee – Ch – V ). ಬಾಂಬೆ ಹಾಗೂ ಮದ್ರಾಸ ಅಧಿಪತ್ಯದಲ್ಲಿ ವರ್ಷಕ್ಕೆ 50 ರ ಒಳಗೆ ಸತಿಘಟನೆಗಳು ನಡೆದಿವೆ. ಪೇಶ್ವೆಯರ ಪುನಾ ಅಧಿಪತ್ಯದಲ್ಲಿ ಕ್ರಿ. ಶ. 1800 ರಿಂದ ಕ್ರಿ. ಶ. 1812 ರ ಅವಧಿಯಲ್ಲಿ ವರ್ಷಕ್ಕೆ 12 ರಷ್ಟು, ತಂಜಾವೂರ ಜಿಲ್ಲೆಯಲ್ಲಿ ಕ್ರಿ. ಶ. 1817 ರ ಮೊದಲು ವರ್ಷಕ್ಕೆ 24 ರಷ್ಟು ಮಧ್ಯ ಭಾರತದಲ್ಲಿ ವರ್ಷಕ್ಕೆ 3 ಅಥವಾ 4 ರಷ್ಟು ಸತಿಘಟನೆಗಳು ನಡೆದುದಾಗಿ ತಿಳಿದು ಬರುತ್ತದೆ.

ಕ್ರಿ. ಶ. 1815 ರಿಂದ ಕ್ರಿ. ಶ. 1828 ರ ಅವಧಿಯಲ್ಲಿ ಬ್ರಿಟಿಷ ಸರ್ಕಾರ ಬಂಗಾಲದ ಬೇರೆ ಬೇರೆ ಅಧಿಪತ್ಯಗಳಿಂದ ಸತಿಘಟನೆಗಳನ್ನು ಕಲೆ ಹಾಕಿ ಪಟ್ಟಿಯನ್ನು ತಯಾರಿಸಿಕೊಂಡಿತ್ತು. ಅದರ ವಿವರ ಹೀಗಿದೆ.[106]

| 'ವಿಭಾಗಗಳ ಹೆಸರು' | | 'ಸತಿಯಾದವರ ಸಂಖ್ಯೆ' |
|---|---|---|
| ಕಲ್ಕತ್ತಾ ವಿಭಾಗ | — | 5119 |
| ಢಕ್ಕಾ ,, | — | 710 |
| ಮುರಿಶಿದಾಬಾದ ,, | — | 260 |
| ಪಾಟ್ನಾ ,, | — | 689 |
| ಬನಾರಸ್ ,, | — | 1153 |
| ಬರೇಲಿ ,, | — | 203 |

ಈ ಮೇಲಿನ ಅಂಕಿ — ಸಂಖ್ಯೆಗಳಿಂದ ಬಂಗಾಲ ಪ್ರದೇಶದಲ್ಲಿ ಸತಿಪದ್ಧತಿ ತೀಕ್ಷ್ಣ ಸ್ವರೂಪದಲ್ಲಿತ್ತೆಂದು ತಿಳಿಯುತ್ತದೆ, ದಕ್ಷಿಣ ಭಾರತದಲ್ಲಿ — ಮದ್ರಾಸ, ಬಾಂಬೆ, ಪುನಾ, ಪ್ರಾಂತಗಳಲ್ಲಿ— ಸತಿಪದ್ಧತಿ ಇಷ್ಟೊಂದು ವ್ಯಾಪಕ ಸ್ವರೂಪದಲ್ಲಿ ಇರಲಿಲ್ಲ.

ಈ ಸಂದರ್ಭದಲ್ಲಿ ಮುಖ್ಯವಾದ ಸತಿ ಘಟನೆಯೊಂದನ್ನು ಅವಶ್ಯವಾಗಿ ಉಲ್ಲೇಖಿಸಲೇ ಬೇಕು. ಅದು, ಕ್ರಿ. ಶ. 1811 ರಲ್ಲಿ ರಾಜಾರಾಮ ಮೋಹನರಾಯರ ಅತ್ತಿಗೆ 'ಅಳಕಮಂಜರಿ' ಸತಿಯಾದ ಘಟನೆ.[107] ರಾಜಾರಾಮ ಮೋಹನರಾಯರ ಅಣ್ಣ ಜಗನ್ಮೋಹನನು ಮೃತನಾಗಲು ಆತನ ಪತ್ನಿಯರಲ್ಲಿ ಒಬ್ಬಳಾದ 'ಅಳಕಮಂಜರಿ' ಸತಿಯಾಗಲು ಹೊರಡುತ್ತಾಳೆ. ರಾಜಾರಾಮ ಮೋಹನರಾಯರು ಅತ್ತಿಗೆಯ ಸಹಗಮನವನ್ನು ತಡೆಯಲು ಪ್ರಯತ್ನಿಸಿದರೂ ಅದು ಸಾಧ್ಯವಾಗದೇ ಹೋಯಿತು. ಅವರು ಸತಿಪದ್ಧತಿಯ ನಿರ್ಮೂಲನೆಗಾಗಿ ಹೋರಾಟಕ್ಕಿಳಿದರು. ಕೊನೆಗೆ, ಡಿಸೆಂಬರ 5, 1829 ರಂದು ವಿಲಿಯಂ ಬೆಂಟಿಂಕನಿಂದ ಬ್ರಿಟಿಷ ಅಧಿಪತ್ಯದ ಎಲ್ಲ ಪ್ರದೇಶಗಳಲ್ಲೂ ಸತಿಯನ್ನು ನಿಷೇಧಿಸುವ ಆಜ್ಞೆ ಜಾರಿಗೆ ಬಂದಿತು.

ಮಧ್ಯಯುಗದ ರಾಜರಲ್ಲಿ ಸತಿಪದ್ಧತಿಯನ್ನು ನಿಷೇಧಿಸಿ ಆಜ್ಞೆ ಮಾಡಿದವರಲ್ಲಿ ಮಹಮ್ಮದ ಬಿನ್ ತಘಲಕನೇ ( ಕ್ರಿ. ಶ. 1325 — 51 ) ಬಹುಶಃ ಮೊದಲನೆಯವನೆಂದು ತೋರುತ್ತದೆ.[108] ಅವನ ರಾಜ್ಯದಲ್ಲಿ ಯಾರಾದರೂ ಸತಿಹೋಗುವವರಿದ್ದರೆ ಅಪ್ಪಣೆ ಪಡೆಯಬೇಕಾಗುತ್ತಿತ್ತು. ಹುಮಾಯೂನನು ( 1530 — 1556 ) ಈ ಪದ್ಧತಿಯನ್ನು ತಡೆಗಟ್ಟಲು ವಿಶೇಷವಾಗಿ ಪ್ರಯತ್ನಿಸಲಿಲ್ಲವೆಂದೇ ಹೇಳಬೇಕು. ಹುಮಾಯೂನನ ಕಾಲದಲ್ಲಿ ಪ್ರವಾಸಮಾಡಿದ 'ಸೈದ್ ಅಲಿ ರೆಯಿಸ್' ಹೀಗೆ ಬರೆಯುತ್ತಾನೆ. ''ಸಹಗಮನಕ್ಕೆ ಮಹಮ್ಮದೀಯರು ಅಡ್ಡಿ ಬಂದರೆ ಅವರ ರಾಜನು ಸಾಯುತ್ತಾನೆಂದೂ, ಮುಂದೆ ಅವನ ಸಂತತಿ ಬೆಳೆಯುವುದಿಲ್ಲವೆಂದೂ ಭಾವನೆ ಇದೆ. ಈ ಕಾರಣದಿಂದ ಬಾದಷಹನ ಕಡೆಯವರು ಸಹಗಮನವಾಗುವ ಸಂದರ್ಭಗಳಲ್ಲಿ ಇದ್ದು, ಅದಕ್ಕೆ ಅಡ್ಡಿಬರದಂತೆ ನೋಡಿಕೊಳ್ಳುತ್ತಾರೆ.[109] ಅಕ್ಬರನು ವಿಧವೆಯರನ್ನು

ಅವರ ಇಚ್ಛೆಗೆ ವಿರುದ್ಧವಾಗಿ ಸುಡದಂತೆ ನೋಡಿಕೊಳ್ಳಬೇಕೆಂದು, ಅಧಿಕಾರಿಗಳಿಗೆ ಆಜ್ಞೆ ಮಾಡಿದ್ದನು. 'ದಿನ್ – ಇ – ಇಲಾಹಿ' ಧರ್ಮವೂ ಸತಿಪದ್ಧತಿಯನ್ನು ವಿರೋಧಿಸಿತು.[110] ಅಕ್ಬರನು ಸ್ವತಃ ಜಯಮಲ್ಲನ ಪತ್ನಿಯನ್ನು ಸಹಗಮನವಾಗದಂತೆ ನೋಡಿಕೊಂಡನಲ್ಲದೆ, ಆಕೆಯನ್ನು ಸಹಗಮನವಮಾಡಿಕೊಳ್ಳುವಂತೆ ಒತ್ತಾಯಿಸುತ್ತಿದ್ದ ಆಕೆಯ ಮಗನನ್ನು ಸೆರೆಯಲ್ಲಿಟ್ಟಿದ್ದನು.[111] ಜಹಾಂಗಿರನು ( 1605 – 28) ಸತಿಪದ್ಧತಿಯನ್ನು ವಧಾರ್ಹ ಅಪರಾಧವೆಂದು ಘೋಷಿಸಿದನು.[112] ವಿಧವೆಯರನ್ನು ದಹಿಸುವುದರ ಬಗೆಗೆ ಮಹಮ್ಮದೀಯರಿಗೆ ಅನುಮತಿ ಇದ್ದುದರಿಂದ ಮುಸ್ಲಿಂ ಸ್ಮಶಾನಗಳ ಸಮೀಪದಲ್ಲಿ ಅದು ನಡೆಯತಕ್ಕದಲ್ಲವೆಂದು ಷಹಜಹಾನನು ( 1628 – 58) ಅಪ್ಪಣೆ ಹೊರಡಿಸಿದ್ದನು.[113] ಔರಂಗಜೇಬನು (1658–1707) ದೃಢವಾದ ಹೆಜ್ಜೆಯನ್ನು ಸತಿಪದ್ಧತಿಯನ್ನು ವಿರೋಧಿಸುವಲ್ಲಿ ಇಟ್ಟನೆಂದು ಹೇಳಬಹುದು. ಔರಂಗಜೇಬನು ಒಂದು ಆಜ್ಞೆಯನ್ನು ಹೊರಡಿಸಿ, ಯಾವ ಅಧಿಕಾರಿಯೂ ಸ್ತ್ರೀಯರು ಅಗ್ನಿಗೆ ಬೀಳುವುದಕ್ಕೆ ಅವಕಾಶ ಕೊಡಕೂಡದೆಂದು ಕಟ್ಟಪ್ಪಣೆ ಮಾಡಿದನು[114]

ವಿದೇಶಿ ಅಧಿಪತ್ಯಗಳಲ್ಲಿ ಪೋರ್ತುಗೀಜರೇ ಮೊದಲಿಗೆ ಸತಿಪದ್ಧತಿಯನ್ನು ನಿಷೇಧಿಸಿದರೆಂದು ಹೇಳಬಹುದು. ಅಲ್ಬುಕರ್ಕನು ಪೋರ್ತುಗೀಜರ ಆಡಳಿತಕ್ಕೊಳಪಟ್ಟ ಪ್ರದೇಶಗಳಲ್ಲಿ ಸತಿಪದ್ಧತಿಯನ್ನು ಕ್ರಿ. ಶ. 1510 ರಲ್ಲಿ ನಿಷೇಧಿಸಲು ಪ್ರಯತ್ನಿಸಿದನು.[115] ಗೋವಾ ಪಟ್ಟಣದಲ್ಲಿ ಸತಿಪದ್ಧತಿಯನ್ನು ಅರ್ಚಬಿಷಪ ( ಕ್ರಿ.ಶ. 1553–58) ನಿಷೇಧಿಸಿದನು.[116] ಔರಂಗಜೇಬನ ಕಾಲದವನಾದ ಫ್ರೆಂಚ್ ಪ್ರವಾಸಿ ಫ್ರಾನ್ಸ್ವಾ ಬರ್ನಿಯೇ ಹೀಗೆ ಬರೆಯುತ್ತಾನೆ: 'ಚಿತೆಯಲ್ಲಿ ಬೀಳಲು ಮುಂದಾದ ಹೆಂಗಸರನ್ನು ತಡೆಯುವುದಕ್ಕಾಗಲಿ ಅಥವಾ ಬ್ರಾಹ್ಮಣರ ಹಿಡಿತದಿಂದ ಆಕೆಯನ್ನು ಬಿಡಿಸುವುದಕ್ಕಾಗಲಿ ಯಾವ ಮೊಗಲ್ ಚಕ್ರವರ್ತಿಯೂ ಧೈರ್ಯ ಮಾಡಲಾರ. ------ ಆದರೆ ಎಲ್ಲಿ ಸಾಧ್ಯವೋ ಅಲ್ಲಿ ಪೋರ್ತುಗೀಸರು ಅನೇಕ ವಿಧವೆಯರನ್ನು ಬದುಕಿಸಿದ್ದಾರೆ.[117]'

ಗುರುನಾನಕನು ( 1469 – 1538 ) ಸತಿ ಆಚರಣೆಯನ್ನು ಖಂಡಿಸಿದ್ದಾನೆ. ಮೂರನೆಯ ಗುರು ಅಮರದಾಸನು ( 1552–1574) ಸುಟ್ಟುಕೊಳ್ಳುವ ವಿಧವೆಯರು ಸತಿಯರಲ್ಲ ಎಂದು ಸಾರುತ್ತಾನೆ. ಮರಾಠ ರಾಜ್ಯದಲ್ಲಿ ಪೇಶ್ವೆ ಬಾಜಿರಾವನೂ ಕೂಡ ಸತಿಪದ್ಧತಿಯನ್ನು ತಡೆಗಟ್ಟಲು ಬಲಯುತವಾದ ಕ್ರಮಗಳನ್ನು ಕೈಕೊಂಡನು.[118]

ಭಾರತದ ವಿಶಾಲ ಪ್ರದೇಶವನ್ನು ಆಕ್ರಮಿಸಿದ ಬ್ರಿಟಿಷರು ಸತಿಪದ್ಧತಿ ವಿರುದ್ಧ ದೃಢ ನಿಶ್ಚಯಕೈಗೊಳ್ಳುವವರೆಗೆ ಅದು ಹಾಗೆ ಮುಂದುವರಿಯಿತು. ಬ್ರಿಟಿಷರು ಮೊದಮೊದಲು

ಈ ವ್ಯವಹಾರದಲ್ಲಿ ಕೈಹಾಕಲು ಇಚ್ಛಿಸಲಿಲ್ಲವೆನಿಸುತ್ತದೆ. ಕ್ರಿ. ಶ. 1789 ರಲ್ಲಿ ಬ್ರಿಟಿಷ ದೃಷ್ಟಿ ಸತಿಪದ್ಧತಿ ಕಡೆಗೆ ಸೆಳೆಯಲ್ಪಟ್ಟರೂ 1812 ರವರೆಗೂ ಯಾವ ತೀರ್ಮಾನವನ್ನು ತೆಗೆದುಕೊಳ್ಳಲಿಲ್ಲ. ಕ್ರಿ. ಶ. 1789 ರಲ್ಲಿ ಕ್ರಿಮಿನಲ್ ನ್ಯಾಯಾಧೀಶರಾಗಿದ್ದ 'ಬರ್ರಾಕ್' ಎಂಬುವರು, ಸ್ತ್ರೀಯೊಬ್ಬಳಿಗೆ, ಸತಿಯಾಗದಂತೆ ತೀರ್ಪುಕೊಟ್ಟು ಆ ವಿಷಯವನ್ನು ಗವರ್ನರ್ ಜನರಲ್ ಕಾರ್ನವಾಲೀಸರಿಗೆ ತಿಳಿಸಲಾಗಿ, ಅವರು, ಇಂಥ ತೀರ್ಪಿನಿಂದಾಗಿ ಇನ್ನು ಸತಿಘಟನೆಗಳು ಹೆಚ್ಚಬಹುದು ಎಂಬ ಆತಂಕದಿಂದ — ನ್ಯಾಯಾಧೀಶರಿಗೆ ಈ ಪ್ರಸಂಗದಲ್ಲಿ ಪ್ರವೇಶಿಸಲು ಅಧಿಕಾರ ಕೊಡಲಾಗುವುದಿಲ್ಲ — ಎಂದು ತಿಳಿಸಿದರು.[119] ಕ್ರಿ. ಶ. 1805 ರಲ್ಲಿ ಬಿಹಾರ ನ್ಯಾಯಾಧೀಶರಾದ ಎಲ್ಫಿನಸ್ಟನ್ ಅವರು 12 ವರ್ಷದ ಬಾಲವಿಧವೆಯನ್ನು ಸತಿಯಾಗದಂತೆ ತಡೆಯಲು ಅಧಿಕಾರಕೊಡಬೇಕೆಂದು ಲಾರ್ಡವೆಲ್ಲೆಸ್ಲಿಗೆ ಮನವಿ ಮಾಡಲಾಗಿ, ಹಿಂದೂ ಶಾಸ್ತ್ರಗಳ ಅಭಿಪ್ರಾಯಗಳನ್ನು ತಿಳಿಸಬೇಕೆಂದು ಉತ್ತರ ಕೊಟ್ಟರು.[120] ಡಿಸೆಂಬರ್ 5, 1812 ರಲ್ಲಿ ಬ್ರಿಟಿಷ ಸರ್ಕಾರವು ಸತಿಪದ್ಧತಿ ವಿಷಯದಲ್ಲಿ ತೀರ್ಮಾನವೊಂದನ್ನು ತಗೆದುಕೊಂಡಿತು. ಅದು ಕೂಡಾ ಹಿಂದೂ ಧರ್ಮದ ತತ್ವಗಳು ಅನ್ವಯವಾಗದೆಡೆಗೆ ಮಾತ್ರ ಸತಿಘಟನೆಗಳನ್ನು ತಡೆಯಬೇಕೆಂಬುದೇ ಆಗಿತ್ತು. ಮುಂದೆ ಕ್ರಿ. ಶ. 1821 ರಲ್ಲಿ ಲಾರ್ಡ ಹೇಸ್ಟಿಂಗ್ಸನು ಕೂಡ ಸತಿಪದ್ಧತಿ ವಿಷಯದಲ್ಲಿ ಏನೂ ಮಾಡಲು ಸಾಧ್ಯವಿಲ್ಲವೆಂದೇ ಅಭಿಪ್ರಾಯ ಪಟ್ಟನು.[121] ಈ ಕಾಲಕ್ಕಾಗಲೇ ರಾಜಾರಾಮ ಮೋಹನರಾಯರಂಥ ಭಾರತೀಯ ಸಮಾಜಸುಧಾರಕರು ಸತಿಪದ್ಧತಿಯನ್ನು ನಿರ್ಮೂಲನಗೊಳಿಸಲು ಹೋರಾಟಕ್ಕಿಳಿದಿದ್ದರು. ಲಾರ್ಡ ವಿಲಿಯಂ ಬೆಂಟಿಂಕನು ಸತಿಪದ್ಧತಿಯನ್ನು ನಿರ್ಮೂಲನಗೊಳಿಸಲು ದೃಢನಿರ್ಧಾರ ಮಾಡಿದನು. ಅಂದು, 1829, ಡಿಸೆಂಬರ 5 — ಬ್ರಿಟಿಷ ಸರ್ಕಾರವು ತನ್ನ ಅಧಿಪತ್ಯದ ಭಾರತದ ಎಲ್ಲ ಪ್ರದೇಶಗಳಲ್ಲಿ ಸತಿಪದ್ಧತಿಯನ್ನು ನಿಷೇಧಿಸಿರುವುದಾಗಿಯೂ, ಅದು ಶಿಕ್ಷಾರ್ಹ ಅಪರಾಧವೆಂದೂ ಕಾನೂನು ( Regulation XVII ) ಪಾಸು ಮಾಡಿತು.

## ಭಾಗ — 3.

ಬ್ರಿಟಿಷ, ಸರ್ಕಾರ 1829, ಡಿಸೆಂಬರ 5 ರಂದು ಐತಿಹಾಸಿಕ ತೀರ್ಪನ್ನು 'ಸತಿ ನಿಷೇಧ' ಕುರಿತಾಗಿ ಕೊಟ್ಟನಂತರ, ಭಾರತದಲ್ಲಿ ಹಲವು ವಿದ್ಯಮಾನಗಳು ಘಟಿಸಿದವು. ಈ ಕಾನೂನಿನದಿಂದಾಗಿ ಸಂಪ್ರದಾಯ ಶರಣರು ತಮ್ಮ ಹೋರಾಟವನ್ನು ಉಗ್ರಗೊಳಿಸಿದರು. ಅವರು ಪ್ರತಿಭಟನಾರೂಪವಾಗಿ 800 ಜನರ ಸಹಿಯುಳ್ಳ ಮನವಿಯೊಂದನ್ನು ಬ್ರಿಟಿಷ ಸರ್ಕಾರಕ್ಕೆ

ಒಪ್ಪಿಸಿದರು. ಅಲ್ಲದೇ ತಮ್ಮ ಪರವಾಗಿರುವ 'ಚಂದ್ರಿಕೆ' ಪತ್ರಿಕೆ ಮುಖಾಲಕ ಪ್ರತಿಭಟನೆ ಸೂಚಿಸಿದರು. ರಾಜಾರಾಮಮೋಹನರಾಯರು ಕ್ರಿ. ಶ. 1829, ಡಿಸೆಂಬರ 16 ರಂದು ತಮ್ಮ ಪರವಾಗಿ, ಕಲಕತ್ತಾ ನಗರದ 800 ಮಂದಿ ಕ್ರೈಸ್ತ ಧರ್ಮಾನುಯಾಯಿಗಳು ಸಹಿ ಮಾಡಿದ ಮನವಿಯೊಂದನ್ನು ಜೊತೆಗೆ 300 ನಾಗರಿಕರು ಸಹಿ ಮಾಡಿದ ಮತ್ತೊಂದು ಮನವಿಯನ್ನು ಸರ್ಕಾರಕ್ಕೆ ಒಪ್ಪಿಸಿದರು. ಹಾಗೂ ಸಹಗಮನ ನಿಷೇಧ ಶಾಸನ ಪ್ರಶಂಸನೀಯ ವಾಗಿದೆ ಎಂದೂ ಇದಕ್ಕಾಗಿ ಹಿಂದೂ ಮತದವರ ಪರವಾಗಿ ತಮ್ಮ ಕೃತಜ್ಞತೆಯನ್ನು ಸರ್ಕಾರಕ್ಕೆ ಸಮರ್ಪಿಸುವುದಾಗಿಯೂ ಮನವಿಯಲ್ಲಿ ಬರೆದಿದ್ದರು. ಮತ್ತು ತಮ್ಮ 'ಕೌಮುದಿ' ಪತ್ರಿಕೆಯಲ್ಲಿ ಸರ್ಕಾರದ ಕ್ರಮವನ್ನು ಶ್ಲಾಘಿಸಿದರು.[122]

ಲಾರ್ಡ ವಿಲಿಯಂ ಬೆಂಟಿಂಕನು ಎರಡೂ ಪಕ್ಷದವರ ಮನವಿಯನ್ನು ಪರಿಷ್ಕರಿಸಿದನು. ಆದರೆ ಸತಿ ನಿಷೇಧ ಆಜ್ಞೆಯಲ್ಲಿ ಯಾವ ಬದಲಾವಣೆಯನ್ನು ಮಾಡಲಿಲ್ಲ. ವಿರೋಧ ಪಕ್ಷದವರು ರಾಜಾರಾಮ ಮೋಹನರಾಯರ 'ಬ್ರಹ್ಮ ಸಮಾಜ'ಕ್ಕೆ ಪ್ರತಿಯಾಗಿ ಎನ್ನುವಂತೆ 'ಧರ್ಮಸಭಾ' ಎಂಬ ಹೆಸರಿನ ಸಂಘವನ್ನು ಸ್ಥಾಪಿಸಿಕೊಂಡರು. ಆ ಮೂಲಕ ಬ್ರಿಟಿಷ ಪಾರ್ಲಿಮೆಂಟಿಗೆ ಮನವಿಯನ್ನು ಅರ್ಪಿಸಿದರು. ಭಾರತದಲ್ಲಿಯ ಸಹಗಮನದ ವಿಷಯ ಇಂಗ್ಲೆಂಡದ Privy Council ದ ಮುಂದೆ ಕ್ರಿ. ಶ. 1832, ಜುಲೈ 11 ರಂದು ಬಂದಿತು. ಅಂದು 'ಸತಿಪದ್ಧತಿ' ನಿಷೇಧ'ದ ಪರವಾಗಿಯೇ Privy Council ತೀರ್ಪಿತ್ತಿತು.[123]

1829 ರ ನಂತರದ ಭಾರತದಲ್ಲಿ ಒಮ್ಮೆಲೇ ಸತಿಪದ್ಧತಿ ಇಲ್ಲದಂತಾಯಿತು ಎಂದು ತಿಳಿಯುವುದು ತಪ್ಪಾಗುತ್ತದೆ. 1829 ರ ನಂತರದಲ್ಲಿಯೂ ಹಲವು ಸತಿ ಘಟನೆಗಳು ಭಾರತದಲ್ಲಿ ನಡೆದವು. ಕ್ರಿ. ಶ. 1830 ರಲ್ಲಿ ಪಾಟ್ನಾ, ಗಯಾಗಳಲ್ಲಿ, ಕ್ರಿ. ಶ. 1860 ರಲ್ಲಿ ಗ್ವಾಲಿಯರ ನಲ್ಲಿ ಕ್ರಿ. ಶ. 1826 ರಲ್ಲಿ ರೇವಾದಲ್ಲಿ ಕ್ರಿ. ಶ. 1864 ಮತ್ತು ಕ್ರಿ. ಶ. 1883 ರಲ್ಲಿ ಉದಯಪುರದಲ್ಲಿ, ಕ್ರಿ. ಶ. 1876 ರಲ್ಲಿ ದಕ್ಷಿಣ ಭಾರತದ ತಿನ್ನವೆಲ್ಲಿಯಲ್ಲಿ ಕ್ರಿ. ಶ. 1911 ರಲ್ಲಿ ಕಲ್ಕತ್ತಾದಲ್ಲಿ ಸತಿಘಟನೆಗಳು ಆಚರಿಸಲ್ಪಟ್ಟವು.[124] ಇವುಗಳಲ್ಲಿ ಹೆಚ್ಚು ಘಟನೆಗಳು ರಾಜಮನೆತನಗಳಿಗೇ ಸಂಬಂಧಿಸಿವೆ. ಮತ್ತು ಈ ಘಟನೆಗಳು ನಡೆದದ್ದು ಹೆಚ್ಚು ರಹಸ್ಯ ರೀತಿಯಲ್ಲಿಯೇ ಎಂದು ಹೇಳಬೇಕು. ತಿನ್ನವೆಲ್ಲಿ ಮತ್ತು ಕಲ್ಕತ್ತಾ ಸತಿ ಘಟನೆಗಳಂತೂ ಮನೆಯಲ್ಲಿಯೇ ನಡೆದವುಗಳಾಗಿವೆ. ಗ್ವಾಲಿಯರ ಸತಿ ಆಚರಣೆ ವಿಧವೆಯ ಮನಸ್ಸಿನ ವಿರುದ್ಧ ನಡೆದಂಥದ್ದಾಗಿದೆ. ರೇವಾದ ರಾಜಾರ ಸತ್ತಾಗ, ಸತಿ ಆಚರಿಸಲಿಕ್ಕೆ ಕಾರಣರಾದ ವ್ಯಕ್ತಿಗಳನ್ನು ಬ್ರಿಟಿಷ ಸರ್ಕಾರ ಶಿಕ್ಷೆಯನ್ನು ನೀಡಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಮಧ್ಯಯುಗೀನ ಭಾರತದಲ್ಲಿ ಸತಿಪದ್ಧತಿಯನ್ನು ಅತ್ಯಂತ ಉನ್ನತ ಮಟ್ಟದಲ್ಲಿ ಆಚರಿಸಿದ ರಜಪೂತರಲ್ಲಿ ಕ್ರಿ. ಶ. 1829 ರ ನಂತರವೂ ಹಲವು ಸತಿಘಟನೆಗಳು ಜರುಗಿದವುವೆಂದು ಹೇಳಬಹುದಾಗಿದೆ. ಉದಯಪುರದ ಮಹಾರಾಜ ಜೀವನಸಿಂಗ್ ಕ್ರಿ.ಶ. 1838 ರಲ್ಲಿ ಮೃತನಾದಾಗ, ಮತ್ತು ಜೋಧಪುರದ ಮಹಾರಾಜ ಮಾನಸಿಂಗ್ ಕ್ರಿ. ಶ. 1843 ರಲ್ಲಿ ಮೃತನಾದಾಗ ಅನೇಕ ಸ್ತ್ರೀಯರು ಚಿತೆ ಏರುತ್ತಾರೆ.[125] ಆದರೆ ಕ್ರಿ. ಶ. 1861 ರಲ್ಲಿ ಮಹಾರಾಣಾ ಸರೂಪಸಿಂಗ್ ಸತ್ತಾಗ ಅವನೊಡನೆ ಅವರ ಪತ್ನಿಯರಾರೂ ಚಿತೆ ಏರಲು ಸಿದ್ಧರಾಗದೇ ಇದ್ದಾಗ, ದಾಸಿಯೊಬ್ಬಳನ್ನು ಅವನೊಡನೆ ಸುಡಲಾಯಿತು.[126] ಅಂದರೆ ಕ್ರಿ. ಶ. 1861 ರಲ್ಲಿ ರಜಪೂತರಲ್ಲಿಯೂ ತಮ್ಮಿಷ್ಟಕ್ಕೆ ತಾವೇ ಈ ಪದ್ಧತಿಯನ್ನು ತಿರಸ್ಕರಿಸುವುದನ್ನು ಕಾಣುತ್ತೇವೆ.

ಬ್ರಿಟಿಷ ಸರ್ಕಾರವು ಡಾಲಹೌಸಿಕಾಲಕ್ಕೆ (ಕ್ರಿ.ಶ. 1848– 56) ದೇಶಿಯ ಸಂಸ್ಥಾನಗಳಲ್ಲಿ ಸತಿಪದ್ಧತಿಯನ್ನು ತಡೆಗಟ್ಟಲು ಹೆಚ್ಚು ಪ್ರಯತ್ನಿಸಿತು.[127] ಕ್ರಿ. ಶ. 1835 ರಲ್ಲಿ ಅಹಮದ್ ನಗರದ ರಾಜನು ಮೃತನಾಗಲು ಅವನ ಪತ್ನಿಯರನ್ನು ಬ್ರಿಟಿಷ ಏಜಂಟ್ ಎರಸ್ಕಿನ್ ( Erskine ) ಎನ್ನುವವನು ಸತಿಯಾಗದಂತೆ ತಡೆಯಲಾಗಿ ಹೋರಾಟವೇ ಪ್ರಾರಂಭವಾಯಿತು. ರಾತ್ರಿಯ ಎರಡು ಗಂಟೆಯ ಸುಮಾರಿಗೆ ಕೋಟೆಯಲ್ಲಿ ಸ್ತ್ರೀಯರ ಕಿರುಚಾಟ ಕೇಳಿ ಬಂದಿತು. ರಾಣಿಯರನ್ನು ಎಳೆದು ಬೆಂಕಿಗೆ ಒಗೆದಿದ್ದರು. ಮರುದಿನ ರಾಜಕುಮಾರರು Erskine ಗೆ ಶರಣಾದರು. ಮತ್ತು ಅಹಮದನಗರದವರು ಸತಿಪದ್ಧತಿಯನ್ನು ನಿಷೇಧಿಸಿದರು. ಅಲ್ಲದೇ ಜುನಾಘಡ, ಕಾಠೇವಾಡ್, ಉದಯಪುರ, ರಾಜಪಿಪ್ಲ, ಡಿಯೋಧರ್ ಮೊದಲಾದ ಸಂಸ್ಥಾನಗಳಿಗೆ ಸತಿಪದ್ಧತಿಯನ್ನು ನಿಷೇಧಿಸುವಂತೆ ಬ್ರಿಟಿಷ ಸರ್ಕಾರ ಒತ್ತಾಯಿಸಿತು. ಸು.ಕ್ರಿ. ಶ. 1847–48 ರಲ್ಲಿ ಪಂಜಾಬಿನ ಪಾಟಿಯಾಲ, ಭಿಲಾಸಪುರ, ಫರೀದಕೋಟ, ಮೊದಲಾದವುಗಳ ರಾಜರು ಸತಿಪದ್ಧತಿಯ ನಿಷೇಧಕ್ಕೆ ಒಪ್ಪಿಗೆ ಸೂಚಿಸಿದರು.

ಸ್ವತಂತ್ರ ಭಾರತದಲ್ಲಿ ಸತಿಘಟನೆಗಳು ಆಗಾಗ ನಡೆದ ವರದಿಗಳು ಬರುತ್ತಲೇ ಇವೆ. ಕ್ರಿ. ಶ. 1978, ಜನೇವರಿ, 12 ರಂದು, ರಾಜಸ್ಥಾನದ ಸಿರಪ್ಪತ್ ಜಿಲ್ಲೆಯ ಹಾಥಿದೆಹ ಹಳ್ಳಿಯಲ್ಲಿ, 55 ವರ್ಷದ ಸರಸ್ವತಿದೇವಿ ತನ್ನ ಗಂಡ ಕ್ಷೀರಾಲಾಲ ಮೃತನಾಗಲು, ವಧುವಿನಂತೆ ಸಿಂಗರಿಸಿಕೊಂಡು, ಚಿತೆಯ ಮೇಲೆ ಗಂಡನ ತಲೆಯನ್ನು ತೊಡೆಯ ಮೇಲೆ

ಇಟ್ಟುಕೊಂಡು ನೂರಾರು ಜನರ ಎದುರಿನಲ್ಲಿಯೇ ಸುಟ್ಟುಕೊಂಡು ಭಸ್ಮವಾದಳು.[128] ಕ್ರಿ.ಶ.1980 ಫೆಬ್ರವರಿ 29 ರಂದು ರಾಜಸ್ಥಾನದ ನಾಗಪುರ ಜಿಲ್ಲೆಯ ನಿಮ್ಡ ( Nimdh ) ಹಳ್ಳಿಯಲ್ಲಿ, 62 ವರ್ಷದ ಸುಗಾನ ಕನ್ವಾರ ( Sugan Kanwar ) ಗಂಡ ಸುಜನ್‌ಸಿಂಗ್ ಮೃತನಾಗಲು ಹಳ್ಳಿಗರ ಎದುರಿನಲ್ಲಿಯೇ ಸತಿಹೋದಳು.[129] ಮಧ್ಯಪ್ರದೇಶದ ರಾಯಪುರ ಜಿಲ್ಲೆಯ ಖೇಡಾ ( Kheda ) ಎಂಬ ಹಳ್ಳಿಯಲ್ಲಿ, ಆಗಸ್ಟ 29 ರಂದು, 50 ವರ್ಷದ ಕಛರಿಬಾಯಿ ಬೈರಗಿ ( Kacheribai Bairagi ) ಯು ಗಂಡ ಸಾವನ್ನಪ್ಪಲು ಸತಿಯಾಗಲು ನಿರ್ಧರಿಸಿದಳು. ಅದನ್ನು ತಡೆಯಲು ಮನೆಯವರು ಕೋಣೆಯಲ್ಲಿ ಆಕೆಯನ್ನು ಕೂಡಿಟ್ಟರು. ಆದರೆ ಗಂಡನನ್ನು ಸುಡುವ ಸಮಯಕ್ಕೆ ಆಕೆ ತಪ್ಪಿಸಿಕೊಂಡು ಬಂದು, 300 ಜನ ಹಳ್ಳಿಗರ ಎದುರಿನಲ್ಲಿಯೇ ಚಿತೆಯಲ್ಲಿ ಜಿಗಿದು ಸತಿಹೋದಳು.[130] ಕ್ರಿ.ಶ. 1980, ಆಗಸ್ಟ 30 ರಂದು ರಾಜಸ್ಥಾನದ ಜದ್ಲಿ ( Jahdli ) ಎಂಬ ಹಳ್ಳಿಯಲ್ಲಿ 16 ವರ್ಷದ ಓಂ ಕನ್ವಾರಳು ( Om Kanwar ) ಗಂಡ ಮೃತನಾಗಲು ಚಿತೆಯ ಮೇಲೆ ಗಂಡನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು 'ಹರಿ ಓಂ' ಎಂದು ಹೇಳಲು ಪ್ರಾರಂಭಿಸಿದಳು. ಜನರು ಬೆಂಕಿ ಇಟ್ಟು, 'ಸತಿ ಮಾತಾಕಿ ಜೈ' ಎಂದು ಹೇಳಲು ಪ್ರಾರಂಭಿಸಿದರು. ಓಂ ಕನ್ವಾರ್ ಸತಿಯಾದಳು.[131] ಈ ರೀತಿಯಾಗಿ ಕೆಲವು ಸತಿಘಟನೆಗಳು ಆಗಾಗ ಇನ್ನು ಬೆಳಕಿಗೆ ಬರುತ್ತಲೇ ಇವೆ. ರಾಜಸ್ಥಾನ ಸರ್ಕಾರವು, ಸರಸ್ವತಿ, ಸುಗಾನ್ ಕನ್ವಾರ್, ಮತ್ತು ಓಂ ಕನ್ವಾರ್ — ಸತಿ ಘಟನೆಗಳ ಕುರಿತಾಗಿ ಕಾನೂನಿನ ಕ್ರಮತೆಗೆದುಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು.

ಭಾರತದಲ್ಲಿ ಸತಿಘಟನೆಗಳು ನಡೆಯುದಂತೆ ಪೊಲೀಸರು ಕ್ರಮಕೈಕೊಂಡ ಬಗ್ಗೆ ಅಲ್ಲಲ್ಲಿ ಆಗಾಗ ವರದಿಗಳಾಗುತ್ತಲೇ ಇವೆ. ಮಧ್ಯಪ್ರದೇಶದ ರಾಯಗರ ಜಿಲ್ಲೆಯ ಬಲಸಾಪುರದಲ್ಲಿ ಸತಿಹೋಗುತ್ತಿದ್ದ ಮಾಯಾದೇವಿಯನ್ನು, ಉತ್ತರ ಪ್ರದೇಶದ ಮೈನಪುರಿ ಜಿಲ್ಲೆಯ ಮುರಾನ್ ಹಳ್ಳಿಯಲ್ಲಿ ಸತಿಯಾಗುತ್ತಿದ್ದ ಒಬ್ಬ ವಿಧವೆಯನ್ನು ಪೊಲೀಸರು ಸತಿಯಾಗದಂತೆ ತಡೆಹಿಡಿದಿದ್ದಾರೆ.[132] ಕ್ರಿ.ಶ.1980 ರಲ್ಲಿ, ಉತ್ತರ ಪ್ರದೇಶದ ಸೀಲಹ್ ಪೆಲಿಸ್ವಾನ್ ( seel padsom ) ದಲ್ಲಿ ಸತಿಹೋಗುತ್ತಿದ್ದ ಹರಿದೇವಿಯನ್ನು ತಡೆದು, ಪೊಲೀಸರು ಜಾಮೀನು ಮೇಲೆ ಬಿಡಲಾಗಿ, ಮತ್ತೆ ಅವಳು ಸತಿಹೋದ ಬಗ್ಗೆ ತಿಳಿದು ಬರುತ್ತದೆ.[133] ಹೀಗೆ ಸತಿಯಾಗಲಿಕ್ಕೆ ಸ್ವತಂತ್ರ ಭಾರತದಲ್ಲಿ ಅವಕಾಶವಿಲ್ಲವೆಂದು ಹಲವರು ಗಂಡನ ಮರಣದ ನಂತರ ತಮ್ಮನ್ನು ತಾವು ಕೊಂದುಕೊಂಡ ಬಗ್ಗೆ ಉದಾಹರಣೆಗಳಿವೆ. 7 — 4 — 1980 ರಲ್ಲಿ ಮಹಾರಾಷ್ಟ್ರದ 'ಅಂಕೋಲಾ' ದಲ್ಲಿ 'ಆತ್ಮಹತ್ಯೆ' ಎಂದು ಹೇಳಲಾದ 'ಮಂಗಳಾದೇವಿ ಲದ್ದಾ

ಇವಳ ಮರಣವನ್ನು ಇಲ್ಲಿ ಉಲ್ಲೇಖಿಸಬಹುದು.[134]

ಭಾರತದ ರಾಜಧಾನಿ 'ಹೊಸದಿಲ್ಲಿ' ಯಲ್ಲಿ ಕ್ರಿ.ಶ-1980, ಡಿಸೆಂಬರ 1 ರಂದು, ಸು 650 ವರ್ಷಗಳ ಹಿಂದೆ ಸತಿಹೋದ ರಾಣಿ ಸತಿದೇವಿಯ( ನಾರಾಯಣಬಾಯಿ ) ಭಕ್ತರು ಮೆರವಣಿಗೆಯೊಂದನ್ನು ಹೊರಡಿಸಿದ್ದರು. 'ರಾಣಿ ಸತಿ ಸರ್ವ ಸಂಘ' ಮೆರವಣಿಗೆಯನ್ನು ಏರ್ಪಡಿಸಿತ್ತು. ರಾಣಿ ಸತಿದೇವಿಗೆ ಗೌರವ ಸಲ್ಲಿಸುವದು ಮತ್ತು ಅವಳಿಗಾಗಿ ರಾಜಸ್ಥಾನದ ಜುಂಜುನು ( Jhunjhunu ) ದಲ್ಲಿ ಗುಡಿಯನ್ನು ಕಟ್ಟಿಸುವುದು ತಮ್ಮ ಮೆರವಣಿಗೆಯ ಉದ್ದೇಶ ಎಂದು ಸಂಘದ ಪದಾಧಿಕಾರಿಗಳಾದ ನಟವರಲಾಲ ಗೋಯೆಂಕಾ ( Natawarlal Goenka ) ಆಗ ಸ್ಪಷ್ಟಪಡಿಸಿದ್ದರು.[135] ಲೋಕ ಸಭೆಯಲ್ಲಿ ಈ ಕುರಿತು ನಿಲುವಳಿ ಸೂಚನೆ 'ಯನ್ನು ದಿನಾಂಕ 3 — ಡಿಸೆಂಬರ — 1980 ರಂದು ಮಂಡಿಸಲಾಗಿ, ಅಮಾನುಷವಾದ ಸತಿಪದ್ಧತಿಯನ್ನು ಪುನರುಜ್ಜೀವಿಸುವ ಯತ್ನಗಳನ್ನು ಲೋಕಸಭೆಯ ಎಲ್ಲ ಸದಸ್ಯರೂ ಒಕ್ಕೊರಲಿನಿಂದ ಖಂಡಿಸಿದ್ದರು. ಅಂದಿನ ಭಾರತದ ಪ್ರಧಾನಿ ಶ್ರೀಮತಿ 'ಇಂದಿರಾಗಾಂಧಿ' ಅವರು ದೃಢ ನಿಶ್ಚಯದ ವಾಣಿಯಲ್ಲಿ ಹೀಗೆ ಹೇಳಿದ್ದರು.

''ಈ ಪದ್ಧತಿ ಅನುಸರಿಸುವವರ ವಿರುದ್ಧ ತಾವು ಕ್ರಮಕೈಕೊಳ್ಳಲು ಹಿಂದೆ ಮುಂದೆ ನೋಡುವುದಿಲ್ಲ. ಒಂದು ದುರಂತ ಚಿತ್ರಣವನ್ನು ಸಾರುವ ಒಂದು ಕೆಟ್ಟ ದೇವಾಲಯ ಕಟ್ಟಿಕೊಳ್ಳುವುದಕ್ಕೆ ಅನುಮತಿ ನೀಡಲಾರೆ''.[136]

ಈ ರೀತಿಯಾಗಿ, ಸತಿ ಘಟನೆಗಳು ವೈಜ್ಞಾನಿಕ ಬದುಕನ್ನು ಮೈಗೂಡಿಸಿಕೊಳ್ಳುತ್ತಿರುವ ಆಧುನಿಕ ಭಾರತದಲ್ಲಿ ಅತೀ ವಿರಳವಾಗಿ ಘಟಿಸುತ್ತಿದ್ದರೂ ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯು ನಾಯಕರ ಗಮನ ಸೆಳೆಯುತ್ತಿದ್ದರೂ ಅದೊಂದು ಪದ್ಧತಿಯಾಗಿ ಆಚರಣೆಯಲ್ಲಿ ಇಲ್ಲವೆಂದು ಹೇಳಬಹುದಾಗಿದೆ. ಇಂದು, ಭಾರತದಲ್ಲಿ — ಬಹುತೇಕ ವಿಶ್ವದ ಎಲ್ಲ ಭಾಗಗಳಲ್ಲಿ— ಸತಿಪದ್ಧತಿ ಇತಿಹಾಸದ ನೆನಹು ಮಾತ್ರವಾಗಿ ಉಳಿದುಕೊಂಡಿದೆ. ಹೀಗಿದ್ದಾಗ್ಯೂ ಸತಿ ಆಚರಣೆ ಸಂಪೂರ್ಣವಾಗಿ ಮರೆಯಾಗಿ ಹೋಗಿದೆ ಎಂದು ಹೇಳುವದು ತಪ್ಪಾಗುತ್ತದೆ. ಇದೇ ವರ್ಷ, 1987 ರ ಸಪ್ಟಂಬರ 4 ರಂದು ರಾಜಸ್ಥಾನದ ದೇವರಾಲದಲ್ಲಿ ರೂಪ ಕನ್ವರ್ ಸತಿಹೋದುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

## ಅಡಿ ಟಿಪ್ಪಣಿಗಳು:

1. 'ದಿ ಆಕ್ಸ್‌ಫರ್ಡ್ ಹಿಸ್ಟ್ರಿ ಆಫ ಇಂಡಿಯಾ' : ವಿನ್ಸೆಂಟ್ ಸ್ಮಿತ್, ಪು. 304
2. ಅದೇ.
3. ಮ್ಯಾನರ್ಸ್ ಆ್ಯಂಡ್ ಕಸ್ಟಮ್ಸ್ ಆಪ ಪೀಪಲ್ ಆಪ ಇಂಡಿಯಾ : ದುಬೈ, ಪು.174
4. ಸತಿ: ಎಡ್ವರ್ಡ್ ಥಾಮಸ್ಸನ್, ( ಅಧ್ಯಾಯ – 1, ಓರಿಜಿನ್ ಆಫ್ ಸತಿ )
5. 'ದಿ ಇಲ್ಯುಸ್ಟ್ರೇಟೆಡ್ ವೀಕ್ಲಿ ಆಫ ಇಂಡಿಯಾ', ಜನೇವರಿ 18 – 24, 1981
   ''ದಿ ಓರಿಜನ್ ಆಫ ಸತಿ'' ಇಕ್ಬಾಲ್ ಕೌಲ, ಪು: 28.
6. 'ಮಿರರ್, ಜನೇವರಿ, 1981, 'ದಿ ರಿಟರ್ನ್ ಆಫ್ ಸತಿ : ಎ.ಆರ್.ಶರೀಫ.ಪು: 24
7. ನ್ಯೂ ಲೈಟ್ ಆನ್ ದಿ ಮೋಸ್ಟ ಎನ್ಸಿಯೆಂಟ್ ಈಸ್ಟ : ಗೋರ್ಡಾನ್ ಚಾಯ್ಲ್ಡ್,
   ಪು. 152.
8. 'ಮಿರರ್', ಜನೇವರಿ 1981, 'ದಿ ರಿಟರ್ನ್ ಆಫ ಸತಿ : ಎ.ಆರ್ ಶರೀಫ.
   ಪು.24.
9. ನ್ಯೂ ಲೈಟ್ ಆನ್ ದಿ ಮೋಸ್ಟ ಎನ್ಸಿಯೆಂಟ್ ಈಸ್ಟ : ಗೋರ್ಡಾನ್ ಚಾಯ್ಲ್ಡ್
   ಪು.83
10. ಅದೇ. ಪು. 149.
11. ಹಿಸ್ಟ್ರಿ ಆಫ್ ಸಟ್ಟೆಡ್ ಇನ್ ಇಂಡಿಯಾ : ಉಪೇಂದ್ರ ಠಾಕೂರ, ಅಧ್ಯಾಯ – 4
12. 'ಮಿರರ್' ಜನೇವರಿ 1981, 'ದಿ ರಿಟರ್ನ್ ಆಫ ಸತಿ : ಎ. ಆರ್. ಶರೀಫ.ಪು :24
13. ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಿಲೈಜೇಶನ್: ಡಾ: ಎ.ಎಸ್. ಅಳ್ತೇಕರ
    ಪು.118.
14. ಅದೇ.
15. ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ.ಎಸ್.ಅಳ್ತೇಕರ
    ಪು.116.
16. ಎನಸೈಕ್ಲೋಪಿಡಿಯಾ ಆಫ ರಿಲಿಜನ್ ಆ್ಯಂಡ್ ಎಥಿಕ್ಸ –XII ಪುಟ.27
17. ಉಲ್ಲೇಖ : ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ: ಬಸವರಾಜ ಕಲ್ಗುಡಿ
    ಪು.7.

18. ಸತಿ: ಎಡ್ವರ್ಡ್ ಥಾಮ್ಸನ್, ( ಅಧ್ಯಾಯ — 1, ಒರಿಜನ್ ಆಫ ಸತಿ )

19. ' ದಿ ಸಂಡೆ ಸ್ಟ್ಯಾಂಡರ್ಡ, 20–8–1978. ಸತಿ ವಾಜ್ ಪ್ರಿವೆಲೆಂಟ್ ಆಲ್ ಓವರ್ ದಿ ವರ್ಲ್ಡ — ಇಕ್ಬಾಲ್ ಕೌಲ.

20. ಎನಸೈಕ್ಲೋಪಿಡಿಯಾ ಆಫ್ ರಿಲಿಜನ್ ಆ್ಯಂಡ್ ಎಥಿಕ್ಸ, ' ಸತಿ '

21. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ. ಪು. 6

22. ಋಗ್ವೇದ, ಮಂ. 10, ಸೂ. 18, ಋ 7 ಮತ್ತು 8.

23. ಋಗ್ವೇದ ಸಂಹಿತಾ: ( ಸಂ ) ಎಚ್. ಪಿ. ವೆಂಕಟರಾವ್, ಭಾಗ 27, ಪು. 609, ' ಸಾಯಣಭಾಷ್ಯ ''.

24. ಹಿಸ್ಟ್ರಿ ಆಫ ಧರ್ಮಶಾಸ್ತ್ರ, 11 — 1 : ಪಿ. ವಿ. ಕಾಣೆ. ಪು. 618

25. ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ. ಎಸ್. ಅಳ್ತೇಕರ ಪು. 117.

26. ಸತಿ ( ವಿಡೋ ಬರ್ನಿಂಗ್ ಇನ್ ಇಂಡಿಯಾ) : ವಿ. ಎನ್. ದತ್ತ, ಪು. 2–3.

27. ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ. ಎಸ್. ಅಳ್ತೇಕರ ಪು. 117

28. ದಿ ಇಲಸ್ಟ್ರೇಟೆಡ್ ವೀಕ್ಲಿ ಆಫ ಇಂಡಿಯಾ, ಜನೇವರಿ, 18–24, 1981, '' ದಿ ಒರಿಜನ್ ಆಫ ಸತಿ : ಇಕ್ಬಾಲ್ ಕೌಲ, ಪು — 27.

29. ಋಗ್ವೇದ ಸಂಹಿತಾ: (ಸಂ) ಎಚ್. ಪಿ. ವೆಂಕಟರಾವ್, ಭಾಗ — 27, ಪು. 610

30. ಹಿಸ್ಟ್ರಿ ಆಫ ಧರ್ಮಶಾಸ್ತ್ರ — 11 — 1, : ಪಿ. ವಿ. ಕಾಣೆ. ಪು. 619.

31. ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ. ಎಸ್. ಅಳ್ತೇಕರ ಪು. 118.

32. ಅದೇ. ಪು. 119

33. ಅದೇ

34. ಅದೇ

35. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ: ಎಂ. ಚಿದಾನಂದಮೂರ್ತಿ ಪು. 314.

36· ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ · ಪು ·21

37· ಅರ್ಥಶಾಸ್ತ್ರ : ಪು ·246, 254 — 255

38· ಮಹಾಭಾರತ XVI 7·18

39· ಅದೇ · 7· 73 — 4·

40· ಅದೇ 1· 138· 31 — 2

41· ದಿ ·ಪೊಜಿಶನ್ ಆಫ್ ವುಮೆನ್ ಇನ್ ಹಿಂದು ಸಿವಿಲೈಜೇಶನ್: ಡಾ: ಎ·ಎಸ್·ಅಲ್ತೇಕರ·
ಪು· 121·

42· ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ ·ಪು ·25

43· ಅದೇ ಪು·17

44· ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಡಾ: ಎಂ ·ಚಿದಾನಂದಮೂರ್ತಿ
ಪು·314·

45· ಪ್ರ ·ಕಂ· ಇಂ· — ಸ — 1 : (ಸಂ) ಎಚ್·ಎಲ್·ನಾಗೇಗೌಡ · ಪು ·75—76 —77·

46· ಹಿಸ್ಟ್ರಿ ಆಫ ಧರ್ಮಶಾಸ್ತ್ರ — 11 — 1 : ಪಿ·ವಿ·ಕಾಣೆ· ಪು·626 :
ದಿ ಪೊಜಿಶನ್ ಆಫ ವುಮೇನ್ ಇನ್ ಹಿಂದು ಸಿವಿಲೈಜೇಶನ್: ಡಾ: ಎ·ಎಸ್· ಅಲ್ತೇಕರ
ಪು· 119·

47· ಮನುಸ್ಮೃತಿ, IX , ಪು 413, 431, 437, 441·

48· ಅದೇ· ಪು· 406·

49· ದಿ ಪೊಜಿಶನ್ ಆಫ ವುಮೇನ್ ಇನ್ ಹಿಂದು ಸಿವಿಲೈಜೇಶನ್: ಡಾ: ಎ·ಎಸ್· ಅಲ್ತೇಕರ್
ಪು· 122—123·

50· ದಿ ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ, ಜನೇವರಿ, 18—24, 1981,
ದಿ ಓರಿಜನ್ ಆಫ ಸತಿ: ಇಕ್ಬಾಲ್ ಕೌಲ· ಪು· 28·

51· ಅದೇ ಪು· 28·

52· ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ: ಬಸವರಾಜ ಕಲ್ಗುಡಿ· ಪು ·29

53· ಪದ್ಮ ಪುರಾಣ, ಸೃಷ್ಟಿಖಂಡ, 49, 72 – 3·

54· ಅದೇ, ಪಾಟಲಖಂಡ· 102, 67

55· ವಿವರಕ್ಕಾಗಿ ನೋಡಿ : ( ಕೃಷ್ಣನ ಪತ್ನಿಯರು, ರೇವತಿ, ರುಕ್ಮಿಣಿ, ಮತ್ತು ಯಾದವರ ಸ್ತ್ರೀಯರು ಸಹಗಮನ ಮಾಡಿಕೊಳ್ಳುವ ವಿವರ: ) ಪದ್ಮ ಪುರಾಣ – ಉತ್ತರಖಂಡ, ಎರಡನೆಯಭಾಗ· ಅ·279 (ಸಂ) ಜಕ್ಕಲದ ಕೆರೆ ಸೂರ್ಯನಾರಾಯಣಶಾಸ್ತ್ರಿ·

56· ದಿ·ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ·ಎಸ್· ಅಳ್ತೇಕರ್, ಪು·122

57 ಹಿಸ್ಟ್ರಿ ಆಫ್ ಧರ್ಮಶಾಸ್ತ್ರ : ಪಿ·ವಿ· ಕಾಣೆ· ಪು· 628

58· ಮೃಚ್ಛಕಟಿಕ· X , ಪು· 398 – 400

59· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್ ಡಾ: ಎ·ಎಸ್·ಅಳ್ತೇಕರ ಪು·123·

60 ಭಾಸ – ಎ ಸ್ಟಡಿ : ಎ· ಡಿ·ಪುಸಾಲ್ಕರ, ಪು· 383·

61· ಕುಮಾರಸಂಭವ ಆಫ ಕಾಳಿದಾಸ : ಆರ್· ಡಿ·ಕರಮಕರ· ಚತುರ್ಥ ಸರ್ಗ – 10 ,20, 21, 32, 33, 34, 35, 36,

62· ದಿ ಇಲುಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ, ಜನೇವರಿ, 18 – 21· 'ದಿ ಓರಿಜನ್ ಆಫ ಸತಿ' : ಇಕ್ಬಾಲ್ ಕೌಲ· ಪು·28·

63· ಅದೇ·

64· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ·ಎಸ್·ಅಳ್ತೇಕರ್ ಪು· 123·

65 ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ· ಪು, 26

66· ಕಾದಂಬರಿ, ಪೂರ್ವಾರ್ಧ· ಪು· 308·

67· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ·ಎಸ್·ಅಳ್ತೇಕರ್· ಪು· 125·

68· ಅದೇ· ಪು· 124·

69. ಅದೇ

70. ಅದೇ.

71. ಅದೇ. ಪು.126.

72. ಅದೇ.

73. ''ದಾಮೋದರ ಗುಪ್ತ ( ಕ್ರಿ. ಶ.8 ) ಸೆನ್ನುವವನು ಬರೆದ ಕುಟ್ಟಾಣಿಮತನಿ (?) ಎನ್ನುವ ಗ್ರಂಥವೊಂದರಲ್ಲಿ ಭಾಸ್ಕರನೆಂಬ ರಾಜ ಸತ್ತಾಗ ಅವನ ವೇಶ್ಯೆಯರು ಸಹಗಮನ ಮಾಡಿದರೆಂಬ ಉಲ್ಲೇಖವಿದೆ. 'ಯೋಗಿನಿತಂತ್ರ' ವೆಂಬ ಗ್ರಂಥದಲ್ಲಿ ಬ್ರಾಹ್ಮಣ ವಿಧವೆಯರು ಸಹಗಮನ ಮಾಡಬಹುದೆಂದಿದೆ'' — ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ: ಬಸವರಾಜ ಕಲ್ಗುಡಿ. ಪು.33.

74. ದಿ.ಪೋಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ.ಎಸ್. ಅಲ್ಟೇಕರ್ ಪು.130

75. ಅದೇ. ಪು. 126.

76. ಅದೇ. ಪು. 126 — 127

77. ಅದೇ

78. ಅದೇ.

79. ಅದೇ

80. ಕಥಾಮೃತ ( ಕಥಾಸರಿತ್ಸಾಗರದ ಸಾರ ಸಂಗ್ರಹ ) : ಎ.ಆರ್.ಕೃಷ್ಣಶಾಸ್ತ್ರಿ. ಪು. 67,124, 228, 307, 237. ಇತ್ಯಾದಿ.

81. ಅದೇ ಪು. 417. 87

82. ಹಿಸ್ಟ್ರಿ ಆಫ ಧರ್ಮಶಾಸ್ತ್ರ : ಪಿ.ವಿ. ಕಾಣೆ. ಪು. 627

83. ಇ.ಸಿ. VIII — 523. ಕವಡೀಗ್ರಾಮ, ಸೊರಬ. ಕ್ರಿ. ಶ. 6ನೇಯ ಶತಮಾನ.

84. ದಿ.ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜಶನ್ : ಡಾ: ಎ. ಎಸ್.ಅಲ್ಟೇಕರ್ ಪು. 128

85. ಅದೇ.

86· ಅದೇ· ಪು· 130

87· ಅದೇ·

88· ಇ· ಅಂಬರ್· X , ಪು·39

89· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ·ಎಸ್· ಅತ್ತೇಕರ್
ಪು·131·

90· ಪ್ರ·ಕಂ· ಇಂ· — ಸಂ — 2: ( ಸಂ ) ಎಚ್·ಎಲ್· ನಾಗೇಗೌಡ ,ಮಾಕೆರ್ಪೋಲೋ,
ಪು·27, ಫ್ರೈಯರ ಒಡೋರಿಕ್, ಪು 55: ಸರಜಾನ್ ಮಾಂಡವಿಲ್ಲೆ, ಪು·64,
ಇಬ್ ನೆ ಬತುತಾ, ಪು· 75, 76 : ನಿಕೋಲೋ ದೆ ಕೊಂತಿ, ಪು· 125,126,
137,138, ಲುಡೊವಿಕೊ ದಿ ವಾಂತೆಮಾ ಸ್ಟೆಫಾನೊ, ಪು· 190 : ದು ಆರ್ತೆ
ಬಾಬೋರ್ಸಾ, ಪು· 296, 297,298, ಪೆರ್ರಾಂಡ ನೂನಿಜ್, ಪು·415,423,
ನೈಥ್ ಆಲ ರೆಯುನ್, ಪು· 437, ಸೀಜರ ಫ್ರೆಡೆರಿಕ್, ಪು· 460 —463 : ಜಾನನ್
ಹೂಶಿಘೆನ್ ಫನಲಿನ್ ಷಾಟನ್, 492, 500, 502,506 : ಫ್ರೈ ಆರ್ ಜೊರ್ರಾಡಸನ್,
ಪು· 520 : ಸಂ — 3 — ಫಾದರ್ ಅಂತೋನೀ ಮೊನ್ಸರೆಟ್, ಪು 34 : ರಾಲ್ಫ್ ಫಿಚ್,
ಪು· 105,109,110·

91· ಮಿರರ್,ಜನೇವರಿ,1981, ' ದಿ ಸತಿ ಕ್ವೀನ್ಸ್ ' : ವಾಂಬರ್·ಎಸ್·ಪು· 26

92· ಅದೇ·

93· ಅದೇ· ' ದಿ ಲಜಂಡ್ ಆಫ್ ರಾಣಿ ಸತಿ': ವಾಂಬರ್· ಎಸ್· ಪು·28 — 29·

94· ಪ್ರ·ಕಂ· ಇಂ — ಸಂ — 4: ( ಸಂ) ಎಚ್·ಎಲ್·ನಾಗೇಗೌಡ (ಫ್ರಾನ್ಸಿಸೋ
ಪೆಲ್ಸಾರ್ಟ ) ಪು·154

95 ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ ಬಸವರಾಜ ಕಲ್ಗುಡಿ· ಪು·37

96· ಇಲುಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ — ಜನೇವರಿ 18, — 24,1981·
ದಿ ಓರಿಜನ್ ಆಫ ಸತಿ : ಇಕ್ಬಾಲ್ ಕೌಲ್, ಪು·29·

97· ಅದೇ·

98· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ·ಎಸ್·ಅತ್ತೇಕರ್
ಪು·132·

99· ಇಲುಸ್ಟ್ರೇಟೆಡ್ ವೀಕ್ಲಿ ಆಫ ಇಂಡಿಯಾ,ಜನೇವರಿ —18—24,1981,
ದಿ ಓರಿಜನ ಆಫ ಸತಿ :ಇಕ್ಬಾಲ್ ಕೌಲ್, ಪು :29·

100· ಹಿಸ್ಟ್ರಿ ಆಫ ಧರ್ಮಶಾಸ್ತ್ರ 11 — 11 : ಪಿ·ವಿ·ಕಾಣೆ· ಪು· 629

101· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್ : ಡಾ: ಎ·ಎಸ್· ಅಳ್ತೇಕರ್, ಪು·131

102· ಅದೇ ಪು· 132

103· ಪ್ರ·ಕಂ·ಇಂ· — ಸಂ — 3: (ಸಂ) ಎಚ್·ಎಲ್·ನಾಗೆಲಗ್ರಾ· ವಿಲಿಯಂ ಹಾಕಿನ್ಸ್, ಪು·156: ಸರ್ ಥಾಮಸ್ ರೋ, ಪು 230: ಎಡ್ವರ್ಡ ಟೆರ್ರಿ, ಪು 316, ಫ್ರಾನ್ಸುವಾ ಫಿರಾರ್ಡ ಲವಲ್, ಪು·403, 407, 476 : ಅದೇ, ಸಂ — 4,— ಪೀಟರ್ ಫ್ಲೋರಿಸ್, ಪು·104 : ಅಂತೋನಿಶೋರರ, ಪು·109 ವಿಲಿಯಂ ಮೆಥೊಲ್ಡ· ಪು· 130 : ಫ್ರಾನ್ಸಿಸ್ಕೊ ಪೆಲ್ಸಾರ್ಟ್, ಪು· 154: ಮಾನುಯೆಲ್ ಬರ್ರಾಡಾಸ್, ಪು· 158, 159,: ಪೀಟರ್ ಮುಂಡಿ, 296, 297, 345: ಪಿಯೆತ್ರೋ ಡೆಲ್ಲಾವೆಲ್ಲಿ, ಪು· 241—243, 246 — 249 : ಮುಂಡೆಲ್ಲ ಸ್ಲೊ, ಪು·446, 447, 448,: ಥಾಮಸ್ ಹರ್ಬರ್ಟ್, ಪು· 357 : ಅದೇ ಸಂ — 5, — ಫ್ರಾನ್ಸಾಸ್ ಬೆರಾನ್ಯೇ, ಪು· 34, 35, 218— 225 : ಬಪ್ತೀಸ್ಟ ಟಾವರನ್ಯೇ ಪು· 361, 362, 471 — 475 : ಅದೇ — ಸಂ —6 — ನಿಕೊಲಾಓ ಮನುಚಿ, ಪು·57, 179, 212, 291, 294, 295, 297 : ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, ಪು· 135 — 141·

104· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ·ಎಸ್· ಅಳ್ತೇಕರ್, ಪು· 138·

105· ಸತಿ: (ವಿಡೊ ಬರ್ನಿಂಗ್ ಇನ್ ಇಂಡಿಯಾ ) : ವಿ·ಎನ್ ದತ್ತ, ಪು· 25—26

106· ಅದೇ ಪು· 191·

107· ನವಭಾರತ ಪಿತ ರಾಜಾರಾಮ ಮೋಹನರಾಯ: ಡಬ್ಲ್ಯೂ· ಹೆಚ್ ಹನುಮಂತಪ್ಪ, ಪು·163·

108· ಯುಗಯುಗಾತ್ರಿ ಭಾರತೀಯ ಸಂಸ್ಕೃತಿ : ಪ್ರ·ಸಂ : ಕೆ·ವಿ· ಪುಟ್ಟಪ್ಪ ಪು· 481·

109· ಪ್ರ·ಕಂ· ಇಂ· — ಸಂ — 2: ಎಚ್·ಎಲ್·ನಾಗೇಗೌಡ, ಪು·436,437,

110· ಯುಗಂಯಾತ್ರೀ ಭಾರತೀಯ ಸಂಸ್ಕೃತಿ : ( ಪ್ರ·ಸಂ) ಕೆ·ವಿ·ಪುಟ್ಟಪ್ಪ·
ಪು· 481·

111· ಅದೇ ಪು· 481

112· ಅದೇ

113· ಅದೇ

114· ಅದೇ

115· ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ, ಜನೇವರಿ, 18 — 24, 1981·
'ದಿ ಓರಿಜನ್ ಆಫ ಸತಿ: ಇಕ್ಬಾಲ್ ಕೌಲ, ಪು·29

116· ಪ್ರ·ಸಂ·ಇಂ· — ಸಂ — 2: ಎಚ್·ಎಲ್· ನಾಗೇಗೌಡಾ, ( ಜಾನನ್ ಹುರ್‍ಯಾಷಿನ್
ಥನಲನ್ ಷಾಟನ್), ಪು· 492·

117· ಅದೇ, ಸಂ — 5· ಪು· 224

118· ಮಿರರ್, ಜನೇವರಿ, 1981, 'ಹೌ ಸತಿ ವಾಜ್ ಬ್ಯಾನ್ಡ' : ವಾಂಯು·ಎಸ್·ಪು·30

119· ನವಭಾರತ ಪಿತ ರಾಜಾರಾಮಮೋಹನರಾಂಯ: ಡಬ್ಲ್ಯೂ· ಹೆಚ್·ಹನುಮಂತಪ್ಪಾ,
ಪು·169

120· ಅದೇ·

121 ಅದೇ·

122 ಅದೇ, ಪು·174—175, ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್:
ಡಾ: ಎ·ಎಸ್ ಅಳ್ತೇಕರ್,ಪು :141

123· ಅದೇ, ಪು· 175—177 : ಪು·141

124· ಸತಿ: ಎಡ್ವರ್ಡ್ ಥಾಮ್ಸನ್· ಅಧ್ಯಾಯ·9

125· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಲೈಜೇಶನ್: ಡಾ: ಎ·ಎಸ್·ಅಳ್ತೇಕರ್,
ಪು·141·

126· ಅದೇ ಪು·141—142·

127. ಥಾಂಪ್ಸನ್ ಅವರು ದೇಶಿ ಸಂಸ್ಥಾನಗಳಲ್ಲಿಯ ಸತಿಪದ್ಧತಿಯನ್ನು ಬ್ರಿಟಿಷರು ತಡೆಯಲು ಪ್ರಯತ್ನಿಸಿರುವುದನ್ನು ವಿವರವಾಗಿ ಬರೆದಿದ್ದಾರೆ — ಸತಿ : ಅಧ್ಯಾಯ ದಿ ಸಪ್ರೆಸ್ಸಿಂಗ್ ಆಫ ಸತಿ ಇನ್ ನೆಟಿವ್ ಸ್ಟೇಟ್ಸ್.

128 ದಿ ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ ಇಂಡಿಯಾ — 13 —19, 1980, 'ಸತಿ ಶೇಮ್ ಆಫ ಎ ನೇಶನ್ : ಎಂ.ವಿ. ಕಾಮತ್'. ಪು. 20 —23.

129 ಮಿರರ್, ಜನೇವರಿ, 1981, 'ದಿ ರಿಟರ್ನ ಆಫ ಸತಿ' : ಗೀತಾ ನಾರಾಯಣನ್, ಯೋಗೇಶ ಶರ್ಮಾ, ಪು.19.

130. ದಿ ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ, ಜನೇವರಿ — 18 —24, 1981. 'ದಿ ಓರಿಜನ್ ಆಫ ಸತಿ: ಇಕ್ಬಾಲ್ ಕೌಲ್, ಪು.27

131. ಮಿರರ್, ಜನೇವರಿ 1981. 'ದಿ ರಿಟರ್ನ ಆಫ ಸತಿ': ಗೀತಾ ನಾರಾಯಣನ್, ಯೋಗೇಶ ಶರ್ಮಾ, ಪು.19

132. ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ ಇಂಡಿಯಾ, ಜನೇವರಿ — 18—24, 1981, 'ದಿ ಓರಿಜನ್ ಆಫ ಸತಿ: ಇಕ್ಬಾಲಕೌಲ, ಪು.27

133 ಮಿರರ್, ಜನೇವರಿ 1981, 'ದಿ ರಿಟರ್ನ ಆಫ ಸತಿ' : ಗೀತಾ ನಾರಾಯಣನ್, ಯೋಗೇಶ ಶರ್ಮಾ, ಪು.19

134. ಸಂಯುಕ್ತ ಕರ್ನಾಟಕ, 8—4—1980, 'ಮಂಗಳ ಸೂತ್ರವೇ ಇಲ್ಲದಿರುವಾಗ ಮಂಗಳಾದೇವಿ ಎಂದು ಕರೆಸಿಕೊಳ್ಳಲು ಇಷ್ಟಪಡದ ಶ್ರೀಮತಿ ಮಂಗಳಾ...... ತನ್ನ ಪತಿಯ ಶವವನ್ನು ಆಸ್ಪತ್ರೆಯಿಂದ ತರುತ್ತಲೆ...... ಸ್ನಾನಗೃಹದ ಬಾಗಿಲು ಹಾಕಿಕೊಂಡು ಮೈಮೇಲೆ ಚಿಮಣಿ ಎಣ್ಣಿ ಸುರಿದು ಬೆಂಕಿಗಾಹುತಿ ಮಾಡಿಕೊಂಡಳು

135. ಸಂಡೆ ಸ್ಟ್ಯಾಂಡರ್ಡ ಮ್ಯಾಗಝಿನ್, ಜನೇವರಿ, 11, 1981.

136. ಸಂಯುಕ್ತ ಕರ್ನಾಟಕ, 'ಸಾಪ್ತಾಹಿಕ ಸೌರಭ' ಪು.1. ಡಿಸೆಂಬರ 1980. ''ಸತಿಪದ್ಧತಿಯ ಪುನರುಜ್ಜೀವನ'' ವಿವರಗಳಿಗಾಗಿ : ಸಂ.ಕ. — 4—12—1980, 5—12—1980.

## ಅಧ್ಯಾಯ – 3

### ಸತಿ : ಆಕರ–ಸ್ಮಾರಕ–ಅವಶೇಷ

ಭಾರತದ ಭಾಗವಾಗಿರುವ ಕರ್ನಾಟಕದಲ್ಲಿ ಸತಿಪದ್ಧತಿ ಆಚರಣೆಯಲ್ಲಿದ್ದುದು ತಿಳಿದುಬರುತ್ತದೆ. ಉತ್ತರ ಭಾರತದಲ್ಲಿ ಸತಿಪದ್ಧತಿ ಅತೀ ಉಗ್ರವಾಗಿ ಆಚರಿಸಲ್ಪಟ್ಟಿದ್ದರೆ, ದಕ್ಷಿಣ ಭಾರತದಲ್ಲಿ — ಅದರ ಭಾಗವಾದ ಕರ್ನಾಟಕದಲ್ಲಿ — ಅದು ಸೌಮ್ಯ ಸ್ವರೂಪದಲ್ಲಿ ಆಚರಿಸಲ್ಪಟ್ಟಿದ್ದು ಕಂಡು ಬರುತ್ತದೆ. ಕರ್ನಾಟಕದಲ್ಲಿಯ ಸತಿಪದ್ಧತಿಯನ್ನು ಗ್ರಂಥಸಾಹಿತ್ಯ, ಜನಪದ ಸಾಹಿತ್ಯ, ದಿನಚರಿಸಾಹಿತ್ಯ, ವದಂತಿಗಳು ಮತ್ತು ಸ್ಮಾರಕಗಳು —ಈ ಆಕರಗಳ ಹಿನ್ನೆಲೆಯಲ್ಲಿ ತಿಳಿದುಕೊಳ್ಳಬಹುದಾಗಿದೆ. ಸತಿಸ್ಮಾರಕಗಳು ಶಿಲೆ, ಶಿಲ್ಪ, ಶಾಸನ, ಶಿಲ್ಪ–ಶಾಸನ, ಗುಡಿ ಮತ್ತು ಅವಶೇಷಗಳು —ಈ ಮೊದಲಾದ ವಿಧಗಳಲ್ಲಿ ದೊರಕುತ್ತವೆ. ಕರ್ನಾಟಕದಲ್ಲಿಯ ಸತಿ ಪದ್ಧತಿಯನ್ನು ಗುರುತಿಸಲಿಕ್ಕೆ ನೆರವಾಗುವ ಆಕರಗಳನ್ನು ಈಗ ಒಂದೊಂದಾಗಿ ವಿವರಿಸಬಹುದಾಗಿದೆ.[1]

### 1. ಗ್ರಂಥಸಾಹಿತ್ಯ :

ಸಂಸ್ಕೃತ ಗ್ರಂಥಸಾಹಿತ್ಯದಂತೆ ಕನ್ನಡ ಗ್ರಂಥಸಾಹಿತ್ಯವೂ ಸತಿಪದ್ಧತಿಯ ಕುರಿತಾಗಿ ಬೆಲೆಯುಳ್ಳ ವಿಷಯಗಳನ್ನು ತಿಳಿಸುತ್ತದೆ. ಪ್ರಾಚೀನ ಕಾವ್ಯಗಳು ಸನ್ನಿವೇಶದ ಅನಿವಾರ್ಯತೆಯಲ್ಲಿ ಸತಿ ವಿವರಣೆಗಳನ್ನು ನೀಡಿದರೂ ಒಂದಾದರೂ ಕಾವ್ಯ ಸಂಪೂರ್ಣವಾಗಿ ಸತಿಯನ್ನೇ ವಸ್ತುವಾಗಿಟ್ಟುಕೊಂಡು ರಚನೆಯಾಗಲಿಲ್ಲ. ಸಮಕಾಲೀನ ಬದುಕಿನಲ್ಲಿ ಸಹಗಮನ ಘಟನೆಗಳನ್ನು ಕವಿಗಳು ಕಂಡರೂ ಕಾವ್ಯದ ವಸ್ತುವನ್ನಾಗಿ ಬಳಸಿಕೊಳ್ಳುವಲ್ಲಿ ಅವರಿಗೆ ಅದು ಅಷ್ಟೊಂದು ಬೃಹತ್ತಾಗಿ — ಮಹತ್ತಾಗಿ ಕಂಡಿರಲಿಕ್ಕಿಲ್ಲ. ಅಲ್ಲದೇ ಪ್ರಾಚೀನ ಕನ್ನಡ ಕವಿಗಳಲ್ಲಿ ವಸ್ತುವಿನ ಕುರಿತಾಗಿರುವ ವಿಶಿಷ್ಟ ಮಡಿವಂತಿಕೆಯ ಧೋರಣೆಯೂ ಇದಕ್ಕೆ ಕಾರಣವಾಗಿರಬೇಕು. ಆಧುನಿಕ ಸಾಹಿತ್ಯದಲ್ಲಿ ಮಾತ್ರ ಶಿವರಾಮ ಕಾರಂತರು ಸತಿಯನ್ನೇ ವಸ್ತುವನ್ನಾಗಿಟ್ಟುಕೊಂಡು 'ಸರಸಮ್ಮನ ಸಮಾಧಿ' ಎಂಬ ಕಾದಂಬರಿಯನ್ನು ರಚಿಸಿರುವುದನ್ನು ಇಲ್ಲಿ ಸ್ಮರಿಸಬಹುದು. ಮಾಸ್ತಿಕಲ್ಲುವನ್ನೊಳಗೊಂಡ ಮಾಸ್ತಿಗುಡಿಯ ಸುತ್ತಮುತ್ತ ಬೆಳೆದು ಬಂದ ಜನರ ನಂಬಿಕೆ, ಆಲೋಚನಾ ವಿಧಾನ ಆಚರಣೆಗಳನ್ನು ಸುಂದರವಾಗಿ ಕಾದಂಬರಿಯಲ್ಲಿ ನಿರೂಪಿಸಿ, ಸತಿಪ್ರಭಾವವನ್ನು ಗುರುತಿಸಲು ಕಾರಂತರು ಪ್ರಯತ್ನಿಸಿದ್ದಾರೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿಕ್ರಮಾರ್ಜುನ ವಿಜಯ, ಅಜಿತಪುರಾಣ, ಕರ್ಣಾಟಕ ಕಾದಂಬರಿ, ಧರ್ಮಾಮೃತ, ಸಮಯಪರೀಕ್ಷೆ, ಅನಂತನಾಥಪುರಾಣ, ರಾಮನಾಥಚರಿತೆ,


ಸತಿ : ಆಕರ – ಸ್ಮಾರಕ – ಅವಶೇಷ
1. ಗ್ರಂಥಸಾಹಿತ್ಯ
2. ಜನಪದ ಸಾಹಿತ್ಯ
3. ದಿನಚರಿ ಸಾಹಿತ್ಯ
4. ವರದಿಗಳು
5. ಸ್ಮಾರಕಗಳು
ಜನಪದ ಗೀತೆಗಳು
ಜನಪದ ಕಥೆಗಳು
ಶಿಲೆ
ಶಿಲ್ಪ
ಶಾಸನ
ಶಿಲ್ಪಶಾಸನ
ಗುಡಿಗಳು
6. ಅವಶೇಷಗಳು
ಊರು
ಮನೆತನ
ಹಕ್ಕಲು
ಕೊಂಡ
ಗೂಂಟೆ
ಕನ್ನಡಿ
ಗಿಂಡಿ
ಬಳೆ
ಸೀರೆ
ಜಾತ್ರೆ–ಉತ್ಸವ
(ಇತ್ಯಾದಿ)

o–o

ಕರ್ನಾಟಕ ಭಾರತ ಕಥಾಮಂಜರಿ, ಶ್ರೀಸಿದ್ಧೇಶ್ವರ ಮಹಾಪುರಾಣ, ತೊರವೆ ರಾಮಾಯಣ, ಮೋಹ ತರಂಗಿಣಿ, ಭರತೇಶವೈಭವ, ಸಿಂಗಿರಾಜ ಪುರಾಣ, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ಸಿರುಮಣನಾಯಕನ ಸಾಂಗತ್ಯ, ಮುದ್ರಾಮಂಜೂಷ — ಈ ಮೊದಲಾದವು ( _ _ ಕರ್ನಾಟಕದಲ್ಲಿದ್ದ ಸತಿಪದ್ಧತಿಯನ್ನು ಸೂಚಿಸುತ್ತವೆ. ಅಲ್ಲದೆ ಬಸವಣ್ಣ, ಮಾದಾರ ಧೂಳಯ್ಯ, ಮಹಾದೇವಿಯಕ್ಕ, ಷಣ್ಮುಖ ಶಿವಯೋಗಿ — ಈ ವಚನಕಾರರು ಸಮಕಾಲೀನ ಸತಿಘಟನೆಗಳೊಡನೆ ಸ್ಪಂದಿಸಿದ್ದಾರೆ. ಈ ಗ್ರಂಥಸಾಹಿತ್ಯದಲ್ಲಿ ಎರಡು ವಿಧಗಳನ್ನು ಗುರುತಿಸಬಹುದು :

ಒಂದು : ಸತಿಯಾಗುವುದನ್ನು ಪ್ರತ್ಯಕ್ಷ ವರ್ಣಿಸುವ ಗ್ರಂಥಸಾಹಿತ್ಯ

ಎರಡು : ಸತಿಯಾಗುವುದನ್ನು ಪರೋಕ್ಷವಾಗಿ ಸೂಚಿಸುವ ಗ್ರಂಥಸಾಹಿತ್ಯ

ವಿಕ್ರಮಾರ್ಜುನ ವಿಜಯ ಅಜಿತಪುರಾಣ ಅನಂತನಾಥಪುರಾಣ, ಕರ್ನಾಟಕ ಭಾರತ ಕಥಾಮಂಜರಿ, ರಾಮನಾಥಚರಿತೆ, ಶ್ರೀ ಸಿದ್ಧೇಶ್ವರ ಮಹಾಪುರಾಣ, ತೊರವೆ ರಾಮಾಯಣ, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ಸಿರುಮಣನಾಯಕನ ಸಾಂಗತ್ಯ ಇವುಗಳನ್ನು ಮೊದಲನೆಯ ಗುಂಪಿನಲ್ಲಿ ಸೇರಿಸಬಹುದು. ಇವು ನೇರವಾಗಿ ಸಹಗಮನಗೊಂಡ ಘಟನೆಗಳನ್ನು ಚಿತ್ರಿಸುತ್ತವೆ. ವಿಕ್ರಮಾರ್ಜುನ ವಿಜಯದಲ್ಲಿ ಮಾದ್ರಿ, ಅಜಿತಪುರಾಣದಲ್ಲಿ ಗುಂಡಮಬ್ಬೆ, ಅನಂತನಾಥ ಪುರಾಣದಲ್ಲಿ ಚಂಡಶಾಸನನ ಪತ್ನಿಯರು, ಕರ್ನಾಟಕ ಭಾರತ ಕಥಾಮಂಜರಿಯಲ್ಲಿ ಮಾದ್ರಿ, ರಾಮನಾಥ ಚರಿತೆಯಲ್ಲಿ ಕುಮಾರರಾಮನ ಪತ್ನಿಯರು, ಶ್ರೀಸಿದ್ಧೇಶ್ವರ ಪುರಾಣದಲ್ಲಿ ಯುದ್ಧವೀರನೊಬ್ಬನ ಪತ್ನಿ, ಸಿಂಗಿರಾಜ ಪುರಾಣದಲ್ಲಿ ಬಿಜ್ಜಳನ ತಾಯಿ, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ತೋಂಟದರಾಯನ ಪತ್ನಿ ಚೆನ್ನಬಸವಮ್ಮ, ಸಿರುಮಣ ಸಾಂಗತ್ಯದಲ್ಲಿ ವಿಶ್ವರಾಜ — ವೀರಣ್ಣರ ಪತ್ನಿಯರು, ತೊರವೆರಾಮಾಯಣದಲ್ಲಿ ನೀತಿ ಸತಿಹೋದದ್ದನ್ನು ಕಾಣುತ್ತೇವೆ.[2] ಇವುಗಳಲ್ಲಿ ವಿಕ್ರಮಾರ್ಜುನ ವಿಜಯ ಮತ್ತು ಕರ್ನಾಟಕ ಭಾರತ ಕಥಾಮಂಜರಿಯ ಮಾದ್ರಿ ಸಹಗಮನ ಮೂಲವ್ಯಾಸನ ಭಾರತದ ಅನುಕರಣೆಯಾದರೂ, ಸಮಕಾಲೀನ ಸತಿಪದ್ಧತಿಯ ಹಿನ್ನೆಲೆಯಿಂದಾಗಿ, ಈ ಎರಡೂ ಕಾವ್ಯಗಳು ಮೂಲಕಾವ್ಯದಿಂದ ಈ ಪ್ರಸಂಗದಲ್ಲಿ ಬನ್ನವಾಗಿವೆ ಎಂಬುದನ್ನು ಮರೆಯಬಾರದು. ಅಷ್ಟೇ ಅಲ್ಲದೆ ವೀರಯುಗದ ಪಂಪ, ಯುದ್ಧ ಪ್ರಸಂಗವೊಂದರಲ್ಲಿ ವೀರನೊಬ್ಬನು ಮಡಿದು ಸ್ವರ್ಗಸ್ತ್ರೀಯರನ್ನು ಕೂಡಬಹುದು ಎಂದು ತರ್ಕಿಸಿದ ಆತನ ಪತ್ನಿಯು ತನ್ನ ಸಾವನ್ನು ನಿಷ್ಕರ್ಷಿಸಿಕೊಂಡದ್ದನ್ನು ಹೀಗೆ ಚಿತ್ರಿಸುತ್ತಾನೆ.[3]

ತಾಂಗಡನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಿರ್ಪನಿಲ್ಲ ಮಾ
ಣಾಂ ಗಡವಿಪ್ರನಂತನಿತು ಬೆಳ್ಳನೆ ಮುನ್ನಮೆ ಪೋಲ್ಪೆನಲ್ಲಿಗಿ
ಲ್ಲಂಗಡಳೆ ದೇವಲೋಕದೊಳಧೀಶನನಾಗಿರ್ದಿಗೊರ್ಳ್ವಿನೋಳ್ಪೊಡಂ ಸ
ಗ್ಗಂಗಳೊಳಿರ್ಪ ದೇವಡಿತಿ ತೊಡೆಕ್ಕೆಯೊಳಿಕ್ಕೆಯುನಾಗಲೇನೆನೇ ?

ಎಂದು ಕೈದವಿಲ್ಲದ ನಲ್ಮೆಯಂ ನಾಲಗೆಯ ತುದಿಗೆ ತಂದು ನುಡಿದಳ್ ......

ಗಂಡನು ನಾಳೆ ದೇವಸ್ತ್ರೀಯರನ್ನು ಕೂಡಿಕೊಳ್ಳುವ ಪೂರ್ವದಲ್ಲಿ ಅವನನ್ನು ನಾನು ಹೋಗಿ ಮೊದಲು ಇದಿರುಗೊಳ್ಳುತ್ತೇನೆ ಎಂದು ಪತ್ನಿ ಪ್ರೇಮದಿಂದ ನುಡಿದಳು ಎಂದು ಕವಿ ಹೇಳುವಲ್ಲಿ, ತನ್ನ ಕಾಲದ ಸತಿಪದ್ಧತಿಯನ್ನೇ ಸೂಚಿಸಿದ್ದಾನೆ.

ವಿಕ್ರಮಾರ್ಜುನ ವಿಜಯ, ಅಜಿತಪುರಾಣ, ಕರ್ನಾಟಕ ಭಾರತ ಕಥಾಮಂಜರಿ, ಶ್ರೀಸಿದ್ಧೇಶ್ವರ ಮಹಾಪುರಾಣ, ತೊರವೆರಾಮಾಯಣ — ಈ ಕಾವ್ಯಗಳು ಸತಿಹೋಗುವ ಪ್ರಸಂಗವನ್ನು ಸಂಕ್ಷಿಪ್ತವಾಗಿ ಚಿತ್ರಿಸುತ್ತವೆ. ಅನಂತನಾಥ ಪುರಾಣ, ರಾಮನಾಥ ಚರಿತೆ, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ಸಿರುಮಣನಾಯಕನ ಸಾಂಗತ್ಯ — ಈ ಕಾವ್ಯಗಳು ಸತಿ ಆಚರಣೆಯನ್ನು ತುಂಬ ದೀರ್ಘವಾಗಿ ಚಿತ್ರಿಸುತ್ತವೆ. ಈ ಕಾರಣದಿಂದಾಗಿ ಗ್ರಂಥಸಾಹಿತ್ಯದ ಸತಿ ಆಕರಗಳಲ್ಲಿ ಅನಂತನಾಥ ಪುರಾಣಾದಿಗಳು ತುಂಬ ಮಹತ್ವದವುಗಳಾಗಿವೆ ಎಂದು ಹೇಳಬಹುದಾಗಿದೆ.

ಕರ್ನಾಟಕ ಕಾದಂಬರಿ, ಧರ್ಮಾಮೃತ, ಸಮಯಪರೀಕ್ಷೆ, ಮೋಹನ ತರಂಗಿಣಿ, ಭರತೇಶ ವೈಭವ, ಮುದ್ರಾಮಂಜೂಷ, ಮತ್ತು ವಚನಕಾರರ ವಚನಗಳು — ಇವೆಲ್ಲವುಗಳನ್ನು ಎರಡನೆಯ ಗುಂಪಿನಲ್ಲಿ ಸೇರಿಸಬಹುದು. ಇವು ಸತಿಘಟನೆ ಜರುಗಿದ್ದನ್ನು ನೇರವಾಗಿ ಚಿತ್ರಿಸದಿದ್ದರೂ ಪರೋಕ್ಷವಾಗಿ ಸತಿಪದ್ಧತಿಯನ್ನು ಸೂಚಿಸುತ್ತವೆ. ಕರ್ನಾಟಕ ಕಾದಂಬರಿಯಲ್ಲಿ ಕಾದಂಬರಿ — ಮಹಾಶ್ವೇತೆಯರು ಸತಿಹೋಗಬೇಕೆಂದು ನಿರ್ಧರಿಸಿ, ಸಿದ್ಧತೆಮಾಡಿಕೊಳ್ಳುವ ವಿವರಗಳಿವೆ.[4] ಧರ್ಮಾಮೃತದಲ್ಲಿ ಗಂಡ ಪ್ರಮಾಥಿಕುಮಾರನಿಗೆ ಯುದ್ಧದಲ್ಲಿ ಸಾವು ನಿಶ್ಚಿತವೆಂದು ತಿಳಿದು, ಪತ್ನಿ ಚಂದ್ರಲೇಖೆಯು "ಪತಿವ್ರತಾ ಗುಣಕ್ಕಂ ದರ್ಶನಕ್ಕಂ ಹಾನಿಯಾಗಲೀಯದ ಸಾವೆನೆಂದು ಬಗೆಯುತ್ತಾಳೆ.[5] ಧನಕೀರ್ತಿ ಎಂಬ ಕತೆಯಲ್ಲಿ ಪತಿ ಶ್ರೀದತ್ತನು ಮೃತನಾಗಲು ಪತ್ನಿ ವಿಶಾಖೆಯು 'ಪಲರುಂ ಬೇಡ ಬೇಡೆನೆ ಮನದಕ್ಕೆಲಂದಿರಲಾವಿದೆ ವಿಷಪೂರಿತಮಪ್ಪ ಲಡ್ಡುಗೆಗಳಂ ತಿಂದು' ಸಾಯುತ್ತಾಳೆ.[6] ಇನ್ನೊಂದು ಕತೆಯಲ್ಲಿ ಬೆಸ್ತಗಾರನು ಜೈನವ್ರತಹಿಡಿದಾಗ ಹಾವು ಕಡಿದು ಸಾಯುತ್ತಾನೆ. ಅವನ ಪತ್ನಿ ಘಂಟಿಯೂ ಗಂಡನೊಡನೆ ಸಾಯುತ್ತಾಳೆ.[7] ಮಗುದೊಂದು ಕಥೆಯಲ್ಲಿ ಸಮುದ್ರಸೆಟ್ಟಿ ಸಾಯಲಾಗಿ ಅವನ ಪತ್ನಿ ಧನದೇಯು ಗರ್ಭಿಣಿಯಾಗಿದ್ದುದರಿಂದ ಕೆಲವು ಕಾಲದ

ನಂತರ ಪೆಣ್ಣಸನ್ನು ಪೆತ್ತು ' ಪತಿಯೊಡನೆ ಕೂಡುತ್ತೇನೆಂದು ಮರಣವಪ್ಪುತ್ತಾಳೆ. ಅದನ್ನು ಕವಿ ಹೀಗೆ ಚಿತ್ರಿಸಿದ್ದಾನೆ.[8]

ತಂದೆಯುನವಯುದಿಂದಂ
ಕೊಂದೀ ಶಿಶು ಜೀಗವೆನ್ನುಮಂ ಕೊಲ್ಲಂ ಪೋ
ಸಂದೆಯವಿಲ್ಲೆನ್ನಾಣ್ಮನೊ
ಕೊಂದುವೆನಾಂ ಮನ್ನವೆಂಬ ತಪ್ಪಿಂದಾಗಳ್
ಧನದೆಯುಮನದೆಯಾಗಿ ಕೆಲವು ದಿವಸಕ್ಕೆ ಕರ್ಪೂರಾಂತಕನ
ದಾಡೆಗೊಳಗಪ್ಪುದುಂ .....

ಧರ್ಮಾಮೃತದಲ್ಲಿ ಚಂದ್ರಲೇಖ ಗಂಡನ ಮರಣ ನಿಶ್ಚಿತವೆಂದು ತಿಳಿದು ಮರಣವಪ್ಪಲು ನಿಶ್ಚಯಿಸುವುದು, ವಿಶಾಖೆ — ಗಂಟೆ — ಧನದೆಯರು ತಮ್ಮ ಗಂಡಂದಿರು ಮೃತರಾಗಲು ಇರಲು ಇಚ್ಛಿಸದೆಯೇ ಸಾಯುವುದು — ಇವೆಲ್ಲ ಸತಿಪದ್ಧತಿಯ ಮುಖವಾಡವನ್ನೇ ಹೊತ್ತಿರುವುದು ಗಮನಕ್ಕೆ ಬರುತ್ತದೆ.

' ಸಮಯ ಪರೀಕ್ಷೆ ' ಯಲ್ಲಿ ಸತಿ-ಆಚರಣೆಯ ವಿಡಂಬನೆಯನ್ನು ಬ್ರಹ್ಮಶಿವ ಮಾಡುತ್ತಾನೆ.[9] ' ಮೋಹನತರಂಗಿಣಿ ' ಯಲ್ಲಿ ರತಿ ತನ್ನ ಗಂಡ ಕಾಮನನ್ನು ಶಿವ ಸುಡಲು, ಶಿವನನ್ನು ಉದ್ದೇಶಿಸಿ ಹೀಗೆ ಹೇಳುತ್ತಾಳೆ.[10]

ಸರ್ವರೊಳಗೆ ಮುತ್ತೈದೆಯಾಗಿರ್ದ್ದೆನ್ನ
ಧವ್ಯವನಾಂತು ಬಾಳುವೆನೆ :
ಗರ್ವದ ನುಡಿಯಲ್ಲಿ ತನಗೆ ತನ್ನಾಳ್ದನ
ತರ್ಮಾಣಯ ಮಾಡೆಂದಳಳುತ :
ಕೊಂಡವ ತೊಡಿಸಬೇಡ ಶುಷ್ಕವ ಸುಟ್ಟು
ಕೆಂಡವ ಮಾಡಿಸಬೇಡ :
ಖಂಡೇಂದುಶೇಖರ ಕಣ್ಣಿಚ್ಚಿನಿಂದೆನ್ನ
ಗಂಡನನುರುಹಿದಂತುರುಹು ::

ಇಲ್ಲಿ ರತಿ ಸತಿಯಾಗುವುದನ್ನು ಚಿತ್ರಿಸದಿದ್ದರೂ ಕವಿ ಕನಕದಾಸರು, ತಾವು ಕಂಡ ಕೊಂಡಕ್ಕೆ ಬೀಳುವ ಸತಿಪದ್ಧತಿಯ ಮುಖವೊಂದನ್ನು ಪರಿಚಯಿಸುತ್ತಾರೆ. ' ಭರತೇಶವೈಭವ ' ದಲ್ಲಿ ಬಾಹುಬಲಿ ದೀಕ್ಷೆಗೈದಿದಾಗ, ಅವನ ರಾಣಿಯರು ' ನಲ್ಲರನಗಲ್ದರು ನೈರಿಪರು ·ಮೋಕ್ಷಕೆಯ್ದುದ

ನುಡಿಯಾದರೆ ಹರಣವನಾ ಕ್ಷಣದೊಳೆ ಬಿಸುಡುವರು, ದೀಕ್ಷೆಯೊಳಗಿನನೆ ಬಂಧುಳೊನೆಯೆಂದೊಪ್ಪ ಈಕ್ಷಿಪೆನು' ಎನ್ನುತ್ತ ನಡೆಯುತ್ತಾರೆ.[11] 'ಪೇಕ್ಷೆಯಿಂದ ನುಡಿಯಾದರೆ ಹರಣವನಾ ಕ್ಷಣದೊಳೆ ಬಿಸುಡುವರು' ಎನ್ನುವಲ್ಲಿ ಪತಿ ಸತ್ತು ಸ್ವರ್ಗಕ್ಕೆ ಹೋಗಿದ ಮಾತಾಗಿದ್ದರೆ, ಪತ್ನಿಯರು ಪ್ರಾಣವನ್ನು ತ್ಯಜಿಸುವರು ಎಂದು ರತ್ನಾಕರವರ್ಣಿ ಸತಿಹೋಗುವುದನ್ನೇ ಸೂಚಿಸುತ್ತಾನೆ. ''ಮುದ್ರಾಮಂಜೂಷ' ದಲ್ಲಿ 'ಪ್ರಾಣಮಂ ತೊರೆದುಕೊಳ್ಳೆ ಎಂದರೆ ಅದು ಮೂರ್ಖ ಸ್ತ್ರೀಯರುಗಳು ಮಾತ್ರ ಆಚರಿಸುವ ದುಷ್ಕೃತ್ಯವು' ಎಂಬ ಮಾತು ಬರುತ್ತದೆ.[12] ಕೆಂಪು-ನಾರಾಯಣನು ತನ್ನ ಕಾಲದಲ್ಲಿ ಸತಿಹೋಗುವ ಸ್ತ್ರೀಯರನ್ನು ಮುಂದಿಟ್ಟುಕೊಂಡೇ ಈ ಮಾತು ಹೇಳಿರಬೇಕೆನಿಸುತ್ತದೆ.

ವಚನಕಾರರಲ್ಲಿ ಬಸವಣ್ಣ, ಮಾದಾರ ಧೂಳಯ್ಯ, ಅಕ್ಕಮಹಾದೇವಿ, ಷಣ್ಮುಖ ಶಿವಯೋಗಿ ಇವರು ಸತಿ ಆಚರಣೆಯ ಚಿತ್ರವನ್ನು ಒಂದೊಂದು ವಚನಗಳಲ್ಲಿ ಕೊಡುತ್ತಾರೆ.[13] ತಮ್ಮ ಕಾಲದಲ್ಲಿದ್ದ ಸತಿಪದ್ಧತಿಗೆ ಈ ಶರಣರು ನಿರಾಕರಣೆಯನ್ನು ಸೂಚಿಸುತ್ತಾರೆ. ವಚನಕಾರರನ್ನು ಸಾಮಾಜಿಕ ಕ್ರಾಂತಿಯ ಹಿನ್ನೆಲೆಯಲ್ಲಿ ನೋಡಿದಾಗ, ಅವರು ಸತಿ ಆಚರಣೆಯ ಕುರಿತಾಗಿ ಕೆಲವೇ ಕೆಲವು ವಚನಗಳನ್ನು ಮಾತ್ರ ನೀಡಿರುವದು ಆಶ್ಚರ್ಯವೆನಿಸುತ್ತದೆ. ಸಮಾಜದೊಡನೆ ನೇರ ಸಂಬಂಧವಿಟ್ಟುಕೊಂಡ ಶರಣಕ್ರಾಂತಿ ಸತಿಪದ್ಧತಿಯನ್ನು ತುಂಬ ವಿವರವಾಗಿ ಚಿತ್ರಿಸಿ, ಅದನ್ನು ಅಲ್ಲಗಳೆಯಬಹುದಾಗಿತ್ತು; ಶರಣರು ಈ ದಿಕ್ಕಿನಲ್ಲಿ ಹೆಚ್ಚು ದೃಷ್ಟಿ ಹಾಕದಿರುವುದು ಒಂದು ಕೊರತೆಯೆಂದೇ ಹೇಳಬಹುದು

ಈ ರೀತಿಯಾಗಿ ಗ್ರಂಥಸಾಹಿತ್ಯ ಪ್ರತ್ಯಕ್ಷ — ಪರೋಕ್ಷ, ಸಂಕ್ಷಿಪ್ತ — ದೀರ್ಘ, ಮುಖ್ಯ — ಅತೀಮುಖ್ಯ — ಈ ಮೊದಲಾದ ಮುಖಗಳಲ್ಲಿ ಸತಿ ಆಚರಣೆಯನ್ನು ತನ್ನಲ್ಲಿ ಹುದುಗಿಸಿಕೊಂಡಿದೆ. ಮಾಸ್ತಿಕಲ್ಲುಗಳು ವಿವರಿಸದೇ ಇರುವ ಹಲವು ವಿಷಯಗಳನ್ನು ಗ್ರಂಥ ಸಾಹಿತ್ಯ ವಿವರಿಸುತ್ತದೆ. ಮಾದ್ರಿ, ಸೀತೆ, ರತಿ, ಈ ಮೊದಲಾದ ಪ್ರಾಚೀನ — ಪೌರಾಣಿಕ ಕತೆಯ ಪಾತ್ರಗಳ ಸಹಗಮನದ ಮಾತುಗಳನ್ನು ವಿವರಿಸುವಲ್ಲಿ ಕನ್ನಡ ಕವಿಗಳು ತಮ್ಮ ಸಮಕಾಲೀನ ಬದುಕಿನಲ್ಲಿಯ ಸತಿ ಆಚರಣೆಗಳನ್ನೇ ಮೂಲವಾಗಿಟ್ಟುಕೊಂಡಿರುವದು ವೇದ್ಯವಾಗುತ್ತದೆ. ಕಲ್ಪನಾವಿಹಾರಿಗಳಾದ ಕವಿಗಳು ಸತಿ ಆಚರಣೆಯನ್ನು ವಿವರಿಸುವಲ್ಲಿ ಹೆಚ್ಚು ವಸ್ತುನಿಷ್ಠವಾಗಿರುವದು ಕಂಡುಬರುತ್ತದೆ. ಕಲ್ಪನಾತ್ಮಕವಾಗಿ ಸತಿ ವಿಷಯವನ್ನು ನಿರೂಪಿಸುವದು ಕವಿಗಳಿಗೆ ಅಸಾಧುವಾಗಿಯೂ, ಅಸಾಧ್ಯವಾಗಿಯೂ ಕಂಡಿರಬೇಕು. ಈ ಕಾರಣದಿಂದಾಗಿ ಸತಿ ಆಚರಣೆಗೆ

ಎಷ್ಟು ಬೇಕೋ ಅಷ್ಟನ್ನು ಮಾತ್ರ ಹೇಳಿದಂತೆ ಮಾಡಿ ಕವಿಗಳು ಮುಂದಿನ ಕಥಾವಿಸ್ತರಣಕ್ಕೆ ಕೈಹಾಕುತ್ತಾರೆ ಇದು ಒಂದು ದೃಷ್ಟಿಯಿಂದ ಇತಿಹಾಸಕ್ಕೆ — ಸತಿಪದ್ಧತಿಗೆ — ಉಪಕಾರವೇ ಆಯಿತು.

## 2. ಜನಪದ ಸಾಹಿತ್ಯ :—

ಸತಿಪದ್ಧತಿಯ ವಿವಿಧ ಮುಖಗಳ ಪರಿಚಯಕ್ಕೆ ಜನಪದ ಸಾಹಿತ್ಯ ತುಂಬ ನೆರವಾಗುತ್ತದೆ. ಸತಿಘಟನೆಗಳನ್ನು ಜನಪದ ಸಾಹಿತ್ಯದಷ್ಟು ವಿಸ್ತಾರವಾಗಿ ವರ್ಣಿಸುವ ಸಾಧನಸಂಪತ್ತು ಮತ್ತೊಂದಿಲ್ಲ. ತಮ್ಮ ಕಣ್ಣೆದುರು ನಡೆದ ಸತಿ ಸಂಗತಿಗಳ ಕುರಿತಾಗಿ ಜನಪದರು ಹಾಡು ಹೇಳಿ, ಕಥೆ ಕಟ್ಟಿ ಆ ಮೂಲಕ ಸತಿ ಘಟನೆಗಳನ್ನು ಅಮರಗೊಳಿಸಿದರು. ಸತಿಹೋದ ಕಾಲದಿಂದ ಮೊದಲುಗೊಂಡು ಕಾಲಕಾಲದ ಜನಾಂಗದ ನಾಲಗೆಯ ಮೇಲೆ ಸತಿ ಘಟನೆಗಳು ಬದುಕಿಕೊಳ್ಳುತ್ತ ಬಂದು ಇಂದು ಇತಿಹಾಸದ ಪಳೆಯುಳಿಕೆಗಳಾಗಿ ಕಾಣಿಸಿಕೊಳ್ಳುತ್ತಿವೆ. ಜನಪದ ಸಾಹಿತ್ಯ ತನ್ನ ಎರಡು ಪ್ರಕಾರಗಳಲ್ಲಿ ಸತಿಪದ್ಧತಿಯನ್ನು ಅಂತರ್ಗತಗೊಳಿಸಿಕೊಂಡಿದೆ ಅವು : ಒಂದು ಜನಪದ ಗೀತೆಗಳು ಎರಡು, ಜನಪದ ಕಥೆಗಳು

ಜನಪದ ಗೀತೆಗಳು ಸತಿಯನ್ನು ಕಥಾತ್ಮಕ ರೀತಿಯಲ್ಲಿ ವರ್ಣಿಸುವಂಥವುಗಳೇ ಆಗಿವೆ. ಆದುದರಿಂದ ಈ ಜನಪದ ಗೀತೆಗಳು ಸತಿಯ ಕುರಿತಾಗಿರುವ ಕಥೆಗಳೇ ಆಗಿವೆ. ಸತಿಯ ಕಥೆಯನ್ನು ಜನಪದ ಗೀತೆಗಳು ಪದ್ಯದಲ್ಲಿ ಹಿಡಿದಿಟ್ಟುಕೊಂಡಿದ್ದರೆ ಜನಪದಕಥೆಗಳು ಗದ್ಯದಲ್ಲಿ ಹಿಡಿದಿಟ್ಟುಕೊಂಡಿವೆ. ಒಂದು ಪದ್ಯ ಬಂಧ ; ಇನ್ನೊಂದು ಗದ್ಯಬಂಧ. ಪದ್ಯಾತ್ಮಕವಾದ ಸತಿ ಕಥೆಗಳು ಇಂದು ಹೆಚ್ಚು ಸಿಗುವುದರ ಜೊತೆಗೆ ದೀರ್ಘವ್ಯಾಪ್ತಿಯುಳ್ಳವಾಗಿವೆ. ಗದ್ಯಾತ್ಮಕವಾದ ಸತಿಕತೆಗಳು ಇಂದು ಕೆಲವು ಸಿಗುವುದರ ಜೊತೆಗೆ ಸಂಕ್ಷಿಪ್ತವ್ಯಾಪ್ತಿಯುಳ್ಳವಾಗಿವೆ. ಗದ್ಯಕ್ಕಿಂತಲೂ ಪದ್ಯ ನೆನಪಿಟ್ಟುಕೊಳ್ಳುವಲ್ಲಿ ಸರಳವಾಗಿರುವುದು ಮತ್ತು ತನ್ನ ಗೇಯಗುಣದಿಂದಾಗಿ ಪ್ರಭಾವಶಾಲಿ ಸಮೂಹಮಾಧ್ಯಮವಾಗಿರುವದು. ಇದಕ್ಕೆ ಕಾರಣವಾಗಿರಬೇಕು.

**ಜನಪದ ಗೀತೆಗಳು:—** ಸತಿ ಘಟನೆಗಳನ್ನು ವಸ್ತುವಾಗಿಯುಳ್ಳ ಹಲವು ಜನಪದ ಗೀತೆಗಳು ಕರ್ನಾಟಕದ ಗ್ರಾಮ್ಯಜೀವನದಲ್ಲಿ ಉಳಿದುಕೊಂಡು ಬಂದಿವೆ. ಇವುಗಳಲ್ಲಿ ಕೆಲವು ಸತಿಘಟನೆಯನ್ನೇ ಮುಖ್ಯವಾಗಿಟ್ಟುಕೊಂಡು ರಚನೆಗೊಂಡಿದ್ದರೆ, ಇನ್ನು ಕೆಲವು ಕಥೆಯ ಹಂದರದ ಒಳಗೋ ಒಂದು ಭಾಗದಲ್ಲಿ ಸತಿ ಆಚರಣೆಯ ಕುರುಹುಗಳನ್ನು ತೋರಿಸಿಕೊಡುತ್ತವೆ. ಕೆಲವು ಗೀತೆಗಳು ಸತಿಯನ್ನು ದೇವತೆಯನ್ನಾಗಿ ಕಂಡುಕೊಂಡು ಪ್ರಾರ್ಥಿಸುವಂಥವುಗಳಾಗಿವೆ. ಈ ಹಿನ್ನೆಲೆ ಇಟ್ಟುಕೊಂಡು ಜನಪದ ಸತಿ ಗೀತೆಗಳನ್ನು ಮೂರು ತರನಾಗಿ ವಿಂಗಡಿಸಬಹುದಾಗಿದೆ.

<u>ಒಂದು :</u> ಸತಿಘಟನೆಗಳನ್ನು ಮುಖ್ಯವಾಗಿಟ್ಟುಕೊಂಡ ಜನಪದ ಗೀತೆಗಳು.

<u>ಎರಡು :</u> ಸತಿ ಆಚರಣೆಯ ವಿವರಗಳನ್ನುಳ್ಳ ಜನಪದ ಗೀತೆಗಳು.

<u>ಮೂರು:</u> ಸತಿಯನ್ನು ಪ್ರಾರ್ಥಿಸುವ ಜನಪದ ಗೀತೆಗಳು.

ಈರಕೊಬೆ, ನಾಗವ್ವ, ಜೆಕ್ಕೀಳು ಹಿರಿದಿಮ್ಮವ್ವ; ವಡ್ಡಗೆರೆ ನಾಗಮ್ಮ, ಬರಗೂರು ವೀರಮ್ಮ, ಮಹಾಸತಿ ವೀರತಿಮ್ಮವ್ವ, ಮಹಾಸತಿ ಕಾಟವ್ವ, ಮಹಾಸತಿ ತಂಗ್ಯೆಮ್ಮ, ಕೊಂಡದ ಮಾಸ್ತಮ್ಮ, ಮಾಸ್ತಮ್ಮ, ಚನ್ನಪಟ್ಟಣದ ಮಾಸ್ತಿಗೀತೆ ಅರಕೆರೆ ಮಾಸ್ತಿಗೀತೆ, ಮಾಯಮ್ಮ ಮಾಸ್ತಿ. ಮಾಸ್ತಿ ಹಾಡು—ಅಡುಗನಹಳ್ಳಿ, ಕಲ್ಲೂರ ಮಾಸ್ತಿಪದ, ತವರು ಹಂಗ್ಲ ರಿದು ಬರತೇವಿ, ದೊಂಡಜಿವಾಥ, ಕೆಂಪಮ್ಮ, ಜಗುನೆಯ ಜಕ್ಕಣ್ಣ ಮಗುನೆಯ ಬ್ಯಾಟಿಕಾರ, ಮಾಸ್ತಮ್ಮ, ಹೊನ್ನಮ್ಮ ಮಾಸ್ತಿ, ಪತಿವ್ರತಿದೇವಿ ಹೋಗಿ ನೋಡ್ಯಾಳ ವೈಕುಂಠ — ಈ ಮೊದಲಾದ ಗೀತೆಗಳು ಸತಿಘಟನೆಗಳನ್ನೇ ಮುಖ್ಯವಾಗಿಟ್ಟುಕೊಂಡಿವೆ.[14] ಇವುಗಳಲ್ಲಿ 'ವಡ್ಡಗೆರೆ ನಾಗಮ್ಮ' ದೊಡ್ಡದಾದ ಕಥನಕಾವ್ಯವಾಗಿದೆ. ಸು. 744 ತ್ರಿಪದಿಗಳಲ್ಲಿ ಈ ಕಾವ್ಯ ರಚನೆಗೊಂಡಿದೆ. ಪ್ರಾಚೀನ ಗ್ರಂಥಸಾಹಿತ್ಯದಲ್ಲಿ ಸತಿಘಟನೆಯನ್ನೇ ವಸ್ತುವಾಗಿಟ್ಟು ಕೊಂಡು ಕಾವ್ಯ ರಚನೆಯಾಗದಿರುವ ಕೊರತೆಯನ್ನು ಜನಪದ ಸತಿಗೀತೆಗಳು ನೀಗಿಸಬಲ್ಲವು ವಾಗಿವೆ. ಅದರಲ್ಲೂ 'ವಡ್ಡಗೆರೆ ನಾಗಮ್ಮ' ದಂಥ ವಿಸ್ತಾರವ್ಯಾಪ್ತಿಯುಳ್ಳ ಕಾವ್ಯ ಸತಿಯರ ಕುರಿತಾಗಿರುವ ಜನಪದರ ಕಳಕಳಿ, ಹೃದಯವಂತಿಕೆಯ ದ್ಯೋತಕವಾಗಿದೆ.

ಜನಪದ ಸತಿ ಗೀತೆಗಳಲ್ಲಿ ಹಲವು ಒಂದೇ ಚೌಕಟ್ಟಿನಲ್ಲಿ ರಚನೆಗೊಂಡಿವೆ. ಮೊದಲಿಗೆ ಪ್ರಾರ್ಥನೆಯ ಪದ್ಯಗಳು ಬರುತ್ತವೆ. ಅನಂತರದಲ್ಲಿ ಕ್ರಮವಾಗಿ — ಹೆಣ್ಣು ಕೇಳಲು ಬರುವದು, ಹೆಣ್ಣುಕೊಡುವುದಿಲ್ಲವೆನ್ನುವದು, ಹೆಣ್ಣನ್ನು ಕೊಡಲು ಒಪ್ಪುವದು, ಅಪಶಕುನಗಳುಂಟಾಗುವದು, ಮದುವೆ ನಡೆದುಹೋಗುವದು, ದುಃಸ್ವಪ್ನ ಕಾಣುವದು ಅಥವಾ ದುರಂತದ ಚಿಹ್ನೆಗಳನ್ನು ಕಂಡುಕೊಳ್ಳುವದು, ಗಂಡ ಮಡಿಯುವುದು, ಪತ್ನಿ ಸತಿಯಾಗಲು ನಿರ್ಧರಿಸುವದು, ಬಂಧುಗಳು ಸತಿಯಾಗದಂತೆ ಕೇಳಿಕೊಳ್ಳುವುದು, ಕೊನೆಗೆ ಸತಿ ಕೆಂಡಕೊಂಡವಾಗುವದು — ಈ ರೀತಿ ಕತೆಯ ಬೆಳವಣಿಯಲ್ಲಿ ಒಂದು ನಿರ್ದಿಷ್ಟವಾದ ಕ್ರಮವನ್ನು ಕಾಣುತ್ತೇವೆ.

ಮಹಾಸತಿ ಗೀತೆಗಳು ಹೆಚ್ಚಾಗಿ ಯಾವುದಾದರೂ ದೇವರನ್ನು ಇಲ್ಲವೇ ಮಹಾಸತಿಯನ್ನು ಪ್ರಾರ್ಥಿಸುತ್ತ ಪ್ರಾರಂಭಗೊಳ್ಳುತ್ತವೆ. ಮಹಾಸತಿ ವೀರತಿಮ್ಮವ್ವನ ಕಥನ ಗೀತೆ ಲಿಂಗ — ಜಂಗಮನನ್ನು ನೆನೆಸುತ್ತ ಪ್ರಾರಂಭವಾಗುತ್ತದೆ.

ಲಿಂಗಾನ ನೆನದಾರೆ ಬಂಗಾರ ಕೊಡುವೋನು
ಕಂದಗಳ ಕೊಡುವೋನು ಮನಿತುಂಬ
ಕಂದಗಳ ಕೊಡುವೋನು ಮನಿತುಂಬ: ಇರಿಯಟ್ಟಿ
ನಿಂಗಾಜಂಗಮನಾ ನೆನೆದಾರೆ :

ಆದರೆ ಕೆಲವು ಗೀತೆಗಳು ಸತಿಯಾದವಳನ್ನೇ ನೆನೆಸುತ್ತ ಪ್ರಾರಂಭಗೊಳ್ಳುತ್ತವೆ.[15]

ಮುತ್ತಿನ ಮಣಿಯಂಗೆ ಎತ್ತೇವೆ ದಣಿಗಾಳು
ಅತ್ತು ಕೆಂಡದಾಗೆ ಪಗಡಿಯ : ಚೆಂಡಾಡಳೋ
ಮುತ್ತೈದೆ ನಿನ್ನ ನೆನದೆನೆ ::

ಅವಳದ ಮಣಿಯಂಗೆ ತಗದೇವೆ ದಣಿಗಾಳು
ತಣಿಗಂಡದಾಗೆ ಪಗಡೀಯ: ಚೆಂಡಾಡಳೋ
ಈರು ನಾಗಮ್ಮ, ನಿನ್ನ ನೆನೆದೇನೆ ::

ಪದ್ಯಕ್ಕೆ ಕಾರಣವಾಗಿರುವ ಸರಸ್ವತಿ, ಸಿದ್ಧರಾಮ, ರಾಮಲಿಂಗ — ಈ ಮೊದಲಾದ ದೇವತೆಗಳ ಸ್ತುತಿ ಸತಿಗೀತೆಗಳ ಪ್ರಾರಂಭದಲ್ಲಿ ಕಾಣಿಸಿಕೊಳ್ಳುವುದು ಅಪರೂಪವೇನಲ್ಲ. ಈರೋಬ ಖಂಡಕಾವ್ಯ ಗಂಡನು ತೀರಿಕೊಂಡದ್ದನ್ನು ಸೂಚಿಸುತ್ತ ಪ್ರಾರಂಭಗೊಳ್ಳುವುದು ವಿಶೇಷವಾಗಿದೆ. ಕೆಲವು ಗೀತೆಗಳು ನೇರವಾಗಿ, ಹೆಣ್ಣನ್ನು ಕೇಳಲು ವರನ ಕಡೆಯವರು ಬಂದರು ಎಂಬುದನ್ನು ಸೂಚಿಸುವುದರೊಂದಿಗೆ ಪ್ರಾರಂಭಗೊಳ್ಳುತ್ತವೆ.[16]

ಕಟ್ಟಿಯ ಹಿಂದೆ ಗಕ್ಕೆನೊನ್ವೇನಮ್ಮ
ಎತ್ತಿನ ಕೊರಳಗಲ ಹುರಿಗೆಜ್ಜಿ : ನಾಗವ್ವನ
ಕೇಳ್ ಬಂದವರೆ ದಿಳ್ಳಿ ದೊರೆಗಳು::

ಹೆಣ್ಣು ಮಗಳು ಇನ್ನು ಚಿಕ್ಕವಳಾಗಿದ್ದರಿಂದ ಹೆಣ್ಣು ಕೇಳಲು ಬಂದವರಿಗೆ ಹೆಣ್ಣು ಕೊಡಲು ನಿರಾಕರಿಸುವ ಪದ್ಯಗಳು ಸಾಲುಸಾಲಾಗಿ ಬರುತ್ತವೆ.[17] ಇನ್ನು ಕೆಲವೊಮ್ಮೆ ವರನದು ಹೋರಾಡುವ ಮನೆತನವಾದ್ದರಿಂದ ಹೆಣ್ಣು ಕೊಡುವುದು ಬೇಡ ಎಂದು ಹೇಳಲಾಗುತ್ತದೆ.[18] ಕೆಲವೊಮ್ಮೆ ಕನ್ಯೆಯೇ ತನಗೆ ಆ ಮನೆಗೆ ಕೊಡಬೇಡಿ ಎಂದೂ ಕೇಳಿಕೊಳ್ಳುತ್ತಾಳೆ.[19] ಆದರೂ ಮದುವೆ ನಿಶ್ಚಯವಾಗಿಯೇ ತೀರುತ್ತದೆ. ಅದೇ ಕಾಲಕ್ಕೆ ದುರಂತದ ಸೂಚನೆಯಾಗಿ ಹಲ್ಲಿಗಳು ಶಕುನ ನುಡಿಯುವುದು ಬಳೆತೊಡಿಸುವಾಗ ಸೀನುವದು, ಕುಪ್ಪಸ ತೊಡಿಸುವಾಗ

ಬೆಕ್ಕು ಅಡ್ಡ ಹಾಯುವುದು — ಈ ಮೊದಲಾದ ಅಪಶಕುನಗಳಾಗುತ್ತವೆ. ಆದರೂ ಮದುವೆ ನಡೆದುಹೋಗುತ್ತದೆ. ಅನಂತರದಲ್ಲಿ ಗಂಡನು ಹುಲಿಯೊಡನೆಯೋ, ಯುದ್ಧದಲ್ಲಿಯೋ ಬೇಡರೊಡನೆಯೋ, ಹೋರಾಡಿ ಮಡಿಯುವುದನ್ನು ಸೂಚನೆಯಾಗಿ ಸತಿ ದುಃಸ್ವಪ್ನ ಇಲ್ಲವೇ ದುರಂತದ ಚಿಹ್ನೆಗಳನ್ನು ಕಂಡುಕೊಳ್ಳುತ್ತಾಳೆ. ಈರೋಬಿ ಖಂಡಕಾವ್ಯದಲ್ಲಿ ಈರೋಬಿ ಕಂಡ ಕನಸನ್ನು ಹೀಗೆ ಹೇಳುತ್ತಾಳೆ.

ಅತ್ಯಮ್ಮ ಅತ್ಯಮ್ಮ ಕೆಟ್ಟ ಸ್ವಪ್ನವ ಕಂಡೆ
ದಿತ್ತುಳಿಕಾರ ನಿನಮಗ : — ಮನಗೋಮಂಚ
ನಿಟ್ಟಿಲ್ಲ ಕತಿ ಕವಿಯಾದೋ::

ಉತ್ತದ ಮೆಲೆಗಲ ಕಾಗಿ ನೆತ್ತರ ಕಾರ್ಯೋದ ಕಂಡೆ
ಶೆಟ್ಟಿ ಶಂಕರರಾಯ ಬದುಕೋದ : ಸಪುನವ
ಕಂಡೆನಮ್ಮ ಕಾಲು ಗಳಿಗೇಲಿ ::

ಮೂಗುತಿ ಮುರಿಯೋದ ಕಂಡೆ ಝುಂಬಲ್ಲು ಸಿಡಿಯೋದ ಕಂಡೆ
ಗಿಂಡಿ ತುಂಡಾಗಿ ಒಡೆಯೋದ : ಸಪುನವ
ಕಂಡೆನಮ್ಮ ಕಾಲುಗಳಿಗೇಲಿ::

ಇನ್ನು ಕೆಲವು ಗೀತೆಗಳಲ್ಲಿ ಹೊಲಕ್ಕೆ ಹೋದ ಸತಿ ನೀರಿಗಾಗಿ ಗುಂಡ ತೋಡುವಾಗ ದುರಂತದ ಸೂಚನೆ ಎಂಬಂತೆ ರಕ್ತವನ್ನೇ ಕಾಣುತ್ತಾಳೆ. ಮುಂದೆ ಗಂಡನ ಮರಣದ ವಿಷಯ ಅವನು ಸಾಕಿದ ಜೋಲನಾಯಿಯಿಂದಲೋ, ನೆತ್ತರದ ಅರಿವೆಯಿಂದಲೋ ಖಡ್ಗದಿಂದಲೋ ತಿಳಿದು ಬರುತ್ತದೆ. ಇಲ್ಲವೆ ಗಂಡನ ಮೃತದೇಹವೇ ಕಾಣಿಸಿಕೊಳ್ಳುತ್ತದೆ. ಮುಂದಿನ ವರ್ಣನೆಯೆಲ್ಲ ಸತಿಗಾಗಿ ಮೀಸಲಾಗಿದ್ದು, ದುಃಖಾಂತದ ನಿರೂಪಣೆ ಎಳೆಎಳೆಯಾಗಿ ಬಿಚ್ಚಿಕೊಳ್ಳು ಹೋಗುತ್ತದೆ.

ಗಂಡ ಮರಣಹೊಂದಲು, ಪತ್ನಿ ಸತಿಹೋಗುವುದಕ್ಕೆ ನಿರ್ಧರಿಸುತ್ತಾಳೆ. ಬಂಧು-ಬಳಗವೆಲ್ಲ ಸತಿಯಾಗುವದು ಬೇಡ ಎಂದು ಕೇಳಿಕೊಳ್ಳುತ್ತಾರೆ. ಆದರೂ ಸತಿ ತನ್ನ ಅಚಲ ನಿರ್ಧಾರವನ್ನು ತಿಳಿಸಿ, ಕೊಂಡಕ್ಕೆ ಬೀಳಲು ನಡೆಯುತ್ತಾಳೆ. ಆಕೆ 'ನಿಂಬೆಯ ಅಣ್ಣ ಅಂಬಾರ ಕೀಡಾಡುತ, ಬಂದೀಯ ತೋಳ ತಿರುವುತ.[20] 'ಬಾಳೆಯ ಹಣ್ಣ ಬಾನಿಗೀಡಾಡುತ, ಬಾಲಿ ತನ್ನ ತೋಳ ತಿರುವುತ.[21] ಮೆರವಣಿಗೆಯಲ್ಲಿ ಕೊಂಡಕ್ಕೆ ಬಂದು ಹೀಗೆ ಹೇಳುತ್ತಾಳೆ[22]

ಕೊಂಡಾ ತೆಗ್ಯೋರೋ ಚಂದಾಗೀ ತೆಗಿರಪ್ಪ
ಬಳ್ಳೊರಿಂದಾಚೇ ಕಿರುನೆಲ್ಲಿ: ಕೆಳಗೇ
ಚೆಂದಾಗಿ ಕೊಂಡಾ ತೆಗಿರೆಯ್ಯ::

ಈ ಆಲಾದಾ ಮರದ್ಮೇಲೆ ಹತ್ತಿ ಕಡಿಯೋನೇ
ಮತ್ತೊಂದು ಕೊಂಬೇ ಮುಗಿಲಾಗೀ : ಕಡಿಯೋಣೋ
ನಾ ಗಂಡಾ ಸಂತನವಾ ಕೂಡುವೇನೂ :

ಕೊನೆಗೆ ಸತಿ ಗಂಡನೊಡನೆಯೋ, ಆತನ ಗುರುತಿನ ವಸ್ತುವಿನೊಡನೆಯೋ ಕೆಂಡಕೊಂಡವಾಗುತ್ತಾಳೆ. ಕೆಲವು ಸತಿಗೀತೆಗಳು ಕೊನೆಯಲ್ಲಿ ಮಂಗಳಪದ್ಯಗಳಿಂದ ಮುಕ್ತಾಯ ಗೊಳ್ಳುತ್ತವೆ.

ಈ ರೀತಿಯಾಗಿ ಸತಿಘಟನೆಗಳನ್ನೇ ಮುಖ್ಯವಾಗಿಟ್ಟುಕೊಂಡ ಜನಪದ ಗೀತೆಗಳು ನಿರ್ದಿಷ್ಟವಾದ ವ್ಯಾಪ್ತಿಯಲ್ಲಿ ರಚನೆಗೊಂಡಿರುತ್ತವೆ. ಇವುಗಳ ಆಂತರಿಕ ವ್ಯವಸ್ಥೆಯಲ್ಲಿ ಹಲವು ವ್ಯತ್ಯಾಸ — ವೈವಿಧ್ಯಗಳೂ ಇಲ್ಲದಿಲ್ಲ. ಕೆಲವು ಗೀತೆಗಳಿಗೆ ಪ್ರಾರ್ಥನಾ ಪದ್ಯಗಳಿರುವುದಿಲ್ಲ. ಇನ್ನು ಕೆಲವು ಗೀತೆಗಳಲ್ಲಿ ಹೆಣ್ಣು ಕೇಳಲು ಬರುವುದಾಗಲಿ, ಹೆಣ್ಣನ್ನು ಕೊಡುವುದಿಲ್ಲವೆನ್ನುವುದಾಗಲಿ, ಅಪಶಕುನಗಳಾಗುವುದಾಗಲಿ ಇರುವುದಿಲ್ಲ. ಕೆಲವು ನೇರವಾಗಿ ಗಂಡನ ಮರಣದೊಂದಿಗೆ ಪ್ರಾರಂಭವಾಗಿಬಿಡುತ್ತವೆ. ಕೆಲವು ಗೀತೆಗಳಲ್ಲಿ ಸತಿ ಕೊಂಡಕ್ಕೆ ಬೀಳುವ ನಿಶ್ಚಯ ತಿಳಿಸುವುದಾಗಲಿ, ಅವಳನ್ನು ಸತಿಯಾಗದಂತೆ ಕೇಳಿಕೊಳ್ಳುವುದಾಗಲಿ, ಅವಳು ಕೊಂಡಕ್ಕೆ ಹೋಗುವ ದೀರ್ಘ ವರ್ಣನೆಯಾಗಲಿ ಇರುವುದಿಲ್ಲ. ಹಲವಾರು ಗೀತೆಗಳು ಸತಿ ಕೊಂಡಕ್ಕೆ ಬೀಳುವುದನ್ನು ತಿಳಿಸುತ್ತವೆ. ಕೆಲವು ಗೀತೆಗಳಂತೂ ಕೊಂಡದ ವರೆಗೆ ಮಾತ್ರ ವರ್ಣಿಸಲ್ಪಟ್ಟು, ಸತಿಕೊಂಡಕ್ಕೆ ಬೀಳುವುದನ್ನು ತಿಳಿಸುವುದೇ ಇಲ್ಲ. ಕೊನೆಯಲ್ಲಿ ಕೆಲವು ಮಂಗಳ ಪದ್ಯಗಳನ್ನು ಒಳಗೊಂಡಿದ್ದರೆ ಇನ್ನು ಕೆಲವುಮಂಗಳ ಪದ್ಯಗಳನ್ನು ಒಳಗೊಂಡಿರುವುದಿಲ್ಲ.

ಸತಿ ಘಟನೆಗಳನ್ನು ಮುಖ್ಯವಾಗಿಟ್ಟುಕೊಂಡು ರಚನೆಗೊಂಡ ಜನಪದ ಗೀತೆಗಳಲ್ಲಿ ಕತೆಯ ಬೆಳವಣಿಗೆಯ ದೃಷ್ಟಿಯಿಂದ ಮುಖ್ಯವಾಗಿ ಎರಡು ಭಾಗಗಳನ್ನು ಗುರುತಿಸಬಹುದು. ಕಥನ ಗೀತೆಯ ಪ್ರಾರಂಭದಿಂದ ಗಂಡನ ಮರಣದ ವರೆಗೆ ಇರುವ ಕತೆಯ ಭಾಗ ಮೊದಲನೆಯದಾದರೆ, ಗಂಡನ ಮರಣದ ನಂತರ ಸತಿ ಕೊಂಡಕ್ಕೆ ಬೀಳುವ ವರೆಗೆ ಇರುವ ಕತೆಯ ಭಾಗ ಎರಡನೆಯದಾಗುತ್ತದೆ. ಈ ಎರಡನೆಯ ಭಾಗದಲ್ಲಿ ಸತಿಯ ಆಚರಣೆಯ ಹಲವು ಮುಖಗಳ ವರ್ಣನೆ ಕಂಡು ಬರುವುದರಿಂದ ಸತಿಪದ್ಧತಿಯ ಅಧ್ಯಯನಕ್ಕೆ ಈ ಭಾಗ ಮುಖ್ಯವಾಗಿ ನೆರವಾಗುತ್ತದೆ.

ಕೆಲವು ಜನಪದ ಗೀತೆಗಳುಸತಿಪದ್ಧತಿಯ ಸೂಚನೆಗಳನ್ನು ಅಭಿವ್ಯಕ್ತ ಮಾಡುತ್ತವೆ. ಚಿನ್ನಮ್ಮನ ದಂಡಿ, ಲಾಳಸಂಕೊಮ್ಮಾರ — ಇವುಗಳನ್ನು ಈ ಗುಂಪಿನಲ್ಲಿ ಸೇರಿಸಬಹುದು.[23] ಇವುಗಳ ಮುಖ್ಯ ಉದ್ದೇಶ ಸತಿಯಾಗುವುದನ್ನು ಹೇಳುವುದಲ್ಲ, ಸ್ತ್ರೀಯರ ಮಹತ್ವತೆಯನ್ನು

ಕೀರ್ತಿಸುವದಾಗಿದೆ. ಈ ಗೀತೆಗಳ ಕೊನೆಯೂ ಸುಖಾಂತವಾಗಿರುವದು. 'ಚನ್ನಮ್ಮನ ದಂಡಿ' ಗೀತೆಯಲ್ಲಿ ಸತ್ತ ಕಾಳಿಂಗನೊಡನೆ ಚನ್ನವ್ವನ ಮದುವೆ ಏರ್ಪಡುತ್ತದೆ. ಮುಂದೆ ಚನ್ನವ್ವನಿಗೆ ತವರು ಮನೆಗೆ ಹೋಗಬೇಕೆಂದು ಹೇಳಲಾಗುತ್ತದೆ. ಆದರೆ ಗಂಡನೊಡನೆ ಚಿತೆ ಏರಲು ಬಯಸುತ್ತಾಳೆ. ಗೀತೆಯಲ್ಲಿ ಇನ್ನು ಮುಂದೆ ಬರುವ ವರ್ಣನೆಯ ವಿಷಯ ಅದು ಸತಿಪದ್ಧತಿಯ ಮೇಲೆ ಬೆಳಕನ್ನು ಬೀರುತ್ತದೆ. 'ಬಾಳೆಯ ಹಣ್ಣ ಸೂರ್ಯಾಡುತ, ಎಡಬಲ ದೇವಾಂಗದ ತೋಳ ತಿರವುತ'' ಚನ್ನಮ್ಮ ತನ್ನ ಗಂಡನ ವಿಮಾನದೊಡನೆ ಹೊರಡುತ್ತಾಳೆ. ಅಷ್ಟೇ ಅಲ್ಲದೆ, 'ಹತ್ತ್ಯಳ ವಿಮಾನ ಅತಿ ಬೇಗ' ಎಂದು ಹೇಳಿ,

ಪದ್ಮಿಗ ಆರುತಿ ಬೆಳಗ್ಯಾಳ ನನ್ನ ಚೆನ್ನ
ಕುಂತಾಳ ಗಂಡಾನ ಕೆಲದಲ್ಲಿ :

ಎಂದು ಅಪರೂಪವಾದ ವಿವರಣೆಯೊಂದನ್ನು ಜನಪದ ಕವಿ ನೀಡುತ್ತಾನೆ.[24] ಸತ್ತ ಕಾಳಿಂಗನನ್ನು ವಿಮಾನದಲ್ಲಿಡುವುದನ್ನು ಸೂಚಿಸುವುದಲ್ಲದೆ ಸತಿಯಾಗಲು ಹೊರಟ ಚೆನ್ನಮ್ಮ ವಿಮಾನದಲ್ಲಿ ಕುಳಿತಳು ಎಂದು ಹೇಳುವ ಭಾಗ ತುಂಬ ಮಹತ್ವದ್ದೆನಿಸುತ್ತದೆ. ಗಂಡನ ಶವದೊಡನೆ ಚನ್ನಮ್ಮನ ಮೆರವಣಿಗೆ ಅಡವಿಗೆ ಬರಲಾಗಿ, ದೊಡ್ಡ ಮಳೆ ಉಂಟಾಗಿ, ಜನರೆಲ್ಲ ಊರಿಗೆ ಮರಳುತ್ತಾರೆ. ಮುಂದೆ ಚನ್ನಮ್ಮ 'ಬಸವನನ್ನು ಪ್ರಾರ್ಥಿಸಿಕೊಂಡು ತನ್ನ ಗಂಡನ ಜೀವವನ್ನು ಮರಳಿ ಪಡೆದು ಕೊಳ್ಳುತ್ತಾಳೆ. ಈ ಜನಪದ ಗೀತೆ ಸತಿಯಾಗುವುದನ್ನು ಹೇಳುವುದಿಲ್ಲವಾದರೂ ಚೆನ್ನಮ್ಮನ ಸತಿಯಾಗುವ ನಿರ್ಧಾರ, ಅವಳನ್ನು ಸತಿಯಾಗದಂತೆ ತಡೆಯುವ ಪ್ರಯತ್ನ ಅವಳು ಕೊಂಡಕ್ಕೆ ನಡೆದುಬರುವದು — ಇತ್ಯಾದಿ ವಿವರಣೆಗಳು ಸತಿಪದ್ಧತಿಯ ಸೂಚನೆಗಳನ್ನುಳ್ಳವಾಗಿವೆ. ಲಾಳ ಸಂಕೊಮ್ಯಾರ — ಜನಪದ ಗೀತೆಯಲ್ಲಿ, ಮರನಾದ, ಲಾಳಸಂಕೋಮ್ಯಾರ ಇಲ್ಲದೆ ಆತನ ಖಡ್ಗದೊಂದಿಗೆ 'ಕಿರಿಮಗಳನ್ನು ಮದುವೆ ಮಾಡುತ್ತಾರೆ. ಹಲವು ದಿನಗಳ ನಂತರದಲ್ಲಿ 'ಚಿಕ್ಕ ಮಗಳು ತನ್ನ ಗಂಡ ಸತ್ತಿದ್ದಾನೆಂದು ತಿಳಿದು, ಅವನ ಗುರುತು ಹುಡುಕಲಿಕ್ಕೆ ಹೊರಡುತ್ತಾಳೆ. ಆಕೆ ಗಂಡ ಸತ್ತ ಗುರುತಿಗಾಗಿ ಒಂದು ಕಾಲು, ಎಲುವು ಸಿಕ್ಕರೆ ಕಿಚ್ಚು ಹೋಗುತ್ತೇನೆ ಎಂದು ಅಂದುಕೊಳ್ಳುತ್ತಾಳೆ. ಇಲ್ಲಿ ಅನುಗಮನದ ಸೂಚನೆ ಕಾಣುತ್ತೇವೆ.[25]

'' ಒಂದೆಲುವೊನೆ ಸಿಕ್ಕಿದ್ರ
ಅದು ಚಿಕ್ಕನೇ ಮಾಡಿಕಂಡು
ಆ ಕೆಂಡದನೇ ಒಳೀಕೆ
ಅದನೂವೆ ಅಕ್ಕಂಡ
ನಾನೂವೆ ಬೆದ್ದು
ಬದ್ದೋನೆ ಸಾಯುತಿದೆ ''

ಚಿಕ್ಕಮಗಳಿಗೆ ಗಂಡ ಸತ್ತ ಗುರುತು ಯಾವುದೂ ಸಿಗುವುದಿಲ್ಲ. ಕೊನೆಗೆ ಬಾವಿಗೆ ಹಾರಿಕೊಳ್ಳುತ್ತಾಳೆ. ಆಕೆ ಹತ್ತಿ ಬಂದ ಕುದುರೆ ಆಕೆಯನ್ನು ಬದುಕಿಸುತ್ತದೆ. ಗಂಡ ದೊರಕಿ ಗೀತೆ ಸುಖಾಂತವಾಗುತ್ತದೆ. ಆದರೆ ಗಂಡ ಸತ್ತದ್ದೆಂದು ತಿಳಿದು ಸಾಯಲು ನಿರ್ಧರಿಸುವುದು, ಸತ್ತ ಗುರುತು ಪಡೆದು ಅದರೊಡನೆ ಕಿಚ್ಚು ಹಾಯಲು ಆಲೋಚಿಸುವುದು — ಇವೆಲ್ಲ ಸತಿ ಆಚರಣೆಯ ಮುಖಗಳನ್ನು ಪರಿಚಯಿಸುತ್ತವೆ. ಹೀಗೆ ಈ ಜನಪದ ಗೀತೆಗಳು ಮಹಾಸತಿ ಗೀತೆಗಳಲ್ಲದಿದ್ದರೂ, ಅದರ ಸೂಚನೆಗಳನ್ನು ಒಳಗೊಂಡ ಗೀತೆಗಳೆಂದು ಗುರುತಿಸಬಹುದಾಗಿದೆ.

ಚನ್ನಪಟ್ಟಣದ ಮಾಸ್ತಿಗೀತೆ, ಅರಕೆರೆ ಮಾಸ್ತಿಗೀತೆ, ಮಾಯಮ್ಮ ಮಾಸ್ತಿ, ಕಲ್ಲೂರಮಾಸ್ತಿಪದ, ಮಾಸ್ತಮ್ಮ — ಈ ಜನಪದ ಗೀತೆಗಳು ಸತಿಯರನ್ನು ಪ್ರಾರ್ಥಿಸುವಂಥವುಗಳಾಗಿವೆ.[26] ಈ ಜನಪದ ಗೀತೆಗಳು ಮಹಾಸತಿ ಗೀತೆಗಳಿಂದ ಭಿನ್ನವಾಗಿವೆ. ಈ ಪ್ರಾರ್ಥನಾ ಗೀತೆಗಳು ಮುಖ್ಯವಾಗಿ ಸತಿಯರನ್ನು ಸ್ತುತಿಸುವ ಉದ್ದೇಶಗಳನ್ನುಳ್ಳವಾಗಿವೆ. ಇವು ಸತಿ ಉಟ್ಟಿರುವುದನ್ನು — ತೊಟ್ಟಿರುವುದನ್ನು, ನಿಂತಿರುವುದನ್ನು — ಕುಳಿತಿರುವುದನ್ನು ಈ ಮೊದಲಾಗಿ ವರ್ಣಿಸುವುದರ ಜೊತೆಗೆ ಅವಳ ಮಹಿಮೆಯನ್ನು — ಕೀರ್ತಿಯನ್ನು ಕೊಂಡಾಡುತ್ತವೆ. ಅಲ್ಲದೆ ತಮ್ಮನ್ನು ಕಾಪಾಡುವಂತೆಯೂ, ಅನುಗ್ರಹಿಸುವಂತೆಯೂ ಸತಿಯರನ್ನು ಭಕ್ತಿಭಾವದಿಂದ ಕೇಳಿಕೊಳ್ಳುತ್ತವೆ. ಇವು ಸತಿ ಘಟನೆಗಳ ಬಗ್ಗೆ ಯಾವ ವಿಷಯವನ್ನೂ ಹೇಳುವುದಿಲ್ಲ. ಇವು ಪತ್ನಿ ಸತಿಹೋದ ನಂತರ ದೇವತೆಯಾಗಿ ಸಿದ್ಧಗೊಂಡ ಮೇಲೆ ರಚನೆಗೊಂಡಂಥವು ಎಂಬುದನ್ನು ಸ್ಮರಿಸಬೇಕು. ಈ ಗೀತೆಗಳಿಂದ ಸಮಾಜದಲ್ಲಿ ಮಹಾಸತಿಯರ ಪ್ರಭಾವ, ಹಾಗೂ ಜನರ ನಂಬಿಕೆ ವಿಶ್ವಾಸಗಳು ಗಮನಕ್ಕೆ ಬರುತ್ತವೆ.

**ಜನಪದ ಕಥೆಗಳು:—** ಸತಿಹೋದ ಮಹಾಸತಿಯರ ಕುರಿತಾಗಿ ಗ್ರಾಮೀಣ ಬದುಕಿನಲ್ಲಿ ಕಥೆಕಟ್ಟಿ ಸತಿಘಟನೆಗಳ ವಿವರಗಳನ್ನು ರಕ್ಷಿಸಿಕೊಂಡು ಬಂದಿರುವುದನ್ನು ಇವತ್ತಿಗೂ ಕಾಣುತ್ತೇವೆ. ಕೊಂಡದ ಚಿನ್ನಮ್ಮ, ಕಳಗುಡ್ಡಮ್ಮ, ಮಾಣಿಕ್ಯಶೆಟ್ಟಿ, ಮಾಸ್ತಮ್ಮ, ದೀಪದಮಲ್ಲಿ, ಬಂಜಿನಾಗಮ್ಮ, ಅಡಗನಹಳ್ಳಿ ಮಾಸ್ತಿ, ಕಲ್ಲೂರು ಮಾಸ್ತಿ, ಅರಕೆರೆ ಮಾಸ್ತಿ, ಮಾಚನಹಳ್ಳಿ ಮಾಸ್ತಿ, ಜಲಧಿಗೆರೆ ಮಾಸ್ತಿ, ಕಮ್ಮಾರಗಟ್ಟ ಮಾಸ್ತಿ, ಕೊಂಡದಹಳ್ಳಿ ಮಾಸ್ತಿ, ಚಿಕ್ಕದೇವಿನ ಮಾಸ್ತಿ, ಶ್ರೀಕುಮಾರರಾಮನ ಮಾಸ್ತಿಯರು, ಚಂದಾವರ ಮಾಸ್ತಿ — ಈ ಮೊದಲಾದವು ಸತಿ ಘಟನೆಗಳನ್ನು ನಿರೂಪಿಸುವ ಜನಪದ ಕತೆಗಳಾಗಿವೆ.[27] ಈ ಕತೆಗಳಲ್ಲಿ ಹಲವು ಕತೆಗಳು ಪತ್ನಿ ಸತಿಹೋದುದನ್ನು ನೇರವಾಗಿ ತಿಳಿಸುತ್ತವೆ. ಇನ್ನು ಕೆಲವು ಕತೆಗಳು ಸತಿ ಘಟನೆಗಳ ಕುರುಹುಗಳನ್ನು ಮಾತ್ರ ತೋರಿಸುತ್ತವೆ. ಕಾರಣ ಮಹಾಸತಿಯರ ಕುರಿತಾಗಿರುವ ಜನಪದ ಕತೆಗಳನ್ನು ಎರಡು ವಿಭಾಗಗಳನ್ನಾಗಿ ಗುರುತಿಸಬಹುದಾಗಿದೆ :

ಒಂದು, ಸತಿಘಟನೆಗಳನ್ನು ಚಿತ್ರಿಸುವ ಜನಪದ ಕತೆಗಳು,

ಎರಡು, ಸತಿಘಟನೆಗಳ ಕುರುಹುಗಳನ್ನುಳ್ಳ ಜನಪದ ಕತೆಗಳು,

ಕೊಂಡದ ಚೆನ್ನಮ್ಮ, ಕಳಗುಚ್ಚಮ್ಮ, ಮಾಣಿಕ್ಯಶೆಟ್ಟಿ, ಅರಕೆರೆ ಮಾಸ್ತಿ, ಕಮ್ಮಾರಗಟ್ಟೆ ಮಾಸ್ತಿ, ಕೊಂಡದಹಳ್ಳಿ ಮಾಸ್ತಿ, ಚಿಕ್ಕದೇವಿನಮಾಸ್ತಿ, ಶ್ರೀಕುಮಾರರಾಮನ ಮಹಾಸತಿಯರು— ಈ ಕಥೆಗಳನ್ನು ಮೊದಲನೆಯ ಗುಂಪಿನಲ್ಲಿ ಸೇರಿಸಬಹುದಾಗಿದೆ. ಕೊಂಡದ ಚೆನ್ನಮ್ಮ ಕತೆಯಲ್ಲಿ ಗಂಡ ಯುದ್ಧದಲ್ಲಿ ಮಡಿದುದನ್ನು ತಿಳಿದು, ಚಿತೆ ಮಾಡಿಸಿಕೊಂಡು ಚೆನ್ನಮ್ಮ ಸತಿಹೋಗುತ್ತಾಳೆ. ಕಳಗುಚ್ಚಮ್ಮನ ಕತೆಯಲ್ಲಿ, ಈರಣ್ಣನೊಡನೆ ಕೆಂಪಮ್ಮ ಗಂಡನ ಮನೆಗೆ ಹೋಗುತ್ತಿರುವಾಗ ಜೊತೆಗೆ ಬಂದ ಆಳುಮಗ ಬೇಡರ ಹುಡುಗ, ದಾರಿಮಧ್ಯದಲ್ಲಿ ಊಟಕ್ಕೆ ಕುಳಿತಾಗ ಗಂಡನನ್ನು ಮಚ್ಚಿನಿಂದ ಹೊಡೆದುಕೊಲ್ಲುತ್ತಾನೆ. ಆಗ ಕೆಂಪಮ್ಮ ಗಾಬರಿಗೊಳ್ಳದೆ 'ಇನ್ನೇನು ಯೋಚ್ನೆ ಮಾಡ್ಬೇಡ. ನಾನೆಂಗಿದ್ದರೂ ನಿನ್ನವಳಾದೆ, ಇನ್ನಷ್ಟು ಬುತ್ತಿ ಉಣ್ಣು'' ಎಂದು ಬೇಡರ ಹುಡುಗನಿಗೆ ಹೇಳಿ, ಊಟಕ್ಕೆ ಬಡಿಸಿ, ಅದೇ ಮಚ್ಚಿನಿಂದ ಅವನನ್ನು ಕೊಲ್ಲುತ್ತಾಳೆ. ಕೆಂಪಮ್ಮನ ಅಣ್ಣಂದಿರು ಅವಳೊಡನೆ ಹೋದ ನಾಯಿ ಬಂದದ್ದನ್ನು ನೋಡಿ, ಕುದುರೆ ಹತ್ತಿ ಬರುತ್ತಾರೆ. ಕೆಂಪಮ್ಮನನ್ನು ತವರು ಮನೆಗೆ ಕರೆದುಕೊಂಡು ಹೋಗಲು ಪ್ರಯತ್ನಿಸಿದರೂ, ಅವಳು ಕೆಂಡಕೊಂಡವಾಗುವ ನಿರ್ಧಾರವನ್ನು ಬದಲಿಸುವುದಿಲ್ಲ. ಕೊನೆಗೆ ಶ್ರೀಗಂಧದ ಚಿತೆ ಮಾಡಿಸಿ ಸತಿಯಾಗುತ್ತಾಳೆ. ಮಾಣಿಕ್ಯಶೆಟ್ಟಿ ಕತೆಯಲ್ಲಿ, ಮಾಣಿಕ್ಯ ಶೆಟ್ಟಿಯ ಆರು ಜನ ಸಹೋದರರು ತಮ್ಮ ತಮ್ಮನ ಮರಣವನ್ನು ಸಹಿಸಲಾರದೆ ಅಗ್ನಿಕುಂಡದಲ್ಲಿ ಹಾರಿ ಪ್ರಾಣಬಿಡುತ್ತಾರೆ. 'ಗಂಡಂದಿರು ಹೋದ ಮೇಲೆ ತಾವು ಬದುಕಿದ್ದೇನು ಫಲ' ಎಂದು ಆಲೋಚಿಸಿ, ಆರು ಜನ ಅವರ ಪತ್ನಿಯರು ಅಗ್ನಿಕುಂಡದಲ್ಲಿ ಹಾರುತ್ತಾರೆ. ಅರಕೆರೆ ಮಾಸ್ತಿಕತೆಯಲ್ಲಿ, ಬ್ಯಾಟಯ್ಯನ ಪತ್ನಿ ಗಂಡ ಸತ್ತ ಮೇಲೆ ಈಟಿಯಿಂದ ಇರಿದುಕೊಂಡು ಪ್ರಾಣಬಿಡುತ್ತಾಳೆ. ಕಮ್ಮಾರಗಟ್ಟೆ ಮಾಸ್ತಿಕತೆ ಕಳಗುಚ್ಚಮ್ಮನ ಕತೆಯನ್ನೇ ಹೆಚ್ಚು ಹೋಲುತ್ತದೆ. ಮಾಸ್ತಿಯು ಗಂಡ ಕೆಂಚಪ್ಪನೊಡನೆ ಗಂಡನ ಮನೆಗೆ ಹೊರಟಾಗ ಆಳುಮಗ ಮಾದಿಗನು ಜೊತೆಗೆ ಹೊರಡುತ್ತಾನೆ. ಕೆಂಚಪ್ಪನು ದಾರಿಮಧ್ಯದಲ್ಲಿ ನೀರು ಕುಡಿಯುವ ಸಮಯದಲ್ಲಿ ಮಾದಿಗನು ಅವನನ್ನು ಕುಡುಗೋಲಿನಿಂದ ಕತ್ತರಿಸಿ ಹಾಕುತ್ತಾನೆ. ಮಾಸ್ತಿಯೂ ಮಾದಿಗನನ್ನು ನೀರು ಕುಡಿಯುವಾಗ ಕತ್ತರಿಸಿ ಬಿಡುತ್ತಾಳೆ. ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ಮಾದಿಗನ ತಲೆಯನ್ನು ಕಾಲಿಗೆ ಕಟ್ಟಿಕೊಂಡು ಕಮ್ಮಾರಗಟ್ಟೆಗೆ ಬಂದು, ಕೆಂಡಕೊಂಡ ಮಾಡಿಸಿ ಸತಿಹೋಗುತ್ತಾಳೆ. ಕೆಂಚಪ್ಪನ ಸೂಳೆಯೊಬ್ಬಳೂ ಮಾಸ್ತಿಯೊಡನೆ ಅಗ್ನಿಪ್ರವೇಶ ಮಾಡುತ್ತಾಳೆ. ಕೊಂಡದಹಳ್ಳಿ

ಮಾಸ್ತಿ ಕತೆಯೂ ಇದೆ ಕತೆಯ ಮಾದರಿಯಲ್ಲದೆ. ಚಿಕ್ಕದೇವಿನ ಮಾಸ್ತಿ ಕತೆಯಲ್ಲಿ ಮದುವೆಗೆ ನಿಶ್ಚಿತವಾಗಿದ್ದ ಗಂಡ ಕರಿಯಪ್ಪ ಯುದ್ಧದಲ್ಲಿ ಮಡಿಯಲಾಗಿ, ಆತನ ಸ್ತ್ರೀ ಸತಿಹೋಗುತ್ತಾಳೆ. ಕುಮಾರರಾಮನ ಮಹಾಸತಿಯರು ಕತೆಯಲ್ಲಿ ಕುಮಾರರಾಮ ತೆಂಕದೇಶಕ್ಕೆ ಯುದ್ಧಕ್ಕೆ ಹೋಗಿದ್ದಾಗ, ಕಾಳಿಕಾದೇವಿಯನ್ನು ಮರೆತ ಕಾರಣದಿಂದಾಗಿ ಮಡಿಯುತ್ತಾನೆ. ಅವನ ನಾಲ್ಕು ಜನ ಪತ್ನಿಯರಾದ ನಾಗಮ್ಮ, ಮಾಳಮ್ಮ, ಹೊನ್ನಮ್ಮ, ಕೆಂಡದಮ್ಮ — ಇವರು ಸತಿಹೋಗುತ್ತಾರೆ. ಈ ರೀತಿಯಾಗಿ ಕೊಡ್ಗಡದ ಚನ್ನಮ್ಮಾದಿ ಕತೆಗಳು ಸತಿಹೋದುದನ್ನು ತಿಳಿಸುವ ಮುಖ್ಯ ಉದ್ದೇಶವನ್ನು ಹೊಂದಿವೆ

ಮಾಸ್ತಮ್ಮ, ದೀಪದಮಲ್ಲಿ, ಬಂಜೆನಾಗಮ್ಮ ಅಡಗನಹಳ್ಳಿ ಮಾಸ್ತಿ, ಕಲ್ಲೂರಮಾಸ್ತಿ, ಮೂಚನಹಳ್ಳಿ, ಮಾಸ್ತಿ ಜಲಧಿಗೆರೆ ಮಾಸ್ತಿ, ಚಂದಾವರ ಮಾಸ್ತಿ — ಈ ಕತೆಗಳನ್ನು ಎರಡನೆಯ ಗುಂಪಿನಲ್ಲಿ ಸೇರಿಸಬಹುದಾಗಿದೆ. ಇವು ಸತಿ ಘಟನೆಗಳ ಗುರುತುಗಳನ್ನು ತೋರಿಸಿಕೊಟ್ಟರೂ ಮಹಾಸತಿ ಕತೆಗಳಿಂದ ಭಿನ್ನವಾಗಿವೆ. ಮಾಸ್ತಮ್ಮ ಕತೆಯಲ್ಲಿ, ಒಕ್ಕಲಿಗರ ಹೆಣ್ಣು ಮಗಳನ್ನು ಅವಳ ಗಂಡ ಯುದ್ಧಕ್ಕೆ ಹೋದ ಸಮಯದಲ್ಲಿ ಮೈದುನನು ಮುಂಗೈ ಹಿಡಿದು ಮಾತನಾಡಿಸುತ್ತಾನೆ ಇದನ್ನು ಸಹಿಸದ ಆ ಹೆಣ್ಣು ಮಗಳು ಸುತ್ತೂರ ಸ್ವಾಮಿಗಳ ಸಮ್ಮುಖದಲ್ಲಿ ಅಗ್ನಿಪ್ರವೇಶ ಮಾಡುತ್ತಾಳೆ. 'ದೀಪದಮಲ್ಲಿ' ಕತೆಯಲ್ಲಿ, ಗಂಡ ಮರಣಹೊಂದಿದ್ದಾನೆಂಬ ಸುದ್ದಿ ಕೇಳಿ ಪತ್ನಿ ಈ ನನ್ನ ದೇಹ ಅಗ್ನಿಗೆ ಸಮರ್ಪಣೆಯಾಗಿ ಹೋಗಲಿ' ಎಂದು ಹೇಳಿ ಅಗ್ನಿಯೊಳಗೆ ಹಾರಿಬಿಡುತ್ತಾಳೆ. ಆದರೆ ಆಕೆ ಮಳೆ ಬಂದ ಕಾರಣ ನೀರಿನಲ್ಲಿ ಹರಿದುಹೋಗಿ ಬದುಕಿಕೊಳ್ಳುತ್ತಾಳೆ. ಗಂಡನು ಮುಂದೆ ದೊರಕಿ ಕತೆ ಸುಖಾಂತವಾಗುತ್ತದೆ. ಬಂಜೆನಾಗಮ್ಮ ಕತೆಯಲ್ಲಿ ದೊರೆಯ ಮಗ ಸಾಯಲಾಗಿ ಹೆಣದೊಡನೆ ಬ್ರಾಹ್ಮಣನ ಮಗಳನ್ನು ಲಗ್ನ ಮಾಡುತ್ತಾರೆ. ಆಗ ಆ ಹುಡುಗಿ ಚಿತೆ ಏರಲು ಸಂಕಲ್ಪಿಸುತ್ತಾಳೆ. ''ನಾ ಕೂತ್ಕೊಂಡು, ನನ್ನ ಗಂಡನ ತಲೇನ ನನ್ನ ತೊಡೆಯ ಮೇಲೆ ಮಡಿಕಂಡ ಕುಳಿಕೊಳ್ತೀನಿ, ಆಗ ಹಚ್ಚಿ ಬಿಟ್ಟು ಹೋಗಿ'' ಎಂದು ಅವಳು ಹೇಳಲಾಗಿ ಜನರು ಗಂಡನೊಡನೆ ಆಕೆಗೂ ಕಿಚ್ಚುಕೊಟ್ಟು ಹೋಗುತ್ತಾರೆ. ಆದರೆ ದೇವತೆಗಳ ಅನುಗ್ರಹದಿಂದ ಅವರು ಬದುಕಿಕೊಂಡು ಸುಖವಾಗಿರುತ್ತಾರೆ. ಅಡಗನಹಳ್ಳಿ ಮಾಸ್ತಿಕತೆಯಲ್ಲಿ, ಪತ್ನಿಯೊಬ್ಬಳು ಗಂಡ ಸೈನ್ಯಕ್ಕೆ ಹೊರಟು ಹೋದವನು ಬಹಳ ದಿನಗಳವರೆಗೆ ಬರದೇ ಇದ್ದುದ್ದಕ್ಕಾಗಿ ಮೈಸೂರು ಅರಸರ ಅಪ್ಪಣೆ ಪಡೆದುಕೆಂಡಕೊಂಡವಾಗುತ್ತಾಳೆ. ಕಲ್ಲೂರ ಮಾಸ್ತಿಕತೆಯಲ್ಲಿ, ಬ್ರಾಹ್ಮಣರ ಹೆಣ್ಣುಮಗಳು ಕೆಂಡಕೊಂಡವಾಗಲು ಬಯಸಿ, ಅಗ್ನಿಪ್ರವೇಶ ಮಾಡುತ್ತಾಳೆ. ಮೂಚನಹಳ್ಳಿ ಮಾಸ್ತಿಕತೆಯಲ್ಲಿ 'ಸಾವ್ಕಾರ ಹಜಾಮ' ನು ಲಗ್ನವಾಗಲು ಬಯಸಿದಾಗ, ಅದನ್ನು ಒಪ್ಪದೇ ಅಕ್ಕ ತಂಗಿಯರು ಊರು ಬಿಟ್ಟುಹೋಗಿ ನಿರ್ವಾಣಹೊಂದುತ್ತಾರೆ. ಅವರಲ್ಲಿ ಮಾಸ್ತಮ್ಮನೂ ಒಬ್ಬಳು. ಜಲಧಿಗೆರೆ ಮಾಸ್ತಿಕತೆಯಲ್ಲಿ

ವಿಜಯನಗರದಲ್ಲಿದ್ದ ಜಲನಾಯಕನ ಪತ್ನಿ ಹರಿವಿನಮ್ಮನ ಮೇಲೆ ರಾಜನು ಮನಸ್ಸು ಮಾಡುತ್ತಾನೆ. ಜಲನಾಯಕನು ಕುಟುಂಬ ಸಮೇತ ಊರು ಬಿಟ್ಟು ಹೊರಡುತ್ತಾನೆ. ರಾಜದೂತರು ಅವರನ್ನು ಬೆನ್ನಟ್ಟಿ ಬರಲು, ಹರಿವಿನಮ್ಮ 'ನಾನು ಇನ್ನು ಉಳಿಯುವುದಿಲ್ಲ ಈಗ ಕೂಡಲೇ ನನ್ನನ್ನು ಶಿರಚ್ಛೇದನ ಮಾಡಿ' ಎಂದು ಪತಿಯನ್ನು ಕೇಳಿಕೊಳ್ಳಲು ಜಲನಾಯಕನು ವಿಧಿಯಿಲ್ಲದೆ ಆಯುಧದಿಂದ ಶಿರಚ್ಛೇದನ ಮಾಡುತ್ತಾನೆ. ಅಂದಿನಿಂದ ಜಲನಾಯಕನ ಮನೆತನಕ್ಕೆ ಅವಳು ಮಾಸ್ತಿಯಮ್ಮಳಾದಳು. ಚಂದಾವರ ಮಾಸ್ತಿಕತೆಯಲ್ಲಿ ಗುಡುಗಾರರ ಹೆಣ್ಣುಮಗಳು ಮನೆಬಿಟ್ಟು ನಡೆದುಕೊಂಡು ಹೋಗುತ್ತಿರುವಾಗ ಕಪಿಲೀರ-ಕೊಮರಯ್ಯ ಆಕೆಯನ್ನು ತಡೆದು ಸ್ಥಳಕೊಡುತ್ತೇವೆ ನಮ್ಮವಳಾಗು ಎಂದು ಹೇಳಿ ಹೊರಡುತ್ತಾರೆ. ಅವರು ಮರೆಯಾಗಲು ಈಕೆ ಕೊಂಡಕೊಂಡವಾಗಲು ಸಿದ್ಧತೆ ಮಾಡುತ್ತಾಳೆ ಕಪಿಲೀರ ಕೊಮರಯ್ಯ ಮತ್ತೆ ಈಕೆಯ ಮುಂದೆ ಕಾಣಿಸಿಕೊಳ್ಳಲಾಗಿ ಅಗ್ನಿಗೆ ಬೀಳದೆ ಉಳಿದುಕೊಳ್ಳುತ್ತಾಳೆ. ಈ ರೀತಿಯಾಗಿ ಮಾಸ್ತಿಯಮ್ಮಾದಿ ಕತೆಗಳು ಸತಿ ಆಚರಣೆಯ ಸೂಚನೆಗಳನ್ನು ತೋರಿಸಿಕೊಡುತ್ತವೆ. ಈ ಕತೆಗಳಲ್ಲಿ ದೀಪದಮ್ಮ, ಬಂಜೆನಾಗಮ್ಮ ಕತೆಗಳನ್ನು ಬಿಟ್ಟರೆ ಉಳಿದ ಕತೆಗಳು 'ಮಾಸ್ತಿ' ಎಂಬ ಹೆಸರಿನಿಂದಲೇ ಪ್ರಚಲಿತದಲ್ಲಿವೆ. ಚಂದಾವರದಲ್ಲಂತೂ ಮಾಸ್ತಿಕಲ್ಲನ್ನು 'ಮಾಸ್ತಿಯಮ್ಮ ಎಂದು ತೋರಿಸುತ್ತಾರೆ. ಇವು ಮೂಲತಃ ಸತಿಹೋದವರ ಕತೆಗಳೇ ಆಗಿದ್ದು ಜನಪದ ಜೀವನದಲ್ಲಿ ರೂಪಾಂತರ ಹೊಂದುತ್ತ ಹೊರಟಿವೆ ಹೊರಟಂತಿವೆ. ದೀಪದಮ್ಮಳ ಕತೆಯಲ್ಲಿ ಗಂಡುಸತ್ತನೆಂಬ ಸುದ್ದಿ ಕೇಳಿ ಪತ್ನಿ ಕೊಂಡ-ಕೊಂಡವಾಗುವದು ಸತಿಪದ್ಧತಿಯನ್ನೇ ಸೂಚಿಸುತ್ತದೆ. ಬಂಜೆನಾಗಮ್ಮ ಕಥೆ ವಿಶೇಷವಾಗಿದೆ. ಹೆಣದೊಂದಿಗೆ ಲಗ್ನವಾದ ಹೆಣ್ಣುಮಗಳು ಅಗ್ನಿ ಪ್ರವೇಶ ಮಾಡಬಯಸುವದು ಸತಿಪದ್ಧತಿಯ ಉಗ್ರತೆಯ ಮುಂದಿನ ಘಟ್ಟ ಎನಿಸುತ್ತದೆ

ಈ ರೀತಿಯಾಗಿ ಜನಪದ ಸಾಹಿತ್ಯ ಸತಿ ಘಟನೆಗಳ ಕುರಿತು ಅಮೂಲ್ಯ ವಿಷಯಗಳನ್ನು ತನ್ನಲ್ಲಿ ಹುದುಗಿಸಿಕೊಂಡಿದೆ. ಜನಪದರು ತಮ್ಮ ಕಣ್ಣೆದುರು ಜರುಗುತ್ತಿದ್ದ ಸತಿ ಘಟನೆಗಳ ಬಗ್ಗೆ ಅತ್ಯಂತ ಕಳಕಳಿಯಿಂದ ಕತೆಕಟ್ಟಿ — ಹಾಡಿ ಅದರ ವಿವರಗಳನ್ನು ರಕ್ಷಿಸಿಟ್ಟುಹೋಗಿದ್ದಾರೆ ಜನಪದ ಜೀವನದಲ್ಲಿ ಈ ವಿವರಗಳು ಉಳಿದುಕೊಂಡು ಬರುವಾಗ, ಹಲವು ವ್ಯತ್ಯಾಸಗಳನ್ನು ಪಡೆಯುತ್ತ ಬಂದಿರಲೂಬೇಕು. ಒಂದೇ ಸತಿಘಟನೆಯ ಕುರಿತು ಸಹಜವಾಗಿಯೇ ಪಾಠಾಂತರ ಗೀತೆಗಳು ಸಿಗುವುದನ್ನು ಇಲ್ಲಿ ಸ್ಮರಿಸಬಹುದು. ಹೀಗಿದ್ದುದು ಸತಿಪದ್ಧತಿಯನ್ನು ತಿಳಿಸುವಲ್ಲಿ ಜನಪದ ಸಾಹಿತ್ಯ ನಂಬಿಕೆಗೆ ಅನರ್ಹ ಎಂದು ಸಂಪೂರ್ಣ ಕೈ ಬಿಡುವಂತೆಯೂ ಇಲ್ಲ. ಶಾಸನ-ಕಾವ್ಯ ಈ ಮೊದಲಾದ ಆಕರಗಳ ನೆರವಿನೊಂದಿಗೆ ಜನಪದ ಸಾಹಿತ್ಯವನ್ನು ಬಳಸಿಕೊಂಡು

ಕರ್ನಾಟಕದಲ್ಲಿದ್ದ ಸತಿ ಪದ್ಧತಿಯ ಕುರಿತು ಸ್ಪಷ್ಟ ಚಿತ್ರ ಕೊಡಲು ಸಾಧ್ಯವಿದೆ.

3. ದಿನಚರಿ ಸಾಹಿತ್ಯ :

ಭಾರತಕ್ಕೆ ಸಂದರ್ಶನಕೊಟ್ಟ ಅನೇಕ ವಿದೇಶಿಗರು ತಾವು ಕಂಡ ಸತಿಘಟನೆಗಳನ್ನು ತಮ್ಮ ದಿನಚರಿಯಲ್ಲಿ ಬರೆದಿಟ್ಟಿದ್ದಾರೆ. ಈ ಪ್ರವಾಸಿಗರು ಇಂಗ್ಲೆಂಡ್, ಫ್ರಾನ್ಸ್, ಜರ್ಮನ್, ಇಟಲಿ, ಸ್ಪೇನ್, ಮೊರಾಕ್ಕೋ, ತುರ್ಕಿ, ಪರ್ಶಿಯಾ — ಈ ಮೊದಲಾದ ದೇಶಗಳಿಂದ ಬಂದವರಾಗಿದ್ದಾರೆ. ಇವರಲ್ಲಿ ನೌಕಾಬಲಾಧಿಪತಿ, ಭೂಗೋಳಶಾಸ್ತ್ರಜ್ಞ, ವ್ಯಾಪಾರಿ, ಕಂಪನಿ ನೌಕರ, ಕ್ರಿಶ್ಚಿಯನ ಮಿಷಿನರಿ ಈ ಮೊದಲಾದವರು ಸೇರಿದ್ದಾರೆ. ಕೆಲವು ಪ್ರವಾಸಿಗರಂತೂ ದೇಶಪರ್ಯಟನದ ಉದ್ದೇಶವನ್ನೇ ಇಟ್ಟುಕೊಂಡವರಾಗಿದ್ದಾರೆ. ಟವರ್ನಿಯರ್ ಟಾವರನ್ನೈಯು ಭಾರತಕ್ಕೆ ಆರು ಬಾರಿ ಸಂದರ್ಶನಕೊಟ್ಟದ್ದು ತುಂಬ ವಿಶೇಷವಾಗಿದೆ. ಈ ಪ್ರವಾಸಿಗರು ಬರೆದ ಪ್ರವಾಸ ಕಥನಗಳು ಇಂಗ್ಲೀಷ್, ಫ್ರೆಂಚ್, ಲ್ಯಾಟಿನ್, ಇಟಾಲಿಯನ್ — ಇಲ್ಲಿ ಮೊದಲಾದ ಭಾಷೆಗಳಲ್ಲಿವೆ. ಇವರಲ್ಲಿ ಕೆಲವು ಪ್ರವಾಸಿಗರು ದಿನಚರಿಯನ್ನು ಗ್ರಂಥರೂಪದಲ್ಲಿ ಬರೆದಿಟ್ಟಿದ್ದರೆ, ಇನ್ನೂ ಕೆಲವರು ಪತ್ರರೂಪದಲ್ಲಿ ಬರೆದಿಟ್ಟಿದ್ದಾರೆ. ಕೆಲವು ಪ್ರವಾಸಿಗರಂತೂ ತಮ್ಮ ಪ್ರವಾಸ ಕಥನವನ್ನು ಹೇಳಿ ಬರೆಯಿಸಿರುವುದೂ ಉಂಟು.

ಪ್ರವಾಸಿಗರು ಭಾರತದಲ್ಲಿ ಸಂಚರಿಸುವ ಕಾಲದಲ್ಲಿ ತಾವು ಕಂಡ ಸತಿಘಟನೆಗಳನ್ನು ಕಥನ ರೂಪದಲ್ಲಿ ಬರೆದಿಡಲು ಪ್ರಯತ್ನಿಸಿದರು. ಭಾರತದ ಜನತೆಗೆ ಸಾಮಾನ್ಯ ಘಟನೆ ಎನಿಸಿದ ಸತಿ ಆಚರಣೆ ವಿದೇಶಿಯರಿಗೆ ಕ್ರೂರವೂ ಆಶ್ಚರ್ಯದಾಯಕವೂ, ಗೌರವಯುತವೂ ಎನಿಸಿತು. ಈ ಕಾರಣದಿಂದಾಗಿಯೇ ಪ್ರವಾಸಿಗರು ಸತಿಘಟನೆಗಳ ವಿವರಗಳನ್ನು ವಿಸ್ತಾರವಾಗಿ ನಿರೂಪಿಸಲು ಪ್ರಯತ್ನಿಸಿದರು. ಸತಿ ಘಟನೆಗಳನ್ನು ಕುರಿತು ಬರೆಯುತ್ತ ವಿದೇಶಿಯರು ಕೊಟ್ಟ ಅಭಿಪ್ರಾಯಗಳನ್ನು ನೆನೆಪಿಸಿಕೊಂಡರೆ ಈ ವಿಷಯ ಸ್ಪಷ್ಟವಾಗುತ್ತದೆ. "ನಾನು ಇಂಡಿಯಾದಲ್ಲಿ ಕಂಡ ವಿಚಿತ್ರವೂ, ಆಶ್ಚರ್ಯಕರವೂ — ಆದ ಸಂಗತಿಗಳಲ್ಲಿ ಕೆಲವನ್ನು ಹೇಳಬಯಸುತ್ತೇನೆ" — ಎಂದು ಸ್ವಿದ್ ಆಲ ರೆಯಿಸ್ ಹೇಳುತ್ತಾನೆ.[28] ಸೀಜರ್ ಫ್ರೆಡೆರಿಕನು 'ನಾನಿದ್ದ ಏಳು ತಿಂಗಳ ಕಾಲದಲ್ಲಿ ಜೆಂಟೈಲರು ಮಾಡುತ್ತಿದ್ದ ಅನೇಕ ವಿಚಿತ್ರ ಹಾಗೂ ಅಮಾನುಷ ಕೃತ್ಯಗಳನ್ನು ಕಂಡೆ" ಎನ್ನುತ್ತಾನೆ.[29] "ನಾನು ಕಂಡಆಶ್ಚರ್ಯದ ವಿಷಯವೊಂದನ್ನು ಹೇಳುತ್ತೇನೆ" ಎಂದು ಗಸ್ಪಾರೋ ಬಾಲ್ಬಿ ಹೇಳುತ್ತಾನೆ.[30] ಅನಾಮಧೇಯ ಪ್ರವಾಸಿಯೊಬ್ಬನು "ಸತ್ತ ಗಂಡನ ಚಿತೆಯಲ್ಲಿ ಹೆಂಡತಿ ಬೀಳುತ್ತಾಳೆಂಬ ಅತ್ಯಾಶ್ಚರ್ಯದ ವಿಚಾರವನ್ನು ಕೇಳಿ ನಾನು ಮೊದಲು ನಂಬಲಿಲ್ಲ. ಆಮೇಲೆ ಒಂದು ಸಲ ನಾನು ಜಾನವೆಸಿಕನ ಸಂಗಡ ಹೋಗಿ

ಅದನ್ನು ನನ್ನ ಕಣ್ಣಾರೆ ಕಂಡಾಗ ನಂಬಬೇಕಾಯಿತು'' ಎಂದು ತಿಳಿಸುತ್ತಾನೆ.[31] ಸತಿಹೋದ ಸ್ತ್ರೀಯರನ್ನು ಕುರಿತು ಫ್ರಾನ್ಸಿಸ್ ಪೆಲ್ಸಾರ್ಟ್ ''ನಮ್ಮ ದೇಶದ ಹೆಂಗಸರು ತಮ್ಮ ಗಂಡಂದಿರಿಗೆ ತೋರಿಸುವ ಪ್ರೇಮದಷ್ಟೇ ಪವಿತ್ರವಾದುದು. ಈ ಹೆಂಗಸಿನ ಪ್ರೇಮ'' ಎಂದು ಬರೆಯುತ್ತಾನೆ.[32] 'ತೆಲ್ಲಂಗಾ ಜಾತಿಗೆ ಸೇರಿದ ಗಿಯುಕ್ಕಮನ ಸಹಗಮನವನ್ನು ಕಂಡ ಪಿಟಿರಾತಲ್ಯಾ ದೆಲ್ಲಾವಲ್ಲೆ ''ಕೀಳುವರ್ಗದ ಜನರಲ್ಲಿಯೂ ಎಂತಹ ಮಹಾತ್ಯಾಗ'' ಎಂದು ಉದ್ಗರಿಸುತ್ತಾನೆ. ಅಲ್ಲದೆ ಅವನು ಹೀಗೆ ಬರೆಯುತ್ತಾನೆ.[33]

''ಇಂಡಿಯಾದಲ್ಲಿ ಗಂಡ ಸತ್ತಾಗ ಹೆಂಡತಿಯರು ಸತಿಯನ್ನು ಆಚರಿಸುತ್ತಾರೆಂದು ಕೇಳಿದ್ದೆ. ಈಗ ಅದನ್ನು ಕಣ್ಣಾರೆ ನೋಡಿದೆ ಎಂದು ನನ್ನ ದೇಶದವರಿಗೆ ಹೇಳುತ್ತೇನೆ'' ಹಾಗೆಯೇ ಮುಂದುವರೆದು ಪಿಯಾತಲ್ಯಾ ದೆಲ್ಲಾವಲ್ಲೆ ಈ ರೀತಿ ಕೃತಜ್ಞತೆಯ ಮಾತುಗಳನ್ನಾಡುತ್ತಾನೆ. ''ಆಕೆ ಸಾಯುವುದು ನನಗೆ ಸುತಾರಾಂ ಇಷ್ಟವಿರಲಿಲ್ಲ. ಸಾಧ್ಯವಿದ್ದರೆ ಅದನ್ನು ತಪ್ಪಿಸುತ್ತಿದ್ದೆ. ಆದರೆ ಅದು ಸಾಧ್ಯವಿಲ್ಲದ್ದರಿಂದ ಬೇರೆ ರೀತಿಯಲ್ಲಿ ಆಕೆಯ ಮನಸ್ಸಂತೋಷ ಪಡಿಸಲು ನಿರ್ಧರಿಸಿದೆ. ಆಕೆಯ ಹೆಸರು ಈ ಪ್ರಪಂಚದಲ್ಲಿ ಸ್ಥಿರಸ್ಥಾಯಿಯಾಗಿರುವಂತೆ ನನ್ನ ಲೇಖನಿಯಿಂದ ಶಕ್ತಿಮೀರಿ ಚಿತ್ರಿಸುವೆನೆಂದು ಆಕೆಗೆ ಭರವಸೆ ನೀಡಿದೆ''.

ಕೆಲವು ಪ್ರವಾಸಿಗರು ಸ್ತ್ರೀಯರ ಧೈರ್ಯವನ್ನು ಮೆಚ್ಚಿ ಅವರು ಸತಿಹೋದ ಘಟನೆಗಳನ್ನು ವರ್ಣಿಸಲು ಪ್ರಯತ್ನಿಸಿದ್ದಾರೆ. ಫ್ರಾನಸ್ವಾಸ್ ಬಿರನ್ಯೇ ಹೀಗೆ ಬರೆಯುತ್ತಾನೆ[34]

''ನಾನು ಸೂರತ್ತಿನಿಂದ ಪರ್ಷಿಯಾಕ್ಕೆ ಹೊರಟು ಬರುತ್ತಿರುವಾಗ ಒಬ್ಬ ವಿಧವೆ ಚಿತೆಯಲ್ಲಿ ಬೀಳುವುದನ್ನು ಕಂಡೆ .... ಆಕೆಯ ಕೆಚ್ಚುಧೈರ್ಯ ಹಾಗೂ ದಿಟ್ಟ ನಡಗೆಗಳನ್ನು ವರ್ಣಿಸಲು ನನಗೆ ಶಕ್ತಿ ಸಾಲದು. ಹೆದರದ ಹೆಜ್ಜೆ, ಎಲ್ಲರೊಡನೆ ಆಡುತ್ತಿದ್ದ ಸಲಿಗೆಯ ಮಾತಿನ ರೀತಿ ಒಂದಿಷ್ಟೂ ಚಿತ್ತ ಚಾಂಚಲ್ಯವಿಲ್ಲದೆ ಸ್ನಾನಮಾಡಿಸಿಕೊಳ್ಳುತ್ತಿದ್ದ ವಿಧಾನ, ನೋಡುತ್ತಾ ನಿಂತ ನಮ್ಮ ಕಡೆ ಆಕೆ ಬೀರುತ್ತಿದ್ದ ಉಪೇಕ್ಷಾದೃಷ್ಟಿ, ನಿರುತ್ಸಾಹವಿಲ್ಲದ ಆ ಸರಳತನ, ಏನೂ ತಬ್ಬಿಬ್ಬಾಗದೆ ಆಕೆ ತನ್ನ ಜೊಂಡುಹುಲ್ಲಿನ ಬುಟ್ಟಿಯನ್ನು ಹುಡುಕುತ್ತಿದ್ದ ರೀತಿ ಇವುಗಳನ್ನು ನಾನು ಏನೆಂದು ಹೇಳಲಿ !.. ... ಸತ್ತ ಗಂಡನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡಳು. ತನ್ನ ಕೈಯಿಂದಲೇ ಬೆಂಕಿ ಹೊತ್ತಿಸಿಕೊಂಡಳು. ಹೊರಗಿನಿಂದಲೂ ಬ್ರಾಹ್ಮಣರು ಬೆಂಕಿ ಹೊತ್ತಿಸಿದರು. ಈ ದೃಶ್ಯವನ್ನು ನಾನು ಹೇಗೆ ವರ್ಣಿಸಬೇಕೋ ಕಾಣೆ. ಲೇಖನಿಯಾಗಲಿ, ಅಥವಾ ಬಣ್ಣದ ಕುಂಚವಾಗಲಿ ಆ ಅಪೂರ್ವ ಘಟನೆಯನ್ನು ಚಿತ್ರಿಸಲಾರದು



ಎಂದು ವೈದೆಪಡುತ್ತೇನೆ. ಅದರ ನೆನಪು ಇನ್ನೂ ನನ್ನಲ್ಲಿ ಹಸಿಹಸಿಯಾಗಿದೆ. ನಿನ್ನೆ ಮೊನ್ನೆ ಕಂಡೆನೋ ಎಂಬ ಭಾವನೆ ಬರುತ್ತಿದೆ. ಆ ಕರಾಳ ವಾಸ್ತವ ಘಟನೆ ಘೋರ ಸ್ವಪ್ನವೆಂದು ಭಾವಿಸಲು ನಾನು ಶತಪ್ರಯತ್ನ ಮಾಡುತ್ತಿದ್ದೇನೆ.

ಈ ಮೇಲಿನ ಅಭಿಪ್ರಾಯಗಳನ್ನು ವಿವರಗಳನ್ನು ಗಮನಿಸಿದಾಗ, ಯಾವ ಸತಿ ಆಚರಣೆ ಭಾರತೀಯರಿಗೆ ಸಾಮಾನ್ಯವಾಗಿ ಕಂಡು ಬಹುಶಃ ಅಲಕ್ಷಿಸಲ್ಪಟ್ಟಿತೋ, ಅದು ವಿದೇಶಿಯರಿಗೆ ಅಸಾಮಾನ್ಯವಾಗಿಯೂ, ಕ್ರೂರವಾಗಿಯೂ, ವಿಶೇಷವಾಗಿಯೂ ಕಂಡು ಹೆಚ್ಚು ವಿವರಣಾತ್ಮಕವಾಗಿ ನಿರೂಪಿತಗೊಂಡಿತೆಂದು ಹೇಳಬಹುದಾಗಿದೆ. ಅಲ್ಲದೆ, ವಿದೇಶಿ ಪ್ರವಾಸಿಗರಿಗೆ, ಸತಿ ಘಟನೆಗಳನ್ನು ತಮ್ಮ ದೇಶದ ಜನತೆಗೆ ತಿಳಿಸಬೇಕೆಂಬ ಉತ್ಸಾಹ ಇದ್ದುದರಿಂದ ಅದನ್ನು ವಿಸ್ತಾರವಾಗಿ ಚಿತ್ರಿಸಲು ಪ್ರಯತ್ನಿಸಿರುವುದನ್ನು ಕಾಣುತ್ತೇವೆ.

ಭಾರತಕ್ಕೆ ಬಂದ ವಿದೇಶಿ ಪ್ರವಾಸಿಗರಲ್ಲಿ ಕೆಲವರು ಕರ್ನಾಟಕದ ಭೂ ಭಾಗಕ್ಕೂ ಸಂದರ್ಶನಕೊಟ್ಟವರಾಗಿದ್ದಾರೆ. ಕರ್ನಾಟಕದಲ್ಲಿ ಆಗ ಆಚರಣೆಯಲ್ಲಿದ್ದ ಸತಿಪದ್ಧತಿಯನ್ನು ಅವರು ವಿವರಿಸಿದ್ದಾರೆ. ನಿಕೊಲೋ ಡಿ ಕೊಂತಿ, ದು ಆರ್ತೆ ಬಾಬೊರ್ಸಾ, ಫೆರ್ನಾಂವ್ ನೂನಿಜ್, ಸೀಸರ್ ಫ್ರೆಡರಿಕ್ ರಾಲ್ಫ್‌ಫಿಚ್, ಮಾನ್ಯುಯೆಲ್ ಬರ್ರಾಡಾಸ್, ಪಿಯೆತ್ರೊ ದೆಲ್ಲಾವೆಲ್ಲಿ, ಅಬ್ಬೆ ಜೆ. ಎ. ಡುಬಾಯ್ಸ್ — ಈ ಪ್ರವಾಸಿಗರು ಕರ್ನಾಟಕದಲ್ಲಿಯ ಸಹಗಮನ ಆಚರಣೆಯನ್ನು ತಮ್ಮ ವರದಿಗಳಲ್ಲಿ ನೀಡಿದ್ದಾರೆ.[35] ಇವರಲ್ಲಿ ಹೆಚ್ಚು ಪ್ರವಾಸಿಗರು ವಿಜಯನಗರದ ಆಡಳಿತ ಕಾಲದಲ್ಲಿಯೇ ಕರ್ನಾಟಕಕ್ಕೆ ಬಂದವರಾಗಿದ್ದಾರೆ ಫೆರ್ನಾಂವ್ ನೂನಿಜ್, ನಿಕೊಲೋ ಡಿ ಕೊಂತಿ, ದು ಆರ್ತೆ ಬಾಬೊರ್ಸಾ, ಸೀಸರ್ ಫ್ರೆಡರಿಕ್, ಮಾನ್ಯುಯೆಲ್ ಬರ್ರಾಡಾಸ್ — ಈ ಪ್ರವಾಸಿಗರು ವಿಜಯನಗರ ರಾಜ್ಯದಲ್ಲಿ ಆಚರಣೆಯಲ್ಲಿದ್ದ ಸತಿ ಪದ್ಧತಿಯನ್ನು ವರ್ಣಿಸುತ್ತಾರೆ. ರಾಲ್ಫ್‌ಫಿಚ್ ಬೀದರ್ ( ಬಿದರೆ ) ಭಾಗಕ್ಕೆ ಸಂದರ್ಶನಕೊಟ್ಟವನಾಗಿದ್ದು ಸಹಗಮನದ ವಿಷಯವನ್ನು ಜನರು ಹೇಳಿದ್ದನ್ನು ಉಲ್ಲೇಖಿಸುತ್ತಾನೆ ಪಿಯೆತ್ರೊ ದೆಲ್ಲಾವಲ್ಲಿ ಇಕ್ಕೇರಿಯಲ್ಲಿ ನಡೆದ ಸಹಗಮನ ಘಟನೆಯೊಂದನ್ನು ವರ್ಣಿಸುತ್ತಾನೆ. ಟೀಪು ಸುಲ್ತಾನ ಕಾಲಕ್ಕೆ ಮೈಸೂರ ರಾಜಧಾನಿಗೆ ಬಂದ ಅಬ್ಬೆ ಜೆ. ಎ. ಡುಬಾಯ್ಸ್ ಕರ್ನಾಟಕದ ಕಂಗುಂಡಿಯ ( ? ) ರಾಜಕುಮಾರನ ರಾಣಿಯರ ಸಹಗಮನದ ವಿಷಯವನ್ನು ಹೇಳುತ್ತಾನೆ. ಇವರಲ್ಲಿ ದು ಆರ್ತೆ ಬಾಬೊರ್ಸಾ, ಸೀಸರ್ ಫ್ರೆಡರಿಕ ಪಿಯೆತ್ರೊ ದೆಲ್ಲಾವೆಲ್ಲಿ ಇವರು ವಿಸ್ತಾರವಾಗಿ ಸತಿಘಟನೆಗಳನ್ನು ನಿರೂಪಿಸುತ್ತಾರೆ. ಇವರಲ್ಲಿ ದು ಆರ್ತೆ ಬಾಬೊರ್ಸಾನಂತೂ ಸತಿ ಆಚರಣೆಯನ್ನು ಹೆಚ್ಚು ನಿಖರವಾಗಿ ಮತ್ತು ಸ್ಪಷ್ಟವಾಗಿ ವಿವರಿಸುತ್ತಾನೆ. ಸತಿ ಕುರಿತಾಗಿ ತೀರ ಸಂಕ್ಷಿಪ್ತವಾಗಿ ಹೇಳಿದವನೆಂದರೆ ರಾಲ್ಫ್‌ಫಿಚ್‌ನೆಂದೇ ಹೇಳಬೇಕು. ಚಿಕ್ಕ ವಯಸ್ಸಿನಲ್ಲಿ ಏಕೆ ಮದುವೆ ಮಾಡುತ್ತೀರಿ ಎಂದು ಕೇಳಿದರೆ, ಗಂಡ, ಸತ್ತಾಗ ~~ಹೆಂಡತಿ~~

ಹೆಂಡತಿ ಚಿತೆಯಲ್ಲಿ ಬೀಳಬೇಕಾದ್ದರಿಂದ ಹೀಗೆ ಮಾಡುತ್ತೇವೆಂದು ಹೇಳಿದರು'' ಎಂದು ರಾಲ್ಫ಼್ ಫಿಚ್ ಪ್ರಾಸಂಗಿಕವಾಗಿ ಮಾತ್ರ ಸತಿ ವಿಷಯವನ್ನು ತಿಳಿಸುತ್ತಾನೆ. ಆದರೆ ಹಲವು ಪ್ರವಾಸಿಗರು ಗಂಡ ಸತ್ತುದ್ದನ್ನು ಪ್ರಾರಂಭಿಸಿ, ಆತನ ಪತ್ನಿ ಸತಿಹೋದ ಕೊನೆಯ ಘಟ್ಟದ ವರೆಗೂ ವಿವರವಾಗಿ ವರದಿ ಮಾಡುತ್ತಾರೆ. ಪತಿ ಮರಣ ಹೊಂದಲು ಪತ್ನಿ ಸತಿ ಹೋಗಲು ನಿರ್ಧರಿಸುವದು, ಸೌಭಾಗ್ಯವತಿಯಂತೆ ಸಿಂಗರಿಸಿಕೊಳ್ಳುವದು, ಕೊಂಡಕ್ಕೆ ನಡೆದು ಬರುವುದು, ಸತ್ತ ಗಂಡನೊಡನೆ ಸುಟ್ಟುಕೊಳ್ಳುವುದು — ಈ ಎಲ್ಲ ವಿವರಗಳನ್ನು ಪ್ರವಾಸಿಗರು ಒದಗಿಸುತ್ತಾರೆ

ಸತಿಪದ್ಧತಿ ಕುರಿತು ಅಮೂಲ್ಯವಾದ ವಿಷಯಗಳನ್ನು ಪ್ರವಾಸಿಗರು ನೀಡಿದರೂ, ಕೆಲವು ಸಲ ಅವರು ನೀಡುವ ವಿವರಗಳನ್ನು ಇದ್ದಕ್ಕಿದ್ದ ಹಾಗೆ ಸ್ವೀಕರಿಸುವಂತೆಯೂ ಇಲ್ಲ ಎಂಬುದನ್ನು ಮರೆಯಬಾರದು. ಕೆಲವು ಪ್ರವಾಸಿಗರು ಸತಿ ಘಟನೆಗಳನ್ನು ವಿವರಿಸುವಲ್ಲಿ ಉತ್ಪ್ರೇಕ್ಷೆಯ ಮಾತುಗಳನ್ನು ಹೇಳಿರಬೇಕು ಎನಿಸುತ್ತದೆ. ಫ್ರಾನ್ಸ್ವಾಸ್ ಬಿರ್ನೇ ಎಂಬ ಫ್ರಾನ್ಸ್ ಪ್ರವಾಸಿ ಹೇಳಿರುವ ಮಾತುಗಳನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ. 36

'ಸ್ತ್ರೀಯರು ಗಂಡನ ಚಿತೆಯಲ್ಲಿ ಬೀಳುವ ವಿಷಯವನ್ನು ಎಷ್ಟೋ ಜನ ಪ್ರವಾಸಿಗರು ಈಗಾಗಲೇ ಹೇಳಿರುವುದರಿಂದ ಆ ವ್ಯಸನಕರವಾದ ವಿಚಾರದ ಬಗ್ಗೆ ನಮ್ಮ ಜನರು ಸಂದೇಹ - ಪಡುತ್ತಿಲ್ಲವೆಂದು ನಾನು ಭಾವಿಸಿದ್ದೇನೆ. ಆದರೆ ಅದರ ಬಗ್ಗೆ ಹೇಳಿರುವ ವರದಿಗಳು ಹೆಚ್ಚು ಉತ್ಪ್ರೇಕ್ಷೆಯಿಂದ ಕೂಡಿವೆ.'

'ವಿದೇಶಿ ಪ್ರವಾಸಿಗರಿಗೆ ಸತಿ ಆಚರಣೆ ಹೊಸ ವಿಷಯವಾಗಿ, ಆಶ್ಚರ್ಯದಾಯಕವಾಗಿ ಕಂಡದ್ದರಿಂದಲೂ ಮತ್ತು ಅವರು ತಮ್ಮ ದೇಶದ ಜನತೆಗೆ ಸತಿ ವಿಷಯವನ್ನು ತಿಳಿಸುವ ಉತ್ಸಾಹದಲ್ಲಿದ್ದುದರಿಂದಲೂ ಅದು ಒಮ್ಮೊಮ್ಮೆ ಅತಿಯಾಗಿ ವಿವರಿಸಲ್ಪಟ್ಟಿರಬಹುದು. ಆದರೆ ಅದನ್ನು ಸಂಪೂರ್ಣ ಉತ್ಪ್ರೇಕ್ಷೆ ಎಂದು ತಿಳಿದು ಬಿಡುವಂತೆಯೂ ಇಲ್ಲ. ಗ್ರಂಥ ಸಾಹಿತ್ಯ ಮತ್ತು ಸ್ಮಾರಕಗಳ ಜೊತೆಯಲ್ಲಿ ಪ್ರವಾಸಿಗರ ಸಾಹಿತ್ಯವನ್ನು ಇಟ್ಟುಕೊಂಡು ಅಭ್ಯಸಿಸಿದಾಗ ಕರ್ನಾಟಕದಲ್ಲಿಯ ಸತಿಪದ್ಧತಿಯ ಕುರಿತಾಗಿ ಅಮೂಲ್ಯ ಮತ್ತು ಹೊಸ ವಿಷಯಗಳು ಗಮನಕ್ಕೆ ಬರುತ್ತವೆ.

4. <u>ದಂತಕಥೆಗಳು</u> :—

ದಂತಕಥೆಗಳು ಕರ್ನಾಟಕದಲ್ಲಿಯ ಸತಿಪದ್ಧತಿಯನ್ನು ತಿಳಿಸುವಲ್ಲಿ ನೆರವಾಗುತ್ತವೆ. ಗ್ರಾಮ್ಯ ಜೀವನದಲ್ಲಿ ಇಂದಿಗೂ ಸತಿ ಕುರಿತಾಗಿ ಹಲವು ವರ್ತಮಾನಗಳಿರುವುದನ್ನು ಕಾಣುತ್ತೇವೆ

ಹಳ್ಳಿಗಳಲ್ಲಿ ಇರುವ ಸತಿ ಗುರುತಿನ ಸುತ್ತ ಹಲವು ರಂಜಕ ಮಾತುಗಳು ಹುಟ್ಟಿಕೊಂಡು ಪ್ರಚಲಿತದಲ್ಲಿವೆ. ಮಾಸ್ತಿಕಲ್ಲು, ಮಾಸ್ತಿಗುಡಿ, ಮಾಸ್ತಿಹಕ್ಕಲು, ಮಾಸ್ತಿ ಊರು — ಈ ಮೊದಲಾದವುಗಳ ಕುರಿತಾಗಿ ಜನರು ವಾಸ್ತವಿಕ ಸಂಗತಿಗಳನ್ನು ನೆನಪಿಟ್ಟುಕೊಂಡು ಬಂದಿದ್ದಾರೆ. ಅಲ್ಲದೆ ಶತಶತಮಾನಗಳಿಂದ ಸತಿಘಟನೆಯ ವಿಷಯ ಜನರ ನಾಲಗೆಯ ಮೇಲೆ ಬದುಕಿಕೊಳ್ಳುತ್ತ ಬರುವಾಗ, ಹಲವು ವ್ಯತ್ಯಾಸಗಳನ್ನು ಪಡೆದಿರಬಹುದಾಗಿದೆ. ಗ್ರಾಮೀಣ ಬದುಕಿನಲ್ಲಿ ಯಾವುದೊಂದು ಸಂಗತಿ ರಂಜನಾತ್ಮಕವಾಗಿ ನಿರೂಪಣೆಗೊಳ್ಳುವ ಸಾಧ್ಯತೆಗಳು ಹೆಚ್ಚು ಇರುವುದರಿಂದ, ಸತಿ ಘಟನೆಗಳೂ ಈ ಅಭಿವ್ಯಕ್ತಿಯನ್ನು ಪಡೆದುಕೊಂಡಿದ್ದರೆ ಅದರಲ್ಲಿ ಯಾವ ಆಶ್ಚರ್ಯವೂ ಇಲ್ಲ. 'ವದಂತಿ' ( ಸಂಸ್ಕೃತದಲ್ಲಿ 'ವದಂತೀ' 'ವದಂತಿ': ಎಂದೂ, ಇಲ್ಲವೆ ಇವುಗಳಿಗೆ ಸಮಾನವಾದ 'ಕಿಮ್ ವದಂತೀ' ಎಂದೂ ಬಳಸಲಾಗುತ್ತದೆ ) — ಎಂಬುದರ ಅರ್ಥವೇ ಸೂಚಿಸುವಂತೆ, ಹೇಳಲ್ಪಡುವ ವಿಷಯವು ಸತ್ಯ ಅಥವಾ ಅಸತ್ಯವಾಗಿರಬಹುದಾಗಿದೆ. ಕಾರಣ ಸತಿಘಟನೆಗಳ ಸುತ್ತ ಬೆಳೆದು ಬಂದ ವದಂತಿಗಳನ್ನು ಬಹು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ.

ಕರ್ನಾಟಕದಲ್ಲಿ ಸತಿ ಕುರಿತಾಗಿರುವ ವದಂತಿಗಳನ್ನು ಸ್ಥೂಲವಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಬಹುದಾಗಿದೆ:

ಒಂದು : ಪತ್ನಿಯ ಸತಿ ಘಟನೆಯನ್ನು ತಿಳಿಸುವ ವದಂತಿಗಳು

ಎರಡು : ಸತಿ ಘಟನೆಗಳಲ್ಲದ ಸತಿ ವದಂತಿಗಳು.

ಮೂರು : ಸತಿ ಮಹಿಮೆಯನ್ನು ಚಿತ್ರಿಸುವ ವದಂತಿಗಳು.

ಗುತ್ತಲು, ಶ್ರೀರಂಗಪಟ್ಟಣ, ಮಾಚನಹಳ್ಳಿ, ದೇವರ ಹಿಪ್ಪರಗಿ, ಕೋಗಿಲೂರು, ಮತ್ತಿ, ಲಕ್ಕುಂಡಿ, ಅಂಕೋಲಾ — ಈ ಮೊದಲಾದ ಊರುಗಳಲ್ಲಿ ಸಿಗುವ ಸತಿ ಕುರಿತಾಗಿರುವ ವದಂತಿಗಳನ್ನು ಮೊದಲನೆಯ ಗುಂಪಿಗೆ ಸೇರಿಸಬಹುದಾಗಿದೆ.[37] ಇವುಗಳ ಉದ್ದೇಶ ಗಂಡನ ಮರಣದ ನಂತರ ಪತ್ನಿ ಸತಿಯಾದುದನ್ನು ತಿಳಿಸುವುದಾಗಿದೆ. ಗುತ್ತಲಿನ ಮಾಸ್ತಿ ವದಂತಿಯು, ಪತ್ನಿಯೊಬ್ಬಳು ಗಂಡನು ದಂಡಿಗೆ ಹೋದವನು ಮರಳಿ ಬರದೇ ಇದ್ದುದಕ್ಕಾಗಿ ಅವನು ಸತ್ತುಹೋಗಿರಬಹುದೆಂದೇ ಭಾವಿಸಿ, ಮನೆಯಲ್ಲಿ ಅತ್ತೆಯ ಕಾಟ ಸಹಿಸದೇ ಮಗನನ್ನು ಕಟ್ಟಿಕೊಂಡು ಕೊಂಡಹಾರಿ ಪ್ರಾಣಬಿಡುವುದನ್ನು ಸೂಚಿಸುತ್ತದೆ. ಹುಲ್ಲೇನಹಳ್ಳಿಯ ಯೋಧರು ಬಂಗಳಾದೆಡೆಗೆ ಯುದ್ಧಕ್ಕೆ ಹೋಗಿ ಅದರಲ್ಲಿ ಹಲವರು ಮರಣಹೊಂದುತ್ತಾರೆ. ಆಗ ಮರಣಹೊಂದಿದ ಯೋಧನೊಬ್ಬನ ಪತ್ನಿ ಗಂಡನ ಗುರುತಿನ ಬಟ್ಟೆಯೊಂದಿಗೆ ಅಗ್ನಿ ಪ್ರವೇಶಮಾಡಿದಳೆಂದು ಶ್ರೀರಂಗಪಟ್ಟಣದ ಮಾಸ್ತಿ ವದಂತಿಯು ತಿಳಿಸುತ್ತದೆ. ಮಾಚನಹಳ್ಳಿ

ಮಾಸ್ತಿ ಕುರಿತಾಗಿ ವದಂತಿ ಹೀಗಿದೆ: ಪಾಳ್ಯಗಾರನೊಬ್ಬನು ಸುಂದರಳಾದ ಒಕ್ಕಲಿಗರ ಹುಡುಗಿಯನ್ನು ಮದುವೆಯಾಗಲು ಇಚ್ಛಿಸಿದನು. ಆದರೆ ಹುಡುಗಿಯ ತಂದೆಗೆ ಇದು ಇಷ್ಟ ಇರಲಿಲ್ಲ. ಕಾರಣ, ಅವರು ಊರುಬಿಟ್ಟು ಹೊರಟು ಕಾಡನ್ನು ಸೇರಿದರು. ಆದರೂ ಪಾಳ್ಯಗಾರನ ಕಾಟ ಮುಂದುವರೆಯಿತು. ಆಗ ಅವಳು ಒಂದು ಉಪಾಯ ಮಾಡುತ್ತಾಳೆ. ಪಾಳ್ಯಗಾರನಿಗೆ ಮದುವೆಯಾಗುತ್ತೇನೆಂದು ನಂಬಿಸುತ್ತಾಳೆ. ಅವರಿಬ್ಬರೂ ಕೂಡಿ ಅಗ್ನಿಗೆ ಮೂರು ಬಾರಿ ಪ್ರದಕ್ಷಿಣೆ ಹಾಕುತ್ತಾರೆ. ಆಗ ಅವಳು ಕತ್ತಿಯಿಂದ ಪಾಳ್ಯಗಾರನ ಕೊಲೆ ಮಾಡಿ ತಾನೂ ಬೆಂಕಿಗೆ ಹಾರಿಕೊಳ್ಳುತ್ತಾಳೆ. ದೇವರ ಹಿಪ್ಪರಗಿ ಮಾಸ್ತಿ ವದಂತಿ ವಿಶೇಷವಾಗಿದೆ. ರಾವುತರಾಯನು 'ಗಂಗೆ ಮಾಳವ್ವ'ನನ್ನು ಪ್ರೀತಿಸುತ್ತಿರುತ್ತಾನೆ. 'ಮದುವೆ ಮಂಟಪ'ದಲ್ಲಿ ಇವರ ಮದುವೆ ನಡೆದ ಕಾಲಕ್ಕೆ ಯುದ್ಧ ಮಾಡಬೇಕಾದ ಪ್ರಸಂಗವೊದಗಿ ರಾವುತರಾಯ ಮಂಟಪದಿಂದ ಎದ್ದು ಹೋಗಿ, ಯುದ್ಧ ಮಾಡುತ್ತ ಮಡಿಯುತ್ತಾನೆ. ಅವನನ್ನು ಮದುವೆಯಾಗಬೇಕಾಗಿದ್ದ 'ಗಂಗೆ ಮಾಳವ್ವ' ಕೊಂಡಕ್ಕೆ ಹಾರಿಕೊಳ್ಳುತ್ತಾಳೆ. ಹೀರೆಕೊಳಗಲೂರಿನ ಮಾಸ್ತಿಯ ಕುರಿತಾಗಿ ವದಂತಿ ಹೀಗಿದೆ: ಹಿರೇಕೊಳಗಲೂರಿನ ವ್ಯಕ್ತಿಯೊಬ್ಬನು ತ್ಯಾವಣಗಿ ಊರಿನಲ್ಲಿಯ ಸೂಳೆಯೊಂದಿಗೆ ಸಂಬಂಧ ಇಟ್ಟುಕೊಂಡಿದ್ದನು. ಅವನು ಕಾರಹುಣ್ಣಿಮೆಯಂದು ತ್ಯಾವಣಗಿಗೆ ಹೋಗಿ ಪ್ರೇಯಸಿಗೆ ಅಲ್ಲಿಯ ಕರಿ ( ಬಳ್ಳಿ ) ತಗೆದುಕೊಂಡು ಹೋಗುವುದಾಗಿ ಹೇಳಿದನು. ಪ್ರೇಯಸಿ ಬೇಡವೆಂದು ಹೇಳಿದರೂ ಅವನು ಕೇಳದೆ 'ಕರಿ' ತಗೆದುಕೊಂಡು ಹೋಗಲೂರಿಗೆ ಹೊರಟನು. ತ್ಯಾವಣಗಿ ಜನರು ಅವನನ್ನು ಬೆನ್ನಟ್ಟಿದರು. ವಿಶ್ರಾಂತಿಗೆಂದು ಅವನು ಒಂದೆಡೆ ಕುಳಿತಾಗ ಹುಡುಕುತ್ತ ಬಂದ ತ್ಯಾವಣಗಿಯವರು ಗಾಣಗಿತ್ತಿಯೊಬ್ಬಳಿಂದ ಅವನು ಕುಳಿತುಕೊಂಡ ವಿಷಯ ತಿಳಿದು, ಅಲ್ಲಿಗೆ ಬಂದು ಅವನನ್ನು ಕೊಂದರು. ಅವನು ಸಾಯುವಾಗ ಬಳ್ಳಿಯನ್ನು ( ಕರಿ ) ನುಂಗಿದ. ತ್ಯಾವಣಗಿಯವರು ರುಂಡವನ್ನು ತಗೆದುಕೊಂಡು ಹೋದರು. ಹಿರೇಕೊಳಗಲೂರಿನ ಜನರು ಈತನನ್ನು ಸಮಾಧಿ ಮಾಡಿದರು ಈ ವಿಷಯ ತಿಳಿದ ಈತನ ಪ್ರೇಯಸಿ ತಾನೂ ಸತ್ತುಹೋದಳು ಅವಳೇ ಹಿರೇಕೊಳಗಲೂರಿನ ಮಾಸ್ತಿ ಎನಿಸಿದ್ದಾಳೆ. ಮತ್ತಿ ಮಾಸ್ತಿ ವದಂತಿಯು, ಮಾಯನಕೊಂಡ ಆಳುತ್ತಿದ್ದ ತಿಮ್ಮಣ್ಣನಾಯಕನು ತನ್ನನ್ನು ಮೋಹಿಸಿದ ಹಾರುವರ ಹೆಣ್ಣುಮಗಳನ್ನು ಲಗ್ನವಾದನು. ಅದನ್ನು ಸಹಿಸದ ಹೆಣ್ಣು ಮಗಳ ಕಡೆಯವರು ಯುದ್ಧಕ್ಕೆ ಬಂದರು. ಯುದ್ಧದಲ್ಲಿ ತಿಮ್ಮಣ್ಣನಾಯಕ ಮರಣಹೊಂದಲು, ಅದನ್ನು ಕೇಳಿ ಮತ್ತಿಯಲ್ಲಿ ಹೆಣ್ಣುಮಗಳು ಕೊಂಡ ಏರಿದಳು. ಉಕ್ಕುಂಡಿಯಲ್ಲಿಯ ಮಾಸ್ತಿ ವದಂತಿ ಇವು

ಗಳಿಂದ ಸ್ವಲ್ಪ ಬಿನ್ನವಾಗಿದೆ' ' 'ಪತಿಯು ತೀರಿಹೋಗಲು ಭಾಗಮ್ಮ ( ? ) ಎನ್ನುವಾಕೆ ತನ್ನ ಮುಗುತಿಯ ಭಾಗ್ಯವನ್ನು ತೆಗೆದುಕೊಳ್ಳುವವರು ಯಾರು ಇದ್ದೀರಿ ?'' ಎಂದು ಕೇಳುತ್ತಾಳೆ' ಆಗ ಯಾರು ಮುಂದಾಗದಿರಲು ಗಂಗೆಯೇ ಬಂದು ಭಾಗಮ್ಮನ ಮುಗುತಿಯ ಭಾಗ್ಯವನ್ನು ಪಡೆಯುತ್ತಾಳೆ' ಅಂದರೆ ಇವಳು ನೀರಿನಲ್ಲಿ ಬಿದ್ದು ಹೋದಳು ಎನ್ನುವ ಅರ್ಥದ ಮಾತು ಇಲ್ಲಿ ಬರುತ್ತದೆ''[38] ಅಂಕೋಲಾದ 'ನೀಲಂಕಟ್ಟಾ' ಕುರಿತು ಇರುವ ವದಂತಿ ತುಂಬ ಸಷ್ಟ ಸ್ಪಷ್ಟವಾಗಿದೆ: 'ಅಂಯ್ಯ' ಎನ್ನುವವರು ದೂರದಿಂದ ಗೋಕರ್ಣ ಯಾತ್ರೆಗಾಗಿ ಬಂದಿದ್ದರು' ಯಾತ್ರೆ ಮುಗಿಸಿಕೊಂಡು ಹೋಗುವಾಗ ಅಂಕೋಲಾದ ವೆಂಕಟರಮಣ ದೇವಸ್ಥಾನ ದಲ್ಲಿ ಉಳಿದರು' 'ಅಂಯ್ಯ' ಸ್ತ್ರೀಯೊಬ್ಬಳ ಪ್ರೇಮಪಾಶದಲ್ಲಿ ಬಿದ್ದು ಅಲ್ಲಿಯೇ ಉಳಿದು ಬಿಟ್ಟರು' ಅವರು ಮಕ್ಕಳನ್ನು ಪಡೆದರು' ಅಂಯ್ಯನವರ ಮೊದಲನ ಪತ್ನಿ 'ನೀಲಮ್ಮ' ಗಂಡನನ್ನು ಹುಡುಕುತ್ತ ಬಂದಳು' ಈ ವಿಷಯ 'ಅಂಯ್ಯನವರಿಗೆ ತಿಳಿದು, ಅವಳಿಗೆ ಮುಖ ತೋರಿಸಲು ಭಯಪಟ್ಟ 'ಅಂಯ್ಯನವರು ತೀರಿಕೊಂಡಿದ್ದಾರೆ' ಎಂದು ಹೇಳಲು ತಿಳಿಸಿದರು' ಅಂಯ್ಯನವರು ಸತ್ತ ಸುದ್ದಿ ಕೇಳಿ ಪತ್ನಿ ನೀಲಮ್ಮ ಹಾಲಕ್ಕಿ ಒಕ್ಕಲಿಗನವರು ತೆಗೆದುಕೊಂಡು ಹೋಗುತ್ತಿದ್ದ ಕಟ್ಟಿಗೆಗಳನ್ನು ತೆಗೆದುಕೊಂಡು ಚಿತೆಮಾಡಿಸಿಕೊಂಡು ಅಗ್ನಿ ಪ್ರವೇಶ ಮಾಡಿದಳು' ಇದನ್ನು ಕೇಳಿ ಅಂಯ್ಯನವರು ಸನ್ಯಾಸಿಯಾಗಿ ಕೆಲವು ದಿನಗಳ ನಂತರದಲ್ಲಿ ತೀರಿಕೊಂಡರು — ಈ ರೀತಿಯಾಗಿ ಹಲವು ವದಂತಿಗಳು ಸತಿಯಾದುದನ್ನು ನೇರವಾಗಿ ತಿಳಿಸುವವುಗಳಾಗಿದ್ದು, ಕರ್ನಾಟಕದ ಬಹುತರ ಹಳ್ಳಿಗಳಲ್ಲಿ ದೊರಕುತ್ತವೆ' ಇವುಗಳ ಸುತ್ತ ಕಲ್ಪನಾತ್ಮಕವಾದ ಮಾತುಗಳು ಒಮ್ಮೊಮ್ಮೆ ಬೆಳೆದುಕೊಂಡಿದ್ದರೂ ಇವುಗಳ ಮೂಲ ಆಶಯ ಸತಿ ಶಿರೋಮಣಿಗಳು ಸತಿಹೋದುದನ್ನು ತಿಳಿಸುವುದೇ ಆಗಿದೆ'

ಸತಿಘಟನೆಗಳಿಂದ ಭಿನ್ನವಾದ ವಿಷಯವನ್ನು ನಿರೂಪಿಸುವ ಸತಿ ಕುರಿತಾಗಿರುವ ಹಲವು ವದಂತಿಗಳು ದೊರಕುತ್ತವೆ' ಹಾಲ್ಯಾರು, ಹೊದಿಗೆರೆ, ಹಿರೇಸಿಂಧೋಗಿ, ಕಾನಮಡಗು, ಬೆಳತೂರು— ಈ ಮೊದಲಾದ ಊರುಗಳಲ್ಲಿ ಇಂಥ ವದಂತಿಗಳ ಪ್ರಚಲಿತದಲ್ಲಿವೆ'[39] ಹಾಲ್ಯಾರಿನಲ್ಲಿರುವ ಮಾಸ್ತಿ ಕುರಿತಾಗಿರುವ ವದಂತಿ ಹೀಗಿದೆ: 'ಹಳ್ಳಿಯ ಲಿಂಗಾಯ್ತರ ಮನೆಯ ಹುಡುಗಿ ತಳವಾರರ ಮನೆಯ ಹುಡುಗಿ — ಇಬ್ಬರೂ ಆಪ್ತ ಗೆಳತಿಯರು' ಹಾಡುವುದರಲ್ಲಿ ನಿಪುಣಿಯರು' ಒಂದು ದಿನ ಇವರು ಉಯ್ಯಾಲೆಯಾಡುತ್ತ, 'ಕೋಗಿಲೆದುಂಟೆ ಓ' ಎಂಬ ಪದಾಡುತ್ತ ಜೋರಾಗಿ ಹಾಡಿದರು ಈ ಹಾಡನ್ನು ಮಲ್ಲಸಂದ್ರದ ಕೆರೆ ಏರಿ ಮೇಲಿದ್ದ ಲಿಂಗಾಯ್ತರಮನೆಯ ಹುಡುಗಿಯ ಅಣ್ಣ ಕೇಳಿಸಿಕೊಂಡ' ಮನೆಗೆ ಬಂದವನೇ ತಂಗಿಯನ್ನು ಬಯ್ಯುಬಿಟ್ಟ' ಇವಳಿಗೆ ಮದುವೆಯಾಗಿತ್ತು'

‘ಭಯ, ಭಕ್ತಿ, ನಾಚಿಕೆ, ಎಲ್ಲ ಬಿಟ್ಟು ಹಾಡಿದೆ ಎಂದು ಅಪಾದನೆ ಸುರುವಾಯಿತು. ಇವಳ ಗಂಡನಿಗೂ ಇವಳ ಬಗ್ಗೆ ಬೇಸರ ಬಂತು. ಇವನೂ ಬೇಸರದ ಮಾತುಗಳನ್ನೇ ಆಡಿದ. ಇವಳು ಜನ್ಮವಿದ್ದರೇನು ಸುಖ ಎಂದು ತಿಳಿದುಕೊಂಡು ಕೆಂಡಕೊಂಡವಾಗಲು ನಿರ್ಧರಿಸಿದಳು. ಸಿರಿಗಂಧದ ಸೌದೆಗಳು ಬಂದು ಬಿದ್ದವು. ಗ್ರಾಮದಲ್ಲಿರುವವರೇ ಈ ಕೊಂಡವಾಗುವಿಕೆಗೆ ಅವಶ್ಯ ಸಹಾಯ ನೀಡಿದರು. ಇವಳು ಕೊಂಡ ಸುತ್ತಿ ಕೆಂಡಕೊಂಡವಾದಳು.’. ಹೋದಿಗೆರೆಯ ಮಾಸ್ತಿ ವದಂತಿ ಇದಕ್ಕಿಂತಲೂ ವಿಲಕ್ಷಣವಾಗಿದೆ: ಚಿಕ್ಕೇಗೌಡ ‘ಮಹಾ ಹಟವಾದಿ’. ಒಂದು ದಿನ ಕ್ಷೌರ ಮಾಡಿಸಿಕೊಂಡು ಬಂದು ಹೆಂಡತಿಗೆ ನೀರು ಕಾಯಿಸಲು ಹೇಳಿದ. ಹೆಂಡತಿ ನೀರು ಕಾಯಿಸಲಿಲ್ಲ. “ಬುತ್ತಿ ಕಟ್ಟುದು ಎಲ್ಲಿ ? ಅಡಿಗೆ ಮಾಡುದು ಎಲ್ಲಿ ? ಎಂದು ಅವಳು ಸುಮ್ಮನೆ ಕುಳಿತಳು. ಚಿಕ್ಕೇಗೌಡನಿಗೆ ಕೋಪ ಬಂತು. ತನ್ನ ಹೆಂಡತಿಯ ‘ಗ್ಯಾರೆ ಮೆಟ್ಟಿ ಗ್ಯಾರೆ ಸಿಗಿದ’ ಅವಳ ಕಾಲನ್ನು ಮೆಟ್ಟಿ ಹಿಡಿದು, ಎಳೆದು ಸೀಳಿ ಹೋಳು ಮಾಡಿದ. ಹೀಗೆ ಸೀಳಿದ್ದನ್ನು ಕೋಟಿ ಗೊಂಡೆಯಿಂದ ಆಚೆ ಎಸೆದ. ನಂತರ ಒಂದೇ ದಿನದಲ್ಲಿ ವಡ್ಡರ ಕೈಯಲ್ಲಿ ಬಾವಿಯನ್ನು ತೋಡಿಸಿ ಸ್ನಾನ ಮಾಡಿದ. ಊರ ಹಿರಿಯರು ಇವನು ಮಾಡಿದ ಹತ್ಯೆಯನ್ನು — ಸ್ತ್ರೀಹತ್ಯೆ, ಅಬಲೆಯ ಹತ್ಯೆ ಎಂದು ಹೇಳಿ, ಈ ಕರ್ಮವನ್ನು ಕಳೆಯಲು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ಹೇಳಿದರು. ಚಿಕ್ಕೇಗೌಡ ತನ್ನ ಪಾಪ ಪರಿಹಾರಾರ್ಥವಾಗಿ ಅವಳ ಸ್ಮರಣ ಸೂಚಕವಾದ ವೀರಮಾಸ್ತಿಯನ್ನು ಮಾಡಿ ನಿಲ್ಲಿಸಿದ. ಹಿರೇಸಿಂಧೋಗಿ ಮಾಸ್ತಿ ವದಂತಿಯಲ್ಲಿ ಈ ರೀತಿ ವಿವರಣೆ ಬರುತ್ತದೆ : ಗೌಡರ ಮಗಳು ಬಹು ಚೆಲುವೆಯಾಗಿದ್ದಳು. ಅವಳನ್ನು ಕಂಡ ದೇಸಾಯಿಯ ಒಡೆಯ ಅವಳನ್ನು ಅಪೇಕ್ಷಿಸಿದನು. ಅವಳನ್ನು ಮದುವೆಯಾಗಲು ಜಾತಿ ಅಡ್ಡವಿದ್ದಿತು. ಆದಕಾರಣ ತಮ್ಮ ಜಾತಿಗೆ ಅವಮಾನ, ಕಳಂಕ ತಟ್ಟುತ್ತದೆ ಎಂದುಕೊಂಡು ಇವಳ ಅಣ್ಣ — ತಮ್ಮಂದಿರರು ಅವಳನ್ನು ಬೆಂಕಿಗೆ ತಳ್ಳಿ ದಹನ ಮಾಡಿದರು. ಕಾನಮಡಗಿನ ಮಾಸ್ತಿ ವದಂತಿಯೊಂದು ಈ ರೀತಿ ಇದೆ: ಮಾಸ್ತ್ಯಮ್ಮನ ಗಂಡ ಬಹಳ ವ್ಯಭಿಚಾರಿಯಾಗಿದ್ದನು. ಅದನ್ನು ಸಹಿಸದ ಮಾಸ್ತ್ಯಮ್ಮ ಒಂದು ದಿನ ಮೊಸರು ಕಡೆಯುವ ಕೋಲಿನಿಂದ ಗಂಡನನ್ನು ತಿವಿದಳು. ಅದು ಗಂಡನ ಮನೆಯವರಿಗೆ ಬಹಳ ಅಪಮಾನವೆನಿಸಿತು. ಅವರು ಆಕೆಗೆ ಹೊಡೆದು — ಬಡಿದು ಬುದ್ಧಿ ಕಲಿಸಲು ಯೋಚಿಸಿದರು. ಈ ವಿಷಯ ಆಕೆಗೆ ತಿಳಿದು, ಗಂಡನ ಊರಾದ ಮಲಿತುಂಬರಗುಡ್ಡ ಬಿಟ್ಟು ಓಡಿಹೋಗಿ ಒಬ್ಬ ಬುಡಬುಡಿಕೆಯವನ ಜೇಬಿನಲ್ಲಿ ಬಟ್ಟೆಯ ಗೊಂಬೆಯಾಗಿ ಕುಳಿತಳು. ಬುಡಬುಡಿಕೆಯವನು ಕಾನಮಡುವಿಗೆ ಬಂದನು. ಅಲ್ಲಿಯ ಮುಖ್ಯಸ್ಥನ ಕನಸಿನಲ್ಲಿ ಮಾಸ್ತ್ಯಮ್ಮನ ಇತಿಹಾಸವೆಲ್ಲ ತಿಳಿದು, ಅವಳಿಗೆ ರಕ್ಷಣೆ ನೀಡಿದನು. ಕಾನಮಡುವಿನವರಿಗೂ ಮಲಿತುಂಬರಗುಡ್ಡಯವರಿಗೂ ಈ ಕಾರಣವಾಗಿ ಹೋರಾಟ ಜರುಗಿ, ಗಂಡನ ಮನೆಯವರು ಸೋತುಹೋದರು.

ಮಾಸ್ತಿಯಮ್ಮ ಕೊಂಡಕ್ಕೆ ಬಿದ್ದಳು. ಬೆಳತೂರಿನ ದೇಕಬ್ಬೆ ಶಾಸನದ ಕುರಿತಾಗಿ ತುಂಬ ವಿಚಿತ್ರವಾದ ಒಂದು ವದಂತಿ ಪ್ರಚಲಿತದಲ್ಲಿದೆ. 'ಬನಕಲಮ್ಮ' ಎಂಬ ಊರಿನ 'ಕುಂಟ' ಎನ್ನುವವನು, ನಾಯಕರ ಜನಾಂಗದವನಿದ್ದು ಪಾಳೆಯಗಾರನಾಗಿದ್ದನು. ಈತನು ದೇಕಬ್ಬೆ ಎಂಬ ಸುಂದರ ಹುಡುಗಿಯನ್ನು ಪ್ರೀತಿಸುತ್ತಿದ್ದನು. ಮನುಗನಹಳ್ಳಿಯಲ್ಲಿಯ ಮಲ್ಲಿಕಾರ್ಜುನನು ದೇಕಬ್ಬೆಯ ಚೆಲುವಿಕೆಗೆ ಮರುಳಾಗಿ ತನ್ನ ಮನದಿಚ್ಛೆಯನ್ನು ಆಕೆಗೆ ಹೇಳಿ ಕಳುಹಿಸಿದನು. ಅದಕ್ಕೆ ದೇಕಬ್ಬೆ ಒಪ್ಪದಿರಲು, ಮಲ್ಲಿಕಾರ್ಜುನನು ಕೋಪಗೊಂಡು ಸೈನ್ಯದೊಡನೆ ಯುದ್ಧಕ್ಕೆ ಬಂದನು. ಕುಂಟನಿಗೂ ಮಲ್ಲಿಕಾರ್ಜುನನಿಗೂ ಘೋರ ಯುದ್ಧವಾಗಿ ಕುಂಟ ಮಡಿದನು. ಈ ಸುದ್ದಿ ಕೇಳಿ 'ದೇಕಬ್ಬೆ' ಕಿಚ್ಚು ಮಾಡಿಕೊಂಡಳು. ಮಲ್ಲಿಕಾರ್ಜುನನು ಊರೆಲ್ಲ ಸೂರೆ ಮಾಡಿದನು. ಅಲ್ಲದೆ ಜನತೆ ಎರಡು ಗುಂಪಾಗಿ ಚದುರಿತು. ಒಂದು ಗುಂಪು ಬೆಳತೂರಾಗಿಯೂ, ಇನ್ನೊಂದು ಗುಂಪು ಚಿಕ್ಕೂರಾಗಿಯೂ ಮಾರ್ಪಟ್ಟವು.[40]

ಈ ರೀತಿಯಾಗಿ ಗ್ರಾಮ್ಯ ಜೀವನದಲ್ಲಿ ನೈಜ ಸತಿ ಘಟನೆಗಳಲ್ಲದಿದ್ದರೂ ಅದರ ಸುತ್ತ ಬೆಳೆದ ಬೇರೆ ಸಂಗತಿಗಳು ಪ್ರಚಲಿತದಲ್ಲಿರುವುದನ್ನು ಕಾಣುತ್ತೇವೆ. ಈ ವದಂತಿಗಳು ಮಾಸ್ತಿಕಲ್ಲುಗಳ ಸುತ್ತಲೂ ಬೆಳೆದು ನಿಂತಿರುವುದು ತುಂಬ ವಿಶೇಷವಾಗಿದೆ. ಮೂಲತ: ಈ ಮಾಸ್ತಿಕಲ್ಲುಗಳು ಸತಿಘಟನೆಗಳನ್ನೇ ಪ್ರತಿನಿಧಿಸುವವುಗಳಾಗಿದ್ದರೂ ಜನರ ಕಲ್ಪನೆಯಲ್ಲಿ ಅವು ಬೇರೆಯಾದ ರೂಪ ತಾಳಿ ನಿಂತಂಥವುಗಳಾಗಿವೆ. ಶತಮಾನಗಳು ಉರುಳಿದಂತೆ ಜರುಗಿದ ಘಟನೆಗಳು ಜನರ ಮನಸ್ಸಿನಿಂದ ದೂರವಾಗಿ ನಿಲ್ಲುವ ಬಗೆಯನ್ನು ಈ ವದಂತಿಗಳಲ್ಲಿ ಕಾಣುತ್ತೇವೆ.

ಸತಿಯರ ಮಹಿಮೆಗಳನ್ನು ವರ್ಣಿಸುವ ವದಂತಿಗಳು ಕರ್ನಾಟಕದ ಸತಿ ಕುರುಹುಗಳುಳ್ಳ ಬಹುತರ ಹಳ್ಳಿಗಳಲ್ಲಿ ಕಾಣುತ್ತೇವೆ. ಭಟ್ಕಳ್, ಅರಕೇರಿ, ಹೊಸಕುಳಿ, ಹೊನ್ನಾವರ, ಅನಿಲಗೋಡು ಶಿರಾಲಿ — ಈ ಮೊದಲಾದ ಊರುಗಳಲ್ಲಿ ಇಂಥ ವದಂತಿಗಳು ದೊರಕುತ್ತವೆ.[41] ಈ ವದಂತಿಗಳಲ್ಲಿ ಸತಿ ದೇವತೆಯಾಗಿ ನಿರ್ಮಾಣಗೊಂಡಿರುತ್ತಾಳೆ. ಅವಳಿಗೆ ಅಲೌಕಿಕವಾದ ಶಕ್ತಿ ಸಾಮರ್ಥ್ಯಗಳಿರುತ್ತವೆ. ಮುಖ್ಯವಾಗಿ, ಪತ್ನಿ ಸತಿಹೋದ ಮೇಲೆ ದೇವತೆಯಾಗಿ ಜನ ಜೀವನದಲ್ಲಿ ಅಸ್ತಿತ್ವಗೊಳ್ಳುವುದನ್ನು, ಜನರು ಅವಳನ್ನು ಭಯ — ಭಕ್ತಿ — ಗೌರವ — ಗಳಿಂದ ಕಂಡುಕೊಳ್ಳುವುದನ್ನು ಅವು ತಿಳಿಸುವವುಗಳಾಗಿವೆ

ಭಟ್ಕಳದ ಕೋಗತಿಕಟ್ಟೆ ಮಾಸ್ತಿಯ ಶಕ್ತಿ— ಸಾಮರ್ಥ್ಯಗಳನ್ನು ಅಲ್ಲಿಯ ವದಂತಿಯೊಂದು ಈ ರೀತಿ ಚಿತ್ರಿಸುತ್ತದೆ : ಗೊಂಡರ ಕುಲದೇವರು ಮಾಸ್ತಿ ದೇವತೆ,

ಇವಳ ಬಲದಿಂದ ಗೊಂಡರು ಬಹಳಷ್ಟು ಹಾಕಾಸು ಮಾಡಿಕೊಂಡಿದ್ದಾರೆಂದು ತಿಳಿದು, ಲೂಟಿ ಮಾಡಲು ಸೈನ್ಯವೊಂದು ಬರಲು ಸಂಕಲ್ಪಿಸಿತು. ಆಗ ''ಹತ್ತುಗಾಡಿ ಮುಳ್ಳುಕಳ್ಳಿಯ ಬಡಿಗೆಗಳನ್ನು, ಹತ್ತುಗಾಡಿ ಕಾಸರಕನ ಬಡಿಗೆಗಳನ್ನು ನನ್ನ ಸ್ಥಳದ ಬುಡದಲ್ಲಿ ತಂದು ಇಡಬೇಕು. ಸಾಧಾರಣ ಹನ್ನೆರಡು ಗಂಟೆ ರಾತ್ರಿಗೆ ನೀರು ಯಾರೂ ಹೊರಗೆ ಬೀಳಬಾರದು'' ಎಂದು ಸ್ವಪ್ನದಲ್ಲಿ ಮಾಸ್ತಿದೇವತೆ ಬೈದ್ಯನಿಗೆ ಹೇಳಿದಳು. ಅವನು ಈ ವಿಷಯವನ್ನು ಎಲ್ಲರಿಗೂ ಮುಟ್ಟಿಸಿದನು. ಅದರಂತೆ ಮಧ್ಯರಾತ್ರಿ ಸಮಯದಲ್ಲಿ ಯಾರೂ ಮನೆಯಿಂದ ಹೊರ ಬೀಳಲಿಲ್ಲ. ಗೊಂಡರ ಕುಲದೇವತೆ ಬಂದಂಥ ಸೈನ್ಯಗಳನ್ನೆಲ್ಲ ಕಡಿದು ಹಾಕಬೇಕು ಎಂದು ಭೂತಗಳಿಗೆ ಅಪ್ಪಣೆ ಮಾಡಿದಳು. ಭೂತಗಳು ಸೈನ್ಯದ ಜನರ ಜುಟ್ಟು ಹಿಡಿದುಕೊಂಡು ಅವರ ಕುತ್ತಿಗೆಗಳನ್ನು ಕಡಿದು ರಾಶಿಹಾಕಿಬಿಟ್ಟವು ಬೆಳಗಾದ ವೇಳೆ ಜನರು ಬಂದು ನೋಡಿದರೆ ಅಲ್ಲೆಲ್ಲ ರುಂಡಗಳ ರಾಶಿಯೇ ಹರಡಿಕೊಂಡಿತ್ತು''. ಇದೇ ಮಾಸ್ತಿಯ ಕುರಿತಾಗಿರುವ ಇನ್ನೊಂದು ವದಂತಿಯೊಂದು ಹೀಗಿದೆ: 'ಬೈದ್ಯನು ಒಮ್ಮೆ ಮಾಸ್ತಿ ಮೆಟ್ಟಿಲಲ್ಲಿ ಪ್ರವೇಶವಾದಾಗ ''ನನ್ನ ಕೋವಿ, ನನ್ನ ಕತ್ತಿ, ನನ್ನ ಈಟಿ, ನನ್ನ ಭರ್ಚಿ, ನನ್ನ ಮಂದಿ ಮಾರ್ಬಲ, ನನ್ನ ಕುದುರೆ ಸಾಲು, ನನ್ನ ದಂಡುದಳ'' ಎಂದು ಹೇಳುತ್ತಿದ್ದನು. ಆಗ ಅದನ್ನು ದೊರೆ ಕೇಳಿಸಿಕೊಂಡು, ನನ್ನನ್ನು ಉದ್ದೇಶಿಸಿಯೇ ಬೈದ್ಯನು ಹೇಳುತ್ತಿದ್ದಾನೆಂದು ಭಾವಿಸಿ, ಮರುದಿನ ಅವನನ್ನು ಕರೆಯಿಸಿಕೊಂಡು ''ನಾನು ಬರುತ್ತಿದ್ದುದನ್ನು ನೋಡಿಯೇ ಹಾಗೆ ಹೇಳಿದೆಯೋ ? ಅಥವಾ ನೀನು ಹೇಳಿದ್ದೆಲ್ಲ ನಿನ್ನಲ್ಲಿ ಇದೆಯೋ ?...... ನಿನಗೆ ಮೂರು ದಿನಗಳ ಮುದ್ದತ್ತನ್ನು ಕೊಟ್ಟಿದ್ದೇನೆ. ನೀನು ದಂಡು ದಳ, ಈಟಿ, ಕತ್ತಿ, ಭರ್ಚಿ ಅಂತ ಏನೇನು ಹೇಳಿದೆಯೋ ಅದೆಲ್ಲವನ್ನು ತೋರಿಸಬೇಕು. ಇಲ್ಲದಿದ್ದರೆ ನಿನಗೆ ಫಾಶಿ ಶಿಕ್ಷೆ'' ಎಂದು ಹೇಳಿದನು ಅದನ್ನು ಕೇಳಿ ಬೈದ್ಯನು ಕೊಲಗತಿಕಟ್ಟಿಯಲ್ಲಿ ಬಂದು ಮಲಗಿದನು. ಸ್ವಪ್ನದಲ್ಲಿ ಮಾಸ್ತಿದೇವತೆ ಬಂದುನೀನೇನೂ ಹೆದರಬೇಡವೆಂದೂ, ರಾಜನಿಗೆ ಥೇಟರ ಕಟ್ಟಲು ಹೇಳೆಂದೂ ನಮ್ಮ ಚರಿತ್ರೆಯನ್ನು ದೊರೆಗೆ ತೋರಿಸುತ್ತೇವೆ ಎಂದೂ ಹೇಳಿದಳು ಥೇಟರ್ ಸಿದ್ಧವಾಗಲು ದೊರೆಯೂ ಪರೀಕ್ಷಿಸಲು ಬಂದನು. ಆಗ ''ಥಿಯೇಟರಿನಲ್ಲಿ ಅಷ್ಟು ಹೊತ್ತಿಗೆ, ಒಂದು ರೀತಿ ಮಿಂಚಿನ ಹಾಗಾಯಿತು. ದೊರೆಯ ಒಂದು ಕಣ್ಣು ಹಾಳಾಗಿಹೋಯಿತು. ಎರಡೂ ಕಣ್ಣುಗಳನ್ನು ಒತ್ತಿ ಹಿಡಿದುಕೊಂಡು ಬಿಟ್ಟನು. ಕುದುರೆಗಳು ಓಡುವುದು, ಕತ್ತಿ — ಕತ್ತಿ ತಾಗಿದ ಶಬ್ದ ಮಂದಿ ಢಾಬಾ ಮಾರ್ಬಲದ ಗಲಾಟೆ, ಭಯಂಕರವಾದ ಲಟಪಟ ಶಬ್ದ ಎಲ್ಲ ದೊರೆಗೆ ಕೇಳಿತು''. ಮುಂದೆ ರಾಜನು ಮಂಡಳ್ಳಿ ಗ್ರಾಮದಲ್ಲಿ ಎರಡು ಎಕರೆ ಜಮೀನನ್ನು ಮಾಸ್ತಿದೇವಸ್ಥಾನಕ್ಕೆ

ಬಿಟ್ಟುಕೊಟ್ಟನು. ಅರಕೇರಿ ಮಾಸ್ತಿ ವದಂತಿಯು, ಮಾಸ್ತಿ ದೇವತೆಯು ಸರ್ಪವೊಂದು ಇದೆಯೆಂದೂ ಯಾರಾದರೂ ತಪ್ಪು ಮಾಡಿದರೆ ಅದು ಕಾಣಿಸಿಕೊಳ್ಳುತ್ತದೆ ಎಂದೂ ತಿಳಿಸುತ್ತದೆ. ಹೊಸಕುಳಿಯ ರಣಮಾಸ್ತಿ ಸ್ಥಾನದಲ್ಲಿ ಮಧ್ಯಾಹ್ನ ಮೂರು ಗಂಟೆಗೆ ಭಯಂಕರ ಸಪ್ಪಳ ಕೇಳಿ ಬರುತ್ತದೆ ಎಂದೂ, ದೊಡ್ಡ ದೊಡ್ಡ ಕಲ್ಲುಗಳು ಬೀಳುತ್ತವೆ ಎಂದೂ ಅಲ್ಲಿಯ ವದಂತಿಯೊಂದು ಹೇಳುತ್ತದೆ. ಇದೇ ರೀತಿಯ ವದಂತಿ ಹೊನ್ನಾವರದ ಮೂರು ಕಟ್ಟೆಮಾಸ್ತಿ ಕುರಿತಾಗಿದೆ. ರಾತ್ರಿ ಕಾಲದಲ್ಲಿ ಇಲ್ಲಿ ರಾಕ್ಷಸಗಣದವರು ಇದ್ದರೆ ಅವರಿಗೆಮಾಸ್ತಿಯ ಕೈಕೆಳಗಿನ ಆಳುಗಳು ಕಾಣಿಸಿಕೊಳ್ಳುತ್ತಾರೆ ಎಂದೂ ಹೇಳಲಾಗುತ್ತದೆ. ಅನಿಲಗೋಡಹಳ್ಳಿಯ ಕೆಂಡದ ಮಾಸ್ತಿಯು ಮಾರಿ ಬೇನೆಯ ಉಪದ್ರವವನ್ನು ತಡೆಯುವ ಶಕ್ತಿಯುಳ್ಳವಳೆಂದೂ, 15 ವರ್ಷಗಳ ಹಿಂದೆ 'ಮಾರಿಕಾ ಉಪದ್ರವ' ತಲೆದೋರಿದಾಗ, ಕೆಂಡದ ಮಾಸ್ತಿಯನ್ನು ಊರ ಜನತೆ ಕರೆಯಿಸಿಕೊಂಡು ಪರಿಹರಿಸಿಕೊಂಡರೆಂದೂ ವದಂತಿಯೊಂದು ಊರಿನಲ್ಲಿ ಪ್ರಚಲಿತದಲ್ಲಿದೆ. ಶಿರಾಲಿಯ ಮಾಸ್ತಿ ಕುರಿತಾಗಿರುವ ವದಂತಿಯು ವಿಶೇಷವಾಗಿದೆ. ಬ್ರಿಟಿಷ ಕಾಲದಲ್ಲಿ ಕಲೆಕ್ಟರನೊಬ್ಬನು ಕುದುರೆಯ ಮೇಲೆ ಮಾಸ್ತಿಗೊಂಬೆ ಹಿಡಿದುಕೊಂಡು ಹೊರಟಿದ್ದನು. ಕುದುರೆ ಶಿರಾಲಿಯಲ್ಲಿ ನಿಂತಿತು. ಆಗ ಜನರು ಕಲೆಕ್ಟರನಿಗೆ ಸೇವೆ ಸಲ್ಲಿಸಲು ಹೇಳಲಾಗಿ, ಗೊಂಬೆ ಇಟ್ಟು ಭಕ್ತಿಪೂರ್ವಕ ಸೇವೆ ಸಲ್ಲಿಸಿದನು. ಅಂದಿನಿಂದ ಇಂದಿನವರೆಗೂ ಸರ್ಕಾರ ವರ್ಷಕ್ಕೆ 50 ಪೈಸೆಯನ್ನು ಮಾಸ್ತಿಗುಡಿಗೆ ಕೊಟ್ಟು ತನ್ನ ಸೇವೆಯನ್ನು ಸಲ್ಲಿಸುತ್ತಿದೆ

ಈ ರೀತಿಯಾಗಿ ಮಾಸ್ತಿದೇವತೆ ಸುತ್ತ ಹೆಣೆಯಲ್ಪಟ್ಟ ಹಲವು ವದಂತಿಗಳು ದೊರಕುತ್ತವೆ. ಈ ವದಂತಿಗಳು ಹೆಚ್ಚು ಉತ್ಪ್ರೇಕ್ಷೆ — ವರ್ಣನಾಭಾವದಿಂದ ಕೂಡಿಕೊಂಡಿವೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಸತಿಯಾದುದರ ವಾಸ್ತವಿಕ ಸಂಗತಿ ಮರೆಯಾಗಿ ಸತಿಯ ಔನ್ನತ್ಯವನ್ನು ಸೂಚಿಸಲಿಕ್ಕೆ ಅವಾಸ್ತವಿಕವಾದ ಹಲವು ಸಂಗತಿಗಳು ಬೆಳೆದು ಬಂದಿರುವುದನ್ನು ಇವುಗಳಲ್ಲಿ ಕಾಣುತ್ತೇವೆ. ಅಲ್ಲದೆ ಇವುಗಳಿಂದ ಜನತೆಯ ನಂಬಿಕೆಗಳು, ಆಚಾರಗಳು, ಆಲೋಚನಾ ವಿಧಾನಗಳು — ಇವುಗಳೆಲ್ಲ ತಿಳಿದು ಬರುವುದರ ಜೊತೆಗೆ, ಸತಿಯಾದವಳು ದೇವತೆಯಾಗಿ ಅಲೌಕಿಕವಾದ ಸ್ಥಾನವನ್ನು ಪಡೆದುಕೊಂಡಿರುವುದನ್ನು ಕಂಡುಕೊಳ್ಳಬಹುದಾಗಿದೆ. ಇಂಥ ವದಂತಿಗಳ ಮಧ್ಯೆ 'ಸತಿ' ಜೀವಂತಶಕ್ತಿಯಾಗಿ ಉಳಿದುಕೊಂಡು ಬಂದಿದ್ದಾಳೆ.

## 5. ಸ್ಮಾರಕಗಳು:—

'ಸ್ಮಾರಕ' ಎಂಬ ಶಬ್ದವು 'ಸ್ಮೃ' (ಸ್ಮರಿಸು) ಎಂಬ ಧಾತುವಿನ ಣಿಜಂತ' ರೂಪವು. 'स्मार्यते अनेन इति स्मारकम्' — ಅಂದರೆ, ಯಾವುದು ಸ್ಮರಣೆಗೆ ಬರುವಂತೆ ಮಾಡಲ್ಪಡುತ್ತದೆಯೋ ಅದು ಸ್ಮಾರಕ ಎನ್ನಬಹುದಾಗಿದೆ. ಕರ್ನಾಟಕದಲ್ಲಿ

ಗಂಡನ ಮರಣದ ನಂತರ ಪತ್ನಿಯಾದವಳು ಸತಿಹೋದಾಗ ಅವಳ ನೆನಪಿಗಾಗಿ ಜನರು ಹಲವು ವಿಧದಲ್ಲಿ ಸ್ಮಾರಕಗಳನ್ನು ಉಳಿಸಿ ರಕ್ಷಿಸಿಕೊಂಡು ಬಂದಿದ್ದಾರೆ. ಸತಿಯ ನೆನಪಿಗಾಗಿ ಸಣ್ಣ ಶಿಲೆ ಇಟ್ಟು ಪೂಜಿಸಿಕೊಂಡು ಬರುವುದರ ಜೊತೆಗೆ ದೊಡ್ಡ ದೊಡ್ಡ ಗುಡಿಗಳನ್ನು ಕಟ್ಟಿ ಪೂಜಿಸಿಕೊಂಡು ಕರ್ನಾಟಕದ ಜನತೆ ಬಂದಿದ್ದಾರೆ. ಅವರು ಶಿಲ್ಪ, ಶಾಸನಗಳನ್ನು ಸತಿ ಸ್ಮಾರಕವಾಗಿ ಇಟ್ಟಿದ್ದಾರೆ. ಅಲ್ಲದೆ, ಸತಿ ಉಪಯೋಗಿಸಿದ ಬಳೆ, ಸೀರೆ, ಕನ್ನಡಿ ಈ ಮೊದಲಾದವುಗಳನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಇಂದಿಗೂ ಕರ್ನಾಟಕದ ಬಹುತರ ಹಳ್ಳಿಗಳಲ್ಲಿ ಜರುಗುವ ಜಾತ್ರೆ — ಉತ್ಸವ, ಹಬ್ಬ — ಹರಿದಿನಗಳಲ್ಲಿ ಸತಿ ಘಟನೆಗಳ ಕುರುಹುಗಳು ಉಳಿದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಈ ರೀತಿಯಾಗಿ ಕರ್ನಾಟಕದಲ್ಲಿ ಸತಿ ಸ್ಮಾರಕಗಳು ವಿವಿಧ ವಿಪುಲ ರೂಪದಲ್ಲಿ ದೊರಕುತ್ತವೆ. ಈಗ ಇವುಗಳ ಬಿಡಿಬಿಡಿಯಾದ ಅಧ್ಯಯನದಿಂದ ಅವುಗಳ ಗಾತ್ರ — ವೈವಿಧ್ಯತೆ — ಪ್ರಾಮುಖ್ಯತೆಗಳನ್ನು ಮನವರಿಕೆ ಮಾಡಿಕೊಳ್ಳಬಹುದಾಗಿದೆ.

**ಶಿಲೆ :—** ಭಾರತದಲ್ಲಿ ಯಾವುದೊಂದು ಶಿಲೆ ದೈವವಾಗಿ ರೂಪುಗೊಂಡು ಜನತೆಯ ನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿ ಹೋಗುವದು ವಿಶೇಷ ವಿಷಯವೇನಲ್ಲ. ಆ ಕಲ್ಲುದೈವದೊಡನೆ ಹಲವು ಭೂತಕಾಲದ ವಿಷಯಗಳು ಉಳಿದುಕೊಂಡು ಬಂದಿರುತ್ತವೆ. ಅಂಥ ಕಲ್ಲು ಇತಿಹಾಸದ ಮೂಕಸಾಕ್ಷಿಯಾಗಿರುತ್ತದೆ. ಕರ್ನಾಟಕದಲ್ಲಿಯೂ ಈ ತೆರನಾದ ಇತಿಹಾಸ ಹೇಳುವ ಕಲ್ಲುಗಳು ಹಲವು ಸಿಗುತ್ತವೆ. 10ನೆಯ ಶತಮಾನದಲ್ಲಿ ಕರ್ನಾಟಕದ ಜನತೆ ಕಲ್ಲು ದೈವವಾಗಿ ಆರಾಧಿಸುವ ವಿಷಯವನ್ನು ನಾಗವರ್ಮ ಅಪ್ರತ್ಯಕ್ಷವಾಗಿ ಹೀಗೆ ತಿಳಿಸುತ್ತಾನೆ : 'ಎನಗಿದು ದೈವವೆಂದು ಮನದೊಳ್ ಪರಿಭಾವಿಸಿ ಕಲ್ಲವಿಣ್ಣರೂಪನೆ ಗಡ ಪೂಜಿಸುತ್ತಮಿರೆ ಸನ್ನಿಧವಾದಪುದು ......[42] ಹೀಗೆ ಪೂಜಿಸುವ ವಿಷಯವನ್ನು ನಯಸೇನ ''ನಟ್ಟಿರ್ದ ಕಲ್ಲುಂ ಒಟ್ಟಿದ ಮಣ್ಣುಂ ದೇವರೇ ?'' ಎಂದು ಪ್ರಶ್ನಿಸುತ್ತಾನೆ[43] ವಚನ ಸಾಹಿತ್ಯದಲ್ಲಿ ಕಲ್ಲುದೇವರ ಪೂಜೆಯ ನಿರಾಕರಣೆ ಪದೇ ಪದೆ ಬರುತ್ತದೆ. ಕರ್ನಾಟಕದಲ್ಲಿ ಹೀಗೆ ಪೂಜೆಗೊಳ್ಳುವ ಶಿಲೆಗಳು ಒಂದೇ ನಿಶ್ಚಿತ ದೈವವಾಗಿ ಮತ್ತು ಒಂದೇ ರೀತಿಯ ಇತಿಹಾಸವನ್ನು ಹೇಳುವುವುಗಳಾಗಿ ಇವೆ ಎಂದೇನೂ ಅಲ್ಲ. ಅವು ಹಲವು ಕಥೆಗಳ ಮೂಲಕ ಹಲವು ದೈವಗಳ ರೂಪ ಪಡೆದು ಜನಮನದಲ್ಲಿ ಪ್ರಚಲಿತದಲ್ಲಿವೆ. ಹೀಗೆ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿರುವ ಹಲವು ದೈವಗಳಲ್ಲಿ ಮಾಸ್ತಿ (ಸತಿ) ದೈವವನ್ನು ಪ್ರತಿನಿಧಿಸುವ ಶಿಲೆಗಳೂ ಕೆಲವು ಇವೆ ಎಂಬುದನ್ನು ಮರೆಯಬಾರದು.

ಯರಬಳ್ಳಿ, ಹೆಮ್ಮನಹಳ್ಳಿ, ಶೆಟ್ಟಿಹಳ್ಳಿ, ಹಾಲ್ಕೂರು, ಕೊಂಡದಹಳ್ಳಿ — ಈ ಮೊದಲಾದ ಊರುಗಳಲ್ಲಿ ಶಿಲೆಗಳು ಮಾಸ್ತಿದೇವತೆಯಾಗಿ ಪೂಜೆಗೊಳ್ಳುತ್ತಿವೆ.[44] ತಿಮ್ಮವ್ವ

ಮತ್ತು ಬೋರಮ್ಮ ಗಂಡನ ಮರಣದ ನಂತರ ಸತಿಯಾದರು. ಇಂದಿಗೂ ಅವರ ನೆನಪಿಗಾಗಿ ಸಣ್ಣ ಗುಡಿಗಳಲ್ಲಿ ಚಿಕ್ಕ ಚಿಕ್ಕ ಕಲ್ಲುಗಳು ಯರಬಳ್ಳಿಯಲ್ಲಿ ಪೂಜಿಸಲ್ಪಡುತ್ತವೆ. ಗಂಡ ನಾಗಣ್ಣ 'ತಿಮ್ಮವ್ವ' ನ ಸಲುವಾಗಿ ಬಳಿ ಎಲೆ ತರಲಿಕ್ಕೆ ಹೋಗಿ ಮಡಿಯುತ್ತಾನೆ. ಪತ್ನಿ ತಿಮ್ಮವ್ವ ಕಲಿಯಾಗಿ ಕೊಂಡ ಮಾಡಿಸಿಕೊಂಡು ಅದರಲ್ಲಿ ಹಾರುತ್ತಾಳೆ. ಈ ವೀರತಿಮ್ಮವ್ವನ ಕುರಿತಾಗಿ ದೀರ್ಘ ಕಥನಗೀತೆಯೊಂದು ಯರಬಳ್ಳಿ, ಹತ್ತಿಕೋಟೆ, ಹಿರಿಯೂರು, ಮದನಕುಂಟೆ ಮೊದಲಾದ ಗ್ರಾಮಗಳಲ್ಲಿ ಪ್ರಚಲಿತದಲ್ಲಿದೆ. ಬೋರಮ್ಮ ಸತಿಯಾದುದರ ಕುರಿತಾಗಿ ಹೀಗೆ ಹೇಳಲಾಗುತ್ತಿದೆ: ಗಂಡ ಮಡಿಯಲಾಗಿ ಸತಿಯಾಗಲು ಬೋರಮ್ಮ ಬಯಸಲಿಲ್ಲ ಅಲ್ಲದೆ ಅವಳುತಪ್ಪಿಸಿಕೊಂಡು ಹೋಗಲು ಬಯಸಿದಳು ಹಾಗೆ ಓಡಿ ಹೋಗುತ್ತಿದ್ದವಳನ್ನು ಹಿಡಿದು ಕೊಂಡದಲ್ಲಿ ಹಾಕಲಾಯಿತು. ಅಂಥ ಸತಿಯರ ನೆನಪಿಗಾಗಿ ಚಿಕ್ಕಕಲ್ಲೊಂದನ್ನು ಮಾತ್ರ ಉಳಿಸಿಕೊಂಡು ಬರಲಾಗಿದೆ[45] ಹೆಮ್ಮನಹಳ್ಳಿಯಲ್ಲಿ ಮಾಸ್ತಿ ಹೆಸರಿನಲ್ಲಿ ಮಂಟಪವೊಂದಿದೆ (ಚಿತ್ರ — 2) ಅದರ ಮಧ್ಯಭಾಗದಲ್ಲಿ ಚಿಕ್ಕಗುಮ್ಮಟವಿದೆ. ( ಚಿತ್ರ — 3 ) ಈ ಗುಮ್ಮಟನಲ್ಲಿ ತೀರ ಚಿಕ್ಕದಾದ ಮೂರು ಕಲ್ಲುಗಳು ಮಾಸ್ತ್ಯಮ್ಮ ಎಂದು ಪೂಜಿಸಲ್ಪಡುತ್ತವೆ. ಈ ಮಾಸ್ತ್ಯಮ್ಮನ ವೃತ್ತಾಂತ ಮೂರು ಗ್ರಾಮಗಳಿಗೆ ಸಂಬಂಧಿಸಿದ್ದು. ಮಾಸ್ತಿಮ್ಮ ಮಂಡ್ಯ ತಾಲೂಕಿನ ಹುಲಿವಾಹನದಲ್ಲಿ ಹುಟ್ಟಿ, ಮದ್ದೂರ ತಾಲೂಕಿನ ಅಡಗನಹಳ್ಳಿಯಲ್ಲಿ ದತ್ತುಮಗಳಾಗಿ ಬೆಳೆದು, ಅಲ್ಲಿಂದ ಐದು ಮೈಲು ದೂರದಲ್ಲಿರುವ ಹೆಮ್ಮನಹಳ್ಳಿಗೆ ಲಗ್ನವಾಗಿ ಹೋದಳು. ಗಂಡ ಹೊಂಬಾಳೆಗೌಡ ಯುದ್ಧದಲ್ಲಿ ಮಡಿಯಲಾಗಿ ಮಾಸ್ತ್ಯಮ್ಮ ಕೊಂಡ-ಕೊಂಡವಾಗಲು ನಿರ್ಧರಿಸುತ್ತಾಳೆ. ಯಾರು ಎಷ್ಟು ಬೇಡವೆಂದರೂ ಕೇಳದೇ ಸತಿಯಾಗುತ್ತಾಳೆ.[46] ಶೆಟ್ಟಿಹಳ್ಳಿಯಲ್ಲಿ ಮಾಸ್ತ್ಯಮ್ಮನೆಂದು ಪೂಜಿಸಲ್ಪಡುವ ನಾಲ್ಕು ಚಿಕ್ಕ ದುಂಡಗಿನ ಕಲ್ಲುಗಳನ್ನು ತೋರಿಸುತ್ತಾರೆ ಹಾಲ್ವಾರಿನಲ್ಲಿ ನೆಲದಲ್ಲಿ ಹೂತುಹೋದ ಚಿಕ್ಕಕಲ್ಲನ್ನು ಮಾಸ್ತ್ಯಮ್ಮನೆಂದು ಹೇಳಲಾಗುತ್ತಿದೆ. ಅದೇ ರೀತಿ ಕೊಂಡದಹಳ್ಳಿಯಲ್ಲಿ 'ಒಡೆದು ಮೂಡಿದವೆಂದು'' ಹೇಳಲಾಗುವ ಎರಡು ಸಾಮಾನ್ಯ ಕಲ್ಲುಗಳನ್ನು ಮಾಸ್ತ್ಯಮ್ಮನೆಂದು ಹೊಸದಾಗಿ ಕಟ್ಟಿಸಿದ ಚಿಕ್ಕದೇವಸ್ಥಾನವೊಂದರಲ್ಲಿ ತೋರಿಸುತ್ತಾರೆ.

ಈ ರೀತಿಯಾಗಿ ಸತಿಹೋದವರ ಕುರುಹಾಗಿ ಚಿಕ್ಕ ಚಿಕ್ಕ ಕಲ್ಲುಗಳು ಇಂದಿಗೂ ಕರ್ನಾಟಕದಲ್ಲಿ ಉಳಿದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಕೆಲವಕ್ಕೆ ದೀರ್ಘ ರೀತಿ ಕತೆಗಳಿದ್ದರೆ, ಇನ್ನು ಕೆಲವಕ್ಕೆ, ಅವಾವೂ ಇಲ್ಲ ಅವು ಕೇವಲ 'ಮಾಸ್ತ್ಯಮ್ಮ' ಎಂಬ ಹೆಸರಿನಿಂದ ಪೂಜಿಸಿಕೊಂಡು ತಮ್ಮ ಸೂಕ್ಷ್ಮ ಅಸ್ತಿತ್ವವನ್ನು ಉಳಿಸಿಕೊಂಡು ಮಾತ್ರ ಬಂದಿವೆ

<u>ಶಿಲ್ಪ :—</u> ಗಂಡನ ಮರಣದ ನಂತರ ಸತಿಹೋದ ಪತ್ನಿಯ ನೆನಪಿಗಾಗಿ ಶಿಲ್ಪ ನಿರ್ಮಿಸುವದು, ಕರ್ನಾಟಕದಲ್ಲಿ ಸಾಮಾನ್ಯವಾಗಿದ್ದಿತು. ಭಾರತದಲ್ಲಿ ಈ ರೀತಿ ಸತಿ ಸ್ಮಾರಕಗಳನ್ನು ನಿಲ್ಲಿಸುವ ಪದ್ಧತಿ 'ಸಂಗಮ'ಯುಗದಿಂದ ಇತ್ತೀಚೆಗೆ ಬೆಳೆದುಬಂದಂತೆ ತೋರುತ್ತದೆ. ಚಂದ್ರಗುಪ್ತ ಮೌರ್ಯನ ಕಾಲಕ್ಕೆ ಭಾರತಕ್ಕೆ ಬಂದಿದ್ದ ಮೆಗಾಸ್ತನೀಸನು ಹೇಳುವ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ''ಸತ್ತವರನ್ನು ಹೂಳಿದ ಸ್ಥಳದಲ್ಲಿ ಸ್ವಲ್ಪ ಎತ್ತರವಾಗಿ ಸಮಾಧಿಯನ್ನು ಕಟ್ಟುತ್ತಾರೆ. ಆದರೆ ಸ್ಮಾರಕಗಳನ್ನು ನಿರ್ಮಿಸುವುದಿಲ್ಲ. ಸತ್ತವರು ಬದುಕಿದ್ದಾಗ ತೋರಿಸಿದ ಒಳ್ಳೆಯ ನಡತೆ ಮತ್ತು ಸತ್ತ ಮೇಲೆ ಅವರನ್ನು ಕುರಿತು ಕಟ್ಟಿದ ಗೀತೆಗಳೇ ಅವರ ಸ್ಮರಣೆಗೆ ಸಾಕೆಂದು ಜನ ಭಾವಿಸುತ್ತಾರೆ.'[47] ಇಲ್ಲಿ ಮೌರ್ಯಯುಗದಲ್ಲಿ ಸತ್ತವರ ಸ್ಮರಣೆಗಾಗಿ ಸ್ಮಾರಕಗಳನ್ನು ನಿಲ್ಲಿಸುವ ಪದ್ಧತಿ ಅಸ್ತಿತ್ವದಲ್ಲಿ ಇರಲಿಲ್ಲವೆಂಬುದನ್ನು ಮೆಗಾಸ್ತನೀಸ್ ಸ್ಪಷ್ಟಪಡಿಸಿದಂತಿದೆ. 'ಸಂಗಮಯುಗ'ದಲ್ಲಿ ಜರುಗುತ್ತಿದ್ದ ಸಹಗಮನದ ಕುರಿತಾಗಿ ಈ ರೀತಿ ಅಭಿಪ್ರಾಯವಿದೆ: 'ಸತ್ತವರು ಋಷಿಗಳಿರಲಿ, ಅರಸರಿರಲಿ, ಸಹಗಮನ ಮಾಡಿದ ಸ್ತ್ರೀಯರಿರಲಿ, ಅವರ ಸಂಬಂಧಿಕರು ಬೇರೆ ಬೇರೆ ಆಕೃತಿಗಳ ಇಟ್ಟಿಗೆಯ ಸಮಾಧಿಗಳನ್ನು ಕಟ್ಟಿಸುತ್ತಿದ್ದುದು 'ಮಣಿಮೇಖಲೈ'ಯಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಯುದ್ಧದಲ್ಲಿ ಯೋಧರಿಗಾಗಿ ನಿಲ್ಲಿಸಿದ 'ನಡಕಲ್'ಗಳಿಗಿಂತ ಇವು ಭಿನ್ನವಾದವು. ಯಾಕೆಂದರೆ 'ನಡುಕಲ್' ಬಹಳವಾಗಿ ಸ್ಮಾರಕ ಸ್ವರೂಪದ್ದು, 'ಮಣಿಮೇಖಲೈ' ಯಲ್ಲಿ ಪ್ರಸ್ತಾಪಿಸಿರುವ ಕಟ್ಟಣೆಗಳು ವಾಸ್ತವವಾಗಿ ಗೋರಿಗಳು'.[48] ಮೌರ್ಯ ಹಾಗೂ ಸಂಗಮ ಕಾಲದ ಭಾರತದಲ್ಲಿ ಸತಿಹೋದವಳ ಗುರುತಿಗಾಗಿ ಬಹುಶ: ಹೆಚ್ಚಾಗಿ ಸಮಾಧಿಗಳನ್ನು ಮಾತ್ರ ರಚಿಸುತ್ತಿದ್ದರೆಂದು ಕಾಣುತ್ತದೆ. 'ಸಂಗಮ ಯುಗದ ಸಾಮಾಜಿಕ ಜೀವನವನ್ನು ವಿವೇಚಿಸುತ್ತ ಎನ್.ಸುಬ್ರಮಣಿಯನ್ ಅವರು ಹೇಳಿರುವ ಮಾತುಗಳನ್ನು ಇಲ್ಲಿ ನೆನಪಿಸಿಕೊಂಡರೆ ಈ ವಿಷಯ ಇನ್ನೂ ಸ್ಪಷ್ಟಗೊಳ್ಳುತ್ತದೆ. 'ಸತಿಗಾಗಿ 'ಸತಿಕಲ್' ( ಅಥವಾ 'ಮಹಾಸತಿಕಲ್' ವಿರೂಪ 'ಮಾಸ್ತಿಕ್ಕಲ್' ) ಎಂಬ ಹೆಸರಿನ ಸ್ಮಾರಕ ಕಲ್ಲನ್ನು ನೆಡುವ ಅನಂತರದ ಕಾಲಾವಧಿಯ ಪದ್ಧತಿ ಸಂಗಮ ಸಾಹಿತ್ಯದಲ್ಲಿ ಪ್ರಸ್ತಾಪಿತವಾಗಿಲ್ಲ. ಈ ಪದ್ಧತಿಯ ಅರಿವು ಅವಗಿದ್ದಿರಲೂಬಹುದು. ಯಾಕೆಂದರೆ ತಮ್ಮ ಪ್ರಭುವಿಗಾದಿ ಪತಿಗಾಗಿ — ಮಡಿಯುವ ವೀರಪತ್ನಿಯರಿಗೆ ಕಲ್ಲು ನೆಡುವದು, ಆ ವಿಚಾರದ ಕೇವಲ ವಿಸ್ತರಣ ಮಾತ್ರ. 'ಕಣ್ಣಗಿಯ ( ಮಹಾಸತಿ ) ಗೌರವಾರ್ಥ ಸೆಂಗುವಟ್ಟುವನ್ ನೆಟ್ಟಕಲ್ಲನ್ನು ನಡುಕಲ್ ಎಂದು ಇಳಂಗೋ ಬಣ್ಣಿಸಿರುವದು ಗಮನಾರ್ಹವಾಗಿದೆ[49]

ಕರ್ನಾಟಕದಲ್ಲಿಯೂ ಸಹಗಮನ ಮಾಡಿದ ಸ್ತ್ರೀಯರ ಸ್ಮರಣಾರ್ಥ ಸಿಗುವ ಅತಿ ಪ್ರಾಚೀನ ಸ್ಮಾರಕವೆಂದರೆ ಕ್ರಿ. ಶ. 6ನೇಯ ಶತಮಾನದ್ದು ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[50]

ಕರ್ನಾಟಕದ ಸತಿ ಸ್ಮಾರಕಗಳಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ದೊರಕುವ ಸ್ಮಾರಕಗಳೆಂದರೆ ಶಿಲ್ಪಸ್ಮಾರಕಗಳೆಂದೇ ಹೇಳಬೇಕು. ಸಾಮಾನ್ಯವಾಗಿ ಕನ್ನಡ ನಾಡಿನ ಬಹುತರ ಹಳ್ಳಿಗಳಲ್ಲಿ ಈ ಶಿಲ್ಪಸ್ಮಾರಕಗಳನ್ನು ಕಾಣಬಹುದಾಗಿದೆ. ಕೆಲವು ಹಳ್ಳಿಗಳಲ್ಲಿ ಈ ಸತಿ ಶಿಲ್ಪಗಳು ಹತ್ತರಿಂದ ಇಪ್ಪತ್ತರವರೆಗೆ ಒಂದೆಡೆಯಲ್ಲಿ ಇರುವದು ಗಮನಾರ್ಹ ವಿಷಯವಾಗಿದೆ.

ಸತಿಶಿಲ್ಪಗಳಲ್ಲಿ ಹಲವು ಸ್ವರೂಪಗಳನ್ನು ಗುರುತಿಸಬಹುದಾಗಿದೆ. 1. ಕಂಬದಿಂದ ಹೊರಟ ಬಲಗೈ ಎತ್ತಿದ ಶಿಲ್ಪ 2. ಕಂಬದಿಂದ ಹೊರಟ ಬಲಗೈ ಎತ್ತಿದ ಶಿಲ್ಪದೊಂದಿಗೆ ಪತಿ–ಸತಿ ಕುಳಿತ ಚಿತ್ರ. 3. ಕಂಬದಿಂದ ಹೊರಟ ಬಲಗೈ, ಪತಿ–ಸತಿ ಈ ಶಿಲ್ಪಗಳೊಂದಿಗೆ ಇನ್ನುಳಿದ ಶಿಲ್ಪಗಳು. 4. ಸತಿಯನ್ನು ಮಾತ್ರ ಒಳಗೊಂಡ ಶಿಲ್ಪ. 5. ಸತಿ–ಪತಿಯರನ್ನು ಒಳಗೊಂಡ ಶಿಲ್ಪ. 6. ಸತಿ–ಪತಿಯರನ್ನು ಒಳಗೊಂಡ ವಿವಿಧ ಸ್ತರಗಳ ಶಿಲ್ಪ. 7. ವೀರಗಲ್ಲುಗಳಲ್ಲಿಯ ಸತಿಶಿಲ್ಪ– ಇತ್ಯಾದಿಯಾಗಿ ಸತಿಶಿಲ್ಪಗಳನ್ನು ಗುರುತಿಸಬಹುದಾಗಿದೆ. ( ಸತಿ ಶಿಲ್ಪಗಳ ಕುರಿತಾಗಿ ಮುಂದಿನ ಅಧ್ಯಾಯವೊಂದರಲ್ಲಿ ವಿವರವಾಗಿ ಚರ್ಚಿಸಲಾಗುವದು) ಇವುಗಳಲ್ಲಿ ಎತ್ತಿದ ಬಲಗೈ ಶಿಲ್ಪವುಳ್ಳ ಸ್ಮಾರಕಗಳೇ ಅಧಿಕ ಸಂಖ್ಯೆಯಲ್ಲಿ ದೊರಕುವುದೊಂದು ವಿಶೇಷವಾಗಿದೆ.

ಈ ಸತಿ ಶಿಲ್ಪಗಳು ಸತಿಪದ್ಧತಿಯ ಆಕರಗಳಲ್ಲಿ ಮುಖ್ಯಸ್ಥಾನ ಪಡೆಯುತ್ತವೆ. ಶಾಸನಗಳಷ್ಟು ನಿರ್ದಿಷ್ಟತೆ — ಖಚಿತತೆ ಇವುಗಳಿಂದ ತಿಳಿದು ಬರದಿದ್ದರೂ, ಅವುಗಳಿಗೆ ಪೂರಕ ರೀತಿಯಲ್ಲಿ ಅಮೂಲ್ಯವಿಷಯಗಳನ್ನು ತಿಳಿಸುತ್ತವೆ. ಹಲವು ಶಿಲ್ಪಗಳು ಸತಿ ಹೋದವಳ ಮತ, ಅಂತಸ್ತುಗಳನ್ನು ತಿಳಿಸುವುದರ ಜೊತೆಗೆ ಗಂಡ ಮರಣ ಹೊಂದಿದ ಬಗೆ, ಅವಳು ಸತಿ ಹೋದ ರೀತಿ — ಈ ಮೊದಲಾದ ವಿಷಯಗಳನ್ನು ತಿಳಿಸುತ್ತವೆ. ಇನ್ನು ಕೆಲವು ಶಿಲ್ಪಗಳು ಸತಿಘಟನೆ ಜರುಗಿದ ಕಾಲವನ್ನು ಗುರುತಿಸಲು ಸಹಾಯಕವಾಗುತ್ತವೆ. ಅಲ್ಲದೆ, ಪತಿ ಮರಣ ಹೊಂದಿದಾಗ ಎಷ್ಟು ಜನ ಪತ್ನಿಯರು ಸತಿ ಹೋದರು ಎಂಬುದು ಸತಿಶಿಲ್ಪಗಳಿಂದ ತಿಳಿದುಕೊಳ್ಳಲು ಸಾಧ್ಯವಿದೆ. ಈ ಹಲವು ವಿಷಯವ್ಯಾಪ್ತಿಯನ್ನು ಒಳಗೊಂಡ ಸತಿ ಶಿಲ್ಪಗಳು ಸತಿಪದ್ಧತಿಯ ಆಕರಗಳಲ್ಲಿ ಅಪಾರನಿಧಿ ಎನಿಸಿವೆ.

**ಶಾಸನ :—** ಸತಿಸ್ಮಾರಕಗಳಲ್ಲಿ ಕೇವಲ ಬರವಣಿಗೆಯುಳ್ಳ ಶಿಲೆಗಳು ದೊರಕುವದು ತುಂಬ ಅಪರೂಪವೆಂದೇ ಹೇಳಬೇಕು. ಎಡಲವಾಡಿ, ಕಾನಲೆ, ಮತ್ತು ಅರಗ — ಈ ಊರುಗಳಲ್ಲಿ ಮಾತ್ರ ಕೇವಲ ಬರಹವನ್ನೊಳಗೊಂಡ ಶಿಲೆಗಳು ದೊರಕುತ್ತವೆ.[53] ಇವುಗಳಲ್ಲಿ ಅಗರದ ಬರಹ ವೀರಭದ್ರ ದೇವಾಲಯದ ಒಳಮಂಟಪದ್ವಾರದ ಎಡಭಾಗದ ಗೋಡೆಯಲ್ಲಿ ಇದ್ದರೆ, ಇನ್ನುಳಿದ ಬರಹಗಳು ನೆಟ್ಟ ಶಿಲೆಗಳಲ್ಲಿ ಇವೆ. ಅಗರದ ಬರಹದಲ್ಲಿ ... ಸ್ಪಷ್ಟವಾಗಿ ಸತಿಹೋದ ನಿರೂಪಣೆಯು ಕಾಣುವುದಿಲ್ಲ. ಆ ಗೋಡೆಯ ಬರಹದಲ್ಲಿ 'ಹರಿಹರರಾಯನ ಕಾಲದಲ್ಲಿ ( ಶಕವರುಷ 1268) ವೇದಗಿರಿ ವಿರೂಪರಾಯನ ರಾಣಿ ಮಂಜಾದೇವಿ ವೀರಭದ್ರದೇವರಿಗೆ 'ಸ.. ಸಭಸ್ರಹವನ್ನು ಆಚಂದ್ರಾರ್ಕಸ್ಥಾಯಿಯಾಗಿ ಮಾಡಿಸಿದಳು:: ಮಂಗಳ ಮಹಾಶ್ರೀ ::' ಎಂದು ವಿವರಣೆ ನೀಡಿ 'ವೇದಗಿರಿ ವಿರುಪಣ ಒಡೆಯರ ಕೂಡಿ ಮಂಜಾದೇವಿ ಸ್ವರ್ಗ್ಗವನೊಯಿಗೊಂಡಳೂ' ಎಂದು ಹೇಳಲಾಗಿದೆ. 'ದೇವಕಾರ್ಯ ಮಾಡಿದ ಮಂಜಾದೇವಿಯು ಗಂಡ ಮತ್ತು ತಾನು ಕೂಡಿ ಸ್ವರ್ಗಸೂರೆಗೊಂಡಳು'' ಎಂಬ ವಿವರಣೆಯು ಹಿನ್ನೆಲೆಯಲ್ಲಿ, ಒಳ್ಳೆಯ ಕಾರ್ಯ ಮಾಡಿದ್ದಕ್ಕೆ ಸ್ವರ್ಗ ಪಡೆಯುವ ನಂಬಿಕೆಯ ಮಾತು ಇದಾಗಿರಬೇಕೆನಿಸುತ್ತದೆ. ಇದಾಗಿರದಿದ್ದರೆ ಮಂಜಾದೇವಿಯು ವೇದಗಿರಿ ವಿರುಪಣ ಒಡೆಯರ ಮರಣದ ನಂತರ ಅವರೊಡನೆ ಕೂಡಿ ಸ್ವರ್ಗಕ್ಕೆ ಹೋದಳು ಎಂದು ಹೇಳಬೇಕಾಗುತ್ತದೆ. ಹೀಗೆ ಈ ಶಾಸನ ಮಂಜಾದೇವಿಯು ಸತಿಹೋದುದನ್ನು ಸ್ಪಷ್ಟವಾಗಿ ತಿಳಿಸದೇ ಇರುವುದರಿಂದ ಇದನ್ನು ಕೇವಲ ಬರಹವನ್ನು ಒಳಗೊಂಡ ಸತಿ ಶಿಲೆ ಎಂದು ಹೇಳುವುದಕ್ಕೆ ಕಷ್ಟವಾಗುತ್ತದೆ. ಕ್ರಿ.ಶ. 1118 ರ ಎಡಲವಾಡಿ ಶಾಸನವು 'ಸಿಕ್ಕಿದೇವಿಯು'' ಹುಲಿಯೊಡನೆ ಹೋರಾಡಿ ಗಂಡನು ಮರಣ ಹೊಂದಿದಾಗ ಅಗ್ನಿ ಪ್ರವೇಶ ಮಾಡುತ್ತಾಳೆ ಎಂದು ವಿವರಿಸುತ್ತದೆ. ಕ್ರಿ.ಶ. 1431 ರ ಕಾನಲೆ ಶಾಸನವು 'ಬೊಂಮಿಗವುಡಿ' ಯು ಸಹಗಮನವನ್ನು ತಿಳಿಸುತ್ತದೆ. ಈ ರೀತಿ ಕರ್ನಾಟಕದಲ್ಲಿ ಕೇವಲ ಶಾಸನಸ್ಥ ಸತಿಘಟನೆಯ ಶಿಲೆಗಳು ತೀರ ಕಡಿಮೆ ಸಂಖ್ಯೆಯಲ್ಲಿ ದೊರಕುತ್ತವೆ. ಈ ಸತಿ ಶಾಸನಗಳಲ್ಲಿ ಕನ್ನಡ ಭಾಷೆಯಲ್ಲಿ ರಚನೆಗೊಂಡಿದ್ದರೂ ಇವುಗಳಲ್ಲಿ ಒಂದು ತಮಿಳು ಲಿಪಿಯಲ್ಲಿರುವದು ಅಪರೂಪದ ಉದಾಹರಣೆ ತಿಳಿಸಿದೆ.[54]

**ಶಿಲ್ಪ — ಶಾಸನ :—** 'ಶಿಲ್ಪ — ಶಾಸನ' ಈ ಸತಿಸ್ಮಾರಕಗಳು ಸತಿಶಿಲ್ಪಗಳಿಗಿಂತ ಕಡಿಮೆ ಸಂಖ್ಯೆಯಲ್ಲಿಯೂ ಸತಿಶಾಸನಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿಯೂ ಕರ್ನಾಟಕದಲ್ಲಿ ದೊರಕುತ್ತವೆ.

ಸಾಮಾನ್ಯವಾಗಿ ಆಗಾಗ ಜರುಗುತ್ತಿದ್ದ ಸತಿಘಟನೆಯನ್ನು ಸ್ಮರಣೆಯಲ್ಲಿಟ್ಟು ಕೊಳ್ಳಲು ಕಲ್ಲಿನ ಮೇಲಿನ ಬರಹದಂಥ ಕ್ಲಿಷ್ಟ ಮಾಧ್ಯಮವನ್ನು ಬಿಟ್ಟು ಸಾಮಾನ್ಯ ರೀತಿಯ ಸ್ತ್ರೀಚಿತ್ರವೊಂದನ್ನು ಕಲ್ಲಿನಲ್ಲಿ ರಚಿಸುವ ಸರಳ ಮಾರ್ಗವನ್ನು ಅವರು ಕಂಡುಕೊಂಡಂತಿದೆ. ಚಿತ್ರ ಕೊರೆಯುವುದನ್ನು ಬಿಟ್ಟು ಕೇವಲ ಬರಹ ಬರೆದು ಸತಿಘಟನೆಯನ್ನು ನೆನಪಾಗಿಡುವ ವಿಷಯ ಅಂದಿನ ಜನತೆಗೆ ಭಾವನಾತ್ಮಕವಾಗಿ ಒಪ್ಪಿಗೆಯಾಗಿರಲಿಲ್ಲವೆನಿಸುತ್ತದೆ. ಹೀಗಾಗಿ ಶಿಲ್ಪದೊಂದಿಗೆ ಬರಹವನ್ನು ಅಳವಡಿಸಿದ ಸ್ಮಾರಕಗಳು ಕೇವಲ ಶಿಲ್ಪ ರೂಪದ ಸ್ಮಾರಕಗಳಿಗೆ ದ್ವಿತೀಯಸ್ಥಾನ ಪಡೆದಿವೆ.

ಕರ್ನಾಟಕದ ಈ ಜನತೆ ಸತಿಕಲ್ಲಿನಲ್ಲಿ ಚಿತ್ರ ಮತ್ತು ಬರಹವನ್ನು ಜೊತೆಗೂಡಿ ಪ್ರಕಟಪಡಿಸುವಲ್ಲಿ ಸಾಮಾನ್ಯವಾದ ಯಾವ ಒಂದು ನಿರ್ದಿಷ್ಟ ನಿಯಮವನ್ನೇನೂ ಪಾಲಿಸಿದಂತಿಲ್ಲ. ಹಲವು ಸಲ ಮಾಸ್ತಿಕಲ್ಲಿನ ಕೆಳಭಾಗದಲ್ಲಿ ಅಥವಾ ಮೇಲ್ಭಾಗದಲ್ಲಿ ಶಾಸನವನ್ನು ಬರೆದಿರುವುದುಂಟು. ಅಪರೂಪವಾಗಿ ಒಮ್ಮೊಮ್ಮೆ ಮಾಸ್ತಿಕಲ್ಲಿನಲ್ಲಿ ಎಡ–ಬಲಗಳಲ್ಲಿ ಶಾಸನ ಬರೆದಿರುವುದು ಉಂಟು. ಅಷ್ಟೇ ಅಲ್ಲದೆ, ಮಾಸ್ತಿಕಲ್ಲಿನ ಸುತ್ತಲೂ ಶಾಸನ ಬರೆದ ತುಂಬ ಕುತೂಹಲವಾದ ಉದಾಹರಣೆಯೂ ಒಂದು ಎರೆಯೂರಿನಲ್ಲಿ ಸಿಗುತ್ತದೆ.[55] ಕಂಬದಿಂದ ಹೊರಟ ಬಲಗೈ ಶಿಲ್ಪವಿದ್ದರೆ ಅಂಥ ಶಿಲೆಯಲ್ಲಿ ಹೆಚ್ಚಾಗಿ ಶಾಸನವನ್ನು ಕಂಬದ ಮೇಲೆ ಬರೆಯಲಾಗಿರುತ್ತದೆ. ಇನ್ನು ಮಾಸ್ತಿಕಲ್ಲಿನಲ್ಲಿ ಸ್ತರ ( ಭಾಗ ) ಗಳಿದ್ದರೆ ಸ್ತರಗಳ ಮಧ್ಯದ ಕಟ್ಟುಗಳ ಮೇಲೆ ಶಾಸನ ಬರೆಯುವುದು ಸಾಮಾನ್ಯವಾಗಿದ್ದಿತು. ಒಂದು ಶಿಲೆಯಲ್ಲಿ ಆರು ಸ್ತರಗಳನ್ನು ಮಾಡಿ ಸತಿಹೋದ ಘಟನೆಯನ್ನು ಶಿಲ್ಪದ ಮೂಲಕ ಚಿತ್ರಿಸಲು ಪ್ರಯತ್ನಿಸಿದ್ದುಂಟು.[56] ಇಲ್ಲಿರುವ ಸ್ತರಗಳ ಮಧ್ಯದ ಎಲ್ಲ ಕಟ್ಟುಗಳ ಮೇಲೆ ಶಾಸನ ಬರೆಯಲಾಗಿದೆ. ಹೆಚ್ಚು ಸ್ತರಗಳುಳ್ಳ ಶಿಲೆಗಳು ಹೆಚ್ಚಾಗಿ ವೀರಗಲ್ಲುಗಳೇ ಆಗಿರುವುದನ್ನು ಮರೆಯಬಾರದು. ಇಂಥ ಶಿಲ್ಪ ಶಾಸನದ ವಿವರಣೆಯೆಲ್ಲ ಹೆಚ್ಚಾಗಿ ವೀರನೆಡೆಗೆ ಗಮನಕೊಟ್ಟು, ಸತಿಯನ್ನು ಸಾಮಾನ್ಯ ಮಟ್ಟದಲ್ಲಿ ಕಾಣಲು ಪ್ರಯತ್ನಿಸಿರುತ್ತದೆ. ಸ್ವತಂತ್ರವಾಗಿ ನಿಂತ ಸತಿವಿಗ್ರಹದ ಕೆಳಭಾಗದಲ್ಲಿ ಶಾಸನ ಬರೆದಿರುವ ಅಪರೂಪ ನಿದರ್ಶನವೂ ಸಿಗುತ್ತದೆ.[57] ಅಲ್ಲದೆ ಸತಿ ಸ್ಮಾರಕದ ಮುಂಭಾಗದಲ್ಲಿ ಶಿಲ್ಪ ಹಿಂಭಾಗದಲ್ಲಿ ಶಾಸನ ಕಾಣಿಸಿರುವ ದೇಕಬ್ಬೆ ಶಿಲೆಯನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಈ ರೀತಿಯಾಗಿ ಸತಿಶಿಲ್ಪವುಳ್ಳ ಶಿಲೆಗಳ ವಿವಿಧ ಸ್ಥಾನಗಳಲ್ಲಿ ಶಾಸನ ಬರೆದುದನ್ನು ಗುರುತಿಸಬಹುದಾಗಿದೆ. ಇವುಗಳಲ್ಲಿ ಸ್ತರಗಳಿದ್ದ ಶಿಲ್ಪಗಳೇ ಹೆಚ್ಚಾಗಿದ್ದು, ಅವುಗಳಲ್ಲಿರುವ ಕಟ್ಟುಗಳ ಮೇಲೆಯೇ ಶಾಸನ ಬರೆದಿರುವ ಉದಾಹರಣೆಗಳು ಹೆಚ್ಚು ಸಿಗುತ್ತವೆ.

ಶಿಲೆಯಲ್ಲಿ ಒಂದೇ ಸ್ತರವಿದ್ದು, ಅದೂ ಸತಿ ನಿಂತಂಥ ಶಿಲ್ಪವನ್ನೊಳಗೊಂಡಿದ್ದರೆ ಅದಕ್ಕೆ ಶಾಸನ ಬರೆಯುವುದೇ ಬೇಡ ಎನ್ನುವ ರೀತಿಯಲ್ಲಿ ಕರ್ನಾಟಕದ ಜನತೆ ನಡೆದುಕೊಂಡು ಬಂದಿದೆ.

'ಶಿಲ್ಪ-ಶಾಸನ' — ಈ ಸತಿಸ್ಮಾರಕಗಳ ಮೂಲ ಉದ್ದೇಶ ಗಂಡ ಮರಣಹೊಂದಿದುದನ್ನು, ಪತ್ನಿ ಸತಿಹೋದುದನ್ನು, ಗಂಡನ ಮರಣದ ಕಾರಣವನ್ನು, ಪತ್ನಿ ಸತಿಹೋದ ರೀತಿ ಇತ್ಯಾದಿಗಳನ್ನು ತಿಳಿಸುವುದೇ ಆಗಿದೆ. ಅನೇಕ ಬಾರಿ ಹಲವು ಪತ್ನಿಯರು ಸತಿಹೋದುದನ್ನು ಶಿಲ್ಪ ಮತ್ತು ಶಾಸನ ಕೂಡಿಯೇ ತಿಳಿಸುತ್ತವೆ. ಶಾಸನ ಹೇಳದೇ ಇರುವ ವಿಷಯವನ್ನು ಶಿಲ್ಪದ ಸಹಾಯದಿಂದ, ಶಿಲ್ಪ ಹೇಳದೇ ಇರುವ ವಿಷಯವನ್ನು ಶಾಸನದ ಸಹಾಯದಿಂದ ತಿಳಿದು ಕೊಳ್ಳುವ ಸೌಲಭ್ಯ 'ಶಿಲ್ಪ ಶಾಸನ'ಗಳಿಂದ ಸಾಧ್ಯವಾಗಿದೆ.

ಕ್ರಿ.ಶ.1419 ರ ಕೆಳದಿ ಶಾಸನವು 'ಕರಿಯಮುತ್ತಿಯಮಲೆಗೌಡನು ಸ್ವರ್ಗಸ್ಥನಾದಲಿ ಆತನ ಮಡದಿಗೆ ರಾಮಕ್ಕನು ಮಹಾಸತಿಯಾದಳು' ಎಂದು ತಿಳಿಸುತ್ತದೆ.[58] ಈ ಕಲ್ಲಿನ ಶಿಲ್ಪದಲ್ಲಿ ಕಂಬದಿಂದ ಹೊರಟ ಎತ್ತಿದ ಬಲಗೈ ಇದೆ. ಕಂಬದ ಮೇಲೆ ವಿಮಾನವಿದ್ದು ಅದರಲ್ಲಿ ಪತಿ — ಸತಿ ಕುಳಿತಿದ್ದಾರೆ. ಪತಿ ಸಹಜಮರಣ ಹೊಂದಿದುದನ್ನು ಮತ್ತು ಗಂಡ ಮರಣ ಹೊಂದಿದ್ದಕ್ಕಾಗಿ ಪತ್ನಿ ಸತಿಹೋದುದನ್ನು ಇಲ್ಲಿಯ ಶಾಸನ ಮತ್ತು ಶಿಲ್ಪದ ಸಹಾಯದಿಂದ ಸಹಜವಾಗಿ ಗುರುತಿಸಬಹುದಾಗಿದೆ. ಕಲ್ಲಿನಲ್ಲಿ ಶಿಲ್ಪ ಸತಿಯ ಮುಖ್ಯತೆಯನ್ನು ಬಿಂಬಿಸುವುದರಿಂದ ಸಹಜ ಮರಣ ಹೊಂದಿದ ಪತಿಗಾಗಿ ಈ ಸ್ಮಾರಕ ಇರದೇ ಸತಿಹೋದ ಪತ್ನಿಗಾಗಿ ನಿರ್ಮಿಸಲ್ಪಟ್ಟಿದೆ ಎಂಬುದು ಸ್ಪಷ್ಟಗೊಳ್ಳುತ್ತದೆ. ಕ್ರಿ.ಶ. 1228 ರ ಹರಿತಾಳು ಶಾಸನವು ಹೋರಾಟದಲ್ಲಿ ತಿರಿಕಿಗೌಡ ಮರಣ ಹೊಂದಿದಾಗ ಪತ್ನಿ ಬೊಂಮಯಕ್ಕನು ಸಹಗಮನ ಮಾಡಿದಳೆಂದು ತಿಳಿಸುತ್ತದೆ.[59] ಈ ಕಲ್ಲಿನ ಶಿಲ್ಪವೂ ಕೂಡ ಕೆಳಗಿನ ಎರಡು ಸ್ತರಗಳಲ್ಲಿ ಹೋರಾಟದ ಚಿತ್ರವನ್ನು ಒಳಗೊಂಡಿರುವುದನ್ನು ಇಲ್ಲಿ ಸ್ಮರಿಸಬೇಕು. ಈ 'ಶಿಲ್ಪ-ಶಾಸನ'ವು ಮುಖ್ಯವಾಗಿ ವೀರನ ಹೋರಾಟ ಮರಣವನ್ನು ಚಿತ್ರಿಸುವುದಾಗಿದೆ. ಕ್ರಿ.ಶ. 1057 ರ ಬೆಳತೂರು ಶಾಸನವು ದೇಕಬ್ಬೆ ತನ್ನ ಗಂಡ ಮರಣಹೊಂದಲಾಗಿ ಅನುಗಮನ ಮರಣ ಹೊಂದಿದುದನ್ನು ತಿಳಿಸುತ್ತದೆ.[60] ಜೊತೆಯಲ್ಲಿ ಸತಿಹೋದುದನ್ನು ತಿಳಿಸುವ ಉತ್ಕೃಷ್ಟ ಚಿತ್ರವೊಂದನ್ನು ಬಳ್ಳಿಗಾವೆಯ 'ಶಿಲ್ಪ ಶಾಸನ'ದಲ್ಲಿ ಕಂಡರಿಸಿರುವುದನ್ನು ಇಲ್ಲಿ ಸ್ಮರಿಸಬಹುದು.[61] (ಚಿತ್ರ — 4) ಕ್ರಿ.ಶ. 1439 ರ ಕುಣಗನಹಳ್ಳಿ ಶಾಸನವು 'ತಿಂಮಲಾಪಾಯಣನ ಪೆಣ್ಡತಿ ಮಂಚಾಯಿ ಸತಿಯಾ(ದ)ರು' ಎಂದು ತಿಳಿಸುತ್ತದೆ.[62]

ಈ ಕಲ್ಲಿನಲ್ಲಿ ಎರಡು ಭಾಗಗಳನ್ನು ಮಾಡಲಾಗಿದ್ದು ಮೊದಲನೆಯ ಭಾಗದಲ್ಲಿ ಸತಿಯನ್ನು ದೇವಕನ್ನಿಕೆಯರು ಒಯ್ಯುವ ಚಿತ್ರವಿದೆ. ಮೇಲ್ಭಾಗದಲ್ಲಿ ಚಿಕ್ಕ ಕಂಬವೊಂದರಿಂದ ಹೊರಟ ಎತ್ತಿದ ಬಲಗೈ ಚಿತ್ರವಿದೆ. ಅದರ ಎಡಕ್ಕೆ ಸತಿ ಕೈಮುಗಿದು ಕುಳಿತಿದ್ದಾಳೆ. ಅವಳ ಎಡಕ್ಕೆ ಪತಿಯು ಕೈಮುಗಿದು ಕುಳಿತಿದ್ದಾನೆ. ಎರಡನೆಯ ಭಾಗದಲ್ಲಿ ಚಿಕ್ಕ ಕಂಬದಿಂದ ಹೊರಟ ಬಲಗೈ ಚಿತ್ರದೊಡನೆ ಸತಿ ಕೈಮುಗಿದು ಪತಿಯೊಡನೆ ಕುಳಿತುಕೊಂಡಿದ್ದಾಳೆ. ಅವಳೇ ಶಾಸನದಲ್ಲಿ ಉಲ್ಲೇಖಿಸಿರುವ 'ಮಂಚಾಯಿ' ಯಾಗಿರಬೇಕು (ಚಿತ್ರ – 5, 6, 7) ಕ್ರಿ. ಶ. 1442 ರ ಹರೂರ ಶಾಸನವು 'ಅಂಮಗೌಡನ–ಬಯಿರವಗೌಡಿತಂಮಸ್ತ್ರೀಯರು ಸಹಸಂಗತಿಯಾಡಿದರು' ಎಂದು ತಿಳಿಸುತ್ತದೆ.[63] ಈ ಶಾಸನ ಪಾಠವು 'ಅಂಮಗೌಡನ ಪತ್ನಿ 'ಬಯಿರವಗೌಡಿ' ಸಹಗಮನ ಮಾಡಿಕೊಂಡಿದ್ದನ್ನು ತಿಳಿಸುತ್ತದೆ. ಈ ಕಲ್ಲಿನಲ್ಲಿ ಮೂರು ಸ್ತರಗಳನ್ನು ಮಾಡಲಾಗಿದ್ದು, ಒಂದು ಮತ್ತು ಎರಡನೆಯ ಸ್ತರಗಳಲ್ಲಿ ಹೋರಾಟದ ಚಿತ್ರವಿದೆ. ಎರಡನೆಯ ಸ್ತರದಲ್ಲಿ ವೀರನನ್ನು ಕತ್ತಿಯಿಂದ ಇರಿಯುವ ಚಿತ್ರ ಬಿಡಿಸಲಾಗಿದೆ. ಈ ಸ್ತರದಿಂದಲೇ ಕಂಬದ ರಚನೆ ಪ್ರಾರಂಭಗೊಂಡು, ಅದರಿಂದ ಬಲಗೈ ಎತ್ತಿದಂತೆ ಚಿತ್ರಿಸಲಾಗಿದೆ. ಮೂರನೆಯ ಸ್ತರದಲ್ಲಿ ಪತಿ – ಪತ್ನಿ ಕೈಮುಗಿದು ಕುಳಿತಿದ್ದಾರೆ. (ಚಿತ್ರ 7, 8) ಈ ಕಲ್ಲಿನ ಶಿಲ್ಪವು ಹೋರಾಟದಲ್ಲಿ ಪತಿ ಮಡಿದುದನ್ನು ಶಾಸನ ಪಾಠವು ತಿಳಿಸದೇ ಇದ್ದ ವಿಷಯವನ್ನು ತಿಳಿಸುತ್ತದೆ. ಹರೂರ ಶಾಸನವು 'ಭೈರನಾಯಕನು ಗಾರಅಮಿಷತೊಕ್ಕಲುಡಿಯಕ ಬಿತ್ತುವಲ್ಲಿ ಕಳರು ಬಂದುತಾಗಿದಲ್ಲಿ ಕಾದಿ ಮಡಿದನು' ಎಂದು ಹೇಳುತ್ತದೆ.[64] ಈ ಪಾಠದಿಂದ ಪತ್ನಿ ಸತಿಹೋದುದ ತಿಳಿದು ಬರುವುದಿಲ್ಲ. ಆದರೆ ಕಂಬದಿಂದ ಹೊರಟ ಬಲಗೈ ಎತ್ತಿದ ಸತಿಶಿಲ್ಪ ಈ ಕಲ್ಲಿನಲ್ಲಿ ಇರುವುದರಿಂದ, ಭೈರನಾಯಕನ ಪತ್ನಿ ಸತಿಹೋಗಿರುವಳೆಂದು ತಿಳಿದುಕೊಳ್ಳಬಹುದಾಗಿದೆ. ಹೀಗೆ ಶಿಲ್ಪಕ್ಕೆ ಶಾಸನಪಾಠ, ಶಾಸನಪಾಠಕ್ಕೆ ಶಿಲ್ಪ ವಿಷಯವನ್ನು ಪ್ರಕಟಪಡಿಸುವಲ್ಲಿ ನೆರವಾಗುತ್ತವೆ. ಈ ಹಲವು ನಿಟ್ಟಿನಿಂದ 'ಶಿಲ್ಪ – ಶಾಸನ' – ಈ ಸತಿ ಸ್ಮಾರಕಗಳು ಸತಿ ಆಕರಗಳಲ್ಲಿ ಅತಿಮುಖ್ಯ ಪಾತ್ರವಹಿಸುತ್ತವೆ ಎಂದೇ ಹೇಳಬೇಕು.

<u>ಗುಡಿಗಳು:–</u> ಕರ್ನಾಟಕದ ಜನಜೀವನ ಸತಿಹೋದವಳ ನೆನಪಿಗಾಗಿ ಶಿಲೆ, ಶಿಲ್ಪ, ಶಾಸನ, ಶಾಸನ ಶಿಲ್ಪಗಳನ್ನು ನಿರ್ಮಿಸುತ್ತ ಬಂದಿರುವಂತೆ ಗುಡಿಗಳನ್ನು ರಚಿಸಿ ಅವಳ ಹೆಸರನ್ನು ಚಿರಸ್ಥಾಯಿಯಾಗಿಡಲು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಬಣಗಾ, ಅರಗಾ, ಚಂದಾವರ, ಕರ್ಕಿ, ಭಾಸ್ಕೇರಿ, ಕವಲಕ್ಕಿ, ಸಾಲಕೋಡ, ಹೊನ್ನಾವರ, ಅನಿಲಗೋಡ, ತಂದಳ್ಳಿ,

ಶಿರಾಲಿ, ಭಟ್ಕಳ, ಅಂಕೋಲಾ, ಮಾಸ್ತಿಕಟ್ಟೆ, ಹುಲ್ಲುಕಟ್ಟೆ, ಯರಬಳ್ಳಿ, ಮೈಸೂರು, ಶ್ರೀರಂಗಪಟ್ಟಣ, ಅರಕೇರಿ, ಶಟ್ಟಿಹಳ್ಳಿ, ಗುತ್ತಲು, ಚಿತ್ರಟ್ಟಿಹಳ್ಳಿ, ಮಲ್ಲಂದೂರು, ಅಗಸನಹಳ್ಳಿ, ಮಾಸಣಗಿ, ಲಕಮಾಜಿಕೊಪ್ಪ, ಉಪ್ಪಿನಗೋಳಿಗ್ರಾಮ, ಆನೆಗೊಂದಿ, ಕುಮಟಾ, ಸಾಗಡಿಬೀಣ, ಉಪ್ಪಿನಪಟ್ಟಣ, ದೇವಿಮನೆ, ಉಳ್ಳಾಲ, ಮಾಸ್ತಿಕಟ್ಟಾ, ಕಬ್ಬರಗಿ, ಚನ್ನಪಟ್ಟಣ, ಮಾಚನಹಳ್ಳಿ ಜಲಧಿಗೆರೆ, ಹಳ್ಳೂರು, ಮಾಸಡಿ, ಕತ್ತಿಗೆ ಕಮ್ಮಾರಗಟ್ಟೆ, ಕೊಂಡದಹಳ್ಳಿ, ಚಿಕ್ಕಹುಡೇವು, ಹೊದಿಗೆರೆ ಹಿರೆಸಿಂಧೋಗಿ, ಹವಳಧಾರ, ವಡ್ಡಗೆರೆ, ಕಾಟವಾಳ ಹೊಸವಾಡ — ಈ ಮೊದಲಾದ ಊರು — ನಗರಗಳಲ್ಲಿ ಮಾಸ್ತಿಗುಡಿಗಳು ಇರುವುದನ್ನು ಕಾಣುತ್ತೇವೆ.[65] ಒಂದೊಂದು ಊರುಗಳಲ್ಲಿ ಒಂದಕ್ಕಿಂತಲೂ ಹೆಚ್ಚು ಮಾಸ್ತಿಗುಡಿಗಳೂ ಉಂಟು.[66] ಮೂರು ಭಾಗಗಳನ್ನು ಒಳಗೊಂಡ ವಿಶಾಲ ಮತ್ತು ದೊಡ್ಡ ಮಾಸ್ತಿಗುಡಿಗಳು ಇರುವುದರ ಜೊತೆಗೆ ಮೂರುಕಲ್ಲು ಚಪ್ಪಡಿಗಳನ್ನು ಹಾಕಿರುವ ಅತೀ ಚಿಕ್ಕ ಮಾಸ್ತಿಗುಡಿಗಳೂ ಕರ್ನಾಟಕದಲ್ಲಿ ಇವೆ. ಈ ಮಾಸ್ತಿಗುಡಿಗಳಲ್ಲಿ ಹೆಚ್ಚಾಗಿ ಬಲಗೈ ಎತ್ತಿ ನಿಂತ ಸತಿ ಶಿಲ್ಪಗಳು ಇರುತ್ತವೆ. ಕೆಲವೊಂದು ಗುಡಿಗಳಲ್ಲಿ ಸ್ತರಗಳನ್ನು ಒಳಗೊಂಡ ಮಾಸ್ತಿಕಲ್ಲುಗಳು, ದುಂಡಗಿನ ಚಪ್ಪಟೆಯ ಕಲ್ಲುಗಳು, ವೀರಗಲ್ಲುಗಳು, ಮಾಸ್ತಿಗೊಂಬೆಗಳು, ಲೋಹ ವಿಗ್ರಹಗಳು, ಸಮಾಧಿಗಳು ಪೂಜಿಸಲ್ಪಡುತ್ತವೆ. ಇನ್ನು ಶಿವಲಿಂಗವನ್ನು ಮಾಸ್ತಿ ಎಂದು ಪೂಜಿಸುವ ಅಪರೂಪದ ಒಂದು ಉದಾಹರಣೆ ಅರಗಾದಲ್ಲುಂಟು. ಈ ರೀತಿಯಾಗಿ ಹಲವು ರಚನೆಗಳುಳ್ಳ ಮಾಸ್ತಿಗುಡಿಗಳು ಮತ್ತು ಅವುಗಳಲ್ಲಿ ವಿವಿಧ ರೂಪಗಳ ಮಾಸ್ತಿದೇವತೆಗಳು ಪೂಜಿಸಲ್ಪಡುವುದನ್ನು ಕಾಣುತ್ತೇವೆ. ಇವೆಲ್ಲವು ಸತಿ ಅಧ್ಯಯನದ ಸಾಮಗ್ರಿಗಳೆನಿಸಿ ಹೆಚ್ಚಿನ ಮಹತ್ವವನ್ನು ಪಡೆದಿವೆ.

ಕರ್ನಾಟಕದಲ್ಲಿ ಈ ಮಾಸ್ತಿಗುಡಿಗಳು ಪೂಜೆ — ಜಾತ್ರೆ — ಉತ್ಸವಗಳು ನಡೆದುಕೊಂಡು ಬಂದಿರುವುದರ ಅಧ್ಯಯನ ತುಂಬ ಕುತೂಹಲಕರವಾಗಿದೆ. ಹಲವು ಗುಡಿಗಳಲ್ಲಿ ದಿನಾಲೂ ಪೂಜೆನಡೆದರೆ ಕೆಲವು ಗುಡಿಗಳಲ್ಲಿ ವಾರಕ್ಕೊಮ್ಮೆ, ಹಬ್ಬ ಹುಣ್ಣಿಮೆಗೊಮ್ಮೆ ವರ್ಷಕ್ಕೊಮ್ಮೆ ಮಾತ್ರ ಪೂಜೆ ನಡೆಯುತ್ತದೆ. ಕೆಲವು ಗುಡಿಗಳಲ್ಲಿ ಪೂಜೆಯೂ ಇರುವುದಿಲ್ಲ. ಕೆಲವು ಮಾಸ್ತಿ ಗುಡಿಗಳಲ್ಲಿ ರಕ್ತಬಲಿಕೊಡುತ್ತಿದ್ದಾರೆ. ಇನ್ನು ಕೆಲವು ಗುಡಿಗಳಲ್ಲಿ ಶುದ್ಧ ಸಸ್ಯಾಹಾರದ ನೈವೇದ್ಯ ಮಾತ್ರ ಕೊಡಲಾಗುತ್ತದೆ. ಕೆಲವು ಗುಡಿಗಳಲ್ಲಿ ಮೂರು ದಿನದ ಜಾತ್ರೆ ನಡೆದರೆ ಹಲವು ಗುಡಿಗಳಲ್ಲಿ ಒಂದು ದಿನದ ಜಾತ್ರೆ ಮಾತ್ರ ನಡೆಯುತ್ತದೆ. ಈ ರೀತಿಯಾಗಿ ನಡೆಯುವ ಜಾತ್ರೆ — ಉತ್ಸವಗಳ ಆಚರಣೆಗಳಲ್ಲಿ ಸತಿಪದ್ಧತಿಯ ಕುರುಹುಗಳು ಇನ್ನೂ ಉಳಿದು

ಕೊಂಡು ಬಂದಿರುವುದನ್ನು ಗುರುತಿಸಬಹುದಾಗಿದೆ. ಈ ಸಂದರ್ಭದಲ್ಲಿ ಡಾ: ಎಂ. ಚಿದಾನಂದಮೂರ್ತಿ ಅವರು ಹೇಳುವ ಮಾತುಗಳನ್ನು ಸ್ಮರಿಸಬಹುದಾಗಿದೆ: 'ಭೂಶೋಧನೆ ಶಾಸನ ಮತ್ತು ಇತರ ದಾಖಲೆಗಳನ್ನೇ ಸಂಪೂರ್ಣವಾಗಿ ಅವಲಂಬಿಸುವ ಇತಿಹಾಸಜ್ಞ, ಪುರಾಣ ಮತ್ತು ರಿವಾಜುಗಳಲ್ಲಿರುವ ಬಹು ಅಮೂಲ್ಯವಾದ ಮಾಹಿತಿಯನ್ನು ಗುರುತಿಸದೇ ಹೋದರೆ ಅವನ ಬರಹ ಅಷ್ಟು ಅಪೂರ್ಣವಾಗುತ್ತದೆ. ದುರ್ಬಲವಾಗುತ್ತದೆ. ಕತೆ, ಹಾಡು, ರಿವಾಜುಗಳು ಮತ್ತು ನಂಬಿಕೆಗಳಲ್ಲಿ ಹುದುಗಿರುವ ಅಪಾರವಾದ ಮಾಹಿತಿಯನ್ನು ಎಚ್ಚರಿಕೆಯಿಂದ ಗುರುತಿಸಿ ಬಳಸಿಕೊಳ್ಳುವುದಾದರೆ ಅವನು ಬರೆಯುವ ಇತಿಹಾಸ ಇನ್ನು ಹೆಚ್ಚು ಪುಷ್ಟವಾಗುತ್ತದೆ. ಇತಿಹಾಸಕಾರ ವರ್ತಮಾನದಲ್ಲಿ ಗತಕಾಲವೂ ಇಂದಿನದರಲ್ಲಿ ಹಿಂದಿನ ಕಾಲವೂ ಅಡಗಿರುವುದನ್ನು ದರ್ಶಿಸಬಲ್ಲ.'[67] ಈ ಕಾರಣದಿಂದಾಗಿ ಹಲವು ಕತೆ, ಹಾಡು, ರಿವಾಜುಗಳು ಮತ್ತು ನಂಬಿಕೆಗಳಿಗೆ ಆಗರವಾದ 'ಮಾಸ್ತಿಗುಡಿ — 'ಸ್ಮಾರಕಗಳು' ಸತಿ-ಪದ್ಧತಿಯ ಅಧ್ಯಯನಕ್ಕೆ ತುಂಬ ನೆರವಾಗುತ್ತವೆ ಎಂದೇ ಹೇಳಬೇಕು.

6. <u>ಅವಶೇಷಗಳು:—</u>

ಸತಿಹೋದ ಘಟನೆಯನ್ನು ಸಾರುವ ಹಲವು ವಸ್ತುಗಳು, ಸ್ಥಳಗಳು ಕರ್ನಾಟಕದಲ್ಲಿ ಉಳಿದುಕೊಂಡು ಬಂದಿವೆ. ಜನತೆ ಸತಿ ಉಪಯೋಗಿಸಿದಂಥ ಸೀರೆ, ಬಳೆ, ಕನ್ನಡಿ ಈ ಮೊದಲಾದ ವಸ್ತುಗಳನ್ನು ಇನ್ನೂ ರಕ್ಷಿಸಿಕೊಂಡು ಬಂದಿದ್ದಾರೆ. ಸತಿಹೋದ ಸ್ಥಳದಲ್ಲಿ ಊರೇ, ಕಟ್ಟೆಯೋ, ಕೆರೆಯೋ [illegible]ಗದ್ದೆಯೋ ನಿರ್ಮಾಣವಾಗಿ ಅವು ಇಂದೂ ಸತಿ ಘಟನೆಯನ್ನು ತಲೆ — ತಲಾಂತರಗಳಿಂದ ಜೀವಂತವಾಗಿಟ್ಟುಕೊಂಡು ಬಂದಿವೆ. ಹೊಲ, ಕಾಡು, ಗುತ್ತ, ಕೊಂಡ, ಗೊಂಬೆ, ಗಿಡ, ಹಳ್ಳ — ಈ ಮೊದಲಾದ ರೂಪಗಳಲ್ಲಿಯೂ ಸತಿಘಟನೆಯ ನೆನಪು ಉಳಿದುಕೊಂಡು ಬಂದಿದೆ. ಅಲ್ಲದೇ ಮಾಸ್ತಿ ಮನೆತನಗಳು ಇಂದೂ ಸತಿಘಟನೆಗಳ ಸಾಕ್ಷಿಯಾಗಿ ಇವೆ. ಹೀಗೆ ಕರ್ನಾಟಕದ ಉದ್ದಗಲಕ್ಕೂ ಸತಿಪದ್ಧತಿಯ ಅವಶೇಷಗಳು ವೈವಿಧ್ಯಪೂರ್ಣವಾಗಿ, ಕುತೂಹಲಕರವಾಗಿ ಹೀಗೆ ಕಾಣ ಸಿಗುತ್ತವೆ.

<u>ಊರು</u> :— ಸತಿಪದ್ಧತಿಯನ್ನು ಗುರುತಿಸುವಲ್ಲಿ ಹಲವು ಊರುಗಳು ನೆರವಾಗಿ ನಿಲ್ಲುತ್ತವೆ. ಮಾಸ್ತಿಕಟ್ಟಾ, ಮಾಸ್ತಿಕಟ್ಟೆ, ಮಾಸ್ತಿಹಳ್ಳ, ಕೊಂಡದಹಳ್ಳಿ, ಈ ಮೊದಲಾದ ಊರುಗಳು ಸತಿ ಘಟನೆಯನ್ನು ಸ್ಮರಿಸುವಂಥವುಗಳೇ ಆಗಿವೆ.[68] ಈ ಊರುಗಳಲ್ಲಿ ಸತಿಶಿಲ್ಪ, ಕೊಂಡ, ಕಟ್ಟೆ, ಗುಡಿ ಇವುಗಳಲ್ಲಿ ಯಾವುದಾದರೂ ಒಂದು ಇರುತ್ತವೆ. ಅಥವಾ ಸತಿಶಿಲ್ಪದೊಂದಿಗೆ ಕಟ್ಟೆಯೋ ಗುಡಿಯೋ ಇಲ್ಲವೇ ಸತಿಕೊಂಡಹೋಗಿರಬಹುದಾದ

ಸ್ಥಳದಲ್ಲಿ ಶಿಲ್ಪವೋ ಗುಡಿಯೋ ಕಟ್ಟೆಯೋ ಇರುತ್ತವೆ. ಕಾರಣಾಂತರಗಳಿಂದ ಇವುಗಳ ಸುತ್ತ ಜನವಸತಿ ನಿರ್ಮಾಣಗೊಂಡು ಊರಾಗಿ ಪರಿಣಮಿಸಿದಾಗ ಅದನ್ನು ಗುರುತಿಸಲಿಕ್ಕೆ ಸಹಜವಾಗಿ ಮಾಸ್ತಿ ಹೆಸರಿನಿಂದ ಇಲ್ಲವೆ ಮಾಸ್ತಿಗೆ ಸಂಬಂಧಪಟ್ಟುದುದರ ಹೆಸರಿನಿಂದ ಕರೆದುದುಂಟು.

ಮಾಸ್ತಿಕಟ್ಟೆ(ಹೊಸನಗರ, ತಾ) ಈ ಊರು ಇತ್ತೀಚೆಗೆ ಪಟ್ಟಣದಂತೆ ಬೆಳೆಯುತ್ತಿದೆ. ಮೊದಲು ಈ ಸ್ಥಾನದಲ್ಲಿ ಊರು ಇರಲಿಲ್ಲ. ಕೇವಲ ಸತಿಶಿಲ್ಪವನ್ನೊಳಗೊಂಡ ಛತ್ರದ ಹುಲ್ಲಿನ ಕೊಟ್ಟಿಗೆ ಮಾತ್ರ ಇದ್ದಿತೆಂದು ಹೇಳಲಾಗುತ್ತಿದೆ. 'ಮುಳುಗಡೆ ಪ್ರದೇಶ ಯೋಜನೆ'ಯ ಕಾರಣದಿಂದಾಗಿ ಹುಲ್ಲುಕಲ್ಲು ಮೇಲಿನಿಂದ ಹೋಗುವ ವಾಹನಗಳೆಲ್ಲ ಈ ಮಾಸ್ತಿ ಕೊಟ್ಟಿಗೆಯ ಮೇಲಿನಿಂದ ಹೋಗಲು ಪ್ರಾರಂಭಿಸಿದವು. ಈಗ ಶಿವಮೊಗ್ಗ, ಸಾಗರ, ಚಿತ್ರದುರ್ಗ, ಉಡುಪಿ, ಮಂಗಳೂರು, ಮೊದಲಾದ ಮುಖ್ಯ ನಗರಗಳ ಬಸ್ಸುಗಳು ಇಲ್ಲಿಂದಲೇ ಹೋಗುತ್ತವೆ. ಬರುಬರುತ್ತ ಜನವಸತಿ ನಿರ್ಮಾಣವಾಗಲು ಪ್ರಾರಂಭಿಸಿತು. ಈ ಸಮಯಕ್ಕೆ ಈ ಸ್ಥಾನವನ್ನು ಊರ ಹಿರಿಯರು ( ಹುಲ್ಲುಕಲ್ಲು ಮೊದಲಾದ ಊರಿನವರು) ಮಾಸ್ತಿಕೊಟ್ಟಿಗೆ, ಮಾಸ್ತಿಕೋಟಿಗೆ ಎಂದು ಕರೆಯಲು ಪ್ರಾರಂಭಿಸಿದರು. ಬರುಬರುತ್ತ ಇದನ್ನು 'ಮಾಸ್ತಿಕಟ್ಟೆ' ಎಂದೇ ಕರೆಯಲಾರಂಭಿಸಿದರು.[69] ಹೀಗಾಗಿ ಇಲ್ಲಿರುವ ಇಂದಿನ ಈ ಜನವಸತಿ 'ಮಾಸ್ತಿಕಟ್ಟೆ' ಎಂದೇ ಪ್ರಚಾರಗೊಂಡಿದೆ. ಅಂಕೋಲಾ ತಾಲೂಕಿನ ಮಾಸ್ತಿಕಟ್ಟೆ ಊರು ಕೂಡ ಹೆಸರು ಪಡೆದದ್ದು ಇದೇ ರೀತಿಯೇ ಎಂದು ಹೇಳಬೇಕು. ಈ ಪ್ರದೇಶದ ಕಾಡಿನಲ್ಲಿ ಮೊದಲು ನಿತ್ಯಾನಂದಸ್ವಾಮಿಗಳೊಡನೆ ಒಟ್ಟು ಮೂರು ಜನ ಸಾಧುಗಳು ಇರುತ್ತಿದ್ದರು. ಈ ಕಾಡಿನಲ್ಲಿರುವ ಜನರಿಗೆ ಮಾಸ್ತಿ ಕನಸಿನಲ್ಲಿ ಬಂದಳೆಂದೂ, ತನ್ನನ್ನು ಸ್ಥಾಪಿಸಬೇಕು ಎಂದು ಕೇಳಿದಳೆಂದೂ ಆ ನಿಮಿತ್ತ 'ಮಾಸ್ತಿತಾಯಿ'ಯನ್ನು ತಂದು ಕಲ್ಲಿನ ಕಟ್ಟೆಯನ್ನು ಕಟ್ಟಿ ಸ್ಥಾಪಿಸಲಾಯಿತೆಂದೂ ಹೇಳಲಾಗುತ್ತಿದೆ.[70] ಬರುಬರುತ್ತ ಇಲ್ಲಿ ವಾಹನಗಳಲ್ಲಿ ಬಂದ ಪ್ರವಾಸಿಗರು ನಿಂತು, ತಾಯಿಯನ್ನು ಪೂಜಿಸಿಕೊಂಡು ಆಶೀರ್ವಾದ ಪಡೆದುಕೊಂಡು ಹೋಗಲು ಮೊದಲು ಮಾಡಿದರು. ಇಲ್ಲಿಗೆ ಬರುತ್ತಿದ್ದ ಜನಕ್ಕೆ ಹೋಗುವಂತೆ ಆಗುತ್ತಿರಲಿಲ್ಲವಂತೆ. ಹೀಗಾಗಿ ಇಲ್ಲಿ ಜನವಸತಿ ಪ್ರಾರಂಭವಾಯಿತು. ದೊಡ್ಡದಾದ ಮಾಸ್ತಿಗುಡಿಯನ್ನು ಕಟ್ಟಲಾಯಿತು. ಜಾತ್ರೆ – ಉತ್ಸವಗಳು, ನಡೆದುಕೊಂಡು ಬಂದವು. ಈ ಜನವಸತಿಯನ್ನು 'ಮಾಸ್ತಿಕಟ್ಟೆ' ಎಂದೇ ಜನರು ಗುರುತಿಸಿಕೊಂಡರು.[71] ಕುಮಟಾ ತಾಲೂಕಿನ 'ಮಾಸ್ತಿಹಳ್ಳ' ಎಂಬ

ಅತೀ ಚಿಕ್ಕ ಊರಿನ ಹೆಸರು 'ಮಾಸ್ತಿದೇವತೆ' ಯಿಂದಲೇ ಬಂದಿದೆ. ಇಲ್ಲಿ ಮಾಸ್ತಿಕಟ್ಟೆಯೊಂದಿದೆ. ಸಮೀಪದಲ್ಲಿಯೇ ಹಳ್ಳ ಹರಿದಿದೆ. ಈ ಎರಡೂ ಕಾರಣಗಳಿಂದ ಇಲ್ಲಿರುವ ಜನವಸತಿಯನ್ನು 'ಮಾಸ್ತಿಹಳ್ಳ' ಎಂದು ಕರೆಯಲಾಗುತ್ತಿದೆ. 'ಕೊಂಡದಹಳ್ಳಿ' — ಈ ಊರಿನ ಹೆಸರು ಸತಿಯೊಬ್ಬಳು ಗಂಡನ ಶವದೊಡನೆ ಕೊಂಡ ಏರಿದ್ದನ್ನು ಸೂಚಿಸುವುದೇ ಆಗಿದೆ. ಈ ಸತಿಯ ಕತೆ ಹೀಗಿದೆ : ದುಮ್ಮಿ ಹಳ್ಳಿಯ ಮುಖ್ಯಸ್ಥನ ಮಗಳು ಮಾಸ್ತ್ಯಮ್ಮ. ಇವಳನ್ನು ಕಮ್ಮಾರಘಟ್ಟದ ಶ್ರೀಮಂತ ರೈತನ ಮಗನಿಗೆ ಕೊಟ್ಟು ಮದುವೆಮಾಡಿತ್ತು. ಕೆಲಸದ ನಿಮಿತ್ತ ರಾತ್ರಿಹೊತ್ತು ಮನೆಯಲ್ಲಿ ಇರುತ್ತಿರಲಿಲ್ಲ. ಆದರೂ ರಾತ್ರಿ ಪತ್ನಿ ಬಳಿ ಬಂದು ಹೋಗುತ್ತಿದ್ದನು. ಇವಳು ಬಸರಾಗಿ, ಮಗುವಿಗೆ ಜನ್ಮಕೊಟ್ಟಳು. ಈಕೆಯ ಕುರಿತಾಗಿ ಹಲವು ಸುದ್ದಿಗಳು ಹಬ್ಬದವು. ಗಂಡನು ಒಂದು ದಿನ ಬಂದು ಮಾಸ್ತ್ಯಮ್ಮಳನ್ನು ಕರೆದುಕೊಂಡು ಹೊರಟನು. ಹಿಂದೆ ಹಿಂದೆಯೇ ಆಳು ಮಾದಿಗನೂ ಹೊರಟನು. ಗಂಡ ದಾರಿಯಲ್ಲಿ ಜಲುವೆಯ ನೀರನ್ನು ಕುಡಿಯುವಾಗ ಮಾದಿಗನು ಆಯುಧದಿಂದ ಹೊಡೆದು ಕೊಂದನು. ಪತ್ನಿ ಮಾದಿಗನನ್ನು ಗಂಡನೆಂದು ತಿಳಿಯುವುದಾಗಿ ಹೇಳಿ ಅವನಿಗೆ ಮೊದಲಾದ ನೀರು ಕುಡಿಯಲು ಹೇಳಿ, ಅವನು ನೀರು ಕುಡಿಯುವಾಗ ಅದೇ ಆಯುಧದಿಂದ ಹೊಡೆದುಕೊಂದಳು. ಗಂಡನ ತಲೆಯನ್ನು ಕೈಯಲ್ಲಿ ಹಿಡಿದುಕೊಂಡು, ಮಾದಿಗನ ತಲೆಯನ್ನು ಕಾಲಲ್ಲಿ ಕಟ್ಟಿಕೊಂಡು ಈಗಿರುವ ಕೊಂಡದಹಳ್ಳಿಗೆ ಬಂದಳು. ಅಲ್ಲಿಯೇ ಭೂಮಿಯನ್ನು ಕೊಂಡು ಕೆಂಡಕೊಂಡವಾದಳು. ಈಗಲೂ ಕೂಡ ಆಕೆ ಬಿದ್ದ ಕೊಂಡದ ಸ್ಥಾನವೆಂದು ಈಗಿರುವ ಚಿಕ್ಕ ಕೆರೆಯೊಂದನ್ನು ಜನರು ತೋರಿಸುತ್ತಾರೆ. ಅವಳು ಬಿದ್ದ ಕೊಂಡದಿಂದಲೇ ಈ ಊರಿಗೆ 'ಕೊಂಡದಹಳ್ಳಿ' ಎಂದು ಹೆಸರು ಬಂದಿರಲು ಸಾಧ್ಯ.[72] ಈ ತರನಾಗಿ 'ಸತಿ ಇತಿಹಾಸ' ಹಲವು ಹಳ್ಳಿಗಳ ಹೆಸರುಗಳೊಂದಿಗೆ ಉಳಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಕೆಲವು ಹಳ್ಳಿಗಳು ಕೇವಲ ಮಾಸ್ತಿ ಎಂಬ ತಮ್ಮ ಹೆಸರಿನಿಂದ ಸತಿಘಟನೆಯನ್ನು ಮಾತ್ರ ನೆನಪಿಸಿದರೆ, ಇನ್ನು ಕೆಲವು ಹಳ್ಳಿಗಳು ಕತೆ-ಐತಿಹ್ಯಗಳನ್ನೊಳಗೊಂಡು ಇತಿಹಾಸಕ್ಕೆ ಹೆಚ್ಚಿನ ಸಹಾಯವನ್ನು ಸಲ್ಲಿಸುವವುಗಳಾಗಿವೆ.

**ಮನೆತನಗಳು :-** ಕರ್ನಾಟಕದಲ್ಲಿ ಸತಿಹೋದವರ ಮನೆತನಗಳು ವಂಶಾನುಗತವಾಗಿ ಅಪರೂಪವಾಗಿ ಉಳಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಇಂಥ ಮನೆತನಗಳಲ್ಲಿ ಮುಖ್ಯವಾಗಿ ಎರಡು ಬಗೆಗಳನ್ನು ಗುರುತಿಸಬಹುದಾಗಿದೆ. ಒಂದು: ಸತಿಹೋದವಳಿಗೆ ನೇರವಾಗಿ ಸಂಬಂಧಪಟ್ಟ ಮನೆತನಗಳು

ಎರಡು: ಸತಿಗೆ ಒಕ್ಕಲಾಗಿರುವ ಮನೆತನಗಳು.

ಕೈದಾಳು ಗ್ರಾಮದ ಲಕ್ಷ್ಮೀದೇವಮ್ಮನ ಮನೆತನ, ಅಂಕೋಲೆಯ ನೀಲಮ್ಮನ ಮನೆತನ ಶ್ರೀರಂಗಪಟ್ಟಣದ ವೀರಮಾಸ್ತಿಯಮ್ಮನವರ ಮನೆತನ, ಮಾಚನಹಳ್ಳಿಯ ಕಟ್ಟಿ ಮನೆತನ, ಆಗಸನಹಳ್ಳಿಯ ಮಲ್ಲನಗೌಡರ ಮನೆತನ ಕುಂಚನೂರಿಗೆ ಗೌಡರ ಮನೆತನ — ಇವೆಲ್ಲ ಮೊದಲನೆಯ ಗುಂಪಿಗೆ ಸೇರುತ್ತವೆ[73] ಕೊಕ್ಕಿಕಟ್ಟೆಯ ಗೊಂಡರು, ಅರಿಕೇರಿಯ ಗಂಗಮತಸ್ಥರು. ಕಾನಮಡಗು ಹಾಗೂ ಹೆಮ್ಮನಹಳ್ಳಿಯ ಗೌಡರು, ಕಲ್ಲೂರಿನ ಹರಿಜನರು, ಮಾಜಾಳಿಯ ಕುಮಾರಪಂಥ ಜನರು, ಉಳ್ಳಾಗ್ಗದ ಮೀನುಗಾರರು, — ಈ ಮೊದಲಾದ ಜನಾಂಗದ ಮನೆತನಗಳು ತಮ್ಮ ಮಾಸ್ತಿದೇವತೆಗೆ ಒಕ್ಕಲಾಗಿರುವ ಮನೆತನಗಳು[74]. ಇವು ಎರಡನೆಯ ಗುಂಪಿಗೆ ಸೇರುತ್ತವೆ. ಈ ಮನೆತನಗಳು ಹೆಚ್ಚಾಗಿ ಸತಿಗೆ ( ಮಾಸ್ತಿಗೆ ) ಗೌರವದಿಂದ — ಭಕ್ತಿಯಿಂದ ನಡೆದುಕೊಳ್ಳುವವುಗಳಾಗಿವೆ. ತಮ್ಮ ಜನಾಂಗದ ಹೆಣ್ಣು ಮಗಳಿಂದೋ, ದೇವತೆಯೆಂದೋ, ಅವಳನ್ನು ಆರಾಧಿಸುತ್ತ ಬಂದ ಭಕ್ತ ಮನೆತನಗಳೇ ಇವಾಗಿವೆ. ಕತೆ — ಹಾಡು ಹೇಳುತ್ತ, ಜಾತ್ರೆ — ಉತ್ಸವಗಳನ್ನು ಮಾಡುತ್ತ ತಮ್ಮ ಹೆಣ್ಣು ಮಗಳನ್ನು — ದೇವತೆಯನ್ನು ಸಂತೃಪ್ತಗೊಳಿಸುವ — ಕೀರ್ತಿಸುವ ಜನಾಂಗ ಇದಾಗಿದೆ.

ಮಾಸ್ತಿ ಮನೆತನಗಳಲ್ಲಿ ಸತಿಗೆ ನೇರವಾಗಿ ಸಂಬಂಧಿಸಿದ ಮನೆತನಗಳು ಅತೀ ಮುಖ್ಯವೆನಿಸುತ್ತವೆ. ಲಕ್ಷ್ಮೀದೇವಮ್ಮನ ಸಹಗಮನ ನಡೆದದ್ದು ಸುಮಾರು 125 ವರ್ಷಗಳ ಹಿಂದೆ ಎಂದು ಡಾ: ಎಂ. ಚಿದಾನಂದಮೂರ್ತಿಯವರು 'ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು' ಎಂಬ ತಮ್ಮ 1975 ರಲ್ಲಿಯ ಪ್ರಕಟಣೆಯ ಗ್ರಂಥದಲ್ಲಿ ಅಭಿಪ್ರಾಯ ಪಡುತ್ತಾರೆ. ಲಕ್ಷ್ಮೀದೇವಮ್ಮನವರ ಮನೆತನಕ್ಕೆ ಸೇರಿದ ಶ್ರೀ ಕೆ. ಆರ್. ಗಣೇಶ ಅವರು ( ಬೆಂಗಳೂರು ಆಚಾರ್ಯ ಪಾಠಶಾಲಾ ಕಾಲೇಜಿನ ಕನ್ನಡ ಅಧ್ಯಾಪಕರು) ಸಹಗಮನದ ವಿವರಗಳನ್ನು ಈ ರೀತಿ ಕೊಡುತ್ತಾರೆ. ''ತುಮಕೂರು ಜಿಲ್ಲೆ ಕೈದಾಳದ ಗ್ರಾಮದಲ್ಲಿದ್ದ ಸ್ಮಾರ್ತ ಬ್ರಾಹ್ಮಣರಾಗಿದ್ದ ಶಿವರಾಮಯ್ಯನವರು ಮಡಿದಾಗ ಅವರ ಹೆಂಡತಿ ಲಕ್ಷ್ಮೀದೇವಮ್ಮ ಅವರು ಸಹಗಮನ ಮಾಡಲು ನಿಶ್ಚಯಿಸಿದರಂತೆ. ಇದು ಬ್ರಿಟಿಷ ಸರ್ಕಾರದ ಅಧಿಕಾರಿಗಳಿಗೆ ತಿಳಿದು, ನಂದಿದುರ್ಗ ಡಿವಿಜನ್ನಿಗೆ ಸೇರಿದ ತುಮಕೂರಿಂದ ಅದನ್ನು ನಿಲ್ಲಿಸುವಂತೆ ಗ್ರಾಮದ ಪಟೇಲರಿಗೆ ಹುಕುಂ ಜಾರಿಯಾಯಿತು. ಆ ಹುಕುಂ ತೆಗೆದುಕೊಂಡು ಅಧಿಕಾರಿಗಳು ಊರಿಗೆ ಬರುವ ಮೊದಲೇ ಅದನ್ನು ಹೇಗೋ ತಿಳಿದುಕೊಂಡ ಲಕ್ಷ್ಮೀದೇವಮ್ಮ ಮಾಂಗಲ್ಯವನ್ನುಳಿದು ತನ್ನೆಲ್ಲ ಒಡವೆಗಳನ್ನು ಜನರಿಗೆ ಹಂಚಿ ಊರಿನ ಚನ್ನಕೇಶವ ದೇವಾಲಯದ ಬಳಿ ಅಗ್ನಿಪ್ರವೇಶ ಮಾಡಿದರು.''[75] ಸತಿಹೋದ ನೀಲಮ್ಮನವರ ವಂಶದ ಮೂರು ಮನೆತನಗಳು 'ಐಗಳ' ಎಂಬ ಹೆಸರಿನಲ್ಲಿ ಅಂಕೋಲೆಯಲ್ಲಿವೆ.



ನೀಲಮ್ಮನ ಗಂಡನನ್ನು 'ಅಂತ್ಯಜ' ಎಂದೇ ಕರೆಯುತ್ತಿದ್ದರು. ಆ 'ಅಂತ್ಯಜ' ಎಂಬುದು 'ಐಗಳ'(ಅಂತ್ಯಜಗಳ ) ಆಗಿದೆ ಎಂದೇ ವಿವರಣೆ ಕೊಡುತ್ತಾರೆ. ಗೋಕರ್ಣದ ಯಾತ್ರೆಗಾಗಿ ಬಂದ ಅಂತ್ಯಜನವರು ಅಂಕೋಲೆಯಲ್ಲಿ ಇಳಿದುಕೊಂಡಾಗ ನೀಲಮ್ಮ ಎಂಬ ಹೆಂಡತಿ ಈ ಮೊದಲು ಇದ್ದಾಗ್ಯೂ ಇಲ್ಲಿ ಒಬ್ಬಳ ಪ್ರೇಮಪಾಶದಲ್ಲಿ ಸಿಕ್ಕಿಕೊಂಡರು. ಅವರಿಗೆ ಮಕ್ಕಳೂ ಆದವು. ಆ ವಂಶವೇ ಇಂದು 'ಐಗಳ' ಎಂಬ ಹೆಸರಿನಲ್ಲಿದೆ. ನೀಲಮ್ಮ ಗಂಡನನ್ನು ಹುಡುಕುತ್ತ ಬಂದು, ಆತನು ಇರಿಸಿಕೊಂಡಿದ್ದಾನೆಂಬ ವರದಿ ನಂಬಿ, ಹಾಲಕ್ಕಿ ಒಕ್ಕಲಿಗನವರಿಂದ ಕಟ್ಟಿಗೆ ತಗೆದುಕೊಂಡು ಅಗ್ನಿಮಾಡಿ ಸತಿಹೋಗುತ್ತಾಳೆ. ಅವಳೇ ಇಂದು ಐಗಳ ಮನೆತನದವರಿಗೆ ದೇವತೆಯಾಗಿದ್ದಾಳೆ. ಅಲ್ಲದೆ ಹಾಲಕ್ಕಿ ಒಕ್ಕಲಿಗನವರು ಐಗಳ ಮನೆತನದವರನ್ನು ತಮ್ಮ ಮುಖಂಡತ್ವ ಮನೆತನವೆಂದೂ ಸ್ವೀಕರಿಸಿದ್ದಾರೆ.[76] ಶ್ರೀರಂಗಪಟ್ಟಣದಲ್ಲಿ ಸತಿಹೋದವಳ ಅವಶೇಷವಾಗಿ ಅವಳ ಸೀರೆತುಂಡು, ಕಳಸ, ಕನ್ನಡಿಗಳನ್ನು ವೀರಮಾಸ್ತಿಯನವರ ಮನೆಯಲ್ಲಿ ನೋಡಬಹುದು. 'ಸತಿಹೋದವಳು ನಮ್ಮ ಮನೆತನದವಳು' ಎಂದು ಹೆಮ್ಮೆಯಿಂದ ವೀರಮಾಸ್ತಿಯನವರು ಹೇಳಿಕೊಳ್ಳುತ್ತಾರೆ.( ಚಿತ್ರ — 33) ಇಂದು ಸತಿಹೋದವಳ ವಂಶದ ಜನರು ಬೇರೆ ಬೇರೆಯಾಗಿ ಸುಮಾರು ಇಪ್ಪತ್ತು ಮನೆತನಗಳಾಗಿ ಒಡೆದು ಹೋಗಿದ್ದಾರೆ. ಹುಲ್ಲೇನಹಳ್ಳಿ ಪಕ್ಷಿವನ, ಗಂಜಾನ, ಶ್ರೀರಂಗಪಟ್ಟಣ ಮೊದಲಾದ ಊರುಗಳಲ್ಲಿ ಅವಳ ಮನೆತನಗಳು ಮಾಸ್ತಿ, ಮಾಸ್ತಿಯಮ್ಮ ಎಂಬ ಹೆಸರಿನಲ್ಲಿವೆ. ಮಾದನಹಳ್ಳಿಯ 'ಮಾಸ್ತಿಗೆ — ಒಕ್ಕಲಾಗಿರುವವರು, ಮತ್ತು ನೇರವಾಗಿ ಪೂರ್ವಿಕರಿಂದ ಪರಂಪರಾಗತವಾಗಿ ಬಂದ ಮನೆತನದವರನ್ನು 'ಕಟ್ಟಿ ಮನೆಯವರು' ಎಂದು ಕರೆಯುತ್ತಾರೆ. ಈ ಕಟ್ಟಿ ಮನೆಯವರು ಈಗ ಈ ಮನೆಯೊಳಗೆ ಇಲ್ಲ. ಬೇರೆ ಬೇರೆ ಊರುಗಳಲ್ಲಿ ನೆಲೆಗೊಂಡಿದ್ದಾರೆ.[77] ಅದೇ ರೀತಿ ಆಗಸನಹಳ್ಳಿಯಲ್ಲಿಯ ಮಲ್ಲನಗೌಡರ ಮಡಿವಾಳ ಮನೆತನವು ಸತಿಹೋದವಳ ಮನೆತನವೇ ಆಗಿದೆ. ಈ ಊರಿನಲ್ಲಿರುವ ಸುಮಾರು 70 ಮಡಿವಾಳ ಮನೆತನಗಳು ಇಲ್ಲಿರುವ ಮಾಸ್ತಿದೇವತೆಗೆ ಸಂಬಂಧಿಸಿದವುಗಳೇ ಆಗಿವೆ ಎಂದು ಹೇಳಲಾಗುತ್ತಿದೆ. ಅಲ್ಲದೇ ಈ ಮಾಸ್ತಿ ದೇವತೆಯ ಮನೆತನಗಳು ಅನವಟ್ಟಿ, ಸಮನಹಳ್ಳಿ, ವಡೆಂದೂರ ಮುಂತಾದ ಹಳ್ಳಿಗಳಲ್ಲೂ ಇವೆ ಎಂದು ಹೇಳಲಾಗುತ್ತಿದೆ.[78] ಹೀಗೆ ಸತಿಹೋದವಳೊಬ್ಬಳ ಮನೆತನವು ಇಂದು ವಿಶಾಲವೃಕ್ಷದ ರೀತಿಯಲ್ಲಿ ಬೆಳೆದಿರುವುದನ್ನು ಕಾಣುತ್ತೇವೆ. ಈ ರೀತಿಯಾಗಿ ಸತಿ ಮನೆತನಗಳು ಕರ್ನಾಟಕದಲ್ಲಿ ಉಳಿದುಕೊಂಡು ಬಂದಿರುವುದರ ಜೊತೆಗೆ ಸತಿ ಘಟನೆಗಳ ನೆನಪನ್ನು ಸಾಧ್ಯವಾದ ಮಟ್ಟಿಗೆ ಉಳಿಸಿಕೊಂಡು ಬಂದಿವೆ. ಇವುಗಳ ಅಧ್ಯಯನ ಸತಿಪದ್ಧತಿಯ ಇತಿಹಾಸಕ್ಕೆ ತುಂಬ ಉಪಯುಕ್ತವಾಗಿದೆ.

<u>ಮಾಸ್ತಿಹಕ್ಕಲು = ಮಾಸ್ತಿಹೊಲ = ಮಾಸ್ತಿಕಾಡು :—</u> ಕರ್ನಾಟಕದ ಕೆಲವೆಡೆಗಳಲ್ಲಿ ಮಾಸ್ತಿ ಹೆಸರಿನಿಂದ ಹಕ್ಕಲು, ಹೊಲ, ಕಾಡು, ಬ್ಯಾಣ, ಘಾಟ ಮೊದಲಾದವುದೊರಕುತ್ತವೆ. ಮಾಸ್ತಿಕಲ್ಲು ಅಥವಾ ಮಾಸ್ತಿಗುಡಿ ಇರುವ ಪ್ರದೇಶವನ್ನು ಗುರುತಿಸುವುದಕ್ಕೆ ಮಾಸ್ತಿ ಹಕ್ಕಲು, ಮಾಸ್ತಿಹೊಲ, ಮಾಸ್ತಿಕಾಡು ಇತ್ಯಾದಿಯಾಗಿ ಕರೆದದ್ದುಂಟು. ಸಾಗರ ತಾಲೂಕಿನ ಮಲ್ಲಂದೂರಿನಲ್ಲಿ ಮಾಸ್ತಿಹಕ್ಕಲು, ಯಳಂದೂರ ತಾಲೂಕಿನ ಮಲಾರಪಾಳ್ಯದಲ್ಲಿ ಮಾಸ್ತಿಹೊಲ ಮತ್ತು ಮಾಸ್ತಿಕಾಡು, ಕಾರವಾರ ತಾಲೂಕಿನ ದೇವಳಮಕ್ಕಿಯಲ್ಲಿ ಮಾಸ್ತಿಮಳ, ಉಪ್ಪಿನಗೋಳಿಯಿಂದ ಜೋಗಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ಮಾಸ್ತಿಕಾನ, ಕುಮಟಾ ತಾಲೂಕಿನ ಬೆಳ್ಳಂಗಿಯಲ್ಲಿ ಮಾಸ್ತಿಬ್ಯಾಣ, ಶಿರ್ಶಿ ತಾಲೂಕಿನ ದೇವಿಮನೆ ಹತ್ತಿರ ಮಾಸ್ತಿಘಾಟ, ಹೊನ್ನಾಳಿ ತಾಲೂಕಿನ ಸೊರಟೂರಿನಲ್ಲಿ ಮಾಸ್ತಿಜಾಲಿ ( ಮಾಸ್ತಿಹೊಲ ), ಹೊನ್ನಾವರ ತಾಲೂಕಿನ ಹೊಸಕುಳಿಯಲ್ಲಿ ರಣಮಾಸ್ತಿಕಾಡು ಇತ್ಯಾದಿಯಾಗಿ ಸತಿಘಟನೆಗಳನ್ನು ಸ್ಮರಣೆಗೆ ತರುವಂಥ ಸ್ಥಳನಾಮಗಳು ದೊರಕುತ್ತವೆ. (ಚಿತ್ರ— 34,35) ಮಲ್ಲಂದೂರಿನ ಹಕ್ಕಲನಲ್ಲಿ ಮತ್ತು ದೇವಿಮನೆಯ ಘಾಟದಲ್ಲಿ ಮಾಸ್ತಿಗುಡಿಗಳಿವೆ. ( ಚಿತ್ರ — 19,11) ಉಳಿದ ಹೊಲ — ಕಾಡು — ಬ್ಯಾಣಗಳಲ್ಲಿ ಮಾಸ್ತಿ ಕಲ್ಲುಗಳಿವೆ. ಇದಕ್ಕೆ ಅಪವಾದವೆಂದರೆ ಮಲ್ಲಾರಪಾಳ್ಯದ ಹೊಲದಲ್ಲಿ ಈಗ ಯಾವ ಮಾಸ್ತಿಕಲ್ಲಾಗಲೀ, ಗುಡಿಯಾಗಲೀ ಇಲ್ಲ. ಹಕ್ಕಲು ಮತ್ತು ಬ್ಯಾಣವೆಂದರೆ ಕೃಷಿಯಿಲ್ಲದ ಪ್ರದೇಶವೆಂದೂ ಮಳವೆಂದರೆ ಕೃಷಿ ಪ್ರದೇಶವೆಂದೂ ಸಾಮಾನ್ಯವಾದ ಅರ್ಥ ಇಟ್ಟುಕೊಳ್ಳಬಹುದು. ಸೊರಟೂರಿನ ಮಾಸ್ತಿಕಲ್ಲು ಇರುವ ಪ್ರದೇಶದಲ್ಲಿ ಹೆಚ್ಚು ಜಾಲಿ ಬೆಳೆಯುವುದರಿಂದ ಅದನ್ನು ಮಾಸ್ತಿಜಾಲಿ ಎಂದು ಕರೆಯುವುದಾಗಿ ತಿಳಿಯುತ್ತದೆ.

ಈ ಸ್ಥಳನಾಮಗಳ ಸುತ್ತ ಹಲವು ನಂಬಿಕೆಗಳು, ಐತಿಹ್ಯಗಳು ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಉದಾಹರಣೆಗೆ, ಹೊಸಕುಳಿಯ ರಣಮಾಸ್ತಿಬ್ಯಾಣವೆಂದರೆ ಕಾಡಾಟ ಪ್ರದೇಶವೆಂದೇ ಜನರು ನಂಬಿಕೊಂಡಿದ್ದಾರೆ. ಅಲ್ಲಿ ರಾತ್ರಿಯಾಗಲೀ, ಮಧ್ಯಾಹ್ನದಲ್ಲಾಗಲೀ ಯಾರೂ ಇರುವಂತಿಲ್ಲ. ಆ ಸಮಯಕ್ಕೆ ದೊಡ್ಡ ದೊಡ್ಡ ಕಲ್ಲುಗಳು ಬೀಳುತ್ತವೆ ಎಂದೂ ತಿಳಿದಿದ್ದಾರೆ. ಅಲ್ಲಿರುವ ರಣಮಾಸ್ತಿಗೆ ಜನರು ಕಾಲಕಾಲಕ್ಕೆ ಪೂಜೆಮಾಡಬೇಕು ತಪ್ಪಿದರೆ ಅವಳು ಕನಸಿನಲ್ಲಿ ಬರುತ್ತಾಳೆಂದೂ, ಅವಳು ಕನಸಿನಲ್ಲಿ ಬಂದು ಹೇಳಿದ ವೇಳೆ ಪೂಜೆ ನೆರವೇರಿಸದಿದ್ದರೆ ಕಾಡಾಟ ಪ್ರಾರಂಭವಾಗುತ್ತದೆ ಎಂದೂ ತಿಳಿದುಕೊಂಡಿದ್ದಾರೆ



ರಣಮಾಸ್ತಿ — ಈ ದೇವತೆ ಭಯಂಕರ ಯುದ್ಧಮಾಡಿ ವೈರಿಗಳನ್ನು ಹೊಡೆದೋಡಿಸಿದಳೆಂದೂ, ಅದಕ್ಕಾಗಿಯೇ ಅವಳಿಗೆ ರಣಮಾಸ್ತಿ ಎಂದು ಹೆಸರು ಬಂದಿರುವುದಾಗಿಯೂ ಹೇಳುತ್ತಾರೆ. ಆದರೆ ಮಲ್ಲಾರಪಾಳ್ಯದ ( ಬಿಳಿಗಿರಿ ರಂಗನ ಬೆಟ್ಟದ ಕೆಳಗೆ ) ಕಾಡಿನಲ್ಲಿರುವ ಮಾಸ್ತಿದೇವತೆ ಜನರಿಗೆ ಕಲ್ಯಾಣ ಮಾಡುವವಳೆಂದು ತಿಳಿದಿದ್ದಾರೆ. ಮಲ್ಲಂದೂರಿನ ಹಕ್ಕಲಿನಲ್ಲಿ ಸುಮಾರು ಏಳು ಮಾಸ್ತಿಕಲ್ಲುಗಳು, ಒಂದು ಮಾಸ್ತಿಗುಡಿಯೂ ಇವೆ. ಈ ಗುಡಿಯ ಸಮೀಪದಲ್ಲಿಯೇ ಇರುವ ಗದ್ದೆಯನ್ನು ಮಾಸ್ತಿದೇವತೆಯದೇ ಎಂದು ಹೇಳುತ್ತಾರೆ. ( ಈಗ ಗೌಡರ ವಶದಲ್ಲಿದೆ ) ಈ ಹಕ್ಕಲು ಊರ ಹೊರಬಾಗದಲ್ಲಿರುವುದರಿಂದ, ಮಾಸ್ತಿಕಲ್ಲುಗಳು ಮತ್ತು ವೀರಗಲ್ಲುಗಳು ಒಂದೇ ಕಡೆಗೆ ಹೆಚ್ಚು ಸಿಗುವುದರಿಂದ ಬಹುಶಃ ಮೊದಲು ಈ ಪ್ರದೇಶ ಸತಿ ಹೋಗುವವರ ಸ್ಥಾನವಾಗಿತ್ತೆನಿಸುತ್ತದೆ. ಈ ಊಹೆ ಇನ್ನು ಹೆಚ್ಚಿನ ಆಧಾರಗಳನ್ನು ಬಯಸುತ್ತದೆ ಎನ್ನುವುದನ್ನು ಮರೆಯಬಾರದು. ಈ ತೆರನಾಗಿ ಮಾಸ್ತಿ ಹೆಸರಿನಲ್ಲಿ ದೊರಕುವ ಕೆಲವಾರು ಹಳ್ಳಿಗಳಲ್ಲಿ ಹೊಲ, ಕಾಡು, ಮೊದಲಾದವುಗಳು ಸತಿಪದ್ಧತಿಯ ಸಾಮಗ್ರಿಗಳೆನಿಸಿವೆ.

**ಕೊಂಡ :–** ಸಂಸ್ಕೃತದ 'ಕುಂಡ' ಎಂಬುದು ಕನ್ನಡದ ಆಡುಭಾಷೆಯಲ್ಲಿ ಕೊಂಡ ಎಂಬುದಾಗಿದೆ. ಗಂಡ ಸತ್ತಾಗ ಪತ್ನಿಯಾದವಳು ಕುಂಡದಲ್ಲಿ ಚಿತೆಮಾಡಿಸಿ ಅದರಲ್ಲಿ ಹಾರಿ ಸತಿಹೋಗುತ್ತಿದ್ದಳು. ವಿಜಯನಗರ ರಾಜ್ಯಕ್ಕೆ ಸಂದರ್ಶನ ಕೊಟ್ಟ ವಿದೇಶಿ ಪ್ರವಾಸಿ 'ಮಾನುಯೆಲ್ ಬರ್ರಾಡಾಸ್' ತಾನು ಕಂಡ ವೆಂಕಟಪತಿರಾಜನ ಮೂರು ಜನ ರಾಣಿಯರ ಸಹಗಮನ ದೃಶ್ಯವನ್ನು ವರ್ಣಿಸುತ್ತ ಹೀಗೆ ಬರೆಯುತ್ತಾನೆ: ಅವರು 'ಎಲ್ಲರನ್ನು ಬೀಳ್ಕೊಂಡು ಎತ್ತರವಾದ ಸ್ಥಳವನ್ನೇರಿ ಚಿತಾಗ್ನಿಯ ಮಧ್ಯಕ್ಕೆ ಧುಮುಕಿದರು.[79] ಕರ್ನಾಟಕಕ್ಕೆ ಸಂದರ್ಶನಕೊಟ್ಟ ಇನ್ನೊಬ್ಬ ವಿದೇಶಿ ಪ್ರವಾಸಿ 'ದು ಆರ್ತೆ ಬಾಬೋರ್ಸಾ' ಹೀಗೆ ಬರೆಯುತ್ತಾನೆ: ಸತಿ ಹೋಗಲಿರುವ ಸ್ತ್ರೀಯ ''ಕೈಗೆ ಎಣ್ಣೆಯ ಗಡಿಗೆಯನ್ನು ಕೊಡುತ್ತಾರೆ. ಆಕೆ ಅದನ್ನು ತಲೆಯ ಮೇಲಿಟ್ಟುಕೊಂಡು ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಾಳೆ. ಚಿತೆಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಪೂರ್ವಾಭಿಮುಖವಾಗಿ ನಿಂತು ವಂದನೆಗೈಯುತ್ತಾಳೆ. ಆಮೇಲೆ ಗಡಿಗೆಯ ಎಣ್ಣೆಯನ್ನು ಉರಿಯುವ ಚಿತೆಗೆ ಸುರಿದು ಗಡಿಗೆಯನ್ನು ಅದರೊಳಗೆ ಎಸೆದು, ಚಿತೆಯೊಳಗೆ ಧುಮುಕುತ್ತಾಳೆ. ನೀರಿನ ಕೊಳಕ್ಕೆ ಧುಮುಕುವಷ್ಟು ಸಂತೋಷದಿಂದ ಆಕೆ ಉರಿಯುವ ಅಗ್ನಿಕುಂಡದಲ್ಲಿ ಧುಮುಕಿ ಬಿಡುತ್ತಾಳೆ[80] ಅದೇ ರೀತಿ ಜನಪದ ಗೀತೆಗಳಲ್ಲಿ ಅಗ್ನಿಕುಂಡದಲ್ಲಿ ಬಿದ್ದು ಸತಿಹೋದವರ ವಿವರಣೆಗಳು ಸಿಗುತ್ತವೆ. 'ಮಹಾಸತಿ ತಾಡಿ ನಾಗಮ್ಮ ಗೀತೆಯಲ್ಲಿ ಸತಿಹೋಗಲಿರುವ ನಾಗಮ್ಮ ತನ್ನ ಅಪ್ಪನ ಕುರಿತು ಹೀಗೆ ಮಾತನಾಡುತ್ತಾಳೆ.[81]

ಅಪ್ಪ ಬಂದಾರೇನು ಕಪ್ಪ ತಂದಾರೇನು
ಕಟ್ಟೇದ ತೆರವು ಅವರಿಗೇ
ಕಟ್ಟೇದ ತೆರವು ಅವರಿಗೇ : ವಡ್ಡಗೇರಿ
ಕಿಚ್ಚಿನ ಕೊಂಡ ನಮಗವೆ.

ಇದೇ ರೀತಿ ಕೊಂಡದ ಉಲ್ಲೇಖ ಮಹಾಸತಿ ಕಾಟವ್ವ, ಮಹಾಸತಿ ವೀರತಿಮ್ಮವ್ವ ಮೊದಲಾದ ಜನಪದ ಗೀತೆಗಳಲ್ಲಿ ಬರುತ್ತವೆ.[82] ಕುಮಾರವಾಲ್ಮೀಕಿಯು ತನ್ನ ತೊರವೆ ರಾಮಾಯಣದಲ್ಲಿ, ಸೀತೆಯ ಅಗ್ನಿಪ್ರವೇಶವನ್ನು ಚಿತ್ರಿಸುವಾಗ 'ಕುಂಡ' ದ ವಿಷಯವನ್ನು ನಿರೂಪಿಸುತ್ತಾನೆ.[83] ಅದೇ ರೀತಿ ಕನಕದಾಸರು ತಮ್ಮ 'ಮೋಹನ ತರಂಗಿಣಿ' ಯಲ್ಲಿ ರತಿ ವಿಲಾಪವನ್ನು ಚಿತ್ರಿಸುತ್ತ, ಅವಳಿಂದ ಶಿವನನ್ನು ಕುರಿತು ಈ ರೀತಿ ಮಾತನಾಡಿಸುತ್ತಾರೆ.[84]

ಕೊಂಡವ ತೊಡಿಸಬೇಡ ಶುಷ್ಕವ ಸುಟ್ಟು
ಕೆಂಡವ ಮಾಡಿಸಬೇಡ
ಖಂಡೇಂದುಶೇಖರ ಕಣ್ಣಿಚ್ಚಿನಿಂದೆನ್ನ
ಗಂಡನನುರುಹಿದಂತುರುಹು

ಈ ಇಬ್ಬರೂ ಕವಿಗಳು ತಮ್ಮ ಕಾಲದಲ್ಲಿ ಕುಂಡದಲ್ಲಿ ಚಿತಾಪ್ರವೇಶ ಮಾಡುತ್ತಿದ್ದ ಸತಿಯರ ವರ್ಣನೆಯನ್ನೇ ತಮ್ಮ ಮುಂದೆ ಇಟ್ಟುಕೊಂಡಂತಿದೆ. ( ಈ ಕುರಿತು ಚಿತಾಪ್ರವೇಶ ಭಾಗದಲ್ಲಿ ವಿವರಿಸಲಾಗುವದು ) ಈ ರೀತಿಯಾಗಿ ದಿನಚರಿ ಸಾಹಿತ್ಯ, ಜನಪದ ಸಾಹಿತ್ಯ, ಗ್ರಂಥಸಾಹಿತ್ಯ, ಇವೆಲ್ಲವುಗಳು ಕುಂಡದ ( ಕೊಂಡದ ) ವಿವರಣೆ ನೀಡುತ್ತವೆ. ಕಾರಣ ಕರ್ನಾಟಕದಲ್ಲಿ ಸತಿಹೋಗುವಿಕೆ ಪ್ರಧಾನವಾಗಿ ಕೊಂಡದಲ್ಲಿ ಬೀಳುವುದರ ಮೂಲಕ ನಡೆಯುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಈ ಹಿನ್ನೆಲೆ ಇಟ್ಟುಕೊಂಡು ಕರ್ನಾಟಕದಲ್ಲಿ ಸತಿ ಕೊಂಡದ ಅವಶೇಷಗಳೇನಾದರೂ ಇವೆಯೇ ಎಂದು ಹೊರಟವರಿಗೆ ಹೆಚ್ಚಿನ ನಿರಾಶೆಯೇ ಉಂಟಾಗುತ್ತದೆ. ಹಿರಿಯೂರ ತಾಲೂಕಿನ ಯರಬಳ್ಳಿ, ಚನ್ನಗಿರಿ ತಾಲೂಕಿನ ಹೊದಿಗೆರೆ, ಮದ್ದೂರ ತಾಲೂಕಿನ ಹೆಮ್ಮನಹಳ್ಳಿ, ಚನ್ನಗಿರಿ ತಾಲೂಕಿನ ಕೊಂಡದಹಳ್ಳಿ, ಚಳ್ಳಕೆರೆ ತಾಲೂಕಿನ ಹುಲಿಕುಂಟೆ, ಬ್ಯಾಡಗಿ ತಾಲೂಕಿನ ಅಂಗರಗಟ್ಟಿ, ಶಿಗ್ಗಾಂವ ತಾಲೂಕಿನ ಬಾಡ — ಈ ಮೊದಲಾದ ಊರುಗಳಲ್ಲಿ ಕೊಂಡ ಇದ್ದ ಸೂಚನೆಗಳು ದೊರಕುತ್ತವೆ. ಕೃಷ್ಣಮೂರ್ತಿ ಹನೂರ ಅವರು ಯರಬಳ್ಳಿಯ ಕೊಂಡದ

ಕುರಿತು ಹೀಗೆ ಬರೆಯುತ್ತಾರೆ : ' ಹಿರಿಯುಟ್ಟಿ ಅಥವಾ ಯರಬಳ್ಳಿಯಿಂದ ಸ್ವಲ್ಪ ದೂರಕ್ಕೆ ಇರಬಹುದಾಂಥ ಕೊಂಡದ ಸ್ಥಳವನ್ನು ಗುರುತಿಸಬಹುದು. ತೋಡಿದ ಕೊಂಡದ ಅಗಲಕ್ಕೆ ಎತ್ತರವಾದ ಜಗುಲಿಯೊಂದು ಕಟ್ಟಲ್ಪಟ್ಟಿದೆ.[85] ಈಗ ನಮಗೆ ಇಲ್ಲಿ ಕುಂಡ ( ಕೊಂಡ ) ನೋಡಲಿಕ್ಕೆ ದೊರಕದೆ, ಅದರ ಮೇಲೆ ಕಟ್ಟಿರಬಹುದಾದ ಸು. 20 ಫೂ ಉದ್ದ 18 ಫೂ. ಅಗಲ ಮತ್ತು 2 ಫೂ, ಎತ್ತರದ ಅಸ್ತವ್ಯಸ್ತವಾದ ಜಗುಲಿಯು ದೊರಕುತ್ತದೆ. ಯರಬಳ್ಳಿ, ಗೊಲ್ಲರಹಟ್ಟಿಯ ಜನರು ಈಗಲೂ ಇದನ್ನು ತಿಮ್ಮವ್ವನ ಕೊಂಡ ಎಂದೇ ಕರೆಯುವುದರಿಂದ ಈ ಊಹೆ ನಿಜಕ್ಕೆ ಹತ್ತಿರವೆನಿಸುತ್ತದೆ. ಹೊಂದಿಗೆರೆಯ ಕೊಂಡದ ಕುರಿತು ಬರೆಯುತ್ತ ಡಾ: ಬಸವರಾಜ ಕಲ್ಗುಡಿ ಅವರು ಹೀಗೆ ಅಭಿಪ್ರಾಯ ಪಡುತ್ತಾರೆ: '' ಚಿಕ್ಕಲಗೌಡಾ ಬಾವಿ ತೋಡಿಸಿದ ಜಾಗವೆಂದು ಹೇಳುವ ಸ್ಥಳ ಚೌಕಾಕಾರ ವಾಗಿದ್ದು ಎರಡಾಳು ತಗ್ಗಿನಲ್ಲಿದೆ. ಕಲ್ಲಿನಿಂದ ಸುತ್ತಲ ಜಾಗವನ್ನು ಕಟ್ಟಿಬಿಟ್ಟಿದ್ದಾರೆ. ಈ ಸ್ಥಳದ ಮಧ್ಯದಲ್ಲಿ ಭಾವಿ ಇದೆ. ಬಹುಶ: ಇದು ಮಾಸ್ತಿ ಬಿದ್ದ ಕೊಂಡವಿರುವಂತೆ ಕಾಣುತ್ತದೆ.[86] ಇದು ಕುಂಡ ಊಹೆಯನ್ನೇ ಅವಲಂಬಿಸಿದ್ದು. ಇದೇ ಊರಿನಲ್ಲಿ ಮಾಸ್ತಿ ದೇವಾಲಯ ಇರುವುದರಿಂದ ಈ ಕೊಂಡ ಸತಿಹೋಗಿರುವ ಕೊಂಡವೇ ಆಗಿರಬೇಕು ಎಂಬ ವಿಷಯ ಹೊಳೆಯುತ್ತದೆ. ಕಲ್ಲಿನಿಂದ ಕೊಂಡ ಕಟ್ಟುತ್ತಿದ್ದರೆಂಬ ಉಲ್ಲೇಖ ಗ್ರಂಥ ಸಾಹಿತ್ಯ, ಜನಪದ ಸಾಹಿತ್ಯದಲ್ಲೂ ದೊರಕುತ್ತದೆ [87] ಡಾ: ಬಸವರಾಜ ಕಲ್ಗುಡಿ ಅವರು ಹಿಮ್ಮನಹಳ್ಳಿಯ ಮಾಸ್ತಿ ಕುರಿತು ಹೇಳುತ್ತ, ಮಾಸ್ತಿ ಕೆಂಡಕೊಂಡವಾದ ಸ್ಥಳವೆಂದು ಹೇಳಿ, ಚಿತ್ರ ಒದಗಿಸುತ್ತಾರೆ.[88] ಈ ಚಿತ್ರದಲ್ಲಿ ಚೌಕಾಕಾರ ಕಟ್ಟೆ ಇದ್ದು, ಅದರ ಮೇಲೆ ಮಧ್ಯದಲ್ಲಿ ಸಣ್ಣ ಗುಮ್ಮಟದ ರಚನೆ ಇದೆ. ಆದರೆ ಇಂದು ಈ ಸ್ಥಾನದಲ್ಲಿ ಒಂದು ದೊಡ್ಡ ಮಂಟಪವನ್ನೇ ನಿರ್ಮಿಸಲಾಗಿದೆ. ( ಚಿತ್ರ — 2) ಡಾ: ಬಸವರಾಜ ಕಲ್ಗುಡಿ ಅವರು ಇಲ್ಲಿ ಕೊಂಡ ಎಂದು ಕರೆದಿರುವುದಕ್ಕೆ — ಮಾಸ್ತ್ಯಮ್ಮ ಮಾದೇವಿಯ ಕುರಿತು ಹಾಡುವ ಹಾಡಿನಲ್ಲಿ, ಅವಳ ಕುರಿತು ಹೇಳುವ ಕತೆಯಲ್ಲಿ ಅವಳು ಕೊಂಡದಲ್ಲಿ ಬಿದ್ದುದನ್ನು ಹೇಳುವುದರಿಂದಲೇ ಎಂದು ತೋರುತ್ತದೆ. ಡಾ: ಎಂ. ಚಿದಾನಂದಮೂರ್ತಿ ಅವರು ಕೊಂಡದಹಳ್ಳಿಯ ಮಾಸ್ತಿ ಗುಡಿಯ ಬಗ್ಗೆ ಬರೆಯುತ್ತ, ' ಮಾಸ್ತ್ಯಮ್ಮಳು ಭೂಮಿಯನ್ನು ಖರೀದಿಗೆ ತೆಗೆದುಕೊಂಡು ಕೊಂಡವನ್ನು ಮಾಡಿಸಿ ಅಗ್ನಿಪ್ರವೇಶ ಮಾಡಿದಳು'' ಎಂದು ತಿಳಿಸಿ ಮುಂದೆ ಹೀಗೆ ವಿವರಿಸುತ್ತಾರೆ.[89] '' ಆ ಹೊಲಕ್ಕೆ ಅಂಟಿಕೊಂಡಂತೆ ಒಂದು ಚಿಕ್ಕ ಕೊಳವಿದೆ. ಅಲ್ಲಿಯ ಕತೆಯ ಪ್ರಕಾರ, ಹೆಂಗಸು, ಸುಟ್ಟುಹೋದ ಅಗ್ನಿಕುಂಡವಿದ್ದ ಜಾಗ ಅದೇ. (ಮೊದಲು ಆ ಅಗ್ನಿಕುಂಡ ಚಿಕ್ಕದಾಗಿರಬಹುದು ) ಈ ಕೊಂಡದಿಂದಲೇ

ಊರಿಗೂ ಕೆಂಡದಹಳ್ಳಿ ಎಂಬ ಹೆಸರು ಬಂದಿದೆ ಎಂದೂ ಅವರು ಅದೇ ಲೇಖನದಲ್ಲಿ ತಿಳಿಸಿದ್ದಾರೆ. ಸ್ಥಳನಾಮದಿಂದಲೂ ಮಾಸ್ತಿ ಪಡೆದ ಹೊಲಕ್ಕೆ ಅಂಟಿಕೊಂಡೆ ಕೊಳ ಇರುವುದರಿಂದಲೂ ಮಾಸ್ತ್ಯಮ್ಮನ ಕುರಿತು ಹೇಳುವ ಕತೆಯಲ್ಲಿ ಕೆಂಡಕ್ಕೆ ಬೀಳುವ ವಿವರಣೆ ಇರುವುದರಿಂದಲೂ ಡಾ: ಚಿದಾನಂದಮೂರ್ತಿ ಅವರ ಮಾತು ವಾಸ್ತವಕ್ಕೆ ತೀರ ಹತ್ತಿರವೆನಿಸುತ್ತದೆ. ಕೃಷ್ಣಮೂರ್ತಿ ಹನೂರ ಅವರು ಮಹಾಸತಿ ಕಾಟವ್ವನ ಕುರಿತು ಹೀಗೆ ವಿವರಿಸುತ್ತಾರೆ: 'ಕಾಟವ್ವನ ಗಂಡನ ಮನೆ ಹುಲಿಕುಂಟೆ ಗ್ರಾಮದಿಂದ ಎರಡು ಮೈಲು ದೂರಕ್ಕೆ, ಆಕೆ ಸತಿ ಹೋಗಿ ಕೆಂಡಕ್ಕೆ ಬಿದ್ದ ಸ್ಥಳ ಈಗಲೂ ಇದೆ. ಅಲ್ಲಿ ಶಾಸನವಾಗಲಿ, ಮಾಸ್ತಿಕಲ್ಲಾಗಲಿ ಇಲ್ಲ[90] ಆದರೆ ಈ ಸ್ಥಳವನ್ನು ಕಾಟವ್ವ ಕೆಂಡ ಬಿದ್ದ ಸ್ಥಳವೆಂದು ಹರಕೆ — ಪೂಜೆ ಸಲ್ಲಿಸುತ್ತಿದ್ದರೂ ನಮಗೆ ಅಲ್ಲಿ ಕೆಂಡ(ಕುಂಡ) ಕಾಣುವುದಿಲ್ಲ. ದೊಡ್ಡದಾದ ಮರದ ಕೆಳಗೆ ಚಿಕ್ಕಕಟ್ಟೆಯನ್ನು ಮಾತ್ರ ಕಾಣಬಹುದಾಗಿದೆ ಅಂಗ್ರಗಟ್ಟೆ ಮತ್ತು ಬಾಡ ಈ ಊರುಗಳಲ್ಲಿ ಮಾಸ್ತಿ ಹೊಂಡಗಳಿವೆ. ಈ ಹೊಂಡಗಳ ಪಕ್ಕದಲ್ಲಿ ಮಾಸ್ತಿಕಲ್ಲುಗಳು ಇದ್ದಿರುವುದು ಗಮನಾರ್ಹವಾಗಿದೆ. ಈ ಮಾಸ್ತಿಕಲ್ಲುಗಳನ್ನು ಅಂಗ್ರಗಟ್ಟೆಯಲ್ಲಿ ಹೊಂಡದ ಹನುಮವ್ವ ಎಂದೂ ಬಾಡದಲ್ಲಿ ಹೊಂಡದ ಮಾಸ್ತಿ ಎಂದೂ ಕರೆಯುತ್ತಾರೆ. ಈ ಹೊಂಡಗಳಿಗೆ ಮಾಸ್ತಿಕಲ್ಲುಗಳಿಂದ ಮಾಸ್ತಿಹೊಂಡ ಎಂಬ ಹೆಸರು ಬಂದಿರುವ ಸಾಧ್ಯತೆಯೂ ಉಂಟು. ಹಾಗೆಯೇ ಈ ಮಾಸ್ತಿಕಲ್ಲುಗಳ ಸತಿಯರು ಕೆಂಡ ಕೊಂಡವಾದ ಸ್ಥಾನಗಳೇ ಇವಾಗಿವೆ ಎಂದೂ ಹೇಳಬಹುದಾಗಿದೆ. ಸತಿ ಕೆಂಡ ಬಿದ್ದ ಸ್ಥಾನ ನೀರಿನ ಮಡುವಾಗಿ ಹೊಂಡ ಎನಿಸಿಕೊಂಡ ಉದಾಹರಣೆ ಜನಪದ ಸಾಹಿತ್ಯದಲ್ಲಿ ಅಪರೂಪವಾಗಿ ದೊರಕುತ್ತದೆ.[91] ಮಹಾಸತಿ ತಾಡಿ ನಾಗಮ್ಮ ಕೆಂಡದಲ್ಲಿ ಉರಿದು ಸತಿಯಾದ ನಂತರ ಅವಳನ್ನು ಸ್ತುತಿಸುವ ಪದ್ಯಗಳು ಬರುತ್ತವೆ. ಅವುಗಳಲ್ಲಿ ಒಂದು ಮಾತು ಹೀಗೆ ಬರುತ್ತದೆ.[92]

ಹೊಂಡಾದ ಸುತ್ತಾರ ಕಾಕೆಳ್ಳಿ ಗಜನಿಂಬೆ
ಕಳ್ಳರು ಕೊಯ್ಯಗ ಕಸುಗಾಯಿ.

ಇಲ್ಲಿ ಹೊಂಡಾದ ( ನಾಗಮ್ಮ ಸತಿಯಾದ ಕೆಂಡದ ) ಸುತ್ತ ತೋಪು ಬೆಳೆದಿರುವ ಸೂಚನೆ ಇದೆ. ಈ ರೀತಿ ಸತಿ ಕೆಂಡ ( ಅಥವಾ ಹೊಂಡ ) ಗಳ ಸುತ್ತ ತೋಪು ಬೆಳೆಯುವ ಸಾಧ್ಯತೆಗಳುಂಟು. ಡಾ: ಬಸವರಾಜ ಕಲ್ಗುಡಿ ಅವರು ಹೆಮ್ಮನಹಳ್ಳಿಯ ಸತಿಸ್ಮಾರಕದ ( ಕೆಂಡದ ಮೇಲೆ ಕಟ್ಟಿದ ಕಟ್ಟೆಯ) ಕುರಿತು ಹೀಗೆ ಬರೆದಿರುವುದನ್ನು ಇಲ್ಲಿ ಸ್ಮರಿಸಬೇಕು. ''ಗೋರಿಯಲ್ಲಿ ಮರಗಳು ಬೆಳೆದಿವೆ''.[93] ಕಾರಣ ಅಂಗ್ರಗಟ್ಟೆ

ಬಾಡ ಈ ಊರುಗಳಲ್ಲಿರುವ ಕೊಂಡಗಳು ಸತಿಯರು ಬಿದ್ದು ಉರಿದುಹೋದ ಕೊಂಡಗಳೇ ಆಗಿರಬೇಕು.

ಈ ರೀತಿಯಾಗಿ ಸತಿಹೋದ ಕೊಂಡಗಳು ಅಪರೂಪವಾಗಿ ಕಾಣುವಂತಿದ್ದರೂ ಅವುಗಳಲ್ಲಿ ಸ್ಪಷ್ಟತೆಯು ನಿಲುವಿಲ್ಲ ಎಂಬುದನ್ನು ಮರೆಯಬಾರದು. ಅಂಕೋಲೆಯಲ್ಲಿ ಇಂದೂ ನಡೆಯುವ ಬಂಡಿಹಬ್ಬದ ಉತ್ಸವದಲ್ಲಿ ಸತಿಕೊಂಡಕ್ಕೆ ಬೀಳುವುದನ್ನು ಅಡಿತೋರಿಸುತ್ತಾರೆ. ( ಚಿತ್ರ – 36 ) ಕೆಲವೆಡೆಗಳಲ್ಲಿ ಇದು ರೂಪಾಂತರವಾಗಿ ಮಾಸ್ತಿ ಮೈಯಲ್ಲಿ ಪ್ರವೇಶಿಸಿ, ಕೊಂಡ ಹಾಯುವ ಆಚರಣೆ ಇದೆ.[94] ಇವೆಲ್ಲವುಗಳನ್ನು ಗಮನಿಸಿದಾಗ ಸತಿ ಹೋಗುವ ವಿಧಾನಗಳಲ್ಲೆಲ್ಲ ಕೊಂಡಕ್ಕೆ ಬೀಳುವದು ಮುಖ್ಯವಾಗಿತ್ತು ಎನಿಸುತ್ತದೆ. ಕಾರಣ ಕರ್ನಾಟಕದಲ್ಲಿ ಇಂದು ಅಲ್ಪಸ್ವಲ್ಪವಾಗಿ ದೊರಕುವ ಸತಿ ಅವಶೇಷಗಳಾದ ಕೊಂಡಗಳು ಸತಿಪದ್ಧತಿ ಅಧ್ಯಯನಕ್ಕೆ ತುಂಬ ಮಹತ್ವದ್ದೆನಿಸುತ್ತವೆ.

<u>ಗೊಂಬೆಗಳು:–</u> ಸತಿಪದ್ಧತಿಯ ಅವಶೇಷಗಳಾಗಿರುವ ಮಾಸ್ತಿಗೊಂಬೆಗಳು ತುಂಬ ವಿಶೇಷವೆನಿಸುತ್ತವೆ. ಇವುಹೆಚ್ಚಾಗಿ ಉತ್ತರಕನ್ನಡ – ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕಾಣಸಿಗುತ್ತವೆ. ಈ ಗೊಂಬೆಗಳನ್ನು ಕಟ್ಟಿಗೆಯಿಂದ ಮಾಡಲಾಗಿರುತ್ತದೆ. ಹೊನ್ನಾವರದ ಹೊಸಕುಳಿ ಭಾಸ್ಕೇರಿ, ಕವಲಕ್ಕಿ, ಅರಿಗೋಡಹಳ್ಳಿ, ಭಟ್ಕಳದ ಕೋಕ್ತಿಕಟ್ಟೆ, ಕಾಯ್ಕಿಣಿ ಶಿರಾಲಿ, ತುದಳ್ಳಿ ( ಮುರ್ಡೇಶ್ವರ ) – ಈ ಮೊದಲಾದ ಹಳ್ಳಿಗಳಲ್ಲಿ ಈ ಮಾಸ್ತಿಗೊಂಬೆಗಳಿರುವುದನ್ನು ಗುರುತಿಸಬಹುದಾಗಿದೆ. ( ಚಿತ್ರ – 37, 38, 39 ) ಇವುಗಳಲ್ಲಿ ಎರಡು ವಿಧಗಳನ್ನು ಕಂಡುಕೊಳ್ಳಬಹುದಾಗಿದೆ.

ಒಂದು : ಸತಿ ಹೋದವಳ ಸ್ಮಾರಕವಾಗಿರುವ ಮಾಸ್ತಿಗೊಂಬೆಗಳು,

ಎರಡು : ಹರಕೆಯ ಮಾಸ್ತಿಗೊಂಬೆಗಳು.

ಈ ಎರಡೂ ವಿಧದ ಗೊಂಬೆಗಳ ರಚನೆಯಲ್ಲಿ ಸಾಮಾನ್ಯವಾಗಿ ಒಂದೇ ಸ್ವರೂಪವನ್ನು ಕಾಣುತ್ತೇವೆ. ಸತಿಸ್ಮಾರಕಗಳಾದ ಮಾಸ್ತಿಗೊಂಬೆಗಳ ಕುರಿತಾಗಿ ಸತಿಹೋದವಳೆಂಬ ಭಾವನೆ ಇದ್ದರೆ, ಹರಕೆಯ ಮಾಸ್ತಿಗೊಂಬೆಗಳ ಕುರಿತಾಗಿ ಅಂಥ ಯಾವ ಭಾವನೆಯೂ ಇಲ್ಲ. ಕಾಡಾಟ ದೂರವಾಗಲಿ ಎಂದುಕೊಂಡಾಗ, ಮಕ್ಕಳಾಗಲಿ ಎಂದು ಬಯಸಿದಾಗ ಇಂಥ ವಿಶಿಷ್ಟ ಹಿತಾಸಕ್ತಿಯ ಪ್ರಸಂಗಗಳಲ್ಲಿ ಮಾಸ್ತಿದೇವತೆಗೆ ಮಾಸ್ತಿಗೊಂಬೆಗಳನ್ನು ಮಾಡಿ ಪೂಜೆ ಸಲ್ಲಿಸುವುದುಂಟು. ಇವು ಐತಿಹಾಸಿಕ ದೃಷ್ಟಿಯಿಂದ ಮಹತ್ವ ಪಡೆಯದಿದ್ದರೂ, ಸತಿ

ಕುರಿತಾಗಿರುವ ಜನರ ನಂಬಿಕೆ, ಆಲೋಚನಾ ವಿಧಾನ, ಆಚರಣೆ ಮೊದಲಾದ ವಿಷಯಗಳ ನಿರೂಪಣೆಯಲ್ಲಿ ತುಂಬ ಮಹತ್ವದ ಪಾತ್ರವಹಿಸುತ್ತವೆ. ಆದರೆ ಸತಿ ಸ್ಮಾರಕಗಳಾಗಿರುವ ಮಾಸ್ತಿಗೊಂಬೆಗಳು ಒಮ್ಮೊಮ್ಮೆ ಮಾಸ್ತಿಕಲ್ಲುಗಳಷ್ಟೇ ಮುಖ್ಯವೆನಿಸುತ್ತವೆ. ಇವುಗಳಿಗೆ ಇತಿಹಾಸ ಇರುತ್ತದೆ. ಕತೆ — ಐತಿಹ್ಯಗಳಿರುತ್ತವೆ, ಅನಿಲಗೋಡಹಳ್ಳಿಯಲ್ಲಿ ಕುಮಾರರಾಮನ ದೇವಾಲಯದಲ್ಲಿರುವ ನಾಗಮ್ಮ, ಮಾಳಮ್ಮ, ಹೊನ್ನಮ್ಮ, ಕೆಂಡದಮ್ಮ — ಎಂಬ ಹೆಸರಿನಿಂದ ಕರೆಯುವ ಮಾಸ್ತಿಗೊಂಬೆಗಳು ಕುಮಾರರಾಮನ ಪತ್ನಿಯರೆಂದೂ, ಅವನ ಮರಣದ ನಂತರ ಸತಿಹೋದವರೆಂದೂ ಹೇಳಲಾಗುತ್ತಿದೆ ಮುರ್ಡೇಶ್ವರದ (ತುದ್ದಳ್ಳಿಯ) ಮಾಸ್ತಿಗುಡಿಯಲ್ಲಿ ವೀರರ ಗೊಂಬೆಗಳೊಡನೆ ಮಾಸ್ತಿಗೊಂಬೆಗಳಿರುವುದು, ಕಲ್ಲಿನಲ್ಲಿ ವೀರ ಹಾಗೂ ಸತಿಶಿಲ್ಪಗಳಿರುವದು ನೆನಪಿಗೆ ಬರುತ್ತದೆ. ಈ ರೀತಿಯಾಗಿ ಮಾಸ್ತಿಗೊಂಬೆಗಳು ಸತಿಪದ್ಧತಿಯ ಅಧ್ಯಯನಕ್ಕೆ ನೆರವಾಗುವ ಆಕರಗಳಾಗಿವೆ.

**ಮಾಸ್ತಿಕಟ್ಟೆ — ಮಾಸ್ತಿಗುತ್ತ — ಮಾಸ್ತಿಗದ್ದಿಗೆ :—** ಕರ್ನಾಟಕದ ಹುವು ಗ್ರಾಮಗಳಲ್ಲಿ ಕಟ್ಟೆಯೋ ಗುತ್ತವೋ, ಗದ್ದಿಗೆಯೋ ಮಾಸ್ತಿ ಹೆಸರಿನಲ್ಲಿದ್ದು ಸತಿ ಘಟನೆಯನ್ನು ಸಾರುವ ಅವಶೇಷಗಳೆನಿಸಿವೆ. ಹೊನ್ನಾವರದಲ್ಲಿ ಎರಡು ಮಾಸ್ತಿಕಟ್ಟೆಗಳಿವೆ. ಅಂಕೋಲೆ, ಕುಂದಗೋಳ ಸೊರಬ ತಾಲೂಕಿನ ದುಗ್ಗಲಿ, ಆವಲಗೊಂಡು, ಧಾರವಾಡ ತಾಲೂಕಿನ ಮನಗುಂಡಿ, ಅಂಕೋಲಾ ತಾಲೂಕಿನ ಮಾಸ್ತಿಕಟ್ಟಾ ಹೊಸನಗರ ತಾಲೂಕಿನ ಮಾಸ್ತಿಕಟ್ಟಾ, ಕೂಡ್ಲಿಗಿ ತಾಲೂಕಿನ ಕಾನಮಡಗು, ಚಳ್ಳಕೆರೆ ತಾಲೂಕಿನ ಯರಬಳ್ಳಿ — ಈ ಮೊದಲಾದ ಊರು — ಪಟ್ಟಣಗಳಲ್ಲಿ ಮಾಸ್ತಿಕಟ್ಟೆಗಳಿವೆ. (ಚಿತ್ರ — 40,41,42,43,44) ಹೊನ್ನಾವರ ತಾಲೂಕಿನ ಅನಿಲಗೋಡಹಳ್ಳಿಯಲ್ಲಿ ಮಾಸ್ತಿಗುತ್ತಗಳಿವೆ. ಅದೇ ರೀತಿ ಮಾಸ್ತಿ ಗದ್ದಿಗೆಗಳು ಚನ್ನಪಟ್ಟಣ, ಮಂಡ್ಯದ ಗುತ್ತಲು, ಮಧುಗಿರಿ ತಾಲೂಕಿನ ಹೆಮ್ಮನಹಳ್ಳಿ, ಮಾಚನಹಳ್ಳಿ — ಈ ಮೊದಲಾದ ಊರು — ಪಟ್ಟಣಗಳಲ್ಲಿ ಇರುವುದನ್ನು ಗುರುತಿಸಬಹುದಾಗಿದೆ. (ಚಿತ್ರ—45)

ಮಾಸ್ತಿಕಟ್ಟೆಗಳು ಸಾಮಾನ್ಯದಾಗಿ ಚೌಕ ಆಕಾರದಲ್ಲಿವೆ. ಅಂಕೋಲಾದ ಮಾಸ್ತಿಕಟ್ಟಾ ಗ್ರಾಮದ ಕಾಡಿನಲ್ಲಿರುವ ಮಾಸ್ತಿಕಟ್ಟೆ ದೊಡ್ಡಗಿರುವದು ವಿಶೇಷವಾಗಿದೆ. ಇವು ಹೆಚ್ಚಾಗಿ ಕಲ್ಲು—ಮಣ್ಣುಗಳಿಂದ ರಚನೆಗೊಂಡವುಗಳೇ ಆಗಿವೆ. ಅವಲಗೊಂಡು ಗ್ರಾಮದಂಥ ~~ತೀರ~~ ಒಂದೆರಡು ಮಾಸ್ತಿಕಟ್ಟೆಗಳು ಮಾತ್ರ ಕಲ್ಲು ಸಿಮೆಂಟು — ಗಚ್ಚಿನಿಂದ ಕಟ್ಟಲ್ಪಟ್ಟಿವೆ. ಈ ಅವಲಗೋಡದ

ಮಾಸ್ತಿಕಟ್ಟೆ ಮೊದಲು ಮಣ್ಣಿನ ದಿಬ್ಬವಾಗಿತ್ತು ಎಂದೂ, ಆಗ ಅದನ್ನು ಮಾಸ್ತಿಮಟ್ಟೆ ಎಂದು ಕರೆಯುತ್ತಿದ್ದರು ಎಂದೂ ಹೇಳುತ್ತಾರೆ. ಕುಂದಗೋಳದಲ್ಲಿ ಬರಿದಾದ ಸ್ಥಳವನ್ನೇ ಮಾಸ್ತಿಕಟ್ಟೆ ಎಂದು ಕರೆಯುತ್ತಾರೆ. ಬಹುಶಃ ಮೊದಲು ಮಾಸ್ತಿಕಟ್ಟೆ ಇದ್ದು ಈಗ ನಾಶವಾಗಿ ಹೋಗಿರಬಹುದಾಗಿದೆ. ಮನಗುಂಡಿಯಲ್ಲಿ ದೊಡ್ಡದಾದ ಮಣ್ಣಿನ ದಿಬ್ಬನ್ನೇ ಮಾಸ್ತಿಕಟ್ಟೆ ಎಂದು ಕರೆಯುತ್ತಾರೆ. ಇವುಗಳಲ್ಲಿ ಎತ್ತರದ ದೃಷ್ಟಿಯಿಂದ ಅಂಕೋಲೆಯ ನೀಲಂಕಟ್ಟಾ, ವಿಶಾಲ ಮತ್ತು ಪ್ರಶಸ್ತ ದೃಷ್ಟಿಯಿಂದ ಕಾನಮಡಗಿನ ಮಾಸ್ತಿಕಟ್ಟೆ ಮುಖ್ಯವೆಂದು ಹೇಳಬಹುದಾಗಿದೆ. ಈ ಕಟ್ಟೆಗಳ ಮೇಲೆ ಸಾಮಾನ್ಯವಾಗಿ ಮಾಸ್ತಿಕಲ್ಲು, ಮಾಸ್ತಿಗುಡಿ ಇರುವುದನ್ನು ಕಾಣುತ್ತೇವೆ. ಈ ಮಾಸ್ತಿಕಟ್ಟೆಗಳ ಸುತ್ತ ಹಲವು ಕತೆ- ಐತಿಹ್ಯ - ಹಾಡುಗಳಿವೆ, ಇವುಗಳಿಗೆ ಪೂಜೆ - ಜಾತ್ರೆ - ಉತ್ಸವಗಳಿವೆ. ಈ ಕಟ್ಟೆಗಳಿಂದಲೇ ಮಾಸ್ತಿಕಟ್ಟಾ ( ಅಂಕೋಲೆ ಹಾಗೂ ಹೊಸನಗರ ತಾಲೂಕಿನ ಊರುಗಳು ) ಎಂಬಂಥ ಊರುಗಳ ಹೆಸರುಗಳು ನಿರ್ಮಾಣವಾಗಿವೆ

ಹೊನ್ನಾವರದ ಅನಿಲಗೋಡಹಳ್ಳಿಯಲ್ಲಿ ಕುಮಾರರಾಮನ ಪತ್ನಿಯರೆಂದು ಹೇಳಲಾದ ನಾಗಮ್ಮ, ಹೊನ್ನಮ್ಮ, ಮಾಳಮ್ಮ, ಕೆಂಡದಮ್ಮ, - ಇವರ ಗುತ್ತಿಗಳು ಇವೆ. ಕಲ್ಲಿನ ತೀರ ಚಿಕ್ಕಕಟ್ಟೆಗಳನ್ನು ನಾಗಮಾಸ್ತಿ ಗುತ್ತಿ, ಕೆಂಡದ ಮಾಸ್ತಿಗುತ್ತಿ ಎಂದು ಕರೆಯುತ್ತಾರೆ. ಹುತ್ತ ಇರುವ ಸ್ಥಾನವೊಂದನ್ನು ಹೊನ್ನಮಾಸ್ತಿಗುತ್ತಿ ಎಂದೂ, ಕಲ್ಲು- ಮಣ್ಣುಗಳಿಂದ ಕೂಡಿದ ಅತೀ ಚಿಕ್ಕ ಕಟ್ಟೆಯೊಂದನ್ನು ಮಾಳಮಾಸ್ತಿಗುತ್ತಿ ಎಂದೂ ಹೇಳುತ್ತಾರೆ. ನಾಗಮಾಸ್ತಿಗುತ್ತಿದ ಮೇಲೆ 'ಕಲ್ಲುನಾಗರ' ಇದೆ. ಮಾಳಮಾಸ್ತಿ ಗುತ್ತಿದ ಮೇಲೆ ಚಿಕ್ಕಕಲ್ಲೊಂದು ಇದೆ. ಉಳಿದವುಗಳೆರಡರ ಮೇಲೆ ಯಾವುದೂ ಇಲ್ಲ

ಮಂಡ್ಯ ಪ್ರದೇಶದಲ್ಲಿ ವಿಶೇಷವೆನ್ನುವಂತೆ ಮಾಸ್ತಿಗದ್ದುಗೆಗಳು ಕಾಣುತ್ತವೆ. ಇವು ಮೂಲತಃ ಗೋರಿಯ ಸ್ವರೂಪಗಳು/ಗುತ್ತಲಿನ ಮಾಸ್ತಿ ಗುಡಿಯಲ್ಲಿ ಮೂರು ಮೆಟ್ಟಿಲುಗಳುಳ್ಳ, ಮೇಲಕ್ಕೆ ಹೋದಂತೆ ಸಣ್ಣದಾಗುತ್ತ ಹೋದ ಗದ್ದುಗೆಯನ್ನು ಕಾಣುತ್ತೇವೆ. ಇದೇ ರೀತಿ ಇನ್ನೊಂದು ಗದ್ದುಗೆ ಇದೇ ಊರಿನ ಇನ್ನೊಂದು ಮಾಸ್ತಿ ಗುಡಿಯಲ್ಲಿದೆ. ಒಂದು ಗದ್ದುಗೆಯ ಮೇಲೆ ಲಿಂಗ, ಬಸವ ಇದ್ದರೆ, ಇನ್ನೊಂದು ಗದ್ದುಗೆಯ ಮೇಲೆ ಕುದುರೆಯ ಮೇಲೆ ಕುಳಿತ ದೇವಿಯ ಲೋಹದ ಮೂರ್ತಿ ಇದೆ. ಹೆಮ್ಮನಹಳ್ಳಿಯಲ್ಲಿ ವಿಶಾಲಕಟ್ಟೆಯ ಮೇಲೆ ಚಿಕ್ಕದಾದ ಕಮಾನಿನಾಕಾರದ ಸಮಾಧಿ



ಇದೆ. ಕಟ್ಟೆಯನ್ನು ಅನುಸರಿಸಿ ಮೇಲೆ ಮಂಟಪವಿದೆ ಈ ಸಮಾಧಿಗಳನ್ನು ಕುರಿತು ಡಾ: ಬಸವರಾಜ ಕಲ್ಗುಡಿ ಅವರು ಬರೆಯುತ್ತ, ''ಸತ್ತವರ ಸ್ಮಾರಕಗಳು ಗೋರಿಯ ರೂಪದಲ್ಲಿರುವುದು — ( ಒಬ್ಬ ಮನುಷ್ಯನ ) ರಾಜಕೀಯ, ಸಾಮಾಜಿಕ, ಪ್ರಭಾವ ಹಾಗೂ ಪರಸ್ಪರ ಯಾವುದೇ ರೀತಿಯ ಸಂಬಂಧಗಳನ್ನು ತೋರಿಸುತ್ತವೆ'' — ಎಂದು ಸಂದೇಶಪಡುತ್ತಾರೆ. 95 ಆದರೆ ಅವರೇ ಹೇಳುವಂತೆ ಇದಕ್ಕೆ ಇನ್ನೂ ಹೆಚ್ಚಿನ ಆಧಾರಗಳು ಬೇಕು. ಈ ರೀತಿ ಮಾಸ್ತಿ ಅವಶೇಷಗಳಾದ ಮಾಸ್ತಿಕಟ್ಟೆ, ಮಾಸ್ತಿಗುತ್ತ, ಮಾಸ್ತಿಗದ್ದುಗೆಗಳು ಹಲವು ದೃಷ್ಟಿಗಳಿಂದ ಸತಿಪದ್ಧತಿಯ ಅಧ್ಯಯನಕ್ಕೆ ತುಂಬ ನೆರವಾಗುತ್ತವೆ.

**ವ್ಯಕ್ತಿನಾಮಗಳು :—** ವ್ಯಕ್ತಿಯ ಹೆಸರು ಒಮ್ಮೊಮ್ಮೆ ಇತಿಹಾಸದ ಘಟನಾವಳಿಯ ಮೂರ್ತರೂಪವಾಗಿರುತ್ತದೆ ಕರ್ನಾಟಕದ ಜನತೆ ಸತಿಹೋದವಳ ಹೆಸರನ್ನು ತಮ್ಮ ಮನೆಯ ಮಕ್ಕಳಿಗೆ ಇಟ್ಟು ಕರೆದಿರುವುದನ್ನು ಕಾಣುತ್ತೇವೆ. ಮಕ್ಕಳಿಗೆ ಸತಿಹೋದ ಹೆಣ್ಣಿನ ನಿಜವಾದ ಹೆಸರನ್ನು ಇಟ್ಟು ಕರೆದಿರುವುದರ ಜೊತೆಗೆ 'ಮಾಸ್ತಿ' ಎಂಬ ವಾಚಕದಿಂದಲೂ ಕರೆದಿರುವುದನ್ನು ಕಾಣುತ್ತೇವೆ. ದೈವಮೂಲದಿಂದಲೂ, ಪೂರ್ವಜ ಮೂಲದಿಂದಲೂ ಸತಿಹೋದವಳ ಹೆಸರು ಮಕ್ಕಳಿಗೆ ಇಡುವ ಪದ್ಧತಿ ಕರ್ನಾಟಕದಲ್ಲಿ ಬೆಳೆದು ಬಂದಿರುವುದನ್ನು ಗುರುತಿಸಬಹುದಾಗಿದೆ. ಸತಿಯಾದ ಹೆಣ್ಣುಮಗಳು ಕಾಲಾಂತರದಲ್ಲಿ ಜನತೆಯ ಭಾವನೆಯಲ್ಲಿ ದೇವತೆಯಾಗಿ ಮೂಡುತ್ತಾಳೆ. ಆಕೆಗೆ ಪೌರಾಣಿಕತ್ವ ದೊರಕಿ ಪ್ರಾದೇಶಿಕ ದೈವವಾಗಿ ಬಿಡುತ್ತಾಳೆ. ಅಂಥವರ ಹೆಸರನ್ನು ಮಕ್ಕಳಿಗೆ ಇಡುವಲ್ಲಿ ಗ್ರಾಮೀಣ ಸಮಾಜಭಕ್ತಿ, ಉತ್ಸಾಹ ತೋರಿಸುತ್ತದೆ. ನಾಗಮ್ಮ ಸತಿಹೋದ ಮೇಲೆ ದೈವೀರೂಪವಾದಳು. ಜನರು ಅವಳ ಮೇಲೆ ಹಾಡುಕಟ್ಟಿ ಸ್ಮರಿಸಿದರು, ಆರಾಧಿಸಿದರು. ''ಮುಂದೆ ಹುಟ್ಟುವ ಗಂಡುಹೆಣ್ಣುಮಕ್ಕಳಿಗೆ ನಾಗಮ್ಮನ ಹೆಸರಿಡಲಾಗುವುದೆಂದು ಆ ಹಾಡು ಕೊನೆಯಾಗುತ್ತದೆ. ಇದು ಸ್ವಾರಸ್ಯ ಸಂಗತಿ.[96]

ಕಂದನ ಕೊಡಮ್ಮ ನನಗೊಂದ ನಾಗಮ್ಮ
ವಪ್ಪುಳ್ಳ ಹೆಸರ ಕರೆದೇವೇ ! ನಾಗಮ್ಮ
ನಿನಗೆ ಮೊಕ್ಕಲು ಆದೇವು
ಪುತ್ರರನ ಕೊಡಮ್ಮ ನಮಗೊಂದ ನಾಗಮ್ಮ
ನಿನ್ನ ಚೆಲುವೆಸರ ನಾವು ಕರೆದೇವು
ನಾಗಣ್ಣನೆಂದು ಕರೆದೇವು ನಾಗಮ್ಮ
ನಾಗಮ್ಮನೆಂದು ಕರೆದೇವು[97]

ಪ್ರಾದೇಶಿಕ ದೈವಗಳನ್ನು ಕುರಿತು ಬರೆಯುತ್ತ ಡಾ: ಎಂ.ಚಿದಾನಂದಮೂರ್ತಿ ಅವರು ಹೀಗೆ ತಿಳಿಸುತ್ತಾರೆ. "ಪ್ರಾದೇಶಿಕ ದೈವಗಳಲ್ಲಿ 'ಮಾಸ್ತಿಯಮ್ಮ' ಈಗ ದೇವತೆಯಾಗಿದ್ದರೂ ಆಕೆ ಹಿಂದೊಮ್ಮೆ ಸಹಗಮನ ಮಾಡಿದ ಒಬ್ಬ ಸ್ತ್ರೀ. ಮಾಸ್ತಿಯಮ್ಮನ ಒಕ್ಕಲುಗಳಲ್ಲಿ ಆಕೆಯ ಹೆಸರನ್ನು ಜನ ಗಂಡಸರಿಗೂ, ಹೆಂಗಸರಿಗೂ ಇಡುತ್ತಾರೆ. (ಉದಾ: ಮಾಸ್ತ್ಯಪ್ಪ, ಮಾಸ್ತಿಯವ್ವ, ಹುಚ್ಚ ಮಾಸ್ತಿಗೌಡ)[98] ಅರಿಕೆರೆಯಲ್ಲಿ ಮಾಸ್ತಯ್ಯ, ದೇಶಹಳ್ಳಿಯಲ್ಲಿ ಮಾಸ್ತಮ್ಮ, ಕಲ್ಲೂರಿನಲ್ಲಿ ಮಾಸ್ತಿ, ಚೆನ್ನಮಾಸ್ತಿ, ಬಾಗಣ್ಣನಹಟ್ಟಿಯಲ್ಲಿ ಮಾಸ್ತಿಯಮ್ಮ, ಚಿಕ್ಕಮತ್ತೂರಿನಲ್ಲಿ ಮಾಸ್ತಿ — ಈ ಮೊದಲಾದ ವ್ಯಕ್ತಿಗಳ ಹೆಸರುಗಳು ದೈವಮೂಲದಿಂದಲೇ ಬಂದಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಕುಷ್ಟಗಿ ತಾಲೂಕಿನ ಕಬ್ಬರಗಿ ಗ್ರಾಮದ ಬಹುಪಾಲು ಮಹಿಳೆಯರ ಹೆಸರು ಕರಿಮಾಸವ್ವ, ಕರಿಮಾಸಮ್ಮ ಎಂದು ಇಟ್ಟಿರುವುದನ್ನು ಗಮನಿಸಬೇಕು." ಡಾ: ಚೆನ್ನಕ್ಕ ಎಲಿಗಾರ ಅವರು ಸೂಚಿಸಿರುವುದೂ ಕೂಡ ಇದೇ ಹಿನ್ನೆಲೆಯಲ್ಲಿಯೇ ಎಂಬುದನ್ನು ಮರೆಯಬಾರದು.[99]

ಗತಿಸಿದ ಪೂರ್ವಜರ ಹೆಸರನ್ನು ಮುಂದಿನ ಪೀಳಿಗೆಗೆ ಇಡುವ ಸಂಪ್ರದಾಯ ಕರ್ನಾಟಕದಲ್ಲಿದೆ. ಈ ಕಾರಣದಿಂದಾಗಿ ತಮ್ಮ ಮನೆತನದಲ್ಲಿ ಸತಿಹೋಗಿರುವ ಹೆಣ್ಣುಮಗಳ ಹೆಸರನ್ನು ತಮ್ಮ ಮಕ್ಕಳಿಗೆ ಇಡುತ್ತಲೂ ಕರ್ನಾಟಕದ ಕುಟುಂಬಗಳು ಬಂದಿವೆ. "ತುಮಕೂರು ಜಿಲ್ಲೆಯ ಹಳ್ಳಿ ಕೈದಾಳದಲ್ಲಿ ಸಹಗಮನವಾದ ಲಕ್ಷ್ಮೀದೇವಮ್ಮನ ವಂಶಸ್ಥರು ಇಂದಿಗೂ ತಮ್ಮ ಮನೆಯ ಹಿರಿಯ ಹೆಣ್ಣುಮಗಳಿಗೆ ಆಕೆಯ ಹೆಸರನ್ನು ಇಡುತ್ತ ಬಂದಿರುವ ಪದ್ಧತಿಯನ್ನು ಉಳಿಸಿಕೊಂಡು ಬರುತ್ತಿದ್ದಾರೆ."[100] ಶ್ರೀರಂಗಪಟ್ಟಣದಲ್ಲಿರುವ ಸತಿಮನೆತನಗಳಲ್ಲಿ ವೀರಮಾಸ್ತಯ್ಯ, ಮಾಸ್ತಿ ಈ ಮೊದಲಾದ ಹೆಸರುಗಳಿರುವುದನ್ನು ಇಲ್ಲಿ ಸ್ಮರಿಸಬಹುದು. "ಅಂಕೋಲೆಯ ಐಗಳ ಎಂಬ ಮನೆತನದ ಮಾಸ್ತಿಯೊಬ್ಬಳ ನೆನಪಿನ ಕುರುಹಾಗಿ ನೀಲಂಕಟ್ಟಾ ಎಂಬ ಪ್ರದೇಶವಿದ್ದು ಅವರ ಮನೆಯ ಮೊದಲ ಮಕ್ಕಳಿಗೆ ನೀಲಮ್ಮ ನೀವಮ್ಮ ಎಂಬ ಹೆಸರನ್ನು ತಪ್ಪದೇ ಇಡುತ್ತಲಿರುವುದು ಕಂಡು ಬರುತ್ತದೆ" ಎಂದು ಡಾ: ಚೆನ್ನಕ್ಕ ಎಲಿಗಾರ ತಿಳಿಸಿದರೂ 'ಐಗಳ'ಮನೆಯ ಮಕ್ಕಳಿಗಾರಿಗೂ ಮೊದಲಾಗಲೀ ಈಗಾಗಲೀ ನೀಲವಮ್ಮ ಎಂಬ ಹೆಸರನ್ನಿಟ್ಟದ್ದು ಕಂಡು ಬರುವುದಿಲ್ಲ.[101]

ಈ ರೀತಿಯಾಗಿ ಸತಿಹೋದವಳ ನಿಜವಾದ ಹೆಸರನ್ನು ಇಲ್ಲವೆ ಅವಳ ಮಾಸ್ತಿ ಎಂಬ ವಾಚಕ ಹೆಸರನ್ನು ಗಂಡು — ಹೆಣ್ಣುಗಳಿಗೆ ಭೇದವಿಲ್ಲದೆ ಇಡುವುದನ್ನು ಗುರುತಿಸಬಹುದಾಗಿದೆ. ನಾಗವ್ವ, ನಾಗಮ್ಮ, ನಾಗಪ್ಪ, ಲಕ್ಷ್ಮೀದೇವಮ್ಮ ಎಂದು ನೈಜ ಹೆಸರಿನಿಂದಲೂ, ಮಾಸ್ತಿ,

ಮಾಸ್ತ್ಯವ್ವ, ಮಾಸ್ತಮ್ಮ, ಮಾಸ್ತಪ್ಪ ಎಂಬ ವಾಚಕ ಹೆಸರಿನಿಂದಲೇ ಕರೆಯುವುದನ್ನು ಕಾಣುತ್ತೇವೆ. ಸಹಗಮನಗೊಂಡವಳು ದೈವೀರೂಪವಾದಾಗ ಅವಳ ಹೆಸರು ಗಂಡು — ಹೆಣ್ಣುಗಳಿಗೆ ಭೇದವಿಲ್ಲದೆ ಬಳಕೆಯಾಗುವುದು ವಿಶೇಷವಾಗಿದೆ. ಈ ಮಾಸ್ತಿ ವಾಚಕವು ವ್ಯಕ್ತಿನಾಮ ಮಾತ್ರವಾಗಿರದೇ ಅಡ್ಡ ಹೆಸರಾಗಿಯೂ ( sirname ) ಕೆಲವು ಕುಟುಂಬಗಳಲ್ಲಿ ಬಳಕೆಯಲ್ಲಿರುವುದನ್ನು ಕಂಡುಕೊಳ್ಳಬಹುದಾಗಿದೆ. ಆದರೆ ಮಾಸ್ತಿವಾಚಕದಂತೆ ಸತಿಯಾದವಳ ನೈಜ ಹೆಸರುಗಳು ಅಡ್ಡ ಹೆಸರುಗಳಿಗೆ ಬಳಕೆಯಾಗಿಲ್ಲ. ಈ ತೆರನಾಗಿ ಕೆಲವು ವ್ಯಕ್ತಿನಾಮಗಳು ಐತಿಹಾಸಿಕ ಸತಿ ಸಂಗತಿಗಳನ್ನು ಉಳಿಸಿಕೊಂಡು ಬಂದು ಸತಿ ಅವಶೇಷಗಳೆನಿಸುತ್ತವೆ.

<u>ಬಳೆ — ಸೀರೆ — ಕನ್ನಡಿ ಇತ್ಯಾದಿ :—</u> ಸತಿ ಹೋದವಳು ಉಪಯೋಗಿಸಿದ ಬಳೆ, ಸೀರೆ, ಕನ್ನಡಿ, ಕಳಸ, ಕಂಕಣ, ಕತ್ತಿ, ಲಿಂಬೆ — ಈ ಮೊದಲಾದ ವಸ್ತುಗಳು, ಅವಳ ವಂಶದವರು ತಾವು ಎಂದು ಹೇಳುವ ಕೆಲವು ಮನೆತನಗಳಲ್ಲಿ ಇಂದು ಇರುವುದನ್ನು ಕಾಣಬಹುದು. ಶ್ರೀರಂಗಪಟ್ಟಣದ ವೀರಮಾಸ್ತಯ್ಯನವರ ಮನೆಯಲ್ಲಿ ಬೆಳ್ಳಿಬಳೆ, ಸೀರೆಯ ತುಂಡು, ಕನ್ನಡಿ, ಕಳಸ ಇರುವುದನ್ನು ಇಲ್ಲಿ ಸ್ಮರಿಸಬಹುದು. ( ಚಿತ್ರ — 46, 47, 48, 49, ) ಬೆಳಗಾವ ಜಿಲ್ಲೆಯ ಕುಂಚನೂರಿನಲ್ಲಿ ನಾಗಲಬ್ಬೆ ಸತಿಹೋದ ಅವಶೇಷವಾಗಿ ಅವಳ ಕಂಕಣ ಇನ್ನುವರೆಗೂ ರಕ್ಷಿಸಿಕೊಂಡು ಬರಲಾಗಿದೆ. "ಸಹಗಮನ ಮಾಡಿದ ಒಬ್ಬ ಸ್ತ್ರೀಯ ವಸ್ತ್ರದ ತುಂಡನ್ನು ಚಿಕ್ಕಮಗಳೂರು ಜಿಲ್ಲೆಯ ಮಲೆನಾಡಿನ ಗ್ರಾಮವೊಂದರಲ್ಲಿ ಪವಿತ್ರ ವಸ್ತುವೆಂಬಂತೆ ರಕ್ಷಿಸಿಕೊಂಡು ಬರುತ್ತಿದ್ದಾರೆ".[102] ಚನ್ನಗಿರಿ ತಾಲೂಕಿನ ಚಿಕ್ಕುಡೇವಿನಲ್ಲಿ ಒಂದು ಮನೆಯಲ್ಲಿ ಸತಿ ಬೆಂಕಿಗೆ ಹಾರುತ್ತಲೇ ಆಕಾಶದಿಂದ ಉದುರಿದವು ಎನ್ನಲಾದ ಬೆಳ್ಳಿಯ ಲಿಂಬೆಹಣ್ಣು, ಕನ್ನಡಿ ಮತ್ತು ಕತ್ತಿ ಇವುಗಳನ್ನು ಇಟ್ಟುಕೊಂಡು ಇಂದಿನವರೆಗೂ ಪೂಜಿಸಿಕೊಂಡು ಬರಲಾಗಿದೆ. ಈ ರೀತಿ ಸತಿ ಅವಶೇಷಗಳು ಕರ್ನಾಟಕದ ಕೆಲವೇ ಕೆಲವು ಮನೆತನಗಳಲ್ಲಿರುವುದು ವಿಶೇಷವಾಗಿದೆ. ಸ್ತ್ರೀ ಸತಿಹೋಗುವಾಗ ಬಳೆ, ಕಂಡಣ, ಸೀರೆ, ಕನ್ನಡಿ, ಲಿಂಬೆ — ಈ ಮೊದಲಾದ ತನ್ನ ಒಡವೆಗಳನ್ನೆಲ್ಲ ತನ್ನ ಕುಟುಂಬದವರಿಗೆ, ನೆರೆಹೊರೆಯವರಿಗೆ, ಸಖಿಯರಿಗೆ ಆತ್ಮೀಯರಿಗೆ ಕೊಡುತ್ತಿದ್ದಳೆಂದು ಕಾಣುತ್ತದೆ. ಇದನ್ನು ದಿನಚರಿಸಾಹಿತ್ಯ, ಗ್ರಂಥಸಾಹಿತ್ಯ ಸ್ಪಷ್ಟಪಡಿಸುತ್ತವೆ. ಕರ್ನಾಟಕಕ್ಕೆ ಸಂದರ್ಶನ ಕೊಟ್ಟ 'ದು ಆರ್ತೆ ಬಾಬಿರ್ಸಾ' ಸತಿಹೋಗುವವಳು "ತಾನುತೊಟ್ಟ ಆಭರಣಗಳನ್ನೆಲ್ಲಾ ತನ್ನ ನೆಂಟರಿಷ್ಟರಿಗೆ ಹಂಚಿ ಬಿಡುತ್ತಾಳೆ" ಎಂದು ಬರೆಯುತ್ತಾನೆ.[103] ಮಾದಾರ ಧೂಳಯ್ಯನ

ವಚನವೊಂದರಲ್ಲಿ ಸತಿಯ ಕುರಿತು "ಮುಡಿಯಲರ ಹಿಡಿದ ಲಿಂಬೆಯ ಹಣ್ಣ ಬೀಡಿದಂತೆ ಕೊಡುವಳು" ಎನ್ನುವ ಮಾತು ಬರುತ್ತದೆ.[104] ಸತಿ ಕನ್ನಡಿ ಹಿಡಿದಿರುವುದನ್ನು, ಲಿಂಬೆ ಹಣ್ಣು ತೋರಾಡುವುದನ್ನು ಸಾಮಾನ್ಯವಾಗಿ ಜನಪದ ಗೀತೆಗಳು ಚಿತ್ರಿಸುತ್ತವೆ. 'ಪೋಸ್ತಮ್ಮ' ಗೀತೆಯೊಂದರಲ್ಲಿ ಸತಿ ಕುಂಡದಲ್ಲಿ ಉರಿದುಹೋದ ನಂತರ ಅವಳ ಆಭರಣವೊಂದು ಬೂದಿಯಲ್ಲಿ ದೊರಕಿತೆಂದೂ, 'ಕಂಕಣದ ಕೈ' ಕತೆಯಲ್ಲಿ 'ನಾಗಲಬ್ಬೆ' ಚಿತೆಯಲ್ಲಿ ಸತಿ ಹೋದ ಮೂರನೆಯ ದಿನಕ್ಕೆ ಅಸ್ಥಿಸಂಚಯನ ಕಾಲದಲ್ಲಿ ಅವಳ ಕೈಯ ಕಂಕಣಗಳು ದೊರಕಿದವು ಎಂದೂ ವಿವರಣೆಗಳು ಬರುತ್ತವೆ.[105] ಹೀಗೆ ಸತಿಗೆ ಸಂಬಂಧಿಸಿದ ವಸ್ತುಗಳು ಅವಳಿಂದ ಪಡೆದೋ ಅಥವಾ ಆಕಸ್ಮಿಕವಾಗಿ ದೊರಕಿಯೋ ಅವುಗಳನ್ನು ಪೂಜ್ಯಭಾವನೆಯಿಂದ ಜನರು ರಕ್ಷಿಸಿಕೊಂಡು ಬಂದಿದ್ದಾರೆ. ಅವಿಭಕ್ತ ಕುಟುಂಬ ವಿಭಕ್ತ ಕುಟುಂಬಗಳಾಗಿ ಹರಿದು ಹಂಚಿಹೋಗುವಾಗ ಈ ಸತಿ ಅವಶೇಷಗಳನ್ನು ಪಾಲು ಮಾಡಿಕೊಳ್ಳುವುದುಂಟು. ಇಂಥ ಅಪರೂಪದ ಉದಾಹರಣೆ, ಶ್ರೀರಂಗಪಟ್ಟಣದ ಶ್ರೀ ವೀರಮಾಸ್ತಯ್ಯನವರ ಮನೆತನದವರದು ಎಂದು ಹೇಳಬಹುದು. ಈ ರೀತಿಯಾಗಿ ಸತಿ ಬಳೆ, ಸೀರೆ, ಕನ್ನಡಿ, ಇತ್ಯಾದಿಗಳ ಸಂಗ್ರಹ ಮತ್ತು ಅಧ್ಯಯನ ತುಂಬ ಕುತೂಹಲಕರವಾಗಿದೆ ಮತ್ತು ಉಪಯುಕ್ತಕರವಾಗಿದೆ.

**ಜಾತ್ರೆ – ಉತ್ಸವಗಳು:–** ಮಾಸ್ತಿಗುಡಿಗಳ ಸುತ್ತ ನಡೆಯುವ ಜಾತ್ರೆ – ಉತ್ಸವಗಳು ಸತಿಗೆ ಸಂಬಂಧಪಟ್ಟಂತೆ ಐತಿಹಾಸಿಕ ಸಂಗತಿಗಳನ್ನು ನಿರೂಪಿಸುತ್ತವೆ. ಇವುಗಳ ಅಧ್ಯಯನದಿಂದ ಸತಿ ಕುರಿತು ಜನರಲ್ಲಿರುವ ಭಾವನೆ ನಂಬಿಕೆ ಈ ಮೊದಲಾದವುಗಳನ್ನು ತಿಳಿದುಕೊಳ್ಳಬಹುದಾಗಿದೆ. ಸಾಮಾನ್ಯವಾಗಿ ಮಾಸ್ತಿಕಲ್ಲುಗಳಿಗೆ ಹಬ್ಬಗಳಲ್ಲಿ, ವಿಶೇಷ ದಿನಗಳಲ್ಲಿ ಪೂಜೆ ಸಲ್ಲಿಸುವುದನ್ನು, ಹಾಡು ಹೇಳುವುದನ್ನು ಕಾಣುತ್ತೇವೆ. ಆದರೆ ಕೆಲವು ಗುಡಿಗಳಿಗೆ ನಡೆಯುವ ಜಾತ್ರೆ – ಉತ್ಸವಗಳು ದೊಡ್ಡ ಪ್ರಮಾಣದವುಗಳಾಗಿರುತ್ತವೆ. ಹೊಸನಗರದ ಹುಲ್ಲುಕಲ್ಲು, ಮಾಸ್ತಿಕಟ್ಟೆ, ಕೂಡ್ಲಿಗೆಯ ಕಾನಮಡಗು, ಹೆಗ್ಗಡದೇವನಕೋಟೆಯ ಬೆಳತೂರು, ಕಾರವಾರದ ಅರಗಾ, ಹೊನ್ನಾವರದ ಚಂದಾವರ, ಅನಿಲಗೋಡಹಳ್ಳಿ, ಭಟ್ಕಳದ ಮುರ್ಡೇಶ್ವರ (ತುದ್ದಳ್ಳಿ) ಕೋಕ್ತಿಕಟ್ಟೆ, ಚನ್ನಗಿರಿಯ ಕೊಂಡದಹಳ್ಳಿ, ಸಿಂದಗಿಯ ದೇವರಹಿಪ್ಪರಗಿ ಮತ್ತು ಅಂಕೋಲಾ– ಈ ಮೊದಲಾದ ಊರು ಪಟ್ಟಣಗಳಲ್ಲಿ ಜಾತ್ರೆ – ಉತ್ಸವಗಳು ನಡೆಯುತ್ತವೆ. ಈ ಜಾತ್ರೆ – ಉತ್ಸವಗಳ ಕಾಲಕ್ಕೆ ನಡೆಯುವ ಆಚರಣೆಗಳಲ್ಲಿ ನಮ್ಮ ಜನರ ಸಾಂಸ್ಕೃತಿಕ ಬದುಕನ್ನು ಕಂಡುಕೊಳ್ಳಬಹುದಾಗಿದೆ.

ಅಂಕೋಲೆಯಲ್ಲಿ ಬಂಡಿಹಬ್ಬದಂದು 'ಆಡುವಕಟ್ಟೆ'ಯಲ್ಲಿ ವೀರನೊಬ್ಬ ಹೋರಾಡಿ ಮಡಿಯುವುದನ್ನು ಅವನ ಪತ್ನಿ ಸತಿಹೋಗುವುದನ್ನು ಈಗಲೂ ಆಡಿತೋರಿಸುತ್ತಾರೆ. ಬಂದಾವರದಲ್ಲಿ ಸತಿ ಮುಖವಾಡ ಹಾಕಿಕೊಂಡವನು ಕೊಂಡಹಾಯಲು ಬಂದು ಮೈಮರೆಯುವುದು ಸತಿಹೋದ ಘಟನೆಯನ್ನು ಸ್ಮರಿಸುವಂಥದ್ದೇ ಆಗಿದೆ. ಕೊಂಡದಹಳ್ಳಿಯಲ್ಲಿ ಯುಗಾದಿಯ ನಂತರದಲ್ಲಿ ನಡೆಯುವ ಮಾಸ್ತಿ ಉತ್ಸವವನ್ನು ಕುರಿತು ಬರೆಯುತ್ತ ಡಾ: ಎಂ.ಚಿದಾನಂದ — ಮೂರ್ತಿಯವರು ಹೀಗೆ ಹೇಳುತ್ತಾರೆ : ''ಗಂಡನ ಕಲ್ಲಿಗೂ 'ಮಕ್ಕಳಕಲ್ಲಿ'ಗೂ ( — ಮಾಸ್ತಿಕಲ್ಲು ) ನೂರೊಂದು ಪೂಜೆ ನಡೆಯುತ್ತದೆ. 'ಗಂಡನ ತಲೆ' ಕಲ್ಲಿಗೆ ಗರಿಸೂತ್ರ ಅಥವಾ ಬಾಸಿಂಗವನ್ನು ಮುಡಿಸಿ, ಗುಡಿಗೆ ಬಂದು ಅಲ್ಲಿ ಮಾಸ್ತ್ಯಮ್ಮ ಮತ್ತು ಆಕೆಯ ಗಂಡನಿಗೆ ಮದುವೆ ನಡೆಸುತ್ತಾರೆ. 'ಅಮ್ಮನ ಕಲ್ಲಿಗೆ' ಅನೇಕ ಒಡವೆಗಳನ್ನು ಹಾಕಿ 'ಮುಖಪದ್ಮ' ಮತ್ತು 'ಗಂಡನಕಲ್ಲಿಗೆ' ಮುಡಿಸಿದ್ದ 'ಗರಿಸೂತ್ರ'ಗಳಿಂದ ಅಲಂಕರಿಸುತ್ತಾರೆ. ಇಲ್ಲಿ ಮದುವೆ ಸತ್ತ ಗಂಡನಿಗೂ ಬದುಕಿರುವ ಮಾಸ್ತ್ಯಮ್ಮನಿಗೂ ನಡೆಯುವುದರಿಂದ 'ಅಮ್ಮನಕಲ್ಲಿ'ಗೆ ಮುಖಪದ್ಮವಿಟ್ಟು ಅಲಂಕರಿಸುತ್ತಾರೆ. 'ಗಂಡನ ತಲೆ'ಗೆ ಯಾವುದೇ ಅಲಂಕಾರವನ್ನು ಮಾಡುವುದಿಲ್ಲ. ಇದು ಮಾಸ್ತ್ಯಮ್ಮ ಸಹಗಮನ ಮಾಡುವ ಮೊದಲು ಅಲಂಕಾರ ಮಾಡಿಕೊಳ್ಳುತ್ತಿದ್ದುದರ ಮತ್ತು ಅವಳಿಗೂ ಅವಳ ಸತ್ತ ಗಂಡನಿಗೂ ಮತ್ತೆ ಮದುವೆ ಶಾಸ್ತ್ರ ಮಾಡಿದುದರ ಸಂಕೇತವಿರಬೇಕು''.[106] ಈ ರೀತಿಯಾಗಿ ಮಾಸ್ತಿ ಜಾತ್ರೆ — ಉತ್ಸವಗಳು ಸತಿಪದ್ಧತಿಯ ಅವಶೇಷಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಇತಿಹಾಸದ ಮಹತ್ವದ ಸಾಮಗ್ರಿಗಳೆನಿಸಿವೆ.

ಈ ರೀತಿಯಾಗಿ ಕರ್ನಾಟಕದಲ್ಲಿ ಸತಿ ಅವಶೇಷಗಳು ವೈವಿಧ್ಯಪೂರ್ಣವಾಗಿ, ಕುತೂಹಲಕರವಾಗಿ ದೊರಕುತ್ತವೆ. ಕರ್ನಾಟಕದ ಗ್ರಾಮ್ಯಜೀವನ ಸತಿಸ್ವರೂಪವನ್ನು ಇಂಥದೇ ಮಾಧ್ಯಮದಲ್ಲಿ ಕಂಡುಕೊಳ್ಳಬೇಕೆಂಬ ನಿಯಮವೇನೂ ಪಾಲಿಸಿದಂತಿಲ್ಲ. ಅದು ಕಲ್ಲಾಗಿರಬಹುದು. ಊರಾಗಿರಬಹುದು, ವ್ಯಕ್ತಿಯ ಹೆಸರಾಗಿರಬಹುದು. ಇನ್ನಾವುದೋ ಸ್ಥಳನಾಮವಾಗಿರಬಹುದು, ಗದ್ದಿಗೆಯಾಗಿರಬಹುದು — ಹೀಗೆ ಏನೂ ಬೇಕಾದರೂ ಸತಿ ಘಟನೆಯನ್ನು ಸಾರುವ ಸಂಕೇತ ಎಂದು ಭಾವಿಸಿದರು. ಹುಲ್ಲಿನಕಟ್ಟೆಯಿಂದ ಸ್ವಲ್ಪ ದೂರದಲ್ಲಿ ಮಾಸ್ತಿಕೆರೆ, ಉಪ್ಪಿನಗೋಳಿ, ದೇವಿಮನೆಗಳ ಸಮೀಪ ಮಾಸ್ತಿಹಳ್ಳಗಳು, ಹುಲ್ಲಕಲ್ಲಿನಲ್ಲಿ ಮಾಸ್ತಿಸರ್ಪಗಳು, ದುಗ್ಗಲಿ, ಮುನಗುಂಡಿ ಕಲ್ಲೂರುಗಳಲ್ಲಿ ಮಾಸ್ತಿಗಿಡಗಳು— ಹೀಗೆ ಹಲವು ಸ್ವರೂಪಗಳಲ್ಲಿ ಸತಿ ಪದ್ಧತಿಯ ಕುರುಹುಗಳು ಉಳಿದುಕೊಂಡು ಬಂದಿವೆ. (ಚಿತ್ರ—50,51) ಇಷ್ಟೇ ಅಲ್ಲದೆ ಗಿಡದ ಬೇರನ್ನು ಕೂಡಾ ಮಾಸ್ತಿ ಎಂದು ಭಾವಿಸುವುದನ್ನು 'ಪುರ'ಗ್ರಾಮದಲ್ಲಿ

ಕಾಣಬಹುದು. ಸತಿಯನ್ನು ಲೋಹದಲ್ಲಿ ಕಂಡರಿಸಿ ಪೂಜಿಸುವುದನ್ನು ಶ್ರೀರಂಗಪಟ್ಟಣ ಮೈಸೂರು, ಗುತ್ತಲು, ಹೊಸಕುಳಿ, ಹೊನ್ನಾವರ ಈ ಮೊದಲಾದ ಊರು — ನಗರಗಳಲ್ಲಿ ಕಾಣುತ್ತೇವೆ. ಮಾಸ್ತಿಮೂರ್ತಿಯನ್ನು ಸಿಮೆಂಟಿನಿಂದ ಮಾಡಿ, ಇತಿಹಾಸವನ್ನು ರಕ್ಷಿಸಿಕೊಂಡು ಬರುತ್ತಿರುವುದನ್ನು ಶಿರಾಳಿಯಲ್ಲಿ ಕಾಣುತ್ತೇವೆ ಹೀಗೆ ಸತಿ ಇತಿಹಾಸ ಕರ್ನಾಟಕದಲ್ಲಿ ಹಲವಾರು ಮಾಧ್ಯಮಗಳಲ್ಲಿ ಸುರಕ್ಷಿತವಾಗಿ ಉಳಿದುಕೊಂಡು ಬರುತ್ತಿದೆ

ಈ ಮೇಲಿನ ಅಧ್ಯಯನದಿಂದ ಕರ್ನಾಟಕದ ಸತಿಪದ್ಧತಿಯ ಆಕರಗಳ ವ್ಯಾಪ್ತಿ–ವೈಶಾಲ್ಯತೆಗಳು ತುಂಬ ವೈವಿಧ್ಯಪೂರ್ಣವೆಂಬುದು ಮನದಟ್ಟಾಗುತ್ತದೆ. ಗ್ರಂಥಸಾಹಿತ್ಯ ದಿನಚರಿ ಸಾಹಿತ್ಯ ಮತ್ತು ಶಾಸನಗಳು — ಇವು ಸತಿಪದ್ಧತಿಯ ಲಿಖಿತ ಮತ್ತು ಅಧಿಕೃತ ಆಕರಗಳೆನಿಸಿದರೆ, ಇನ್ನುಳಿದವು ಅಲಿಖಿತ ಮತ್ತು ಸಹ ಆಕರಗಳೆನಿಸಿವೆ. ಶಿಲ್ಪ ಸ್ಮಾರಕಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೊರಕುತ್ತಿದ್ದು, ಪ್ರಮುಖ ಆಕರಗಳೆನಿಸಿವೆ. ಸತಿಶಿಲ್ಪವನ್ನು ಕಂಡರಿಸುವದು ಕರ್ನಾಟಕದ ಜನತೆಗೆ ಸುಲಭ ಹಾಗೂ ಅತ್ಯುತ್ತಮ ಮಾರ್ಗವೆನಿಸಿತ್ತು ಎಂದು ತೋರುತ್ತದೆ. ಇನ್ನು ಹಲವು ಸಲ ಸತಿಶಿಲ್ಪಕ್ಕಿಂತಲೂ ಯಾವುದಾದರೂ ವಸ್ತು ವ್ಯಕ್ತಿ — ವೃಕ್ಷ — ಸ್ಥಳಗಳು ಸತಿ ನೆನಪಾಗಿ ಭವಿಷ್ಯತ್ತಿನಲ್ಲಿ ಉಳಿಯಬಲ್ಲುದು ಎಂದಾಗ ಮಾನವ ಸಮುದಾಯ ಅದನ್ನು ಸ್ವೀಕರಿಸಿಕೊಂಡು ಬಂದಿತು. ಹೀಗಾಗಿ ಸತಿ ಸ್ಮಾರಕಗಳು ಇನ್ನು ವಿಶೇಷ — ಕುತೂಹಲದ ರೀತಿಯಲ್ಲಿ ಸಮಾಜದ ಮನಸ್ಸಿನಲ್ಲಿ ಬೆಳೆದು ಬಂದವು. ಅವೆಲ್ಲವುಗಳೂ ಒಂದಿಲ್ಲೊಂದು ಬಗೆಯಲ್ಲಿ ಗ್ರಂಥ — ದಿನಚರಿ — ಜನಪದ ಸಾಹಿತ್ಯದಂತೆ, ಮಾಸ್ತಿಕಲ್ಲುಗಳಂತೆ ಕರ್ನಾಟಕದ ಸತಿಪದ್ಧತಿಯ ಇತಿಹಾಸಕ್ಕೆ ನೆರವಾಗುತ್ತವೆ–ಎಂಬುದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ.

— 0 —

**ಅಡಿಟಿಪ್ಪಣಿಗಳು:—**

1· ನೋಡಿ, ಸತಿ : ಆಕರ — ಸ್ಮಾರಕ— ಅವಶೇಷ ನಕ್ಷೆ·

2· ಪಂಪಭಾರತ 2 — 26, ವ, ಅಜಿತಪುರಾಣ, ಪು ·10, ಕವಿಚಕ್ರವರ್ತಿ, ಜನ್ನವಿರಚಿತ ಅನಂತನಾಥಪುರಾಣಂ · ಪು · 279— 281: ಕುಮಾರವ್ಯಾಸ ಮಹಾಕವಿಯ ಕರ್ನಾಟಕ ಭಾರತ ಕಥಾಮಂಜರಿ ಆದಿಪರ್ವ, ಪು : 14 — 15, ( ಮಾಗಧನ ಅರಸಿಯರು ಸಹಗಮನ ಮಾಡಿದ ವಿವರಣೆಯೂ ಇದೆ· ಸಭಾಪರ್ವ ·ಪು · 89) ರಾಮನಾಥ ಚರಿತೆ — 36 — 160, 162, 164, ಮತ್ತು 45 — 51, 52, 53, 60, ಶ್ರೀ ಸಿದ್ಧೇಶ್ವರ ಮಹಾಪುರಾಣ, 12 — 35, 36, ಸಿಂಗಿರಾಜ ಪುರಾಣ 39—40, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ XVI : 70—72, 75, 83, 85, 86, ಸಿರುಮಣನಾಯಕನ ಸಾಂಗತ್ಯ, ಪು 68 — ( ವೀರಣ್ಣನ ಪತ್ನಿಯರ ಸಮಾಧಿ ಮರಣ ), ಡಾ: ಕಲಬುರ್ಗಿ ಅವರು ವಿಶ್ವರಾಜನ ಪತ್ನಿಯರ ಅಗ್ನಿಪ್ರವೇಶ ಹೇಳುತ್ತಾರೆ— ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು, ಪು · 33, 1980, ಕುಮಾರ— ವಾಲ್ಮೀಕಿ ವಿರಚಿತ ತೊರವೆ ರಾಮಾಯಣ ಸಂ — 2·

3· ಪಂಪಭಾರತ, 10 — 45, ವ·

4· ನಾಗವರ್ಮ ವಿರಚಿತ ಕರ್ನಾಟಕ ಕಾದಂಬರಿ: ಪು, 266 — 269, 155

5· ನಯಸೇನ ವಿರಚಿತ ಧರ್ಮಾಮೃತಂ: ತ್ರಯೋದಶಾಶ್ವಾಸ, ಪು ·919·

6· ಅದೇ, ದಶಮಾಶ್ವಾಸ, ಪು· 723·

7· ಅದೇ, ದಶಮಾಶ್ವಾಸ, ಪು· 737, — 738

8· ಅದೇ, ಅಷ್ಟಮಾಶ್ವಾಸಂ· ಪು· 554

9· ಸಮಯಪರೀಕ್ಷೆ, ಪು· 392, 380·

10· ಕನಕದಾಸರ ಮೋಹನತರಂಗಿಣಿ ಸಂಗ್ರಹ ಪು· 26 — 27, ಪ· 65, 66·

11· ವಿಶ್ವಕವಿ ರತ್ನಾಕರನ ಭರತೇಶ ವೈಭವ ಪು· 505·

12· ಕೆಂಪುನಾರಾಯಣನ ಮುದ್ರಾಮಂಜೂಷ· ಪು·17·

13. ಬಸವಣ್ಣನವರ ವಚನಗಳು, 678, ಸಕಲಪುರಾತನರ ವಚನಗಳು 1761, ಶಿವಶರಣೆಯರ ಹೊಸ ವಚನಗಳು, ಪು. 153, ಅಖಂಡೇಶ್ವರ ವಚನ ( ಷಣ್ಮುಖಸ್ವಾಮಿ) ವ 138.

14. ಈರಿಗೋಳಿ — ಜನಪದ ಖಂಡಕಾವ್ಯಗಳು: (ಸಂ) ಜೀ. ಶಂ. ಪರಮಶಿವಯ್ಯ, ಪು.9, ನಾಗವ್ವ — ಅದೇ, ಪು.21, ಚಿಕ್ಕೋಳು ಹಿರಿದಿಮ್ಮವ್ವ — ಅದೇ ಪು. 66, ವಡ್ಡಗೆರೆ ನಾಗಮ್ಮ :(ಸಂ) ವೈಜಯಂತಿಮಾಲ, : ಬರಗೂರು ವೀರಮ್ಮ — ಹಾಡಿನಲ್ಲಿ ನಾಡಕತೆಗಳು: (ಸಂ ) ಕ.ರಾ.ಕೃಷ್ಣಸ್ವಾಮಿ, ಮಹಾಸತಿ ವೀರತಿಮ್ಮವ್ವ— ಕತ್ತಾಲದಾರಿ ದೂರ ( ಸಂ ) ಕೃಷ್ಣಮೂರ್ತಿ ಹನೂರ, ಪು.1, ಮಹಾಸತಿ ಕಾಟವ್ವ — ಅದೆ, ಪು.96, ಮಹಾಸತಿ ಸಂಗ್ಯಮ್ಮ — ಮಹಾಸತಿ ಆಚರಣೆ ಒಂದು ಅಧ್ಯಯನ ಪು.280, ಕೊಂಡದ ಮಾಸ್ತ್ಯಮ್ಮ — ಅದೇ, ಪು 293, ಮಾಸ್ತಮ್ಮ — ಅದೆ, ಪು. 315, ಚನ್ನಪಟ್ಟಣದ ಮಾಸ್ತಿಗೀತೆ — ಅದೇ .ಪು.333, ಅರಕೆರೆ ಮಾಸ್ತಿಗೀತೆ — ಅದೇ, ಪು. 343, ಮಾರಯಮ್ಮ ಮಾಸ್ತಿ — ಅದೇ ಪು. 347, ಮಾಸ್ತಿಹಾಡು — ಅಮಗನಹಳ್ಳಿ — ಅದೆ, ಪು. 356, ಕಲ್ಲಾಳ್ಳ ಮಾಸ್ತಿಪದ — ಅದೇ, ಪು.360: ತವರೆ ಹಂಗರಿದು ಬರತೇವಿ — ಅವರು ನೀಡಿದ ದೀಪ :(ಸಂ) ಕೆ.ವಿ.ಸುಬ್ಬಣ್ಣ ದೊಂಡಜಿ ವಾಥಜೀವನ ಜೋಕಾಲಿ:(ಸಂ) ಡಾ: ಎಂ.ಎಸ್. ಸುಂಕಾಪುರ. ಪು.88, ಕೆಂಪಮ್ಮ — ಹುಟ್ಟಿದಹಳ್ಳಿ, ಅರ್ಚಕ ಬಿ ರಂಗಸ್ವಾಮಿ ಪು.91, ಜಗುನೆಯ ಜಕ್ಕಣ್ಣ ಮಗುನೆಯ ಬ್ಯಾಟಿಕಾರ — ಲಾವಣಿಗಳು : (ಸಂ) ಕೆ. ಮರುಳಸಿದ್ದಪ್ಪ, ಪು.95, ಮಾಸ್ತಮ್ಮ — ಬಯಲು ಸೀಮೆಯ ಜನಪದ ಗೀತೆಗಳು:(ಸಂ) ತಿ.ಲಂಗಯ್ಯ ಪು.137, ಹೊನ್ನಮ್ಮ ಮಾಸ್ತಿ — ಗೊಂಡರ ಪದಗಳು: (ಸಂ) ಡಾ: ಎಲ್.ಆರ್. ಹೆಗಡೆ, ಪು.161, ಪತಿವರತಿದೇವಿ ಹೋಗಿ ಸೋದ್ಯಾಳ ಪೆಕುಂದಾ — ಜಾನಪದ ನರಗುಂದ:(ಸಂ) ಎ.ಎಸ್.ಹೂಗಾರ, ಪು.23,

15. ವಡ್ಡಗೆರೆ ನಾಗಮ್ಮ : (ಸಂ) ವೈಜಯಂತಿಮಾಲ ಪು.1.

16. ಜನಪದ ಖಂಡಕಾವ್ಯಗಳು: (ಸಂ) ಜೀ. ಶಂ. ಪರಮಶಿವಯ್ಯ ಪು.22.

17. ಜನಪದ ಖಂಡಕಾವ್ಯಗಳು:(ಸಂ) ಜೀ.ಶಂ. ಪರಮಶಿವಯ್ಯ ಪು.23, ವಡ್ಡಗೆರೆ ನಾಗಮ್ಮ:(ಸಂ) ವೈಜಯಂತಿಮಾಲ, ಪು.10, ಮಹಾಸತಿ ಆಚರಣೆ ಒಂದು ಅಧ್ಯಯನ ಡಾ: ಬಸವರಾಜ ಕಲ್ಗುಡಿ— ಮಹಾಸತಿ ಸಂಗ್ಯಮ್ಮ, ಪು.280.

18· ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ: ಬಸವರಾಜ ಕಲ್ಗುಡಿ, ಮಹಾಸತಿ ವೀರಬಿಮ್ಮವ್ವ, ಪು·227, ಕತ್ತಾಲ ದಾರಿ ದೂರ :(ಸಂ) ಕೃಷ್ಣಮೂರ್ತಿ ಹನೂರ — ಮಹಾಸತಿ ತಾಡಿನಾಗಮ್ಮ, ಪು·57·

19· ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ: ಬಸವರಾಜ ಕಲ್ಗುಡಿ — ಮಹಾಸತಿ ತಂಗ್ಯಮ್ಮ, ಪು·282,

20· ಜನಪದ ಖಂಡಕಾವ್ಯಗಳು: (ಸಂ) ಜೀ·ಶಂ·ಪರಮಶಿವಯ್ಯ ಈರಬೋಚಿ·ಪು·18

21· ಕತ್ತಾಲದಾರಿ ದೂರತಿ (ಸಂ) ಕೃಷ್ಣಮೂರ್ತಿ ಹನೂರು, ಮಹಾಸತಿ ಕಾಟವ್ವ ಪು·113·

22· ಹುಟ್ಟದಹಳ್ಳಿ: ಅರ್ಚಕ ಬಿ·ರಂಗಸ್ವಾಮಿ, ಕೆಂಪಮ್ಮ ಪು·93·

23· ಜೀವನ ಜೋಕಾಲಿ — ಭಾಗ 3: (ಸಂ) ಡಾ: ಎಂ·ಎಸ್·ಸುಂಕಾಪುರ· ಚೆನ್ನಮ್ಮನ ದಂಡಿ ಪು·1—69, ಲಾವಣಿಗಳು:(ಸಂ) ಕೆ·ಮರುಳಸಿದ್ದಪ್ಪ, ಲಾಳಸಂಗೀಮಾಮ್ಯಾರ ಪು·75

24· ಜೀವನ ಜೋಕಾಲಿ,— ಭಾಗ 3·(ಸಂ) ಡಾ: ಎಂ·ಎಸ್·ಸುಂಕಾಪುರ, ಚೆನ್ನಮ್ಮನ ದಂಡಿ, ಪು·46

25· ಲಾವಣಿಗಳು: (ಸಂ) ಕೆ· ಮರುಳಸಿದ್ದಪ್ಪ, ಲಾಳಸಂಗೀಮಾಮ್ಯಾರ, ಪು·75

26· ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, 333, 343,347,360, ಬಯಲು ಸೀಮೆಯ ಜನಪದ ಗೀತೆಗಳು:(ಸಂ) ಡಿ·ಲಿಂಗಯ್ಯ ಮಾಸ್ತಮ್ಮ ಪು· 137·

27· ಆಯ್ದ ಜನಪದ ಕಥೆಗಳು: (ಸಂ) ಜೀ· ಶಂ·ಪರಮಶಿವಯ್ಯ ಪು·158 163, 107· ಜನಪದ ಕಥಾಸಂಗಮ: (ಸಂ) ಡಿ· ಲಿಂಗಯ್ಯ ಪು·86, ನಮ್ಮ ಜನಪದ ಕತೆಗಳು: (ಸಂ) ಡಾ: ಎಲ್·ಆರ್·ಹೆಗಡೆ·ಪು·222, ಕರ್ನಾಟಕ ಜನಪದ ಕತೆಗಳು: (ಸಂ) ರಾಗೌ·ಪು·90· ಮಹಾಸತಿ ಆಚರಣೆ — ಒಂದು ಅಧ್ಯಯನ: ಡಾ: ಬಸವರಾಜ ಕಲ್ಗುಡಿ, 152, 153, 156, 160, 168, 178 : ಗ್ರಾಮೀಣ : ಡಾ: ಎಂ ಚಿದಾನಂದಮೂರ್ತಿ, ಪುರಾಣ, ಸಂಕೇತಗಳಲ್ಲಿ ಇತಿಹಾಸ ಸುರಕ್ಷಿತ: ಎರಡು ಮಾಸ್ತಿ ಗುಡಿಗಳ ಪ್ರತ್ಯಕ್ಷ ಅಧ್ಯಯನ ಹೊಸಹ್ಳವರದ ಅನಿಲಗೋಡಹಳ್ಳಿಯ ಶ್ರೀಕುಮಾರ

ರಾಮನ ಮಾಸ್ತಿಯರು : ನಿವೇದಕರು: ತಿಪ್ಪಯ್ಯ ದೇವಪ್ಪ ಬಾಗಿಲವೈದ್ಯ

ಹೊನ್ನಾವರದ ಚಂದಾವರದ ಮಾಸ್ತಿ : ನಿವೇದಕರು: ರಾಮ ಸತ್ಯೆಯ್ಯ ಗುಣಗಾ (ಪೂಜಾರಿ)

28· ಪು·ಕಂ·ಇಂ — ಸಂ — 2,(ಸಂ) ಎಚ್·ಎಲ್·ನಾಗೇಗೌಡ· ಪು·436–37·

29· ಅದೇ ಪು·460

30 ಅದೇ, ಸಂಪುಟ — 4 ಪು·77·

31· ಅದೇ ಪು·116·

32 ಅದೇ ಪು·154·

33· ಅದೇ ( ಪಿಂಟೊತ್ರಾ ದೆಲ್ಲಾವಲ್ಲೆ) ಪು· 241–249·

34 ಅದೇ, ಸಂ — 5, ಪು· 222 — 223·

35 ಪ್ರ·ಕಂ·ಇಂ — ಸಂ·2 (ನಿಕೋಲೊ ದ ಕೊಂತಿ ) ಪು· 75 — 76 ,122, 125 126, 137, 138,(ದು ಆರ್ತೆ ಬಾಬೋರ್ಸಾ) ಪು· 296,297,298,(ಪೆರ್ನಾಂವ್ ನೂನಿಜ್) ಪು·415, ( ಸೀಜರ್ ಫ್ರೆಡರಿಕ್) ಪು· 460 — 463, ಅದೇ ಸಂ — 3,(ರಾಲ್ಫಫಿಚ್) 105,109–110, ಅದೇ — ಸಂ —4· (ಮಾನುಯೆಲ್ ಬರ್ರಾಡಾಸ್) ಪು· 159, (ಪಿಂಟೊತ್ರಾದೆಲ್ಲಾವಲ್ಲೆ) 241–249,ಮಹಾಸತಿ ಆಚರಣೆ — ಒಂದು ಅಧ್ಯಯನ — ಡಾ: ಬಸವರಾಜ ಕಲ್ಗುಡಿ ( ಅಬ್ಬೆ ಜೆ·ಎ·ಡುಬಾಯ್ಸ್) ಪು· 135,

36· ಪ್ರ·ಕಂ·ಇಂ· ಸಂ — 5, ಪು·218

37· ಗುತ್ತಲು ತಾ–ಮಂಡ್ಯ ( ನಿವೇದಕರು: ಪೂಜಾರಿ ( ತಮ್ಮಡಪ್ಪ) ) : ಶ್ರೀರಂಗಪಟ್ಟಣ, (ನಿವೇದಕರು: ವೀರಮಾಸ್ತಯ್ಯನವರು) ಮಾಚನಹಳ್ಳಿ — ( ಮಹಾಸತಿ ಆಚರಣೆ ಒಂದು ಅಧ್ಯಯನ ಡಾ: ಬಸವರಾಜ ಕಲ್ಗುಡಿ, ಪು·160, ದೇವರ ಹಿಪ್ಪರಗಿ — ( ಅದೇ ಪು 173) ಕೋಳಗಲೂರು — ತಾಲೂಕ: ಚನ್ನಗಿರಿ ( ನಿವೇದರು : ಮಾಸ್ತಿಕಲ್ಲು ಇರುವ ಮನೆಯ ಯಜಮಾನಿ) : ಮತ್ತಿ — ( ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ್ ಕಲ್ಗುಡಿ·ಪು·186, ಲಕ್ಕುಂಡಿ–(ಅದೇ ಪು·190),ಅಂಕೋಲಾ — ನೀಲಂಕಟ್ಟಾ (ನಿವೇದಕರು : ಶ್ರೀ ಜೆ·ವಿ· ಬಿಗಳ ಅವರು ಹಾಗೂ ಅವರ ಪತ್ನಿ )

38. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, ಪು.190

39. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, (ಕೊಲ್ಲೂರು) —ಪು.162, ( ಹೂದಿಗೆರೆ ) — ಪು.187, (ಹಿರೇಸಿಂಧೋಗಿ ) — ಪು.189, ಕಾನಮಡಗು, — ಕೂಡ್ಲಿಗಿ ತಾ.(ನಿವೇದಕರು: ಪೂಜಾರಿ ಶರಣಯ್ಯ) ಬಿಳತೂರು— ಹೆಗ್ಗಡದೇವನಕೋಟೆ, ತಾ:(ನಿವೇದಕರು : ಆರ ರಾಮಾನುಜಯ್ಯಂಗಾರ)

40. ಬಿನಕಲಮ್ಮ ಎಂಬ ಊರಿನ ಸ್ಥಾನವನ್ನು ಬಿಳತೂರಿನ ಊರ ಹೊರಗೆ ಹೊಲವೊಂದರಲ್ಲಿ ದೇಕಬ್ಬೆ ಶಾಸನ ಇರುವಲ್ಲಿ ತೋರಿಸುತ್ತಾರೆ. ಅಲ್ಲಿ ದೇಕಬ್ಬೆ ಸಹಗಮನ ಮಾಡಿದ ಸ್ಥಳವನ್ನು ತೋರಿಸುತ್ತಾರೆ. ಆ ಸ್ಥಳದಲ್ಲಿ ಒಂದು ಗುಂಡುಕಲ್ಲು ಇದ್ದು, ಅದನ್ನು "ಕುಂಬಾತಿಕಲ್ಲು" ಎಂದು ಕರೆಯುತ್ತಾರೆ. ಮಲ್ಲಿಕಾರ್ಜುನನು ದಂಡೆತ್ತಿ ಬಂದ ದಾರಿಯನ್ನು ತೋರಿಸಿ ಇದು "ದಂಡಿನದಾರಿ" ಎಂದು ಇಂದಿಗೂ ಕರೆಯಲ್ಪಡುವುದನ್ನು ಸೂಚಿಸುತ್ತಾರೆ.

ಬಹುಶಃ :ದೇಕಬ್ಬೆ ಶಾಸನದ ಸುತ್ತ ಹಬ್ಬಿಕೊಂಡ ವದಂತಿ ದೇಕಬ್ಬಳ (ಬಿನಕಲಮ್ಮ?) ಸಹಗಮನವನ್ನು ಸೂಚಿಸುವುದಾಗಿರಬೇಕು. ಬಿಳತೂರಿನಲ್ಲಿ ಈ ಎರಡೂ ಸತಿ ಘಟನೆಗಳನ್ನು ಜನತೆ ಹೇಳುತ್ತ ಇದ್ದಿರಬೇಕು. ಬರುಬರುತ್ತ ಇವೆರಡೂ ಒಂದರೊಳಗೊಂದು ಸೇರಿಕೊಂಡು, ಒಂದೇ ವ್ಯಕ್ತಿಯಾಗಿ ಇಂದಿನ ರೂಪದಲ್ಲಿ ಉಳಿದುಕೊಂಡಿರಬೇಕು. ದೇ.ಶಾ.ಸಮೀಪ "ಬಿನಕಲಮ್ಮ"ನ ಗುಡಿ ಇತ್ತೆಂದೂ ಜನರು ಹೇಳುವುದನ್ನು ಮತ್ತು ಇಲ್ಲಿ ವರ್ಷಕ್ಕೊಮ್ಮೆ ಬಿನಕಲಮ್ಮನ ಉತ್ಸವ ನಡೆಯುವುದನ್ನು ಗಮನಿಸಬಹುದಾಗಿದೆ.

41 ಭಟ್ಕಳ — ನಮ್ಮ ಜನಪದ ಕತೆಗಳು: (ಸಂ) ಡಾ: ಎಲ್.ಆರ್. ಹೆಗಡೆ, ಪು.209—212, ಅರಕೇರಿ — ನಿವೇದಕರು: ದಾಸಯ್ಯನ ಮಗ ಮರಿಯಪ್ಪ: ಹೊಸಕುಳಿ — ನಿವೇದಕರು : ಗೋಪಿನಾಯ್ಕ: ಹೊನ್ನಾವರ — ಮುಂಕಟ್ಟಿವಾಸಿ, ಅನಿಲಗೋಡಹಳ್ಳಿ — ನಿವೇದಕರು : ತಿಪ್ಪಯ್ಯ, ದೇವಪ್ಪ ಬಾಗಿಲವೈದ್ಯ, ಶಿರಾಲಿ— ನಿವೇದಕರು: ಶಂಕರ ಸುಬ್ರಾಯಭಟ್ಟ, ಅರ್ಚಕ.

42· ನಾಗವರ್ಮ ವಿರಚಿತ ಕರ್ನಾಟಕ ಕಾದಂಬರಿ, 'ಚಂದ್ರಾಪೀಡನ ಪ್ರಾಣವಿಂತೋಲಗ' ಪು· 274·

43 ನಯಸೇನನ ಧರ್ಮಾಮೃತ· 8 — 31

44· ಯರಬಳ್ಳಿ — ಚಳ್ಳಕೆರೆ ತಾ, ಚಿತ್ರದುರ್ಗ ಜಿ, ಹೆಮ್ಮನಹಳ್ಳಿ, ಮದ್ದೂರ — ತಾ, ಮಂಡ್ಯ, ಜಿ: ಶೆಟ್ಟಿಹಳ್ಳಿ — ಗುಂಡ್ಲುಪೇಟೆ ತಾ, ಮೈಸೂರು ಜಿ, ಹಾಲ್ಕೂರು, ತುಮಕೂರು ಜಿ, ಕೊಂಡದಹಳ್ಳಿ, ಚನ್ನಗಿರಿತಾ, ಶಿವಮೊಗ್ಗ ಜಿ·

45· ಈ ಎಲ್ಲ ವಿವರಗಳನ್ನು ನೀಡಿದವರು: ಶ್ರೀ ಈರಜ್ಜ ಮತ್ತು ಶ್ರೀ ದೊಡ್ಡ ಮಲ್ಲಪ್ಪನವರು — ಗೊಲ್ಲರಹಟ್ಟಿ·

46· ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ ಪು·150, ಇದೇ ಮಾಸ್ತಿ ಕುರಿತಾಗಿ ಕತೆಯೊಂದು ಸ್ವಲ್ಪ ಭಿನ್ನ ರೀತಿಯಲ್ಲಿ ಪ್ರಚಲಿತ ದಲ್ಲಿದೆ· ವಿವರಗಳಿಗಾಗಿ ಇದೇ ಗ್ರಂಥವನ್ನು ನೋಡಿ ಪು· 150, 151·

47· ಪ್ರ·ಕಂ·ಇಂ — ಸಂ— 1 : ಎಚ್·ಎಲ್· ನಾಗೇಗೌಡ· ಪು· 30·

48 ಸಂಗಮರಾಜಕೀಯ — ಸಾಮಾಜಿಕ ವ್ಯವಸ್ಥೆ : ಮೂಲ: ಎನ್ ಸುಬ್ರಮಣಿಯನ್ ಅನು: ನಿರಂಜನ, ಪು· 387

49· ಅದೇ, ಪು·364·

50· ಇ·ಸಿ· VIII 523, ಕವಡಿಗ್ರಾಮ, ಸೊರಬ, ಕ್ರಿ· ಶ·ಸು·6ನೇ ಶತಮಾನ

51· ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ: ಡಾ: ಚೆನ್ನಕ್ಕ ಎಲಿಗಾರ, ಪು·454·

52 ಬೆಳತೂರಿನ ಆರ್· ರಾಮಾನುಜಯ್ಯಂಗಾರ್ ಅವರ ಹೊಲದಲ್ಲಿ ಈ ಕಲ್ಲು ಇದ್ದು, ಲಿಪಿ ಮೇಲಾಗಿ, ಚಿತ್ರ ಕೆಳಗಾಗಿ ನೆಲದ ಮೇಲೆ ಸ್ವಲ್ಪ ಅಂತರದಲ್ಲಿ ಮಲಗಿಸಿದಂತೆ ಇದನ್ನು ಹಾಕಲಾಗಿದೆ·

53 ಇ·ಸಿ· IX 12, ಎಚಲವಾಡಿ, ಕಾನಕಾನಹಳ್ಳಿ, ಕ್ರಿ·ಶ·1118·
ಇಸಿ VIII—II, 51 ಕಾನಲೆ, ಸಾಗರ, ಕ್ರಿ·ಶ· 1431· ಅದೇ 16, ಆರಗ ತೀರ್ಥಹಳ್ಳಿ, ಕ್ರಿ·ಶ·1377·

54· ಇ ಸಿ IX 12 ಎಚಲವಾಡಿ, ಕಾನಕಾನಹಳ್ಳಿ, ಕ್ರಿ· ಶ 1118

55 ಇ ಸಿ III 173 ಎರೆಯೂರು, ಗುಂಡ್ಲುಪೇಟೆ ಕ್ರಿ·ಶ·1429

56· ಇ ಸಿ · VIII – II, 29 ಹರಿತಾಳು ನಗರ, ಕ್ರಿ ·ಶ · 1228

57· ಇ ಸಿ · V – II, 21, ಉಂಡಿಗನಾಳುಗ್ರಾಮ, ಅರಸಿಕೆರೆ ·

58· ಇ ಸಿ VIII – II 35, ಕೆಳದಿ, ಸಾಗರ, ಕ್ರಿ ಶ · 1419 ·

59· ಅದೇ 29 ಹರಿತಾಳು ನಗರ, ಕ್ರಿ ·ಶ 1228

60· ಇ ಸಿ III, 60, ಬೆಳತೂರು ಹೆಗ್ಗಡೆದೇವನಕೋಟೆ ಕ್ರಿ ·ಶ · 1057

61 ಇ ಸಿ VII 141, ಬಳ್ಳಿಗಾವೆ, ಶಿಕಾರಿಪುರ, ಕ್ರಿ · ಶ · 1286 ·

62· ಇ ಸಿ III 210 ಕುಣಗನಹಳ್ಳಿ, ಗುಂಡ್ಲುಪೇಟೆ, ಕ್ರಿ ·ಶ · 1439

63· ಇ ಸಿ VIII – II, 163 ಹರೂರ, ಸೊರಬ, ಕ್ರಿ · ಶ · 1442 ·

64 ಅದೇ 169, ಹರೂರ, ಸೊರಬ ·

65· ಬೇಣಗಾ ( ಕಾರವಾರ ) ಅರಗಾ ( ಕಾರವಾರ ) ಚಂದಾವರ ( ಹೊನ್ನಾವರ;
ಕರ್ಕಿ ( ಹೊನ್ನಾವರ ) ಭಾಸ್ಕೇರಿ ( ಹೊನ್ನಾವರ ) ಕವಲಕ್ಕಿ ( ಹೊನ್ನಾವರ)
ಸಾಲಕೋಡ ( ಹೊನ್ನಾವರ ) ಹೊನ್ನಾವರ, ಅನಿಲಗೋಡಹಳ್ಳಿ (ಹೊನ್ನಾವರ)
ತುದ್ದಳ್ಳಿ (ಮುರ್ಡೇಶ್ವರ –(ಬಟ್ಕಳ) ಶಿರಾಲಿ ( ಭಟ್ಕಳ ) ಭಟ್ಕಳ, ಅಂಕೋಲಾ,
ಮಾಸ್ತಿಕಟ್ಟೆ ( ಹೊಸನಗರ ) ಹುಲ್ಲುಕಲ್ಲು ( ಹೊಸನಗರ ) ಂರುರಬಳ್ಳಿ
(ಚಳ್ಳಕೆರೆ ) ಮೈಸೂರು, ಶ್ರೀರಂಗಪಟ್ಟಣ, ಅರಕೇರಿ ( ಶ್ರೀರಂಗಪಟ್ಟಣ)
ಶೆಟ್ಟಿಹಳ್ಳಿ ( ಗುಂಡ್ಲುಪೇಟೆ ) ಗುತ್ತಲ ( ಮಂಡ್ಯ ) ಚಿತ್ರಟ್ಟಿಹಳ್ಳಿ (ಸೊರಬ)
ಮಲ್ಲಂದೂರು ( ಸಾಗರ) ಅಗಸನಹಳ್ಳಿ ( ಬ್ಯಾಡಗಿ) ಮಾಸಣಗಿ ( ಬ್ಯಾಡಗಿ)
ಲಕಮಾಜಿಕೊಪ್ಪ ( ಅಂದಾನಿಕೊಪ್ಪ ) (ಬ್ಯಾಡಗಿ ) ಉಪ್ಪಿನಗೋಳಿಗ್ರಾಮ
(ಹೊನ್ನಾವರ) ಆನೆಗುಂದ ( ಕುಮುಟಾ) ಕುಮುಟಾ ಸಾಗಡಿಬೇಣ ( ಕುಮುಟಾ )
ದೇವಿಮನೆ ( ಶಿರ್ಸಿ ) ಉಳಗ ( ಕಾರವಾರ ) ಮಾಸ್ತಿಕಟ್ಟಾ ( ಅಂಕೋಲಾ )
ಕಬ್ಬರಗಿ ( ಕುಷ್ಟಗಿ ) ಚನ್ನಪಟ್ಟಣ ಮಾಚನಹಳ್ಳಿ ( ಮದ್ದೂರ ) ಜಲಧಿಗೆರೆ (
( ಕುಣಿಗಲ್) ಹಳೂಳ್ಳರು ( ಬಾಗಲಕೋಟೆ ) ಮಾಸಡಿ ( ಹೊನ್ನಾಳಿ )
ಕತ್ತಿಗೆ ( ಹೊನ್ನಾಳಿ) ಕಮ್ಮಾರಗಟ್ಟೆ ( ಹೊನ್ನಾಳಿ ) ಕೊಂಡದಹಳ್ಳಿ (ಚನ್ನಗಿರಿ)
ಚಿಕ್ಕಹುಡೇವು ( ಚನ್ನಗಿರಿ ) ಹೊದಿಗೆರೆ ( ಚನ್ನಗಿರಿ ) ಹಿರೇಸಿಂಧೋಗಿ (ಕೊಪ್ಪಳ)

ಹವಳಧಾರ ( ಜಳ್ಳಕೆರೆ ) ವಡ್ಡಗೆರೆ ( ಕೊರಟಗೆರೆ ) ಕಾಟವಾಳ ( ಹೆಗ್ಗಡದೇವನಕೋಟೆ ) ಹೊನವಾಡ ( ವಿಜಾಪುರ ) (ಚಿತ್ರ 8 ,9 ,10 , 11 , 12 , 13 , 14 , 15 , 16, 17, 18 , 19 , 20, 21, 22 , 23, 24, 25, 24, 27, 28 , 29 , 30, 31, 32,)

66. ಚಂದಾವರನಲ್ಲಿ ಮೂರು ಶಿರಾಲಿಯಲ್ಲಿ ನಾಲ್ಕು ಹುಲ್ಲುಕಲ್ಲು — ಯರಬಳ್ಳಿ — ಗುತ್ತಲು — ಈ ಊರುಗಳಲ್ಲಿ ಎರಡೆರಡು ಮಾಸ್ತಿಗುಡಿಗಳಿವೆ.

67. ಗ್ರಾಮೀಣ : ಡಾ: ಎಂ. ಚಿದಾನಂದಮೂರ್ತಿ, "ಪುರಾಣ ಸಂಕೇತಗಳಲ್ಲಿ ಇತಿಹಾಸ ಸುರಕ್ಷಿತ : ಎರಡು ಮಾಸ್ತಿಗುಡಿಗಳ ಪ್ರತ್ಯಕ್ಷ ಅಧ್ಯಯನ" ಪು. 116.

68. ಮಾಸ್ತಿ, ಮಾಸ್ತಿಹಳ್ಳಿ, ಮಾಸ್ತಿಹಾಳ್, ಮಾಸ್ತಿಹೊಳೆ ಮಾಸ್ತಮನಹಳ್ಳಿ ಮಾಸಡಿ ಇತ್ಯಾದಿಗಳು ಆ ಊರುಗಳಲ್ಲಿ ನಡೆದ ಸಹಗಮನವನ್ನು ಸೂಚಿಸುತ್ತವೆ — ವಾಗರ್ಥ: ಡಾ: ಎಂ. ಚಿದಾನಂದಮೂರ್ತಿ 'ಕರ್ನಾಟಕದ ಸ್ಥಳನಾಮಗಳು' ಪು. 34.

69. 'ಮಾಸ್ತಿಕಟ್ಟಾ' ಎಂದು ಕರೆಯುವಷ್ಟರಲ್ಲಿ ಮಾಸ್ತಿಕೊಟ್ಟಿಗೆಯು ಚಿಕ್ಕ ಕಟ್ಟೆಯನ್ನು ಕಂಡು ಗುಡಿಯಾಗಿ ಮಾರ್ಪಟನ್ನು ಪಡೆಯುವಂತಾಗಿತ್ತು. ಈಗಲಾದರೂ ಹುಲ್ಲುಕಲ್ಲಿನ ಹಿರಿಯರು ಈ ಊರನ್ನು 'ಮಾಸ್ತಿಮೂಟಗಿ' ಎಂದೇ ಕರೆಯುತ್ತಾರೆ.

70. ಈಗಿರುವ ಈ ಮಾಸ್ತಿಕಟ್ಟಾ ಊರಿನಿಂದ ಸು. 4 ಫರ್ಲಾಂಗ್ ದೂರ ಕಾಡಿನಲ್ಲಿ ಮಾಸ್ತಿಕಟ್ಟೆಯೊಂದಿದೆ. ಅಲ್ಲಿಯಿಂದಲೇ ಮಾಸ್ತಿಯಮೂರ್ತಿಯನ್ನು ( ಈಗ ಗುಡಿ ಹಿಂದೆ ಇರುವ ಮಾಸ್ತಿಕಲ್ಲು) ಇಲ್ಲಿಗೆ ತಂದು ಸ್ಥಾಪಿಸಲಾಯಿತೆಂದು ಹೇಳಲಾಗುತ್ತಿದೆ.

71. ಈ ಎಲ್ಲಾ ವಿವರಗಳನ್ನು ನೀಡಿದವರು, ಗುಡಿಯಲ್ಲಿ ಈಗಿರುವ ಕೆರಳಸ್ವಾಮಿಗಳು.

72. ಹೆಚ್ಚಿನ ವಿವರಗಳಿಗಾಗಿ ನೋಡಿ : ಗ್ರಾಮೀಣ : ಡಾ: ಎಂ. ಚಿದಾನಂದಮೂರ್ತಿ 'ಪುರಾಣ, ಸಂಕೇತಗಳಲ್ಲಿ ಇತಿಹಾಸ ಸುರಕ್ಷಿತ : ಎರಡು ಮಾಸ್ತಿಗುಡಿಗಳ ಪ್ರತ್ಯಕ್ಷ ಅಧ್ಯಯನ' ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, ಪು. 180.

73. ತುಮಕೂರು ಜಿಲ್ಲೆ, ಕೈದಾಳುಗ್ರಾಮ, ಕಾರವಾರದ ಅಂಕೋಲಾ ಮೈಸೂರಿನ ಶ್ರೀರಂಗಪಟ್ಟಣ, ತುಮಕೂರದ ಮಾಚನಹಳ್ಳಿ, ಧಾರವಾಡದ ಅಗಸನಹಳ್ಳಿ, ಬೆಳಗಾಂವದ ಕುಂಚನೂರು, ( ಕುಂಚನೂರು ಮಾಸ್ತಿ ಕುರಿತಾಗಿ ನೋಡಿ: ಮಾತನಾಡುವ ಕಲ್ಲು: ಆನಂದಕಂದ 'ಕಂಕಣದ ಕೈ' ಪು. 44)

74. ಭಟ್ಕಳದ ಕೆರೆಕ್ಕಿಕಟ್ಟೆ, ಶ್ರೀರಂಗಪಟ್ಟಣದ ಅರಕೆರೆ ಕೂಡ್ಲಿಗಿಯ ಕಾನಮಡಗು, ಮಂಡ್ಯದ ಹೆಮ್ಮನಹಳ್ಳಿ — ಕಲ್ಲೂರು, ಕಾರವಾರದ ಮಾಜಾಳಿ — ಉಳಗ.

75 ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ: ಎಂ ಚಿದಾನಂದಮೂರ್ತಿ ಪು.43.

76. ಈ ವಿವರಗಳನ್ನೆಲ್ಲ ನೀಡಿದವರು ಐಗಳ ಮನೆತನಕ್ಕೆ ಇಂದು ಮುಖಂಡರಾಗಿರುವ ಶ್ರೀ ಜಿ.ವಿ. ಐಗಳ ಹಾಗೂ ಅವರ ಪತ್ನಿಯವರು.

77. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ. ಪು. 165.

78. ಈ ವಿವರಗಳನ್ನು ಒದಗಿಸಿದವರು ಬ್ಯಾಡಗಿ ತಾಲ್ಲೂಕಿನ ಅಗಸನಹಳ್ಳಿಯ ಮಲ್ಲನಗೌಡರು, ಇವರು ಮಾಸ್ತಿಗುಡಿಯ ಪೂಜಾರಿಯಾಗಿಯೂ, ಊರಿನ ಗೌಡರಾಗಿಯೂ ಇರುವ ಪ್ರಮುಖರು.

79. ಪ್ರ.ಕಂ.ಇಂ. ಸಂ.4: (ಸಂ) ಎಚ್ ಎಲ್.ನಾಗೇಗೌಡ.ಪು. 159

80. ಅದೇ ಸಂ — 2. ಪು. 296.

81. ಕತ್ತಾಲಿ ದಾರಿ ದೂರ : (ಸಂ) ಕೃಷ್ಣಮೂರ್ತಿಹನೂರ, (ಮಹಾಸತಿ ತಾಡಿನಾಗಮ್ಮ. ಪು. 89.

82. ಅದೆ. ಪು 113 39,

83. ಕುಮಾರವಾಲ್ಮೀಕಿ ವಿರಚಿತ ತೊರವೆ ರಾಮಾಯಣ — ಸಂ.2 ಪು. 658

84. ಕನಕದಾಸರ ಮೋಹನತರಂಗಿಣಿ ಸಂಗ್ರಹ ಪು. 26.

85. ಕತ್ತಾಲದಾರಿ ದೂರ: ಡಾ: ಕೃಷ್ಣಮೂರ್ತಿಹನೂರ, ಮಹಾಸತಿ ವೀರತಿಮ್ಮವ್ವ ಪು.1.

86. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, ಪು.187

87. ಕುಮಾರವಾಲ್ಮೀಕಿ ವಿರಚಿತ ತೊರವೆ ರಾಮಾಯಣ ಸಂ.2 ಪು. 658.
ಕತ್ತಾಲ ದಾರಿ ದೂರ : (ಸಂ) ಕೃಷ್ಣಮೂರ್ತಿ ಹನೂರ, 82.

88. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ ಚಿತ್ರ — 49.

89. ಗ್ರಾಮೀಣ ಡಾ: ಎಂ.ಚಿದಾನಂದಮೂರ್ತಿ, 'ಪುರಾಣ, ಸಂಕೇತಗಳಲ್ಲಿ ಇತಿಹಾಸ ಸುರಕ್ಷಿತ : ಎರಡು ಮಾಸ್ತಿಗುಡಿಗಳ ಪ್ರತ್ಯಕ್ಷ ಅಧ್ಯಯನ' ಪು.119

90. ಕತ್ತಾಲ ದಾರಿ ದೂರ : (ಸಂ) ಡಾ: ಕೃಷ್ಣಮೂರ್ತಿ ಹನೂರ ಪು.96

91 ಜನಪದ ಸಾಹಿತ್ಯದಲ್ಲಿ ಕೊಂಡವನ್ನು ಹೊಂಡ, ವಡ ಎಂದೂ ಬಳಸಲಾಗಿದೆ. 'ವಡಾಕ ಕಲ್ಲ ಹಡಿಸಣ್ಣ: ಮರದಡಲಿ ಹೊಂಡಾವ ನೀನು ತಗುಸಣ್ಣ' ಕತ್ತಾಲ ದಾರಿ ದೂರ : (ಸಂ) ಕೃಷ್ಣಮೂರ್ತಿ ಹನೂರ, ಪು.82.

92. ಅದೇ, 'ಮಹಾಸತಿ ತಾಡಿನಾಗಮ್ಮ' ಪು. 94

93. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, ಪು. 151.

94. ಬ್ಯಾಡಗಿ ತಾಲೂಕಿನ ಅಗಸನಹಳ್ಳಿ, ಕಾರವಾರ ತಾಲೂಕಿನ ಅರಗಾ, ಹೊನ್ನಾವರ ತಾಲೂಕಿನ ಹೊಸಕುಳಿ ಮೊದಲಾದ ಊರುಗಳಲ್ಲಿ ಮಾಸ್ತಿಕೊಂಡ ಹಾಯುವುದು ಇದೆ.

95. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ ಪು.151.

96. ಗ್ರಾಮೀಣ : ಡಾ: ಎಂ.ಚಿದಾನಂದಮೂರ್ತಿ. ಪು.129

97. ಬಯಲು ಸೀಮೆಯ ಲಾವಣಿಗಳು (ಸಂ) ಕಾಳೇಗೌಡ ನಾಗವಾರ, 'ಮಡ್ಡಗೆರೆ ನಾಗಮ್ಮ' ಪು.88.

98. ವಾಗರ್ಥ : ಡಾ: ಎಂ. ಚಿದಾನಂದಮೂರ್ತಿ. ಪು.56

99. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ : ಡಾ: ಚೆನ್ನಕ್ಕ ಎಲಿಗಾರ. ಪು.448.

100. ಗ್ರಾಮೀಣ : ಡಾ: ಎಂ.ಚಿದಾನಂದಮೂರ್ತಿ. ಪು.129

101. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ : ಡಾ: ಚೆನ್ನಕ್ಕ ಎಲಿಗಾರ ಪು.448 ಅಂಕೋಲೆಯ ಶ್ರೀ ಜಿ.ವಿ.ಐಗಳ ಹಾಗೂ ಅವರ ಪತ್ನಿಯವರು ಈ ವಿಷಯವನ್ನು ತಿಳಿಸಿದರು. ಐಗಳರ ಮಗಳು 'ಕಾಂಚನಾ' ಗೆ ಮೊದಲು ಸರಿಯಾಗಿ ಬೆಳದಿರಲಿಲ್ಲವೆಂದೂ,

ಬೇಕಾದಷ್ಟು ಔಷಧ — ಉಪಚಾರವನ್ನು ಮಾಡಿದರೂ ಗುಣವಾಗಲಿಲ್ಲವೆಂದೂ, ಕೊನೆಗೆ ಭಟ್ಟರೊಬ್ಬರ ಸಲಹೆಯ ಮೇರೆಗೆ, ಮನೆದೇವತೆ — ನೀಲಮ್ಮನ ಹೆಸರನ್ನು ಇಡಲಾಯಿತೆಂದೂ ಆದರೂ ಅವಳು 12 ವರ್ಷಕ್ಕೆ ತೀರಿಕೊಂಡಳೆಂದೂ ಹೆಚ್ಚಿನ ವಿವರಣೆಯನ್ನು ಅವರು ನೀಡಿದರು.

102. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ: ಎಂ.ಚಿದಾನಂದಮೂರ್ತಿ ಪು.41.

103. ಪ್ರ.ಕಂ.ಇಂ.ಸಂ–2 (ಸಂ) ಎಚ್.ಎಲ್.ನಾಗೇಗೌಡ, ಪು. 296, ಭಾರತಕ್ಕೆ ಸಂದರ್ಶನ — ಕೊಟ್ಟ 'ಮಂಡೆಲ್ ಸ್ಲೋ' ಎಂಬ ಪ್ರವಾಸಿ ಹೀಗೆ ಬರೆಯುತ್ತಾನೆ: ಸತಿಯು 'ಬಗ್ಗೆ ನಾನು ಕನಿಕರಪಡುತ್ತಿದ್ದುದನ್ನು ಆಕೆ ಅರಿತಳೋ ಏನೋ, ಆಕೆ ತನ್ನ ಬಳೆಯೊಂದನ್ನು ತಗೆದು ಕೈಯಲ್ಲಿ ಹಿಡಿದುಕೊಂಡಿ, ಈ ಅಪೂರ್ವ ಪ್ರಸಂಗದ ಜ್ಞಾಪಕಾರ್ಥವಾಗಿ ಆ ಬಳೆಯನ್ನು ಈಗಲೂ ನನ್ನ ಬಳಿ ಇಟ್ಟುಕೊಂಡಿದ್ದೇನೆ. ಅದೇ— ಸಂ — 4. ಪು.447

104. ಸಕಲ ಪುರಾತನರ ವಚನಗಳು, 1761.

105. ಮಹಾಸತಿ ಆಚರಣೆ — ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ ಆ 'ಮಾಸ್ತಮ್ಮ' ಪು.331, ಮಾತನಾಡುವ ಕಲ್ಲು: ಆನಂದಕಂದ ಕಂಕಣದ ಕೈ' ಪು.60'

106. ಗ್ರಾಮೀಣ : ಡಾ: ಎಂ.ಚಿದಾನಂದಮೂರ್ತಿ, ಪು. 120

Chapter - 4

## ಅಧ್ಯಾಯ = 4

### ಸತಿಪದ್ಧತಿಯ — ಕಾರಣಗಳು.

ಜಗತ್ತಿನ ಇತಿಹಾಸದಲ್ಲಿ ಸತಿಪದ್ಧತಿ ನಡೆದುಬಂದ ಸಂಗತಿ ಅತ್ಯಂತ ಕುತೂಹಲಕರವೆನಿಸಿದೆ. ಇದು ಪ್ರಾಚೀನ ಹಲವು ಜನಾಂಗಗಳಲ್ಲಿ ಪ್ರಚಲಿತದಲ್ಲಿದ್ದುದಂತೂ ಇನ್ನೂ ರೋಮಾಂಚಕ ಹಾಗೂ ವಿಸ್ಮಯದ ವಿಷಯವಾಗಿದೆ ಪ್ರಪಂಚದ ಯಾವ ಭಾಗದಲ್ಲಿಯೂ ಈ ಪದ್ಧತಿ ಕಾಣಿಸಿಕೊಂಡಿರುವುದರ ಕಾರಣಗಳು ಸಾಮಾನ್ಯವಾಗಿ ಒಂದೇ ಬಗೆಯಾಗಿವೆ ಎಂದು ಸ್ವಲ್ಪ ಹಗುರವಾಗಿ ಗ್ರಹಿಸಿಕೊಳ್ಳಬಹುದಾಗಿದೆ. ಭಾರತದ ಉತ್ತರಭಾಗದಲ್ಲಿ ಈ ಆಚರಣೆ ತೀವ್ರರೂಪದಲ್ಲಿಯೂ, ದಕ್ಷಿಣ ಭಾಗದಲ್ಲಿ ಸೌಮ್ಯರೂಪದಲ್ಲಿಯೂ ಕಾಣಿಸಿಕೊಂಡಿದ್ದರೂ ಇದರ ಉಗಮ ಮತ್ತು ಬೆಳವಣಿಗೆಯ ಕಾರಣಗಳು ಮಾತ್ರ ಒಂದೇ ಬಗೆಯಾಗಿವೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ಕಾರಣಗಳ ಪ್ರಭಾವದಲ್ಲಿಯ ಹೆಚ್ಚು ಕಡಿಮೆಯಿಂದಾಗಿ ಭಾರತದಲ್ಲಿಯ ಅದರ ಸ್ವರೂಪವೂ ಹೆಚ್ಚು-ಕಡಿಮೆಯಾಯಿತೆಂದು ಹೇಳಬೇಕು. ಈ ಹಿನ್ನೆಲೆ ಇಟ್ಟುಕೊಂಡು ಕರ್ನಾಟಕದಲ್ಲಿಯ ಸತಿಪದ್ಧತಿಯ ಕಾರಣಗಳನ್ನು ಗುರುತಿಸಬೇಕಾಗುವುದು

ಸತಿಪದ್ಧತಿ ಯಾವುದೊಂದು ಜನಾಂಗದಲ್ಲಿಯಾದರೂ ಒಮ್ಮೆಲೇ ಹುಟ್ಟಿ, ಹುಟ್ಟುತ್ತಲೇ ದೊಡ್ಡದಾಗಿ ಕಾಣಿಸಿಕೊಂಡಿತೆಂದೇನೂ ಅಲ್ಲ. ಅದು ಒಂದು ಜನಾಂಗದಲ್ಲಿ ಕಾರಣಾಂತರಗಳಿಂದ ಹುಟ್ಟಿಕೊಂಡು ದೀರ್ಘ ಬದುಕನ್ನು ಮಾಡಿ ಇಲ್ಲವಾಗಿದೆ. ಹೀಗೆ ಅದು ದೀರ್ಘಕಾಲ ಒಂದು ಜನಾಂಗದ ಇತಿಹಾಸದೊಂದಿಗಿರುವಾಗ, ಅದರ ಉಳಿಕೆ— ಬೆಳವಣಿಗೆ— ಪ್ರಚಾರಕ್ಕೆ ಇನ್ನು ಹೆಚ್ಚಿನ ಕಾರಣಗಳು ಕಾಲಕಾಲಕ್ಕೆ ನೆರವಾಗಿರಬೇಕು ಎಂಬುದನ್ನು ಮರೆಯಬಾರದು. ಇದರರ್ಥ, ಸತಿಪದ್ಧತಿಯ ಉಗಮಕ್ಕೆ ಕಾರಣವಾದ ಸಂಗತಿಗಳೇ ಮಾತ್ರ ಕೊನೆಯವರೆಗೂ ಅದಕ್ಕೆ ಪ್ರೇರಣೆ — ಕಾರಣಗಳಾಗಿ ನಿಂತಿಲ್ಲವೆಂಬುದು. ಈ ತಳಹದಿಯ ಹಿನ್ನೆಲೆಯಲ್ಲಿ ಐದನೆಯ ಶತಮಾನದಿಂದ ಆಧುನಿಕ ಕರ್ನಾಟಕದವರೆಗೂ — ಈ ಒಂದು ಸುದೀರ್ಘ ಅವಧಿಯಲ್ಲಿ ಆಚರಣೆಯಲ್ಲಿದ್ದ ಸತಿ ಇತಿಹಾಸಕ್ಕೆ ಹಲವು ಕಾರಣಗಳು ಇವೆ ಎಂಬುದು ಸ್ಪಷ್ಟಗೊಳ್ಳುತ್ತದೆ.

ಸತಿಪದ್ಧತಿಯ ಕಾರಣಗಳನ್ನು ಕುರಿತು ವಿದ್ವಾಂಸರನೇಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಹೆಚ್ಚಾಗಿ ವಿಷಯ ನಿರೂಪಣೆಯಲ್ಲಿಯ ಸಾಂದರ್ಭಿಕ



ಅಭಿಪ್ರಾಯಗಳೀ ಆಗಿವೆ. ಈ ವಿದ್ವಾಂಸರು ಈ ವಿಷಯವನ್ನು ದೀರ್ಘವಾಗಿ ಚಿಂತಿಸುವೆಡೆಗೆ ದಾರಿತೋರಿಸುತ್ತಾರೆಂದು ಹೇಳಬಹುದು ಈಗ ಇಲ್ಲಿ ವಿದ್ವಾಂಸರ ಮುಖ್ಯ ಅಭಿಪ್ರಾಯ ಗಳನ್ನು ಸೂಚಿಸಿ, ನಂತರದಲ್ಲಿ ಸತಿಪದ್ಧತಿಯ ಕಾರಣಗಳನ್ನು ದೀರ್ಘವಾಗಿ ಚರ್ಚಿಸಬಹುದಾಗಿದೆ.

ಡಾ: ಬಿ. ಎ. ಸಾಲೆತೂರೆ ಅವರ ಅಭಿಪ್ರಾಯ:—

ವಿಜಯನಗರದಲ್ಲಿದ್ದ ಸತಿಪದ್ಧತಿಯನ್ನು ಚರ್ಚಿಸುವಾಗ ವಿದೇಶಿಪ್ರವಾಸಿ ನ್ಯೂನಿಜನ ವರದಿಯನ್ನು ವಿವರಿಸುತ್ತ ಇವರು ಹೀಗೆ ಬರೆಯುತ್ತಾರೆ. ''ಸಂಘಟಿತ ಕಾರ್ಯಾಚರಣೆ ಯಶಸ್ಸು ಹೊಂದದೇ ಇದ್ದಾಗ, ರಾಣಿಯರು ಮತ್ತು ಸ್ತ್ರೀಜನರು ಮುಹಮ್ಮದೀಯರ ಕೈಯಲ್ಲಿ ಅಪಮಾನಪಡುವುದನ್ನು ತಪ್ಪಿಸಿಕೊಳ್ಳಲಿಕ್ಕೆ ಸಹಗಮನವನ್ನು ಆಚರಿಸಲೇಬೇಕಾಗುತ್ತಿದಿತ್ತು ..... ಇವರ ಅಭಿಪ್ರಾಯದಲ್ಲಿ ಮುಖ್ಯವಾದ ಎರಡು ವಿಷಯಗಳನ್ನು ಗಮನಿಸಬೇಕಾಗಿದೆ. ಒಂದು, ಈ ಅಭಿಪ್ರಾಯ ಕೃಷ್ಣದೇವರಾಯನ ಕಾಲದ ಪರಿಸ್ಥಿತಿಗೆ ಮಾತ್ರ ಸಂಬಂಧಿಸಿದು ದಾಗಿದೆ. ಎರಡು, ಇದು ಕೃಷ್ಣದೇವರಾಯನಿಗೆ ಮಾತ್ರ ಸಂಬಂಧಿಸಿದ ಅಭಿಪ್ರಾಯವಾಗಿದೆ. ಅಂದರೆ ಡಾ: ಬಿ.ಎ. ಸಾಲೆತೂರೆ ಅವರು ಕಾಲವೊಂದಕ್ಕೆ ಬದ್ಧರಾಗಿ ಹಾಗೂ ಒಬ್ಬ ವ್ಯಕ್ತಿಗೆ ಸಂಬಂಧಿಸಿ ಮಾತ್ರ ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಮಾಡಿದ್ದಾರೆ. ಆದರೆ ಈ ಮಾತು ಸತಿಪದ್ಧತಿಯ ಕಾರಣಗಳಲ್ಲಿ ಮುಖ್ಯವಾದುದಾಗಿದೆ. ( ಇದೇ ಅಧ್ಯಾಯದಲ್ಲಿ ಮುಂದೆ ಚರ್ಚಿಸಲಾಗುವದು ) . ಪತ್ನಿಯರು ತಮ್ಮ ಗಂಡಂದಿರು ಯುದ್ಧದಲ್ಲಿ ಸಾವಿಗೀಡಾದಾಗ ವೈರಿಗಳ ಕೈಯಲ್ಲಿ ಅಗೌರವಹೊಂದುವುದಕ್ಕಿಂತ ಆ ಪೂರ್ವದಲ್ಲಿ ಸಹಗಮನ ಮೂಲಕ ಸಾವನ್ನಪ್ಪುತ್ತಿದ್ದರು ಎಂಬ ವಿಷಯವನ್ನು ಮರೆಯುವಂತಿಲ್ಲ.

ಡಾ: ಎ.ಎಸ್. ಅಲ್ತೇಕರ ಅವರ ಅಭಿಪ್ರಾಯ:—

''ಇತಿಹಾಸ ಪೂರ್ವಕಾಲದಲ್ಲಿ, ಸತ್ತವನ ಜೀವನ ಹಾಗೂ ಅವನ ಅವಶ್ಯಕತೆಗಳು ಪರಲೋಕದಲ್ಲಿಯೂ ಹೆಚ್ಚು ಕಡಿಮೆ ಈ ಜೀವನದಲ್ಲಿಯಂತೆಯೇ ಇರುತ್ತವೆ ಎಂಬ ಸಾಮಾನ್ಯ ಒಂದು ನಂಬಿಕೆ ಹಲವಾರು ಜನಾಂಗಗಳಲ್ಲಿದಿತ್ತು. ಇದರಿಂದಾಗಿ ಸತ್ತವನೊಡನೆ ಅವನು ಜೀವಂತವಿದ್ದಾಗ ಅವನ ಅವಶ್ಯಕತೆಯಾಗಿದ್ದ ಎಲ್ಲ ವಸ್ತುಗಳನ್ನು ಕಳುಹಿಸುವದು ಅವನ ಉಳಿದ ಸಂಬಂಧಿಕರ ಪವಿತ್ರ ಕರ್ತವ್ಯವಾಯಿತು. ವಿಶೇಷವಾಗಿ ರಾಜ, ಶ್ರೀಮಂತ ಅಥವಾ ಯೋಧನಂಥ ಪ್ರಮುಖ ವ್ಯಕ್ತಿಗಳು ಸತ್ತಾಗ ಅವರೊಡನೆ ಅವರ ಸ್ವಂತ ಸಾಮಾನುಗಳನ್ನು

ಕಳುಹಿಸಲೇಬೇಕೆಂಬ ತಿಳುವಳಿಕೆ ಇತ್ತು. ಅವನು ಸಾಮಾನ್ಯವಾಗಿ ತನ್ನ ಹೆಂಡಂದಿರು, ಕುದುರೆಗಳು ಹಾಗೂ ಸೇವಕರನ್ನು ಪರಲೋಕದಲ್ಲಿ ಬಯಸುತ್ತಿದ್ದ ಕಾರಣ ಇವನ್ನೆಲ್ಲ ಕೊಲ್ಲುವುದು ಅವಶ್ಯ ಹಾಗೂ ಅಪೇಕ್ಷಣೀಯವಾಗಿತ್ತು. ಆದುದರಿಂದ ಅವುಗಳನ್ನು ಅವನೊಡನೆ ಸುಡುತ್ತಿದ್ದರು ಅಥವಾ ಹೂಳುತ್ತಿದ್ದರು. ಇಂಥ ಒಂದು ನಂಬಿಕೆಯೇ ಗಂಡನೊಡನೆ ಹೆಂಡತಿಯನ್ನು ಸುಡುವ ಇಲ್ಲವೆ ಹೂಳುವ ಪದ್ಧತಿಗೆ ಮೂಲವಿರಬಹುದು."[2]

ಡಾ: ಎ.ಎಸ್.ಅಲ್ತೇಕರರು ಪರಲೋಕದ ಕಲ್ಪನೆಯು ಹಿನ್ನೆಲೆಯೇ ಪತ್ನಿ ಸತಿಹೋಗಲು ಕಾರಣವಾಗಿರಬೇಕೆಂದು ಚಿಂತಿಸಿದ್ದಾರೆ. ಈ ಜೀವಲೋಕವೊಂದನ್ನುಳಿದು ಇನ್ನೊಂದು ಲೋಕವಿದೆ. ಅಲ್ಲಿಯ ಜೀವನವೂ ಇಲ್ಲಿಯಂಥದ್ದೇ ಎಂಬ ಸಾಮಾನ್ಯ ನಂಬಿಕೆ ಇತಿಹಾಸಪೂರ್ವ ಜನಾಂಗಗಳಲ್ಲಿ ಬೇರೂರಿದ್ದರಿಂದ ಸತ್ತವನೊಡನೆ ಅವರ ಉಪಯೋಗದ ಹಲವಾರು ವಸ್ತುಗಳನ್ನು — ಹೆಂಡತಿ ಸಹಿತ — ಕಳುಹಿಸಲು ಮೊದಲಾಯಿತೆಂಬ ವಿಚಾರ ಒಪ್ಪುವಂಥದಾಗಿದೆ.

<u>ಡಾ: ಎಂ.ಚಿದಾನಂದಮೂರ್ತಿ ಅವರ ಅಭಿಪ್ರಾಯ:—</u>

ಡಾ: ಎ.ಎಸ್. ಅಲ್ತೇಕರರ ಅಭಿಪ್ರಾಯವನ್ನು ಒಪ್ಪಿದ ಇವರು, ಸತ್ತು ಪರಲೋಕ ಸೇರಿದ ವ್ಯಕ್ತಿಗೆ ಅವನಿಗಿಷ್ಟವಾದ ಇಹಲೋಕದ ವಸ್ತುಗಳನ್ನು ಕಳುಹಿಸಬೇಕೆಂಬ ವಿಷಯಕ್ಕೆ ಹೆಚ್ಚಿನ ಆಧಾರಗಳನ್ನು ಒದಗಿಸುತ್ತಾರೆ : ''ಪ್ರಾಚೀನ ಈಜಿಪ್ತನಲ್ಲಿ ದೊರೆಯು ಮಡಿದಾಗ ಅವನಿಗೆ ಮುಂದಿನ ಜನ್ಮದಲ್ಲಿ ಉಪಯೋಗಕ್ಕೆ ಬರಲೆಂದು ಅವನಿಗೆ ಬೇಕಾದ ಆಯುಧಗಳು, ಆಭರಣಗಳು, ಆಹಾರ ಸಾಮಗ್ರಿಗಳು, ವಸ್ತುಗಳು — ಇತ್ಯಾದಿಗಳನ್ನು ಅವನೊಡನೆ ಹೂಳುತ್ತಿದ್ದರು (Zakaria Goneim: The Buried Pyramid, P. 9 ) ನಮ್ಮ ದೇಶದಲ್ಲಿಯೂ ಪ್ರಾಚೀನ ಸಮಾಧಿಗಳನ್ನು ತೆರೆದಾಗ ಅಲ್ಲಿ ಹೂಳಿದ್ದ ವ್ಯಕ್ತಿಯ ಅಸ್ಥಿಪಂಜರದ ಜೊತೆಯಲ್ಲಿ ಅನೇಕ ಕುಡಿಕೆಗಳು, ಆಭರಣಗಳೂ ದೊರಕಿರುವುದನ್ನು ಇಲ್ಲಿ ನೆನೆಯಬಹುದು. ಸಿಥಿಯನ್ನರಲ್ಲಿ ರಾಜನು ಸತ್ತಾಗ ಅವನೊಡನೆ ಅವನ ಅಡಿಗೆಯವರನ್ನೂ, ಆಳುಗಳನ್ನೂ, ಕುದುರೆಗಳನ್ನೂ ಹೂಳುತ್ತಿದ್ದ ಪದ್ಧತಿಯನ್ನು ಹೆರೊಡೊಟಸ್ ಹೇಳುತ್ತಾನೆ.''[3] ಎನ್ನುತ್ತ, ''ತಾನು ಸತ್ತ ಮೇಲೆ ತನ್ನ ಪ್ರೇಯಸಿಯು ಇನ್ನೊಬ್ಬನ ವಶಳಾಗುವ ಸಾಧ್ಯತೆಯನ್ನು ಕಲ್ಪಿಸಿಕೊಂಡ ಪುರುಷನ ಅಸೂಯೆಯೂ ಕಾರಣವಿರಬಹುದು.''[4] ಎಂದು ಸತಿಪದ್ಧತಿಯ ಇನ್ನೊಂದು

ಕಾರಣದೆಡೆಗೆ ಗಮನವನ್ನು ಸೆಳೆಯುತ್ತಾರೆ.

ಡಾ: ಎಚ್. ತಿಪ್ಪೇರುದ್ರಸ್ವಾಮಿ ಅವರ ಅಭಿಪ್ರಾಯ:-

"ಪತಿಯೇ ಪರದೈವವೆಂಬ ಭಾವನೆಯಲ್ಲಿ ಬೆಳೆದ ಹೆಣ್ಣು, ಪತಿಯ ಮರಣವನ್ನು ಸಹಿಸಲಾರದೇ, ಏಕನಿಷ್ಠೆಯಿಂದ ಆತನನ್ನು ಹಿಂಬಾಲಿಸಿದ ಸ್ವಸಂತೋಷದ ನಿರ್ಧಾರವೇ ಈ ಸಹಗಮನ ಪದ್ಧತಿಯ ಪ್ರಾರಂಭಕ್ಕೆ ಮೂಲವಾಗಿದ್ದಿರಬೇಕು." [5]

ಇಲ್ಲಿ ಡಾ: ಎಚ್. ತಿಪ್ಪೇರುದ್ರಸ್ವಾಮಿ ಅವರು ಗಂಡನನ್ನು ದೇವರೆಂದು ಭಾವಿಸಿದ ಸತಿ ಅವನ ಮರಣದ ದುಃಖ ಸಹಿಸಿಕೊಳ್ಳದೇ ತಾನೂ ಮರಣಹೊಂದಲು ನಿಶ್ಚಯಿಸುವುದು ಸತಿಪದ್ಧತಿಯ ಕಾರಣವಾಗಿರಬೇಕೆಂದು ಊಹಿಸಿರುವರು. ಪತಿ — ಸತಿಯ ಭಾವನಾತ್ಮಕ ಸಂಬಂಧದ ಗಾಢತೆಯಲ್ಲಿ ಸತಿ ಆಚರಣೆಯ ಮೂಲವನ್ನು ಇವರು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ.

ಡಾ: ಎಂ.ಎಂ. ಕಲಬುರ್ಗಿ ಅವರ ಅಭಿಪ್ರಾಯ:-

ಸತ್ತ ವ್ಯಕ್ತಿಯೊಂದಿಗೆ ಅವನ ಪ್ರಿಯ ವಸ್ತುಗಳನ್ನು ಹೂಳಬೇಕೆಂಬ ಇಲ್ಲವೆ ಸುಡಬೇಕೆಂಬ ಭಾವನೆ ಸತಿಪದ್ಧತಿಯ ಉಗಮಕ್ಕೆ ದಾರಿಮಾಡಿಕೊಟ್ಟಿರಬಹುದೆಂಬ ವಿಚಾರ ಒಪ್ಪಿದ ಇವರು ವ್ಯಾವಹಾರಿಕವಾದ ಮೂರು ಬೇರೆ ಕಾರಣಗಳನ್ನು ಊಹಿಸುತ್ತಾರೆ." [6]

ಒಂದು: ಮರಣದ ತರುವಾಯ ತನ್ನ ಸತಿ ಮನಸಾ ಇಲ್ಲವೇ ಮನಸ್ಸಿಲ್ಲದೆ ಅನ್ಯರಿಗೆ ವಶವಾಗಬಹುದೆಂಬ 'ಪುರುಷನ ಪ್ರತಿಷ್ಠೆ' ಈ ಸಂಪ್ರದಾಯವನ್ನು ಸ್ತ್ರೀಯರಿಗೆ ರೂಪಿಸಿಕೊಟ್ಟಿರಬಹುದು.

ಎರಡು: ಪತಿಯ ಮರಣದ ತರುವಾಯ ತನ್ನ ಬದುಕುವಿಕೆ ಮತ್ತು ಪಾವಿತ್ರ್ಯಗಳ ಅನಿಶ್ಚಿತತೆ ಕಾರಣವಾಗಿ ಸ್ತ್ರೀವರ್ಗವೇ ಇದನ್ನು ರೂಪಿಸಿಕೊಂಡಿರಬಹುದು.

ಮೂರು: ಪತಿಯ ಮರಣದ ತರುವಾಯ ಸತಿಯನ್ನು ಮರಣ ಕೂಪಕ್ಕೆ ತಳ್ಳಿ, ಅವಳ ಆಸ್ತಿಯನ್ನು ಸೆಳೆಯಲು 'ಪ್ರಭುವರ್ಗ' ಇಲ್ಲವೆ 'ಪುರೋಹಿತವರ್ಗ' ಈ ಯೋಜನೆಯನ್ನು ರೂಪಿಸಿರಬಹುದು.

ಇವರೇ ಸತಿಪದ್ಧತಿಯ ಮೂಲವನ್ನು ಶಿವನ ಪತ್ನಿ ದಾಕ್ಷಾಯಣಿ ದಕ್ಷಬ್ರಹ್ಮನ ಯಜ್ಞದಲ್ಲಿ ಪ್ರಾಣಾರ್ಪಣೆ ಮಾಡಿದ ಘಟನೆಯ ಹಿನ್ನೆಲೆಯಲ್ಲಿ ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ

''ಬಹುಶ: ಶಿವನ ಪತ್ನಿ ದಾಕ್ಷಾಯಣಿ ಅಥವಾ ಸತೀದೇವಿ ಪತಿಯ ಪರವಾಗಿ ನಿಂತು, ದಕ್ಷಬ್ರಹ್ಮನ ಯಜ್ಞದಲ್ಲಿ ಪ್ರಾಣಾರ್ಪಣೆ ಮಾಡಿದ ಘಟನೆಯೇ ಗಂಡನಿಗಾಗಿ ಹೆಂಡತಿ ಚಿತಾಪ್ರವೇಶ ಮಾಡುವ ಈ 'ಸತಿ' ಪದ್ಧತಿಗೆ ಮೂಲವಾಗಿರಬೇಕು''[7] ಎಂದು ಅವರು ಊಹಿಸುತ್ತಾರೆ. ಡಾ: ದೇವೇಂದ್ರಕುಮಾರ ಹಕಾರಿ ಅವರು ಈ ವಿಷಯದಲ್ಲಿ ಭಿನ್ನ ಅಭಿಪ್ರಾಯ ತಾಳಿದಂತಿದೆ. ಅವರು ''ಶಿವಪುರಾಣಗಳಲ್ಲಿ ಬರುವ ದಾಕ್ಷಾಯಣಿ 'ಶಿವಾಯಸ್ವಾಹಾ' ಎಂದು ದಕ್ಷಬ್ರಹ್ಮನ ಯಜ್ಞಕುಂಡದಲ್ಲಿ ಹಾರಿ ಸುಟ್ಟುಕೊಂಡ ಹಿನ್ನೆಲೆ ಬೇರೆಯೆ''[8] ಎಂದು ಬರೆಯುತ್ತಾರೆ. ಈ ಸಂದರ್ಭದಲ್ಲಿ ಡಾ: ಹಕಾರಿಯವರು ದಾಕ್ಷಾಯಣಿಯ ಯಜ್ಞಕುಂಡ ಪ್ರವೇಶದ ಹಿನ್ನೆಲೆ ಅಂದರೆ ಅದರ ಕಾರಣಗಳು ಸತಿಪದ್ಧತಿಯ ಕಾರಣಗಳಿಂದ ಭಿನ್ನವಾದವುಗಳೇ ಎಂಬುದನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದಂತಿದೆ. ಈ ವಿಷಯದಲ್ಲಿ ಎರಡು ಮಾತುಗಳನ್ನು ಉಲ್ಲೇಖಿಸಬಹುದಾಗಿದೆ. ಒಂದು; ದಾಕ್ಷಾಯಣಿ ಯಜ್ಞಕುಂಡದಲ್ಲಿ ಪ್ರವೇಶಿಸುವ ಘಟನೆ ಸತಿಪದ್ಧತಿಗೆ ಮೂಲವಾಗಿರಲಿಕ್ಕೆ, ಸತಿಪದ್ಧತಿ ಕೇವಲ ಭಾರತದ ಪರಿಸರದಲ್ಲಿಷ್ಟೇ ರೂಪುಗೊಳ್ಳದೆ ಪ್ರಾಚೀನ ಹಲವು ಜನಾಂಗಗಳಲ್ಲಿ ರೂಪುಗೊಂಡದ್ದಾಗಿದೆ ಎಂಬುದನ್ನು ಮರೆಯಬಾರದು. ಎರಡು; ಭಾರತೀಯ ಸಂಸ್ಕೃತಿಯಲ್ಲಿ ದಾಕ್ಷಾಯಣಿಯ ಯಜ್ಞಕುಂಡದಲ್ಲಿ ಬಿದ್ದ ಘಟನೆ ತುಂಬ ಪ್ರಸಿದ್ಧವಾದುದಾಗಿದೆ. ಮತ್ತು ಮೆಚ್ಚಿಕೆಪಡೆದುದಾಗಿದೆ. ಪತಿನಿಂದೆ ಸಹಿಸದ ದಾಕ್ಷಾಯಣಿ, ಗಂಡನಾದ ಶಿವನು ಇದ್ದಾಗಲೂ ಯಜ್ಞಕುಂಡದಲ್ಲಿ ಪ್ರವೇಶ ಮಾಡುತ್ತಾಳೆ. ಭಾರತದಲ್ಲಿ ಪತಿನಿಂದೆ ಎಂಬುದು ಪಾತಿವ್ರತ್ಯಕ್ಕೆ ಭಂಗತರುವಂಥದ್ದೇ ಆಗಿದೆ. ಈ ಕಾರಣದಿಂದಾಗಿ, ಪಾತಿವ್ರತ್ಯದ ಔನ್ನತ್ಯವೂ ಸತಿಪದ್ಧತಿಯ ಕಾರಣವಾಗಿರುವ ಹಿನ್ನೆಲೆಯಲ್ಲಿ ( ಈ ವಿಷಯ ಮುಂದೆ ಚರ್ಚಿಸಲಾಗುವದು ) ಭಾರತದ ಪರಿಸ್ಥಿತಿಯಲ್ಲಿ ದಾಕ್ಷಾಯಣಿಯ ಯಜ್ಞಕುಂಡ ಪ್ರವೇಶದ ಘಟನೆ, ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಸತಿಹೋಗುವವರಿಗೆ ಆದರ್ಶ ಮತ್ತು ಪ್ರೇರಕಶಕ್ತಿಯಾಗಿರಬಹುದಾಗಿದೆ.

ಡಾ: ಬಸವರಾಜ ಕಲ್ಗುಡಿ ಅವರ ಅಭಿಪ್ರಾಯ:-

''ಆತ್ಮಬಲಿ ಹಾಗೂ ಸಹಗಮನ'' ವನ್ನು ಕುರಿತು ಬರೆಯುತ್ತಾ ಇವರು ಆತ್ಮಬಲಿಯ ಉಗಮ ಬೆಳವಣಿಗೆಯ ಮುಖ್ಯ ಮೂರು ನೆಲೆಗಳನ್ನು ಹೀಗೆ ಗುರುತಿಸುತ್ತಾರೆ: ''ಧರ್ಮ - ನೀತಿ ಮತ್ತು ಮಾನವನಿಗಿರುವ ಸಂಬಂಧ : ಭಯ ಮತ್ತು ಮಾನವನಿಗಿರುವ ಸಂಬಂಧ, ಸಾಮಾಜಿಕ ಆರ್ಥಿಕ ಸಮಸ್ಯೆಗಳು ಮತ್ತು ಮಾನವನಿಗಿರುವ ಸಂಬಂಧ ಹೀಗೆ ವಿವಿಧ ನೆಲೆಗಳಲ್ಲಿ ಆತ್ಮಬಲಿಯ ಉಗಮ ಹಾಗೂ ಬೆಳವಣಿಗೆಗಳನ್ನು ಗುರುತಿಸಬಹುದು''[14] ಈ

ಅಭಿಪ್ರಾಯ ಸತಿಪದ್ಧತಿಯ ಕಾರಣಗಳನ್ನು ಇಡಿಯಾಗಿ ಕಂಡುಕೊಳ್ಳುವ ಒಂದು ನೋಟವಾಗಿದೆ. ಇವರು ತಮ್ಮ ಅಭಿಪ್ರಾಯವನ್ನು ದೀರ್ಘವಾಗಿ ಚರ್ಚಿಸಿ ಸಮರ್ಥಿಸದೇ ಹೋದರೂ, ಅವರ ಅಭಿಪ್ರಾಯ ಸತಿಪದ್ಧತಿಯ ಉಗಮದ ಹೊಸ ನೆಲೆಗಳನ್ನು ಪರಿಚಯಿಸುತ್ತದೆ, ಎಂದೇ ಹೇಳಬೇಕು. ಧರ್ಮ — ನೀತಿಗಳ ಪ್ರಭಾವ, ಸ್ತ್ರೀಯರಲ್ಲಿ ಕಂಡರಿಯದ ಅಲೌಕಿಕ ಶಕ್ತಿಯ ಕುರಿತಾದ ಭಯ, ಸ್ತ್ರೀಯರು ಒಂಟಿಯಾಗಿ ಎದುರಿಸಬೇಕಾದ ಆರ್ಥಿಕ — ಸಾಮಾಜಿಕ ಪರಿಸ್ಥಿತಿಗಳ ಒತ್ತಡ — ಇವೆಲ್ಲವುಗಳ ಸೂಕ್ಷ್ಮ ಸಂಬಂಧಗಳ ಹಿನ್ನೆಲೆಯಲ್ಲಿ ಸತಿ ಆಚರಣೆ ರೂಪುಗೊಂಡಿರಬಹುದು. ಮಾನವನೊಂದಿಗಿರುವ ವಿಶಿಷ್ಟ ಪರಿಸ್ಥಿತಿಗಳ ಸಂಬಂಧದ ಸೃಷ್ಟಿ ಈ ಸತಿಪದ್ಧತಿ ಎಂದು ಸೂತ್ರೀಕರಿಸಬಹುದಾಗಿದೆ.

ಈ ರೀತಿಯಾಗಿ ವಿದ್ವಾಂಸರು ಸತಿಪದ್ಧತಿಯ ಕಾರಣಗಳ ಕುರಿತಾಗಿ ಚಿಂತಿಸಿದ್ದಾರೆ. ಕರ್ನಾಟಕದಲ್ಲಿ ಸತಿಪದ್ಧತಿ ಉಗಮಗೊಂಡು ಬೆಳೆದುಬಂದ ಕಾರಣಗಳನ್ನು ಲೌಕಿಕ ಹಾಗೂ ಅಲೌಕಿಕ ಎಂದು ಅಧ್ಯಯನದ ಅನುಕೂಲಕ್ಕಾಗಿ ವಿಭಜಿಸಿಕೊಂಡು, ಪ್ರಪಂಚದ, ಅದರಲ್ಲಿಯೂ, ಭಾರತದ ಸತಿಪದ್ಧತಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಇನ್ನು ಮುಂದೆ ಒಂದೊಂದಾಗಿ ವಿವರಿಸಬಹುದಾಗಿದೆ ( ಸತಿಪದ್ಧತಿ ಕಾರಣಗಳು — ಈ ನಕ್ಷೆಯನ್ನು ನೋಡಿ)


ಸತಿಪದ್ಧತಿಯ ಕಾರಣಗಳು
ಲೌಕಿಕ ಕಾರಣಗಳು
ಅಲೌಕಿಕ ಕಾರಣಗಳು
(ಅ) ವೈಯಕ್ತಿಕ ಕಾರಣಗಳು :
1. ಪತಿಯ ಮೇಲಿನ ಉತ್ಕಟಪ್ರೀತಿ
2. ಪಾತಿವ್ರತ್ಯದ ವೈಭವೀಕರಣ
3. ವೈಯಕ್ತಿಕ ಪ್ರತಿಷ್ಠೆ
4. ಮಾನರಕ್ಷಣೆಯ ವ್ಯವಸ್ಥೆ
5. ವಿಧವೆಯ ನಿಕೃಷ್ಟಜೀವನ
(ಆ) ಸಾಮಾಜಿಕ ಕಾರಣಗಳು :
1. ಪತ್ನಿ ಅಗಲಬಾರದೆಂಬ ಪುರುಷನ ಸ್ವಾರ್ಥ
2. ಪತ್ನಿ ಇನ್ನೊಬ್ಬರ ವಶವಾಗಬಾರದೆಂಬ ಪುರುಷನ ಇಚ್ಛೆ
3. ಪತ್ನಿ ತನ್ನನ್ನು ಸಾಯಿಸಬಾರದೆಂಬ ಪುರುಷನ ಪೂರ್ವಾಲೋಚನೆ.
4. ಸಂಪತ್ತು ಪಡೆಯುವ ಸಂಚು
5. ಮನೆತನದ ಹಾಗೂ ಸಮಾಜದ ಪ್ರತಿಷ್ಠೆ
(ಅ) ಪರಲೋಕ ಕಲ್ಪನೆ:
1. ಸತ್ತವನೊಂದಿಗೆ ಪ್ರಿಯವಸ್ತುಗಳನ್ನು ಕಳಿಸುವ ನಂಬಿಕೆ.
2. ಸತಿ—ಪತಿಗಳಿಬ್ಬರೂ ಸ್ವರ್ಗಪಡೆಯುವ ನಂಬಿಕೆ.
(ಆ) ಪುನರ್ಜನ್ಮ ಕಲ್ಪನೆ

o—o

## ಲೌಕಿಕ ಕಾರಣಗಳು

ಸತಿಪದ್ಧತಿ ಉಗಮಗೊಂಡು ಬೆಳೆದು ಬರಲು ಪತ್ನಿಯು ಹಾಗೂ ಸಮಾಜದ ಉದ್ದೇಶ — ಆಶಯಗಳು ಸ್ಥಿತಿ — ಗತಿಗಳು ಮುಖ್ಯ ಕಾರಣವಾಗಿವೆ. ಈ ನಿಮಿತ್ತ ಲೌಕಿಕ ಕಾರಣಗಳಲ್ಲಿ ವೈಯುಕ್ತಿಕ ಹಾಗೂ ಸಾಮಾಜಿಕ ಕಾರಣಗಳೆಂದು ವಿಂಗಡಿಸಬಹುದಾಗಿದೆ. ಪತಿಯ ಮೇಲಿನ ಉತ್ಕಟ ಪ್ರೀತಿ, ಪಾತಿವ್ರತ್ಯದ ವೈಭವೀಕರಣ, ವೈಯುಕ್ತಿಕ ಪ್ರತಿಷ್ಠೆ, ಮಾನರಕ್ಷಣೆಯ ವ್ಯವಸ್ಥೆ, ವಿಧವೆಯ ನಿಕೃಷ್ಟ ಜೀವನ — ಇವುಗಳನ್ನು ವೈಯುಕ್ತಿಕ ಕಾರಣಗಳೆಂದು ಗುರುತಿಸಬಹುದಾಗಿದೆ. ಪತ್ನಿ ಅಗಲಬಾರದೆಂಬ ಪುರುಷನ ಸ್ವಾರ್ಥ, ಪತ್ನಿ ಇನ್ನೊಬ್ಬರ ವಶವಾಗಬಾರದೆಂಬ ಪುರುಷನ ಇಚ್ಛೆ, ಪತ್ನಿ ತನ್ನನ್ನು ಸಾಯಿಸಬಾರದೆಂಬ ಪುರುಷನ ಪೂರ್ವಾಲೋಚನೆ, ಸಂಪತ್ತು ಪಡೆಯುವ ಹಂಚು, ಮನೆತನದ ಹಾಗೂ ಸಮಾಜದ ಪ್ರತಿಷ್ಠೆ — ಇವುಗಳನ್ನು ಲೌಕಿಕದಲ್ಲಿಯ ಸಾಮಾಜಿಕ ಕಾರಣಗಳೆಂದು ಕರೆಯಬಹುದಾಗಿದೆ.

### (ಅ) ವೈಯುಕ್ತಿಕ ಕಾರಣಗಳು :—

ಸತಿಪದ್ಧತಿಯ ವೈಯುಕ್ತಿಕ ಕಾರಣಗಳು ಪತಿ ಅಳಿದ ಸತಿಗೆ ಸಂಬಂಧಿಸಿದವುಗಳು ಅಥವಾ ಪತಿ ಅಳಿದ ಸತಿ ಸಮೂಹಕ್ಕೆ ಸಂಬಂಧಿಸಿದವುಗಳು. ಇವುಗಳಲ್ಲಿ ಪತ್ನಿ ಕೆಲವು ತಾನೇ ರೂಪಿಸಿಕೊಂಡಿದ್ದರೆ ಕೆಲವು ಪರಿಸ್ಥಿತಿಯ ಒತ್ತಡದಿಂದ ತನ್ನವುಗಳನ್ನಾಗಿಸಿಕೊಂಡಿದ್ದಾಳೆ. ಪತಿಯ ಮೇಲಿನ ಉತ್ಕಟ ಪ್ರೀತಿ, ಮಾನರಕ್ಷಣೆಯ ವ್ಯವಸ್ಥೆ, ವೈಯುಕ್ತಿಕ ಪ್ರತಿಷ್ಠೆ — ಇವು ಪತ್ನಿ ತಾನೇ ರೂಪಿಸಿಕೊಂಡ ಸತಿಪದ್ಧತಿಯ ಕಾರಣಗಳು. ಪಾತಿವ್ರತ್ಯದ ವೈಭವೀಕರಣ, ವಿಧವೆಯ ನಿಕೃಷ್ಟ ಜೀವನ — ಇವು ಪರಿಸ್ಥಿತಿಯ ಒತ್ತಡದಿಂದ ಪತ್ನಿಯು ತನ್ನವುಗಳನ್ನಾಗಿಸಿಕೊಂಡ ಸತಿಪದ್ಧತಿಯ ಕಾರಣಗಳು. ಹೀಗೆ ಈ ವೈಯುಕ್ತಿಕ ಕಾರಣಗಳನ್ನು ಪ್ರತ್ಯೇಕವಾಗಿ ಗುರುತಿಸಿ ಕಂಡರೂ ಇವು ಮಾನವ ಸಮಾಜರಚನೆಯ ತಳಹದಿಯ ಮೇಲೆ ನಿರ್ಮಾಣಗೊಂಡವುಗಳು ಎಂಬುದನ್ನು ಮರೆಯಬಾರದು. ಈ ಹಿನ್ನೆಲೆಯಲ್ಲಿ ಸತಿಪದ್ಧತಿಯ ಈ ಲೌಕಿಕಕಾರಣಗಳಲ್ಲಿಯ ವೈಯುಕ್ತಿಕ ಕಾರಣಗಳು ಸಾಮಾಜಿಕ ಕಾರಣಗಳ ವ್ಯಾಪ್ತಿಯಲ್ಲಿಯೇ ಸೇರಬಯಸುತ್ತವೆ.

1. <u>ಪತಿಯ ಮೇಲಿನ ಉತ್ಕಟ ಪ್ರೀತಿ :—</u> ಪತಿ — ಪತ್ನಿಯರ ಸಂಬಂಧ ತುಂಬ ಗಾಢವಾದುದು. ಭಾವನಾತ್ಮಕವಾಗಿ ಅವರೆಡೂ ಜೀವಿಗಳು ಒಂದಕ್ಕೊಂದು ಹೆಣೆದುಕೊಂಡಿರುತ್ತವೆ. ಒಂದನ್ನು ಬಿಟ್ಟು ಇನ್ನೊಂದರ ಅಸ್ತಿತ್ವವೇ ಇಲ್ಲ ಎನ್ನುವಷ್ಟರಮಟ್ಟಿಗೆ ಅವರೆಡರ ಪ್ರಪಂಚ ನಿರ್ಮಾಣಗೊಂಡಿರುತ್ತದೆ. ನಿಜವಾದ ಪತಿ — ಪತ್ನಿಯರು ಈ ಒಂದು ಪ್ರೀತಿಯ ತಳಹದಿಯ ಮೇಲೆ ಜೀವಿಸಿಕೊಂಡಿರುತ್ತಾರೆ. ಇಬರಿಬ್ಬರಲ್ಲಿ ಒಬ್ಬರಿಗೆ ದುಃಖ — ನೋವು — ಸಂಕಟ ತೊಂದರೆ ಕಾಣಿಸಿಕೊಂಡರೆ ಅದು ಇನ್ನೊಬ್ಬರ ಮೇಲೂ ಪರಿಣಾಮ ಬೀರುತ್ತದೆ. ಈ ಒಂದು ಗಾಢ ಸಂಬಂಧ ಇಂದು ನಿನ್ನೆಯದಲ್ಲ. ಮಾನವ ಸಮಾಜದಲ್ಲಿ ಎಂದು ಗಂಡು — ಹೆಣ್ಣಿನ ನಡುವೆ ಪತಿ — ಪತ್ನಿಯರೆಂಬ ಭಾವನೆ ( Concept ) ಬೆಳೆಯಿತೋ ಅಂದಿನಿಂದಲೇ ಅವೆರಡೂ ಜೀವಿಗಳು ಪ್ರೀತಿಯಲ್ಲಿ ಒಂದಾಗಿ ಕರಗಿಹೋಗಿರಬೇಕು. ಈ ಪ್ರೀತಿ ಎಷ್ಟರಮಟ್ಟಿಗೆ ವ್ಯಾಪ್ತಿ — ವೈಶಾಲ್ಯತೆ ಪಡೆಯಿತೆಂದರೆ ಸಾವಿನಲ್ಲಿಯೂ ಇವು ಒಂದಾದವು. ಈ ಒಂದು ಭಾವನಾತ್ಮಕ ನೆಲೆಯೇ ಸತಿಪದ್ಧತಿಯ ಉಗಮಕ್ಕೆ ದಾರಿಮಾಡಿ ಕೊಟ್ಟಿರಬೇಕು. ಈ ಒಂದು ಹಿನ್ನೆಲೆ ಇಟ್ಟುಕೊಂಡು ಪತಿಯನ್ನು ವಿಯೋಗಗೊಂಡ ಪತ್ನಿಯ ದುಃಖವನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಒಂದು, ಪತಿ ಮರಣ ಹೊಂದಿದ್ದನ್ನು ಕಂಡಾಕ್ಷಣ ಅಥವಾ ಕೇಳಿದಾಕ್ಷಣ ಪತ್ನಿಯೂ ಆಕ್ಷಣವೇ ಮರಣ ಹೊಂದುವದು. ಎರಡು, ಪತಿ ಮರಣ ಹೊಂದಿದ್ದನ್ನು ಪತ್ನಿ ಕಂಡು ಅಥವಾ ಕೇಳಿ ತಾನು ಬದುಕಲಿಚ್ಛಿಸದೇ ಮರಣ ಹೊಂದಲು ನಿಶ್ಚಯಿಸಿ ಸಾಯುವುದು. ಇವೆರಡು ಸ್ಥಿತಿಗಳ ಹಿಂದೆ ಇರುವುದು <u>ಪ್ರೀತಿಯ ಉತ್ಕಟಾವಸ್ಥೆಯೇ ಎಂಬುದನ್ನು ಮರೆಯಬಾರದು.</u> ಶ್ರೀ ಎನ್ ಸುಬ್ರಮಣಿಯನ್ ಅವರು ಇಂಥ ಎರಡು ಮರಣಗಳನ್ನು ಸಂಗಮ್ ಕಾಲದಲ್ಲಿ ಗುರುತಿಸುತ್ತಾರೆ. ಗಂಡನ ಮರಣ ''ದುಃಖದ ಅಗಾಧತೆಯಿಂದ ಆಕೆ ತಕ್ಷಣವೇ ಇದ್ದಕ್ಕಿದ್ದಂತೆಯೇ ಸಾಯಬಹುದು. ಆರಿಯಪ್ಪಡೈಕಡಂದ ನೆಡುಂ-ಜೆಳಿಯನನ ಪತ್ನಿ ಕೋಪ್ಪೆರುಂದೇವಿಗೆ ಹಾಗಾಯಿತು ಎನ್ನಲಾಗಿದೆ ........ ಪತಿಗೂ ಪತ್ನಿಗೂ ಭೌತಿಕವಾಗಿ ನಿರ್ದಿಷ್ಟವಾದ ಪ್ರತ್ಯೇಕ ಅಸ್ತಿತ್ವಗಳಿದ್ದರೂ ಇಬ್ಬರಿಗೂ ಸಮಾನವಾಗಿ ಒಂದೇ ಜೀವವಿರುತ್ತದೆ ಎಂಬುದನ್ನು ವರ್ಣಿಸಲು ಆ ಘಟನೆಯನ್ನು ಕವಿ ಅಂತಹ ಅಲಂಕಾರಿಕವಾಗಿ ಬಳಸಿದ್ದಾನೆ. ಇದು ಅತ್ಯುತ್ತಮ ರೀತಿಯ ಸಹಗಮನ. ಆನಂತರ ವಿಧ್ಯುಕ್ತವಾದ ವಿಶಿಷ್ಟ ಬೆಂಕಿಯನ್ನು ಹೊತ್ತಿಸಿ, ಅದರಲ್ಲಿ ಸಾಯುವುದು. ಪೆರುಂಕೋಪ್ಪೆಂಡು ಈ ವಿಧಾನವನ್ನು ಅನುಸರಿಸಿದಳು''[10] ಜನ್ನನ ಅನಂತನಾಥ ಪುರಾಣದಲ್ಲಿಯ ಸುನಂದೆಯ ಮರಣವನ್ನು ಮೊದಲನೆಯದಕ್ಕೂ, ರನ್ನನ

ಅಜಿತಪುರಾಣದಲ್ಲಿಯ ಗುಂಡಮಬ್ಬೆಯ ಮರಣವನ್ನು ಎರಡನೆಯದಕ್ಕೂ ಸಾಮಾನ್ಯವಾಗಿ ಅನ್ವಯಿಸಿಕೊಳ್ಳಬಹುದು. ವಸುಷೇಣನ ಶಿರವನ್ನು ಕಂಡ ಸುನಂದೆಯು ಮರಣ ಹೊಂದುತ್ತಾಳೆ. ಆ ಸಂಬಂಧವನ್ನು ಜನ್ನ ಹೀಗೆ ಚಿತ್ರಿಸುತ್ತಾನೆ.[11]

> ಹೃದಯದೊಳಿರ್ದ ವಲ್ಲಭನನಾಕ್ಷಣ ಭೀತಿಯನೀಕ್ಷಿಪಂತೆ ವಾ
> ಜ್ಬೆದುವಲರ್ಗಣ್ಬೊಣರ್ತಡವಿ ನೋಡುವಪೋಲ್ಕುಚ ಮಧ್ಯದಲ್ಲಿಗಾ
> ದುದುಕರಪಲ್ಲವಂ ಸರಮಾಲಿಸುವಂತೆ ಪೊಗಂ ವಲಂಗಿತಂ
> ಗದೆಳೆವಿರ್ದ ಶೂನ್ಯಮಾಗಿಸುವಂತಸುಪೋಯ್ತು ಸಿತಾಬ್ಜನೇತ್ರೆಯಾ

ಇಲ್ಲಿ ಗಂಡನ ಶಿರವನ್ನು ಕಂಡ ಪತ್ನಿಗೆ ಯಾವ ಮಾತೂ ಬಾರದೆ ದುಃಖದ ಕೊನೆಯ ಅವಸ್ಥೆಯುಂಟಾಗಿ ಮರಣ ಸನ್ನಿಹಿತವಾಯಿತೆಂಬ ಚಿತ್ರಣ ಪತಿ — ಪತ್ನಿಯರ ಮೂಲ ಸಂಬಂಧದ ಅವರ ಪ್ರೀತಿಯ ಆಧಿಕ್ಯದ ಸಮರ್ಥಚಿತ್ರಣವಾಗಿದೆ

ಪತಿ ನಾಗದೇವ ಯುದ್ಧದಲ್ಲಿ ಮರಣ ಹೊಂದಲು ಪತಿ ಮರಣದ ನಂತರ ಪತ್ನಿಯು ಜಿನದೀಕ್ಷಾಚರಣ ಕೈಕೊಳ್ಳುವುದು ಅಥವಾ ಶುಭಚರಿತದಿಂದ ಮರಣಹೊಂದುವುದು — ಎಂದು ಈ ಎರಡು ಮಾರ್ಗಗಳನ್ನು ಚಿಂತಿಸಿದ ಗುಂಡಮಬ್ಬೆಯು ಅತ್ತಿಮಬ್ಬೆಯಲ್ಲಿಗೆ ಬಂದು 'ನಾಗದೇವನೊಡನಾಂ ಬಿಸವೇಳ್ವೆನೆಂದು ಬೇಡಿಕೊಂಡಿನಿಯನನಪ್ಪಿಕೊಂಡಚಿತವಾಗೆ ಚಿತಾಗ್ನಿಯೊಳಣ್ಪಿ ಸತ್ತಳು'' [12] ಗುಂಡಮಬ್ಬೆಯಸತಿ ಹೋದುದು ಪತಿಯನ್ನು ಅಗಲಿರಬಾರದೆಂಬ ಪ್ರೀತಿಯ ಕುಲಧರ್ಮವಿನಾಚರಣೆಯ ನೆಲೆಯುಂದಾಗಿದೆ.

ವಿಯೋಗಗಳಲ್ಲೆಲ್ಲ ಪತಿ ಮರಣಹೊಂದಿ ಸತಿಯುಂಟ ವಿಯೋಗಗೊಳ್ಳುವುದೇ ಭಯಂಕರವಾದುದು. ಇಂಥ ಶೋಕ-ಸಾಧ್ಯಿಗಳನ್ನು ಒಂದೇ ಮಾತಿನಲ್ಲಿ, ಹಲವು ವಿವರಣೆಗಳ ಹಿನ್ನೆಲೆಯಲ್ಲಿ ಚಿತ್ರಿಸಿ ನೆರೆಹಿಡಿದ ಸಂದರ್ಭಗಳು ಕನ್ನಡ ಕಾವ್ಯಗಳಲ್ಲಿ ಹಲವುಗಳುಂಟು. ''ಪ್ರಾಣ ಪ್ರಿಯರ್ಗಾ ಪ್ರಾಣಮನೆಲದೀವುದೆಂಬುದೊಂದಚ್ಚರಿಯೇ'' ನಲ್ಲರನಗಲ್ದರು ನೆಪ್ಪಿರಿಪರು ಪೋಕೆಯಿಂದ ನುಡಿಯಾದರೆ ಹರಣವನಾಕ್ಷಣದೊಳೆ ಬಿಸುಡುವರು'' ಎಂಬಂಥ ಮಾತುಗಳು ಪತಿಯನ್ನು ಅಗಲಿದ ತಕ್ಷಣ ಪತ್ನಿಗೆ ಉಂಟಾಗುವ ದುಃಖದ ಪರಿಣಾಮವನ್ನು ಸೂಚಿಸುತ್ತವೆ[13] ಅದೇ ರೀತಿ ಗದಾಯುದ್ಧದಲ್ಲಿ ಪತಿಯಂದಿರನ್ನು ಯುದ್ಧದಲ್ಲಿ ಕಳೆದುಕೊಂಡ ಪತ್ನಿಯರ ದುಃಖ, ಗಿರಿಜಾಕಲ್ಯಾಣ, ಮತ್ತು ಮೋಹನ ತರಂಗಿಣಿಗಳಲ್ಲಿ ಕಾಮದಹಿಸಿ ಹೋದಾಗ ರತಿವಿಲಾಪ, ಕರ್ನಾಟಕ ಭಾರತ ಕಥಾಮಂಜರಿಯಲ್ಲಿ ದುರ್ಯೋಧನನ

ಮೊದಲಾದ ನೃಪಪತ್ನಿಯರ ಅಳಲು — ಈ ಮೊದಲಾದ ಪ್ರಸಂಗಗಳ ನಿರೂಪಣೆಯು ಪತ್ನಿಯರ ಅಮರಪ್ರೇಮವನ್ನು ಮತ್ತು ಕಡುದುಃಖಾವಸ್ಥೆಯನ್ನು ಸೂಚಿಸುತ್ತವೆ.[14] ವೀರಪತ್ನಿಯರೆನ್ನಿಸಿಕೊಳ್ಳುವ ಆದರ್ಶ ಒಂದೆಡೆಯಾದರೆ, ಪ್ರಿಯ ಪತಿಯಿಂದಿರನ್ನು ಅಗಲಿ ದುಃಖವನ್ನು ಅನುಭವಿಸುವ ವಾಸ್ತವಸ್ಥಿತಿ ಇನ್ನೊಂದೆಡೆಗಿದೆ. ಇಂಥ ದುಃಖ, ಸಾವನ್ನು ಬಯಸಿದರೆ ಯಾವ ಆಶ್ಚರ್ಯವೂ ಇಲ್ಲ.

ಪ್ರಿಯ ಗಂಡನ ಮರಣವನ್ನು ಸಹಿಸದೇ ಸತಿ ಹೋದ ಅಮರ ಪತ್ನಿಯರು ಜನಪದ ಸಾಹಿತ್ಯದಲ್ಲಿ ಕಂಡು ಬರುತ್ತಾರೆ. ಮಾಣಿಕ್ಯಶೆಟ್ಟಿ, ಕೊಂಡದ ಚೆನ್ನಮ್ಮ, ಉರುಳೋರಮ್ಮ ಈ ಕಥೆಗಳ ಆಶಯ ಪ್ರೀತಿಯ ಆಧಿಕ್ಯವನ್ನು ಸಾರುವುದೇ ಆಗಿದೆ.[15] ಗಂಡ ಮರಣ ಹೊಂದಲಾಗಿ ಪತ್ನಿ ಅದನ್ನು ಸಹಿಸದೇ ಮರಣ ಸ್ವೀಕರಿಸುವುದನ್ನು ಈ ಕಥೆಗಳಲ್ಲಿ ಕಾಣಬಹುದಾಗಿದೆ. ನಾಗವ್ವ ಜನಪದ ಖಂಡಕಾವ್ಯದಲ್ಲಿಬರುವ 'ಅತ್ತೆಯ ಮಗನೆ ಚಿಂದಯ್ಯ: ( ನಾ ) ಕಟ್ಟಿ ನಾ ಹತ್ತೋದೆ ಲೀಸು ಒಡಗಿಚ್ಚ'' ಮಾವನ ಮಗನೆ ತಿಂದಯ್ಯ : (ನಾ) ಕಟ್ಟಿ ನಾ ಹತ್ತೋದೆ ಲೀಸು ಒಡಗಿಚ್ಚು'' ಎಂಬಂಥ ಸತಿ ಹೋಗುವವಳ ಮಾತುಗಳು ಪತಿಯ ಮೇಲಿನ ಪ್ರೇಮವನ್ನು ಸಾರುವವುಗಳೇ ಆಗಿವೆ.[16] 'ಇರೋಬಿ' ಕಥನ ಗೀತೆಯಲ್ಲಿ ಸತಿಹೋಗಲಿರುವ 'ಇರೋಬಿ'ಯನ್ನು 'ತಮ್ಮ' ಬಂದಿದ್ದಾನೆ ಎಂದು ಜ್ಞಾಪಿಸಲಾಗಿ ಅವಳು ಹೀಗೆ ಹೇಳುತ್ತಾಳೆ[17]

ತಮ್ಮ ಬಂದರೆ ಬರಲಿ ಎಳನೀರು ತಂದರೆ ತರಲಿ
ನನ್ನ ಪ್ರಾಣದ ಬದುಕು ಅಡವಿಲಿ : ಈಡಾಡುವಾಗ
ತಮ್ಮನ ಒಡವೆ ನನಗೇನು ::

ಪ್ರಾಣಸಮಾನ ಪತಿಯು ಮರಣಹೊಂದಿ ಪ್ರೀತಿಯ ಬದುಕು ಶೂನ್ಯವಾದಾಗ ಜಗದ ವ್ಯಾಪಾರ ಯಾವುದೂ ರುಚಿಸದು ಎಂಬ ಮನಸ್ಥಿತಿಯನ್ನು ಇಲ್ಲಿ ಗುರುತಿಸಬಹುದಾಗಿದೆ. ಪ್ರೀತಿ ಭಗ್ನವಾದಾಗ ಸಾವು ಬೇಕೆನಿಸುವುದು ವಾಸ್ತವ ಸತ್ಯವಾಗಿದೆ. ಕಾರಣ ನಗುನಗುತ್ತ ಸತ್ತು ಗಂಡನ ಮೇಲಿನ ನೈಜ ಪ್ರೇಮವನ್ನು ಪ್ರಕಟಿಸುವುದೊಂದೇ ಪತಿವ್ರತೆಯರಿಗೆ ಉಳಿದ ಮಾರ್ಗವಾಗಿದೆ. ಹಲವು ಸತಿಶಿಲ್ಪಗಳು ಈ ಮಾತನ್ನು ಪುಷ್ಟೀಕರಿಸುತ್ತವೆ. ಪತಿಯ ಕೈಯನ್ನು ನಗುನಗುತ್ತ ಹಿಡಿದುಕೊಂಡು ತನ್ನ ಪ್ರೀತಿಯನ್ನು ಅಭಿವ್ಯಕ್ತಗೊಳಿಸುತ್ತ ಅವನೊಡನೆ ಸ್ವರ್ಗಕ್ಕೆ ಹೋಗುವ ಶಿಲ್ಪಗಳು ಶ್ರೀರಂಗಪಟ್ಟಣದ ಅರಕೆರೆ, ಗುಂಡ್ಲುಪೇಟೆಯ

ಎರೆಯೂರು — ಈ ಮೊದಲಾದ ಊರುಗಳಲ್ಲಿ ಇರುವುದನ್ನು ಕಾಣಬಹುದಾಗಿದೆ. ಕಿತ್ತೂರಿನ ವಸ್ತುಸಂಗ್ರಹಾಲಯದಲ್ಲಿರುವ ಮಾಸ್ತಿಕಲ್ಲೊಂದರಲ್ಲಿ, ಸತಿ ಕೈಎತ್ತಿ ನಿಂತಿರುವುದು, ಅವಳನ್ನು ತನ್ನ ಕೈಯಿಂದ ಬಳಸಿಕೊಂಡು ಪತಿ ವೀರ ಹತ್ತಿರ ನಿಂತಿರುವುದು ಸತಿ-ಪತಿಯರ ಪ್ರೇಮವನ್ನು ಉತ್ಕೃಷ್ಟವಾಗಿ ಬಿಂಬಿಸುತ್ತದೆ. ಶಾಸನಗಳಲ್ಲಿ ಪತಿಷ್ಠ ಸತಿ ಹೋಗುವಾಗ ಬಳಸುವ 'ಕೂಡೆ' 'ಸಹಿತ' 'ಸಂಗಡ' ಈ ಮೊದಲಾದ ಶಬ್ದಗಳು ಸತಿ-ಪತಿಯರ ಬಿಡಲಾರದ ನಂಟನ್ನು ಸೂಚಿಸುತ್ತವೆ. ಉದಾಹರಣೆಗೆ "ಅವಲಿಯ ಗೋಪಗವಡನ ಬೆಸವುಗಂ ಬೈಚನಾಯ್ಕನ ಮಗ ರಾಯ ಸ್ವರ್ಗಸ್ಥನಾದಲ್ಲಿ ಆತನ ದವಳಿಗೆ ಆತನ ಕೂಡೆ ಸಹಗಮನಸ್ಥಳಾದಳು", "ಹರೂರ ಅಂಮಗೌಡನ ಬಯಿರವಗೌಡಿ ತಂಮ ಸ್ತ್ರೀಯರು ಸಹಸಂಗತಿಯುಡಿದರು ಶ್ರೀ" ಎಂಬ ಶಾಸನ ಪಾಠಗಳನ್ನು ಲಕ್ಷಿಸಬಹುದಾಗಿದೆ.[18] ಇದೇ ಸಮಯಕ್ಕೆ ಪತ್ನಿಯನ್ನು 'ಅರ್ಧಾಂಗಿ' ಎಂದು ಕರೆಯುವ ವಿಶೇಷತೆಯನ್ನು ಶಾಸನ ಗಳಲ್ಲಿ ಗುರುತಿಸಬಹುದಾಗಿದೆ. "ಆತನ ಅರ್ಧ್ದಾಂಗಿ ಚೆಂನಕ್ಕನು ಸಹಗಮನದಿಂ ಸ್ವರ್ಗಸ್ತೆಯಾದಳು", "ಆತನ ಅರ್ಧಾಂಗಿ ಮಲದೇವಿ ನಡಸಮಾಧಿಯುನ ಹೊಕ್ಕು ದೇವಲೋಗಾ... ಗಿ" ಇತ್ಯಾದಿ ಶಾಸನಪಾಠಗಳನ್ನು ನೋಡಿದಾಗ, ಪತಿ — ಪತ್ನಿಯರು ಅಭೇದ್ಯವೆಂದೂ, ಸಹಗಮನದಲ್ಲಿಯೂ ಅವರು ಅಭೇದ್ಯರೇ ಎಂದೂ ಈ ಹಿನ್ನೆಲೆಯಲ್ಲಿ ಅವರ ಪ್ರೇಮ ಅಮರವಾದುದೆಂದೂ ಶಾಸನಕವಿ ಹೇಳಬಯಸಿರುವುದು ಮನವರಿಕೆಯಾಗುತ್ತದೆ.[19]

ವಿದೇಶಿ ಪ್ರವಾಸಿಗರಾದ ನಿಕೊಲೊ ಡಿ ಕೊಂತಿ ( ಕ್ರಿ.ಶ. 1444 ), ಗಾಸ್ಪರೋ ಬಾಲ್ಬ ( ಕ್ರಿ. ಶ. 1579 — 1588 ), ಒಬ್ಬ ಅನಾಮಧೇಯರು ( ಕ್ರಿ. ಶ. 1614), ಪಿಯೆತ್ರೊ ಡೆಲ್ಲಾ ವಲ್ಲಿ ( ಕ್ರಿ.ಶ. 1623 — 1624 ), ಫ್ರಾನಸ್ವಾಸ್ ಬಿರನ್ಯೇ ( ಕ್ರಿ.ಶ.1659) — ಇವರು ಪತ್ನಿ ಪತಿಪ್ರೇಮದಿಂದ ಸತಿಹೋಗುತ್ತಿದ್ದುದನ್ನು ಉಲ್ಲೇಖಿಸಿದ್ದಾರೆ.[20] "ಗಂಡಂದಿರು ತೀರಿಹೋದರೆ ಹೆಂಡತಿಯರು ಗಂಡಂದಿರ ಜೊತೆಯಲ್ಲಿ ಬೆಂದು ಸಾಯುವುದು ಇಲ್ಲಿಯ ಪದ್ಧತಿ. ಗಂಡನಿಗೆ ಅತ್ಯಂತ ಪ್ರೀತಿಪಾತ್ರಳಾದ ಹೆಂಡತಿಯು ಸತ್ತಗಂಡನನ್ನು ಆಲಿಂಗಿಸಿಕೊಂಡು ಚಿತೆಯಲ್ಲಿ ಭಸ್ಮವಾಗುತ್ತಾಳೆ. ಉಳಿದ ಹೆಂಡತಿಯರು ಅನಂತರ ಚಿತೆಯಲ್ಲಿ ಬೀಳುತ್ತಾರೆ" ಎಂದು ಇಂಡಸ್ ನದಿ ಮುಖವನ್ನು ದಾಟಿ ಕ್ಯಾಂಬೆಗೆ ಬಂದ ಇಬ್ — ನೆ — ಬತೂತಾ ಹೇಳುತ್ತಾನೆ. ನಾಗಪಟ್ಟಣದಲ್ಲಿ ಕಂಡ ಸಹಗಮನವನ್ನು ವಿವರಿಸಿ, ಗಾಸ್ಪರೋ ಬಾಲ್ಬ "........ ಚಿತೆಯನ್ನೇರುವುದು

ಸತ್ತ ಗಂಡನ ಮೇಲಿನ ಪ್ರೇಮ ಅಮರವಾದುದೆಂದು ತೋರಿಸಲು'' ಎಂದು ಬರೆಯುತ್ತಾನೆ. ಕುತುಬಷಾನ್ ರಾಜ್ಯದಲ್ಲಿ ಸಹಗಮನ ಮಾಡುತ್ತಿದ್ದ ಸ್ತ್ರೀಯನ್ನು ತಡೆಯಲೆತ್ನಿಸಿದಾಗ ಅದನ್ನು ಅವಳು ಒಪ್ಪದೇ ಹೀಗೆ ಹೇಳಿದಳೆಂದು ಒಬ್ಬ ಅನಾಮಧೇಯ ಪ್ರವಾಸಿ ಉಲ್ಲೇಖಿಸುತ್ತಾನೆ. ''ತನ್ನನ್ನು ಯಾರೂ ಅಷ್ಟೊಂದು ಪ್ರೀತಿಸಿದ್ದನೋ ಆ ಗಂಡನನ್ನು ತಾನು ಹಿಂಬಾಲಿಸದಿದ್ದರೆ ಆತನಿಗೆ ಅನ್ಯಾಯಮಾಡಿದಂತಾಗುವುದೆಂದು ನುಡಿದಳು''. ಇಕ್ಕೇರಿಯಲ್ಲಿ ಗಿಯಕ್ಕನ ಸಹಗಮನವನ್ನು ವಿವರಿಸುವಾಗ ಪಿಯೆತ್ರೊ ದೆಲ್ಲಾ ವೆಲ್ಲೆ ಪತಿಯ ಮೇಲಿನ ಅವಳ ಅಮರ ಪ್ರೇಮವನ್ನು ಹೀಗೆ ಸ್ಮರಿಸುತ್ತಾನೆ. ಸತಿ ಹೋಗುವುದು ''ನಡೆಯುವುದೆಂದು ಗೊತ್ತಾದರೆ ಅಲ್ಲಿಗೆ ಹೋಗಿ ಅವಳನ್ನು ನೋಡದೇ ಇರುವುದಿಲ್ಲ. ನಾನು ಹೋಗಿ ಅಲ್ಲಿ ಇದ್ದು ಆಕೆಯ ಅಮರ ಪ್ರೇಮಕ್ಕೆ ನನ್ನ ಗೌರವವನ್ನು ಅರ್ಪಿಸಿ ಬರುವೆ''. ಅಹಮದಾಬಾದ — ಆಗ್ರಾದ ನಡುವಣ ಪ್ರದೇಶದಲ್ಲಿ ಜರುಗುತ್ತಿದ್ದ ಸತಿಘಟನೆಗಳನ್ನು ಕಂಡ ಫ್ರಾನ್ಸ್ವಾ ಬೆರ್ನೀಯೆ ಅದರ ಕಾರಣ ಕೇಳಿ ಉತ್ತರ ಪಡೆದುದನ್ನು ಉಲ್ಲೇಖಿಸುತ್ತಾನೆ. ''ಸತ್ತ ಗಂಡನೊಡನೆ ಏಕೆ ಚಿತೆಗೆ ಬೀಳುತ್ತಾರೆಂದು ನಾನು ಕೇಳಿದಾಗ ಅನೇಕರು ಹೇಳಿದರು, ಗಂಡನ ಮೇಲಿನ ಅಗಾಧ ಪ್ರೇಮವೇ ಇದಕ್ಕೆ ಕಾರಣ ಎಂದು''. ಈ ರೀತಿಯಾಗಿ ವಿದೇಶಿಪ್ರವಾಸಿಗರು ಸತಿಪದ್ಧತಿಯ ಕಾರಣಗಳಲ್ಲಿ ಒಂದಾಗಿರುವ ಪತಿಪ್ರೇಮವನ್ನು ಉಲ್ಲೇಖಿಸುತ್ತಾರೆ. ಈ ಪ್ರವಾಸಿಗರು 15ನೇಯ ಶತಮಾನದ ಈಚಿನವರಾಗಿದ್ದರೂ ಸತಿಪದ್ಧತಿಯ ಕಾರಣಗಳನ್ನು ಗುರುತಿಸುವಲ್ಲಿ ಅವರ ಮಾತುಗಳು ಮೌಲಿಕವಾಗುತ್ತವೆ. ಮಧ್ಯಕಾಲೀಯುಗದಲ್ಲಿ ಸತಿಪದ್ಧತಿ ಇನ್ನು ಹೆಚ್ಚಾಗಿ ಜರುಗುತ್ತಿದ್ದಿತು. ಆ ಕಾಲದಲ್ಲಿದ್ದು ಅದನ್ನು ಕುರಿತು ಹೇಳಿರುವ ಅವರ ಮಾತುಗಳು ಸತ್ಯಕ್ಕೆ ಹೆಚ್ಚು ಸಮೀಪವಾಗಿವೆ ಎಂದೇ ಹೇಳಬೇಕು.

ಈ ರೀತಿಯಾಗಿ ಪತಿಯ ಮೇಲಿನ ಪ್ರೀತಿಯಿಂದ ಪತ್ನಿಯರು ಸತಿ ಹೋಗುತ್ತಿದ್ದರು ಎಂಬುದನ್ನು ವಿವರಿಸಬಹುದಾಗಿದೆ. 'ಸತಿ' ಎಂಬುದು ಪ್ರೀತಿ ಭಗ್ನವಾದಾಗ ದುಃಖದಿಂದ ಸಂಭವಿಸಬಹುದು ಅಥವಾ ಪ್ರೀತಿಯನ್ನು ಸಾಕಾರಗೊಳಿಸಲು ಇಲ್ಲವೆ ಅಮರಗೊಳಿಸಲು ಸಂಭವಿಸಬಹುದು. ಕಾಲಾಂತರದಲ್ಲಿ ಅದು ಪತಿಯ ಮೇಲಿನ ಪ್ರೇಮವನ್ನು ತೋರಿಸುವ ಸಾಧನವೂ ಆಗಿರಬಹುದು. 6 — 7 ನೆಯ ಶತಮಾನದ ಬೃಹಸ್ಪತಿ ಹೇಳುವ ಮಾತನ್ನು ಇಲ್ಲಿ ಸ್ಮರಿಸಬಹುದು. ''ಪತಿಯ ಸುಖದಲ್ಲಿಯೂ

ಪತಿಯು ಸಹ್ಯಾಗಿಯಾಗಿದ್ದಲ್ಲಿ ಅವನು ಸತ್ತಾಗ ತಾನೂ ಮೃತಪ್ರಾಯಳಾಗುತ್ತಾಳೆ. ಆಗಲೇ ಆಕೆ ಅವನಲ್ಲಿ ಅನುರಕ್ತಳು.[21] ಕೆಲವು ವಿದೇಶಿ ಪ್ರವಾಸಿಗರು ಎಲೆ — ಅಡಿಕೆ ತಿನ್ನುತ್ತ ಸತಿಹೋಗುತ್ತಿದ್ದ ಚಿತ್ರವನ್ನು ಒದಗಿಸುತ್ತಾರೆ.[22] ಅದು ಬಹುಶಃ ಗಂಡನ ಮೇಲಿನ ಪ್ರೀತಿಯನ್ನು ತೋರಿಸುವುದೇ ಆಗಿದೆ, ಜನಪದರಲ್ಲಿ ಒಂದು ನಂಬಿಕೆಯುಂಟು. ಅದು, ''ಎಲೆ ಅಡಿಕೆ ಹಾಕಿಕೊಂಡಾಗ ಬಾಯಿ ಕೆಂಪಾದರೆ ... ..ಗಂಡ ಹೆಂಡತಿಯರು ಅನ್ಯೋನ್ಯವಾಗಿರುತ್ತಾರೆ''.ಎಂಬುದಾಗಿದೆ.[23] ಕಾರಣ ಸತಿಹೋಗುವಾಗಿನ ಈ ಕ್ರಿಯೆ ಪತಿ — ಪತ್ನಿಯರ ಪ್ರೇಮ ಜೀವನಕ್ಕೆ ಸಂಬಂಧಿಸಿದುದೇ ಆಗಿರಬೇಕು. ಹೀಗೆ ದಂಪತಿಗಳ ಜೀವನಕ್ಕೆ ಅಡಿಪಾಯವಾಗಿರುವ ಪ್ರೀತಿ ಸತಿಪದ್ಧತಿಗೆ ಕಾರಣವಾಗಿರಬೇಕೆಂದು ಹೇಳುವಲ್ಲಿ ಯಾವ ಅಭ್ಯಂತರವೂ ಇಲ್ಲವೆನಿಸುತ್ತದೆ.

2. <u>ಪಾತಿವ್ರತ್ಯದ ವೈಭವೀಕರಣ :—</u> ಗಂಡು — ಹೆಣ್ಣು ಸಮಾನವೆಂಬ ಭಾವನೆ ಇತಿಹಾಸದ ಗರ್ಭದಲ್ಲಿ ಮರೆಯಾಗಿ ಗಂಡು ಪ್ರಧಾನ ಶ್ರೇಷ್ಠ ಎಂಬ ಭಾವನೆಗಳು ಬಲಿಷ್ಠವಾಗುತ್ತಿದ್ದಂತೆಯೇ ಪತಿ — ಪತ್ನಿವ್ಯವಸ್ಥೆಯಲ್ಲಿಯೂ ಕೆಲವು ಮಾರ್ಪಾಟುಗಳು ಕಂಡುಕೊಂಡವು. ಪತಿ ಕುಟುಂಬ ಜೀವನದಲ್ಲಿ ಪ್ರಾಮುಖ್ಯವೆನಿಸಿ ಪತ್ನಿ ಎರಡನೆಯ ಸ್ಥಾನವನ್ನು ಪಡೆಯುವಂತಾದಳು. ಈ ಸಂದರ್ಭದಲ್ಲಿ ಹೆಣ್ಣಿನಿಂದ ಒಳ್ಳೆಯ ನಡತೆ, ಶೀಲ, ಸೇವೆ, ಭಕ್ತಿ, ಮೊದಲಾದವುಗಳನ್ನು ಪುರುಷ ಅಪೇಕ್ಷಿಸುವಂತಾಯಿತು. ಈ ಒಂದು ಹಿನ್ನೆಲೆಯಲ್ಲಿಯೇ 'ಪಾತಿವ್ರತ್ಯ ಕಲ್ಪನೆಯೂ ಬೆಳೆದುಬಂದಿತು' ಇದರ ಆವಿಷ್ಕಾರವಾದಂದಿನಿಂದ ಪುರುಷನ ಸೊತ್ತು ಸ್ತ್ರೀ ಎಂಬ ತಿಳುವಳಿಕೆಗೆ ದಾರಿಮಾಡಿಕೊಟ್ಟಿತೆಂದೇ ಹೇಳಬೇಕು. ಗಂಡನ ಅಸ್ತಿತ್ವವನ್ನು ಆಕೆಯ ''ಮುತ್ತೈದೆ'' ಎಂಬ ಕಲ್ಪನೆಯಲ್ಲಿ ಕಂಡುಕೊಳ್ಳಲು ಪ್ರಾರಂಭಿಸಿದರು. 'ಮುತ್ತೈದೆ' ಮಂಗಳವೆನಿಸಿದರೆ, 'ಮುತ್ತೈದೆಯಲ್ಲದವಳು ಅಮಂಗಳವೆನಿಸಿದಳು. ''ದೀರ್ಘಸುಮಂಗಲೀಭವ'' ''ಅಖಂಡ ಸೌಭಾಗ್ಯವತೀಭವ'' — ಈ ಮೊದಲಾದ ಮಾತುಗಳು ಪತಿಯ ಶ್ರೇಷ್ಠತೆಯನ್ನು, ಪತ್ನಿಯ ಮಂಗಲತೆ, ಪಾತಿವ್ರತ್ಯಗಳನ್ನು ಸೂಚಿಸುವವುಗಳಾಗಿವೆ. ಅಂದರೆ ಪತ್ನಿಯ ಬದುಕಿನ ಪೂರ್ಣತೆ ಇರುವುದು ಪತಿಯಲ್ಲಿಯೇ ಎಂಬುದು ಗಟ್ಟಿಗೊಂಡಿತು. 'ಪಾತಿವ್ರತ್ಯವನ್ನು ವೈಭವೀಕರಿಸಿದ್ದರ ಫಲವಾಗಿ ವಿಧವೆಗೆ ಮರುಮದುವೆಯ ಅವಕಾಶ ತಪ್ಪಿತು. ವಿಧವೆಗೆ ಕಠಿಣ ಜೀವನವನ್ನು ವಿಧಿಸಿದ್ದರಿಂದ ಸೌಭಾಗ್ಯಕ್ಕೆ ಎಲ್ಲಿಲ್ಲದ ಪ್ರಾಮುಖ್ಯ ಬಂದಿತು. ಮದುವೆಯಾದ ಹೆಣ್ಣು ಗಂಡನಿಗಿಂತ ಮುಂಚೆ ತಾನು ಮಡಿಯುವ ಆದರ್ಶವನ್ನು ಮಾಡಿಸಿಕೊಳ್ಳುವಂತಾಯಿತು.[24]. ಪತಿವ್ರತೆಯು ಗಂಡನ ಮರಣದ ನಂತರ

ಬದುಕದೇ ಸತಿಹೋಗಲು ಇಚ್ಛಿಸಿದಳು. ಅದು ಅವಳಿಗೆ ಪವಿತ್ರ ಹಾಗೂ ಅವಶ್ಯಕ ಕರ್ತವ್ಯವೆನಿಸಿತು. ಸತಿಯು ಪಾತಿವ್ರತ್ಯದ ಅಂತಿಮ ಹಾಗೂ ಶ್ಲಾಘನೀಯ ಕಾರ್ಯ ಎನಿಸಿತು. ಈ ಸಂದರ್ಭದಲ್ಲಿ ವಿದೇಶಿ ಪ್ರವಾಸಿಗರ ಮಾತುಗಳನ್ನು ಸ್ಮರಿಸಬಹುದು. ಕ್ರಿ.ಶ.ಪೂ. 316 ರಲ್ಲಿ ಯುದ್ಧದಲ್ಲಿ ಮಡಿದ ಹಿಂದೂಸೇನಾನಾಯಕ ಕೆತ್ಯುಸನೊಡನೆ ಚಿತೆ ಏರಲು ಸ್ಪರ್ಧೆನಡೆಸಿದ ಅವನ ಇಬ್ಬರು ಪತ್ನಿಯರ ಕುರಿತಾಗಿ ವಿವರಕೊಡುತ್ತ ಡಿಯೊಡೋರಸ್ ಸಿಕುಲ್ಯಾಲಸ್ ಹೀಗೆ ಬರೆಯುತ್ತಾನೆ : ''ಕೆಟಿಯೂಸನ ಚಿತೆ ಏರಲು ಅವನ ಇಬ್ಬರು ಹೆಂಡತಿಯರೂ ತವಕಪಡುತ್ತಿದ್ದರು. ಹಾಗೆ ಮಾಡಿದರೆ ತಾವು ಶೀಲದ ಉತ್ತಮೋತ್ತಮ ಕಿರೀಟ ಧರಿಸಿದಂತೆಂದು ಅವರ ಭಾವನೆ.''[25] ಅದೇ ರೀತಿ ದು ಆರ್ತೆಬಾಬೊರ್ನಾಸಾ' ಚಿತೆಏರುವುದು 'ಪತಿಭಕ್ತಿ' ಎಂದು ತಿಳಿಸಿದರೆ, ನಿಕೊಲಿಯೊಮನೂಚಿ ಸತಿಹೋದವರನ್ನು ಮಹಾಸಾಧ್ವಿಯರೆಂದು ಕರೆಯುತ್ತಾನೆ.[26]

ಕನ್ನಡ ಗ್ರಂಥ, ಜನಪದ, ಶಾಸನ — ಈ ಸಾಹಿತ್ಯಗಳಲ್ಲೆಲ್ಲ ಪಾತಿವ್ರತ್ಯವನ್ನು ಉನ್ನತವಾಗಿ ಕಂಡಿರುವುದನ್ನು ಕಾಣಬಹುದು. ಕುಮಾರವ್ಯಾಸನು ದ್ರೌಪದಿಯಿಂದ ''ಶೃಂಗಾರವೆಮಗೆ ಪತಿವ್ರತಾಗುಣವು'' ಎಂದು ಹೇಳಿಸುತ್ತಾನೆ.[27] ನಾಗಚಂದ್ರನ ಸೀತೆ ''ತನಗೆ ಪತಿವ್ರತವಿಲ್ಲದ ವನಿತೆ ಕುಲಸ್ತ್ರೀಯೆ ಭಿನ್ನಭಾಜನಂ'' ಎಂದು ಹೇಳುತ್ತಾಳೆ.[28] ಕುಮಾರವಾಲ್ಮೀಕಿಯು ''ಪತಿವ್ರತೆಯರಿಗೆ ವಿಷವಮೃತವಹುದುರಿ ಹಿಮಾನ್ವಿತ ಬಹುಹಾವು ನೇವಳವಹುದು'' ಎಂದು ಪತಿವ್ರತೆಯರ ಶಕ್ತಿ—ಸಾಮರ್ಥ್ಯಗಳನ್ನು ಕೊಂಡಾಡುತ್ತಾನೆ.[29] ಜನಪದ ಕವಿಯೊಬ್ಬ 'ಪತಿವ್ರತಾ ಧರ್ಮದಲಿ ಜಗದೊಳು ಬಾಳಿ : ನೀವು ಗತಿಸಿ ಹೋದರು. ನಿಮ್ಮ ನಾಮವು ಇರಲಿ ಎಂದು ಪತಿವ್ರತೆಯರಿಗೆ ಎಚ್ಚರಿಸುತ್ತಾನೆ.[30] ಸೌಭಾಗ್ಯವತಿಯರಾಗಿ ಬದುಕಲು ಜನಪದರು ಆಸೆಪಟ್ಟದ್ದನ್ನು ಹಲವು ಕಥೆಗಳು, ಗೀತೆಗಳು, ಗಾದೆಮಾತುಗಳು, ನಂಬಿಕೆಗಳು ಹೇಳುತ್ತವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು.

ದೇವ ಕಾಯೋ ಮುತ್ತೈದಿತ್ನ
ಮೂಗ್ತಿ ಹ್ವಾದ್ ಬಕ್ಕ ಕಡಿಗಿ ಭವಹೀನ
ದೇವ ಕಾಯೋ ಮುತ್ತೈದಿತನ ::

ಎಂದು ಜನಪದ ಜೀವನ ಬಯಸುತ್ತದೆ. ಹೀಗೆ ಸೌಭಾಗ್ಯ ಸಂಕೇತಗಳಾದ ತಾಳಿ, ಬಳೆ, ಕುಂಕುಮ, ಓಲೆ, ಕಾಲುಂಗರ ಮೊದಲಾದವು ಸ್ಥಿರವಾಗಿರಲೆಂದು ಹಲವು ಜನಪದ

ಗೀತೆಗಳ ಆಶಯವಾಗಿದೆ. "ಮುತ್ತೈದೆ ಕೈಲಿ ಗಾಜಿನ ಬಳೆ ಇಲ್ಲದೆ ಇರಬಾರದು" 'ಮುತ್ತೈದೆಯರು ಕಾಲುಂಗರ ಇಲ್ಲದೇ ಹೊಸಲು ದಾಟಬಾರದು' — ಹೀಗೆ ಹಲವು ನಂಬಿಕೆಗಳು ಜನಜೀವನದಲ್ಲಿ ಇಂದಿಗೂ ಇವೆ.[32] 'ಹತ್ತಿ ನೂಲಬೇಕು, ಮುತ್ತೈದೆ ಹಾಡಬೇಕು' ಎಂಬ ಪ್ರಸಿದ್ಧಗಾದೆ[33] ತುಂಬ ಪ್ರಚಾರದಲ್ಲಿದೆ. ಅಲ್ಲದೆ ಹಲವು ಶಾಸನಗಳು ಪ್ರತಿವ್ರತಾ ಧರ್ಮವನ್ನು, ಅದರ ಸೌಭಾಗ್ಯವನ್ನು ಪ್ರಕಟಪಡಿಸುವುದನ್ನು ಇಲ್ಲಿ ಉಲ್ಲೇಖಿಸಬಹುದು. ಕರ್ನಾಟಕದ ಸ್ತ್ರೀಯರು ಪತಿವ್ರತೆಯರೆನಿಸಿಕೊಳ್ಳಲು, ಪತಿಭಕ್ತೆಯರೆನಿಸಿಕೊಳ್ಳಲು, ತಾವು ಸೀತೆ, ಅರುಂಧತಿ, ಸಾವಿತ್ರಿ, ಲಕ್ಷ್ಮಿ, ಪಾರ್ವತಿ ಮೊದಲಾದ ಪತಿವ್ರತಾ ಶಿರೋಮಣಿಗಳಿಗೆ ಸಮಾನರೆಂದು ಹೇಳಿಕೊಳ್ಳಲು ತವಕಪಟ್ಟಿದ್ದಾರೆ. ಉದಾಹರಣೆಗೆ "ಆದಿಗವುಂಡನ ಕಾಂತೆ ಮನಃಕಾಂತೆ ನಾಗಗಾವುಂಡಿ ಜಗತ್ಕಾಂತೆ ಪತಿವ್ರತಗುಣದಿಂದನ್ತಿಲ್ಲದ ಜಸದಿನೆಸದಳವನೀತಳದೊಳು". "ಪತಿವ್ರತೆಯೆಂದು ಸದಾ ಸಚ್ಚರಿತ ಪವಿತ್ರೆಯೆಂದು ಧರೆ ಬಣ್ಣಿಸುತ್ತಿರ್ಪುದು ಗೊಜ್ಜಿಯಕ್ಕನಂ", "ಪತಿಭಕ್ತಿಯೊಳಾ ವಿಭುವಿನ ಸತಿಯೆನಿಸಿದ ಕಣ್ಣಿಕಬ್ಬೆ ದೊರೆಯೆನಿಪಳರುಂಧತಿಗೆ ಸಮನೆಗೆ ಗುಣಾಳಂ (ಕೀ)ತಿ (ಸಾ)ವಿತ್ರಿಗೆ ಪತಿವ್ರತಾಗುಣದಿನಂ" ಹೀಗೆ ಹಲವು ಶಾಸನ ಪಾಠಗಳನ್ನು ಕೊಡಬಹುದಾಗಿದೆ.[34]

ಈ ವಿವರಣೆಯಿಂದ ಕರ್ನಾಟಕದ ಜೀವನ ಪಾತಿವ್ರತ್ಯವನ್ನು ವೈಭವೀಕರಿಸಿ ಕಂಡಿದ್ದನ್ನು ಮನವರಿಕೆಯಾಗುತ್ತದೆ. ಹೀಗೆ ಜೀವನದ ಪ್ರತಿಹಂತದಲ್ಲಿ ಪಾತಿವ್ರತ್ಯದ ಬಣ್ಣನೆ ಕಂಡ ಸ್ತ್ರೀಯರು ಭಾವನಾತ್ಮಕವಾಗಿ ಅದರೊಂದಿಗೆ ಕರಗಿಹೋಗುತ್ತಿದ್ದರು. ಆಗ ಅವರ ಕಣ್ಣು ಮುಂದೆ ಕಾಣುವುದೊಂದೇ, ಪಾತಿವ್ರತ್ಯದ ದಿವ್ಯಕಲ್ಪನೆ. ಇಂಥ ಮನಸ್ಥಿತಿಯಲ್ಲಿ ಬೆಳೆದ ಸ್ತ್ರೀಯರು ಗಂಡ ಮರಣ ಹೊಂದಿದಾಗ ಸಹಜವಾಗಿ ಸತಿ ಹೋಗಲು ಬಯಸುವಂತಾಯಿತು. ಬರುಬರುತ್ತ ಅದು ಪಾತಿವ್ರತ್ಯ ಪ್ರದರ್ಶನದ ಮಾರ್ಗವೂ ಆಗಿರಬೇಕು.

ಶಾಸನಪಾಠವೊಂದರಲ್ಲಿ ಅಪರೂಪವೆನ್ನುವಂತೆ ಪಾತಿವ್ರತ್ಯವನ್ನಾಶ್ರಯಿಸಿ ಗಂಡನೊಡನೆ ಅಗ್ನಿಪ್ರವೇಶ ಮಾಡಿದ ಉಲ್ಲೇಖವೊಂದು ದೊರಕುತ್ತದೆ. 'ಗಣೇಶ್ವರನು ಆತನ ಪ್ರಾಣೇಶ್ವರಿ ಜೊಂಮಾಯಿ ಕೂಡಿ ಪ್ರತಿವ್ರತಾಗುಣದಿಂ ಅಗ್ನಿಪ್ರವೇಶಂ ಮಾಡಿ ಸಂಗ್ರಾಮ ರಂಗದೊಳು ಸ್ವರ್ಗಪ್ರಾಪ್ತರಾದರು" ಎಂದು ಬೆಳಗಾವಿ ಶಾಸನ ವರ್ಣಿಸುತ್ತದೆ.[35]

ಜಿರಾಂವರಾಯಿ ಗಂಡ ಗಣೀಶ್ವರನೊಡನೆ ಪತಿವ್ರತಾಗುಣಕ್ಕಾಗಿ ಯುದ್ಧಭೂಮಿಯಲ್ಲಿ ಅಗ್ನಿಪ್ರವೇಶ ಮಾಡಿದಳೆಂದು ಅಪೂರ್ವ ವಿವರಣೆ ಇಲ್ಲಿದೆ. ಸತಿಹೋದ 'ದೇಕಬ್ಬೆ' ಯನ್ನು 'ಪತಿಭಕ್ತೆ' ಎಂದು ಬಿಳತೂರು ಶಾಸನ ಹೊಗಳುತ್ತದೆ.[36] ಈ ಎರಡು ಶಾಸನಗಳು ಸತಿ ಹೋಗುವವರ ಪಾತಿವ್ರತ್ಯ, ಪತಿಭಕ್ತಿಗಳನ್ನು ಪ್ರತಿನಿಧಿಸುವವುಗಳಾಗಿವೆ ಎಂದೇ ಹೇಳಬೇಕು. ಸತಿಶಿಲ್ಪಗಳಂತೂ ಪಾತಿವ್ರತ್ಯದ, ಮಾಂಗಲ್ಯದ ಸಂಕೇತಗಳನ್ನು ಪ್ರಕಟಪಡಿಸುತ್ತವೆ. "ಈ ಮಾಸ್ತಿಕಲ್ಲುಗಳ ಮೇಲೆ ಸ್ತ್ರೀಯು ಮುತ್ತೈದೆಯಾಗಿ ಮರಣಹೊಂದಿದ ಸೂಚನಕವಾಗಿ ಬಳೆ, ಕಂಕಣಗಳುಳ್ಳ ಒಂದು ಕೈಯು ಚಿತ್ರವು ಕೆತ್ತಲ್ಪಟ್ಟಿರುವುದು" ಎಂದು ಆರ್.ಎಸ್. ಪಂಚಮುಖಿ ಅವರು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು.[37] ಹೀಗೆ ಸೌಭಾಗ್ಯದ ಔನ್ನತ್ಯಕ್ಕಾಗಿ ಗಂಡನ ಮರಣದ ನಂತರ ಸತಿಹೋದ ಪತಿವ್ರತೆಯರು ಕರ್ನಾಟಕದ ಶಾಸನ ಮತ್ತು ಶಿಲ್ಪಗಳಲ್ಲಿ ಕಾಣಸಿಗುತ್ತಾರೆ.

ರನ್ನನ 'ಅಜಿತಪುರಾಣ' ದಲ್ಲಿ ನಾಗದೇವನೊಡನೆ "ಒಡಸತ್ತು ಪತಿವ್ರತೆ ಗುಂಡಮಬ್ಬೆ....." ಎಂಬ ಮಾತು ಬರುತ್ತದೆ.[38] ಯುದ್ಧದಲ್ಲಿ ಮಡಿದ ನಾಗದೇವನೊಡನೆ ಮರಣಹೊಂದಿದ ಗುಂಡಮಬ್ಬೆಯನ್ನು ಪತಿವ್ರತೆ ಎಂದು ರನ್ನ ಗುರುತಿಸುವಲ್ಲಿ, 10ನೆಯ ಶತಮಾನದಲ್ಲಿದ್ದ ಸತಿಪದ್ಧತಿಗೆ ಕಾರಣಗಳಲ್ಲೊಂದಾದ ಪತಿವ್ರತಾಕಲ್ಪನೆಯು ಅವನಿಗೆ 'ಒತ್ತಾಸೆ' ಕೊಟ್ಟಿರಬೇಕು ಎನಿಸುತ್ತದೆ. ಬಸವಣ್ಣನವರೂ ಸತಿಹೋದವರನ್ನು 'ಪುರುಷಮೃತಿಯರು' ಎಂದು ಸೂಚಿಸಿದ್ದಾರೆ.[39] ಕುಮಾರ ವಾಲ್ಮೀಕಿಯು ರಾಮನ ಶಿರವನ್ನು ಕಂಡ ಸೀತೆಯನ್ನು ಚಿತ್ರಿಸುವಾಗ "......... ಸಾಯ ಬಗೆದಳಾ ಪತಿವ್ರತೆ ತಾಯಿ ತಾನಿಹುದುಚಿತವಲ್ಲೆನುತ" ಎಂದು ವರ್ಣಿಸುತ್ತಾನೆ.[40] ಷಣ್ಮುಖ ಶಿವಯೋಗಿಗಳ ವಚನವೊಂದು ಹೀಗೆ ಬರುತ್ತದೆ.[41]

ಗಂಡಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು
ಪುಂಡ ವೀರಸ್ತ್ರೀ ತಾನು ದಂಡೆಯ ಕಟ್ಟಿಕೊಂಡು ಖಂಡೆಯವ ಪಿಡಿದು
ತಂಡತಂಡದ ಜನರ ಮುಂದೆ ಮೆರೆದುಕೊಂಡು ಬಂದು
ಕಿಚ್ಚಿನ ಹೊಂಡವ ಕಂಡು ಹೆದರಿ ಹಿಮ್ಮೆಟ್ಟಿದರೆ
ಅವಳಿಗದೆ ಭಂಗವಲ್ಲದೆ ಶೃಂಗಾರ ಮೆರೆವುದೇ ಅಯ್ಯಾ ?
ಪತಿಲಿಂಗ, ಸತಿಶರಣ ತನ್ನ ಪತಿವ್ರತಾಭಾಷೆಯ ನುಡಿದು ನಡೆಯಲ್ಲಿ ತಪ್ಪಿದಡೆ
ಅವನ ಭಂಗಕ್ಕೆ ತುದಿಮೊದಲಿಲ್ಲ ನೋಡಾ ಅಖಂಡೇಶ್ವರಾ"

ಷಣ್ಮುಖ ಶಿವಯೋಗಿಗಳು ಈ ವಚನದಲ್ಲಿ ' ಪತಿವ್ರತಾಭಾಷೆ ' ಎಂಬ ಪದವನ್ನು ವಿಶಿಷ್ಟ ಸಂದರ್ಭದಲ್ಲಿ ಕೊಡುತ್ತಾರೆ. ಗಂಡ ಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು ಸಿಂಗರಿಸಿಕೊಂಡು ಬಂದ ಸತಿ ಕೊಂಡಕ್ಕೆ ಅಂಜಿ ಹಿಂದೆಗೆದರೆ ಅವಳಿಗೆ ಅದು ಭಂಗತರುತ್ತದೆಯಲ್ಲದೆ ಶೃಂಗಾರ ( ಸಿಂಗಾರು) ಮೆರೆಯುವುದಿಲ್ಲ, ಹಾಗೆಯೇ ಲಿಂಗವೇ ತನ್ನ ಪತಿ ಎಂಬ ಭಾವನೆಯ ಶರಣಸತಿ ತನ್ನ " ಪತಿವ್ರತಾಭಾಷೆಯ " ನಡೆಯಲ್ಲಿ ತಪ್ಪಿದರೆ ಅವನ ಭಂಗಕ್ಕೆ ತುದಿಮೊದಲು ಇಲ್ಲದಾಗುತ್ತದೆ. ಈ ಅರ್ಥದ ಹಿನ್ನೆಲೆಯಲ್ಲಿ ಗಂಡ ಸತ್ತನಂತರದಲ್ಲಿ ' ಗಂಡನೊಡನೆ ಕೆಂಡವ ಬೀಳುವೆನೆಂದು ' ಬಹುಶಃ ಸತಿಯರು ಭಾಷೆ ಕೊಡುತ್ತಿದ್ದರು ಎನಿಸುತ್ತದೆ. ಅದನ್ನು ' ಪತಿವ್ರತಾಭಾಷೆ ' ಎಂದು ಕರೆಯುತ್ತಿರಬೇಕು. ಇಂಥ ಭಾಷೆ ಕೊಟ್ಟ ಸ್ತ್ರೀ ಅಗ್ನಿಗೆ ಅಂಜಿ ಹಿಂದೆಗೆಯುವುದು ಅಪಮಾನಕರವಾಗಿತ್ತು. ಲಿಂಗವನ್ನು ಪತಿಯೆಂದು ಭಾವಿಸಿದ ಶರಣಸತಿಯು ' ಪತಿವ್ರತಾಭಾಷೆ ' ತಪ್ಪುವುದೂ, ಪತ್ನಿಯು 'ಪತಿವ್ರತಾಭಾಷೆ ' ತಪ್ಪುವುದೂ ಎರಡೂ ಅವಹೇಳನಕರವಾದವುಗಳೇ ಎಂದು ಷಣ್ಮುಖ ಶಿವಯೋಗಿಗಳು ಹೇಳುವಂತಿದೆ. ಇದು ಸರಿ ಎಂದು ಇಟ್ಟುಕೊಂಡರೆ ವಿಜಯನಗರೋತ್ತರ ಕಾಲದಲ್ಲಿದ್ದ ಸತಿಪದ್ಧತಿಗೆ ' ಪತಿವ್ರತಾಕಲ್ಪನೆ ' ಒಂದು ಮುಖ್ಯ ಪ್ರೇರಕಶಕ್ತಿಯಾಗಿತ್ತು ಎಂದು ಹೇಳಬಹುದಾಗಿದೆ.

ಇಂದು ಕರ್ನಾಟಕದ ಜನಜೀವನದಲ್ಲಿ ಪತಿವ್ರತಾಭಾವಕ್ಕೆ ವಿಶಿಷ್ಟ ಮಾನ್ಯತೆ ಇದೆ. ಪತಿವ್ರತೆಯಾದವಳು ಸತಿಹೋಗಬೇಕೆಂದೇ ಹಲವರು ಇಂದೂ ತಿಳುವಳಿಕೆ ಇಟ್ಟು-ಕೊಂಡಿದ್ದಾರೆ. ಕೃಷ್ಣಮೂರ್ತಿ ಹನೂರ ಅವರು ಸತಿಹೋದ ಕಾಟವ್ವನ ಗೀತೆ ಹಾಡಿದವಳನ್ನು ಸಂದರ್ಶನಕೊಟ್ಟಾಗ, ತಾವು ಕೇಳಿದ್ದನ್ನು — ಅವಳು ಹೇಳಿದ್ದನ್ನು ಹೀಗೆ ವಿವರಿಸುತ್ತಾರೆ.[42]

<u>ಪ್ರಶ್ನೆ :—</u> ಸಿರಿಯಜ್ಜ, ನೀನು ಈ ಅರವತ್ತು ವರ್ಷ ಕಾಲದಲ್ಲಿ ಹೀಗೆ ಗಂಡ ಸತ್ತ ಅಂತ ಹಿಂದೆನೆ ಬೆಂಕಿಗೆ ಬಿದ್ದು ಸತ್ತವರ್ನ ಕಂಡಿದ್ದಿಯಾ ?

<u>ಉತ್ತರ :—</u> ಇಲ್ಲ, ಈಗ್ಯಾರು ಅಂತ ಪತಿಬ್ರತೇರು. ಆಯಮ್ಮ ಪತಿವ್ರತೆ ಅದುದ್ದಕ್ಕಂಗೋಗಿ ಕೆಂಡ ಕೊಂಡಾಗಿ ದೇವ್ತಿ ಆದ್ಲು.

ಇಲ್ಲಿ ಗಮನಿಸಬೇಕಾದದ್ದು ಇಷ್ಟು : ಪತಿವ್ರತೆಯರು ಗಂಡನ ಮರಣದ ನಂತರ ಸತಿಯಾಗುತ್ತಿದ್ದರು. ಕಾಟಮ್ಮ ಪತಿವ್ರತೆ ಇದ್ದ ಕಾರಣ ಸತಿಹೋದಳು ಈ ಸಿರಿಯಜ್ಜಿಯು

ಭಾವನೆ ಸ್ತ್ರೀ ಸಮುದಾಯದ ಭಾವನೆಯೇ ಆಗಿದೆ. ಇದು ಇಂದಿನ ತಿಳುವಳಿಕೆ ಮಾತ್ರವಾಗಿಲ್ಲವೆಂಬುದನ್ನು ಈಗಾಗಲೇ ಸ್ಪಷ್ಟಗೊಳಿಸಲಾಗಿದೆ. ಎಸ್ ಸುಬ್ರಮಣಿಯನ್ ಅವರು ಸಂಗಮ್ ಕಾಲದಲ್ಲಿಯ ಸತಿಯರೊಂದನ್ನು ವಿವರಿಸಿ, ತೊಲಕಾಪ್ಪಿಯಮುನಲ್ಲಿ "ಅದು ಒಳ್ಳೆಯ ಮಹಾಸ್ತ್ರೀ'ಯ ಕೃತಿ ಎಂದು ಕರೆಯಲ್ಪಟ್ಟಿದೆ" ಎಂದು ಹೇಳುತ್ತಾರೆ.[43] ಹೀಗೆ ದಂಪತಿಗಳ ಮಧ್ಯ 'ಪತಿವ್ರತಾಕಲ್ಪನೆ' ವಿಶಿಷ್ಟ ರೀತಿಯಲ್ಲಿ ಬೆಳೆದು ಅದು ಸತಿಪದ್ಧತಿಯ ಕಾರಣಗಳಲ್ಲಿ ಒಂದಾಗಿ ಪರಿಣಮಿಸಿಹೋಗಿರುವುದು ಇತಿಹಾಸದ ಸತ್ಯ ಸಂಗತಿಯಾಗಿದೆ.

**3. <u>ವೈಯಕ್ತಿಕ ಪ್ರತಿಷ್ಠೆ:—</u>** ಮಾನವನ ಮೂಲಭೂತವಾದ ಒಂದು ಸ್ವಭಾವ ಪ್ರತಿಷ್ಠೆಗಾಗಿ ಹಂಬಲಿಸುವುದಾಗಿದೆ. ಸಮಾಜ ನಂಬಿಕೊಂಡಂಥ ಜೀವನ ಮೌಲ್ಯಗಳನ್ನು ಅನುಸರಿಸಿಯೋ, ತಮ್ಮ ಘನವ್ಯಕ್ತಿತ್ವವನ್ನು ಪ್ರದರ್ಶಿಸಿಯೋ ತಮ್ಮ ವೈಶಿಷ್ಟ್ಯವನ್ನು ಇತಿಹಾಸವಾಗಿಸಲು ವ್ಯಕ್ತಿಯ ಒಳಹಂಬಲ ಯಾವತ್ತೂ ಆಶಿಸುತ್ತದೆ. ಈ ಒಂದು ಹಿನ್ನೆಲೆಯಲ್ಲಿ ಸತಿ ಆಚರಣೆ ಬೆಳೆದುಬಂದಿರುವುದನ್ನು ಗುರುತಿಸಬಹುದಾಗಿದೆ. ಪತ್ನಿ ಸತಿ ಹೋಗುವುದನ್ನು ತನಗೆ ಗೌರವವೆಂದು ಭಾವಿಸಿದಳಲ್ಲದೆ ತನ್ನ ಹೆಸರು ಸಮಾಜ ಹೊಗಳಿ ಚಿರಸ್ಥಾಯಿಯಾಗಿ ಉಳಿಸುತ್ತದೆ ಎಂದು ನಂಬಿಕೊಂಡಿದ್ದಳು. ಪತ್ನಿಯ ಈ ಮನಸ್ಥಿತಿ ಸತಿಪದ್ಧತಿಯನ್ನು ಉಳಿಸಿ ಬೆಳೆಸಲು ಕಾರಣವಾಯಿತು. ಆದರೆ ಸಮಾಜದಲ್ಲಿ ಎಂದು ಪತಿಯ ಸಾಧನ ಪ್ರಧಾನವಾಗಿ ಪಾತಿವ್ರತ್ಯಕ್ಕೆ ಪ್ರಮುಖಸಾಧನ ಲಭ್ಯವಾಯಿತೋ, ಆ ಒಂದು ಬೆಳವಣಿಗೆಯ ಹಂತದಲ್ಲಿ ಸ್ತ್ರೀ ಸಮೂಹ ಗಂಡನೊಡನೆ, ಮರಣಹೊಂದುವುದೂ ಗೌರವ — ಕೀರ್ತಿ — ದಾಯಕವಾದುದೆಂದು ಭಾವಿಸತೊಡಗಿತೆಂಬುದನ್ನು ಮರೆಯಬಾರದು.

'ಡಿಯೊಡೊರಸ್ ಸಿಕ್ಯೂಲಸ್' ಎಂಬ ವಿದೇಶಿಪ್ರವಾಸಿ ಕ್ರಿ.ಶ. ಪೂರ್ವ.316 ರಲ್ಲಿ ಘಟಿಸಿದ ಹಿಂದೂಸೇನಾನಾಯಕ ಕೆಟಿಯೂಸನ ಪತ್ನಿಯ ಸಹಗಮನವನ್ನು ವಿವರಿಸುವಾಗ ಹೀಗೆ ಬರೆಯುತ್ತಾನೆ ಸ್ತ್ರೀಯರು "ಸತ್ತ ಮೇಲೆ ಗಂಡನೊಡನೆ ಚಿತೆಯನ್ನೇರುವುದನ್ನು ಮಹಾಗೌರವವೆಂದು ಭಾವಿಸಿದರು. ಒಬ್ಬನಿಗೆ ಇಬ್ಬರು ಮೂವರು ಹೆಂಡತಿಯರಿದ್ದಲ್ಲಿ ಅವರಲ್ಲಿಯೇ ಗೌರವಕ್ಕೆ ಸ್ಪರ್ಧೆ ನಡೆಯುತ್ತಿತ್ತು".[44] ಇಕ್ಕೇರಿಯಲ್ಲಿ ಸತಿಹೋದ ಗಿಯಕ್ಕಮನ ಕುರಿತಾಗಿ ಪಿಯತ್ರೊ ದೆಲ್ಲಾವಲ್ಲಿ ( 17ನೆಯ ಶತಮಾನ ) ತನ್ನ ವರದಿಯಲ್ಲಿ ತನ್ನ ಕೀರ್ತಿ ದೂರದೇಶಕ್ಕೂ ಮುಟ್ಟುವುದೆಂದು ಕೇಳಿ ಹಿಗ್ಗಿದಳು"

ಎಂದು ಬರೆಯುತ್ತಾನೆ.[45] ಈ ವಿದೇಶಿ ಪ್ರವಾಸಿಗರ ವರದಿಗಳಿಂದ ಸತಿಹೋಗುವುದನ್ನು ಗೌರವವೆಂದೂ, ಅದರಿಂದ ತನ್ನ ಕೀರ್ತಿ ಹಬ್ಬುವುದೆಂದೂ ಭಾವಿಸಿ ಸತಿಹೋಗಲು ಬಯಸುವುದು ಮನದಟ್ಟಾಗುತ್ತದೆ. ಮಾಸ್ತಿಕಲ್ಲುಗಳನ್ನು ನೆಟ್ಟ ಉದ್ದೇಶವೂ ಸತಿಯ ಹೆಸರನ್ನು ಚಿರಸ್ಥಾಯಿಗೊಳಿಸುವುದೇ ಆಗಿದೆ ಎಂಬುದನ್ನು ಇಲ್ಲಿ ಸ್ಮರಿಸಬಹುದು. ಬೆಳತೂರು ಶಾಸನದಲ್ಲಿ ದೇಕಬ್ಬೆಯ ತಂದೆ "ನಿಜಸುತೆಗನುರಾಗದಿಂ ಮಣ್ಡಲಕ್ಕೆಲ್ಲಂ ಪಡಿಛನ್ನಮಾಗೆ ಶಿಲಾಸ್ತಂಭ ಶಾಸನಮಾಗೆ ನಟ್ಟಂ" ಎಂಬ ಉಲ್ಲೇಖ ಬರುತ್ತದೆ.[46] ಹೀಗೆ ಹೇಳುವ ಉದ್ದೇಶ, ಸತಿ ಹೋದವಳನ್ನು ಗೌರವಿಸುವುದಾಗಿದೆ. ಮತ್ತು ಅವಳ ಆದರ್ಶ ಭೂಮಂಡಲದಲ್ಲಿ ಅನುಕರಣೀಯವೆಂದು ಬಣ್ಣಿಸುವುದಾಗಿದೆ. ಹಲವು ಶಾಸನಗಳು ಮಹಾಸತಿ ಮಾಸ್ತಿ ಎಂದು ಗೌರವದಿಂದ ಸತಿ ಹೋದವಳನ್ನು ಉಲ್ಲೇಖಿಸುವುದನ್ನು ಇಲ್ಲಿ ಸ್ಮರಿಸಬಹುದು. "ಕೋವಿಕಾಷ್ಠಿ ದೇವೆಯನಾಯ್ಕ ಸರ್ಪದಷ್ಟವಾದಲ್ಲಿ ಆತನಸತಿ ಮುದಿಯಾನಕೆತಿ ಮಹಾಸತಿಯಾಗಿ ವಯುಕುಂಟ್ಟಪ್ರಾಪಿತವದರು" "ಮಾಸ್ತಿನಾದಾರು ಕಾಮಾಯಿಗಳು ಸಹಗಮನಸ್ವರ್ಗಪ್ರಾಪ್ತರಾದರು" "(ದೇವಿ) ನಾಯಕ ಅವನ ಮಡದಿಗೆ ನಾಗಾಯಿ ದೇಮಾಯಿಗಳುಮಹಾಸತಿಯರಾಗಿ ಆತನ ಸಂಘಾತ ಸ್ವರ್ಗಸ್ಥರಾದರು" - ಹೀಗೆ ಇನ್ನು ಹಲವಾರು ಶಾಸನ ಪಾಠಗಳನ್ನು ಉಲ್ಲೇಖಿಸುತ್ತ ಹೋಗಬಹುದಾಗಿದೆ.[47] ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ತೋಂಟದರಾಯನ ಮಡದಿ ಚೆನ್ನಬಸವಮ್ಮ ಸತಿಹೋಗುವಾಗಿನ ವರ್ಣನೆ ಹೀಗೆ ಬರುತ್ತದೆ.[48]

ನರ್ತಿಸಿದಳು ನಲಿದಳು ಮನದನ್ನನ
ಮೂರ್ತಿಯ ವಿಮಲಸದ್ಗುಣವ
ಕೀರ್ತಿಸುತಾ ಸತಿ ಮಾಸತಿಯಾಗಿ ಪ್ರ
ವರ್ತಿಸಿದುದನೇನೆಂಬೆ.::

ಈ ವಿವರಗಳು ಪತ್ನಿ ಗಂಡನೊಡನೆ ಮರಣಹೊಂದಿ ಮಹಾಸತಿಯಾಗುವ ಗೌರವ ಪಟ್ಟವನ್ನು ಸೂಚಿಸುತ್ತವೆ. ಇಂಥ ಮಹಾಸತಿತ್ವಕ್ಕಾಗಿ ಸತಿಪದ್ಧತಿಯನ್ನು ಸ್ತ್ರೀಸಮೂಹ ಅನುಸರಿಸಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಕ್ರಿ.ಶ.1445 ರ ಕುಪ್ಪೆಗ್ರಾಮ ಶಾಸನ ಸಹಗಮನವೊಂದನ್ನು "ಬೊಮ್ಮರಸಗೌಡನೈದಿದ ದೇವಪದಮಂ ಆತನರ್ಧಾಂಗಿ ಬಲುಚಕ್ಕ ಭೂತಳದೊಳಗುಳ್ಳ ಯುವತಿಯರ ಶಿರೋಮಣಿ ಸಹಗಮನಾತುರಮ ಮಾಡಿ ಕೂಡಿದರು ಶಿವಪದಮಂ" ಎಂದು ವರ್ಣಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[49]

ಸತಿ ಬಲ್ಲುಚಕ್ಕನನ್ನು ಯುವತಿಯರ ಶಿರೋಮಣಿ ಎಂದು ಈ ಶಾಸನ ಹೊಗಳುತ್ತದೆ. ಸತಿಹೋದವಳನ್ನು ಸಮಾಜ ಅಂದು ಹೊಗಳುವುದೇನೂ ವಿಶೇಷವಲ್ಲ. ಪಂಪನು ಮಾದ್ರಿಯ ಸಹಗಮನವನ್ನು ತಪೋವನದ ಋಷಿಗಳು ಹೊಗಳಿದರೆಂದು ರನ್ನನು ಗುಂಡಮಬ್ಬೆಯ ಸಹಗಮನವನ್ನು ಗುಂಡೆಲ್ಲ ಹೊಗಳಿತೆಂದು ವರ್ಣಿಸುವುದನ್ನು ಇಲ್ಲಿ ಸ್ಮರಿಸಬಹುದು.[50] ಶಾಸನವೊಂದು ಸತಿಹೋದವಳನ್ನು "ಶ್ರೀಮತಿಗೆ ಧರಣಿಗೆ ವಾಗ್ದೇವಿಗೆ ರತಿರಂಭೆಗೆ ಕೊನ್ತಿಗೆ ಸಮಾನ" ಎಂದು ಕೊಂಡಾಡಿದರೆ ಇನ್ನೊಂದು ಶಾಸನವು "ಶಿವಪಾದಶೇಖರೆ, ಶಿವಕಥಾಳಾಪೆ" ಎಂದು ಬಣ್ಣಿಸುತ್ತದೆ.[51] ಸು. ಕ್ರಿ. ಶ. 1650 ರಲ್ಲಿ ಭಾರತಕ್ಕೆ ಬಂದ ನಿಕೋಲಿಯೋ ಮನೂಚಿ ಸಹಗಮನ ಮಾಡಿದ ಮಹಿಳೆಯ ಹಿರಿಮೆಯನ್ನು ಜನರು ಕೊಂಡಾಡುತ್ತಾರೆಂದು ಬರೆಯುತ್ತಾನೆ.[52] ಈ ವಿವರಣೆ, ಪ್ರಾಚೀನ ಸಮಾಜ ಸತಿ-ಹೋದವಳನ್ನು ಗೌರವದಿಂದ ಕಂಡು ಕೊಂಡಾಡುತ್ತಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇಂಥ ಕೀರ್ತಿ — ಗೌರವ ಪಡೆಯಲು ಸ್ತ್ರೀಯರು ಸಹಜವಾಗಿಯೇ ಮನಸ್ಸು ಮಾಡಿರಬೇಕು. ಆದರೆ ಸ್ತ್ರೀಯರ ಈ ಪ್ರತಿಷ್ಠೆಯು ಸತಿಪದ್ಧತಿ ಉಗಮದ ಮೂಲ ಕಾರಣವಾಗಿತ್ತು ಎಂದು ಸ್ಪಷ್ಟೀಕರಣಗೊಳಿಸುವಂತಿಲ್ಲ. ಹೆಣ್ಣು ತನ್ನ ಗಂಡನನ್ನು ದೇವರು ಎಂಬ ಭಾವನೆ ಮೂಡಿಸಿಕೊಂಡ ಹಂತದಲ್ಲಿ, ತಾನೂ ಅವನೊಡನೆ ಮರಣಹೊಂದಬೇಕು ಎಂಬ ನೆಲೆಗೆ ಸಹಜವಾಗಿ ಮುಟ್ಟಿರಬೇಕು ಹೀಗೆ ಸತಿಹೋಗುವದು ಬರುಬರುತ್ತ ಗೌರವ ತರುವಂಥದಾಗಿ ಕಾಣಿಸಿಕೊಂಡಿರಬೇಕು. ಈ ಭಾವನಾತ್ಮಕ ಬೆಳವಣಿಗೆ ಸತಿಪದ್ಧತಿಯ ಉಳಿಕೆಗೆ ಮತ್ತು ಬೆಳವಣಿಗೆಗೆ ಕಾರಣವಾಗಿ ನಿಂತಿತು ಎಂದು ಹೇಳಬಹುದಾಗಿದೆ.

4. <u>ಮಾನರಕ್ಷಣೆಯ ವ್ಯವಸ್ಥೆ:—</u> ವ್ಯಕ್ತಿ ತನ್ನ ಮಾನರಕ್ಷಣೆಗಾಗಿ ಸಾಮಾನ್ಯವಾಗಿ ಬದ್ಧನಾಗಿರುತ್ತಾನೆ. 'ಮಾನಭಂಗಮೆ ಮರಣಂ' ಮಾನಿಸನಿಗೆ ಮಾನಭಂಗಂ ತಾನಿದು ಮರಣಕ್ಕಮಧಿಕಂ', 'ಪಡೆದಪಮಾನದಿಂ ಮರಣಮಿನ್ನುಂಟೇ, 'ಮಾನಿನಿಯು ಇಲ್ಲದವನ ಬದುಕುಯಾತಕೆ' ಇತ್ಯಾದ ಗಾದಿ ಮಾತುಗಳು ಪೂರ್ವಕಾಲದಿಂದಲೂ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವುದನ್ನು ಇಲ್ಲಿ ಸ್ಮರಿಸಬಹುದು.[57] ಈ ಮಾತುಗಳ ಹಿನ್ನೆಲೆಯಲ್ಲಿ ವ್ಯಕ್ತಿ — ಗಂಡು ಅಥವಾ ಹೆಣ್ಣು — ಮಾನ ಉಳಿಸಿಕೊಳ್ಳುವುದಕ್ಕಾಗಿ ಯಾವ ತ್ಯಾಗಕ್ಕಾದರೂ — ಸಾವಿಗಾದರೂ — ಸಿದ್ಧನಾಗಿರುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಸ್ತ್ರೀ ನಡೆದುಬಂದ ಇತಿಹಾಸದಲ್ಲಿ ಅವಳು ತನ್ನ ಪಾತಿವ್ರತ್ಯದ ಉನ್ನತ ಹಂತ ಮುಟ್ಟಿದಾಗ,

ಸಹಜವಾಗಿ ಅವಳ ಶೀಲಕ್ಕೂ ಹೆಚ್ಚು ಬೆಲೆ ಬಂದಿತು. ''ಶೂಲಕ್ಕೇರಿದರೂ ಶೀಲ ಕಳೆಕೊಳ್ಳಬಾರದು'' ಎಂಬಂಥ ಗಾದೆ ಮಾತುಗಳನ್ನು ಅವರು ಆದರ್ಶವಾಗಿಟ್ಟುಕೊಂಡರು[54] ಮಧ್ಯಯುಗದಲ್ಲಿ ಜಹಾಂಗೀರ್ ಹೇಳಿದ ಮಾತನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಹಿಂದೂ ಸ್ತ್ರೀಯರು ''ಪತಿಯ ವಿನಾ ಬೇರೊಬ್ಬ ವ್ಯಕ್ತಿ ತನ್ನ ಕೈಯಾನಿಸೆರಗನ್ನು ಮುಟ್ಟಲೂ ಅವಕಾಶಕೊಡುತ್ತಿರಲಿಲ್ಲ, ಅದಕ್ಕಿಂತ ಮರಣವೇ ಲೇಸೆಂಬ ನಂಬಿಕೆ ಅವರದು''[55] ಇಂಥ ಆದರ್ಶದಲ್ಲಿ ಬೆಳೆದ ಸ್ತ್ರೀ ತನ್ನ ಪತಿಯ ಮರಣಾನಂತರ ಸತಿಹೋಗಲು ಬಯಸಿದಳು. ಅವಳಿಗೆ ಎರಡು ಕಾರಣಗಳು ಮುಖ್ಯವೆಂದು ಕಂಡಿರಬೇಕೆನಿಸುತ್ತದೆ. ಒಂದು, ಪತಿಯ ಮರಣಾನಂತರ ತನ್ನನ್ನು ಸ್ವಯಂ ನಿಗ್ರಹಿಸಿಕೊಳ್ಳಲಾರದೆ ಮಾನಕಳೆದುಕೊಳ್ಳುವ ಸ್ಥಿತಿಗೆ ಮುಟ್ಟಬಹುದೆಂಬ ಸಂದೇಹ. ಎರಡು, ಪರಪುರುಷರಿಂದ ತನ್ನ ಮೇಲೆ ಆಕ್ರಮಣವಾಗಿ ತನ್ನ ಮಾನಹರಣವಾಗಬಹುದೆಂಬ ಭಯ. ಈ ಎರಡೂ ಕಾರಣಗಳು 'ಮಾನಕಲ್ಪನೆಯ ಹಿನ್ನೆಲೆಯಲ್ಲಿಯೇ ಹುಟ್ಟಿದವುಗಳು. ಹೀಗೆ ಮಾನವನ್ನವಲಂಬಿಸಿದರ ಈ ಎರಡು ಕಾರಣಗಳಿಗಾಗಿ ಸ್ತ್ರೀ ತಾನಾಗಿಯೇ ಸತಿಹೋಗಲು ಬಯಸಿದಳೆಂದು ಹೇಳಬಹುದಾಗಿದೆ.

ಮಹಾಭಾರತದಲ್ಲಿ ಮಾದ್ರಿ ತಾನು ಪಾಂಡುವಿನೊಡನೆ ಸಹಗಮನ ಮಾಡುವುದಕ್ಕೆ ಮೂರು ಕಾರಣಗಳನ್ನು ಹೇಳುತ್ತಾಳೆ[56] ಒಂದು, ಪಾಂಡುವಿನ ಮರಣಕ್ಕೆ ತಾನು ಕಾರಣ, ಎರಡು, ತನಗೆ ಕಾಮವಿಕಾರ ನಿಗ್ರಹಿಸಲು ಸಾಧ್ಯವಿಲ್ಲದಿರುವುದು, ಮೂರು ತನ್ನ ಮತ್ತು ಸವತಿಯ ಮಕ್ಕಳನ್ನು ಸಮಾನವಾಗಿ ನೋಡಲು ತನಗೆ ಸಾಧ್ಯವಾಗದಿರುವುದು — ಈ ಮೂರು ಕಾರಣಗಳಿಗಾಗಿ ಅವಳು ಪತಿಯೊಂದಿಗೆ ಸತಿಹೋಗಲು ನಿರ್ಧರಿಸುತ್ತಾಳೆ. ಇಲ್ಲಿ ಎರಡನೆಯ ಕಾರಣ ಪ್ರಸ್ತುತ ವಿಷಯಕ್ಕೆ ಗಮನ ಸೆಳೆಯುತ್ತದೆ. ಮಾದ್ರಿಗೆ ತನ್ನ ಕಾಮನೆಗಳ ಮೇಲೆ ನಿಗ್ರಹವಿಲ್ಲ. ಅವಳಿಗೆ ಪತಿಮರಣದ ನಂತರ ತಾನು ಕಾಮವಿಕಾರಕ್ಕೆ ಗುರಿಯಾಗಿ ಅಪಮಾನಕ್ಕೀಡಾಗುವ ಭಯ ಕಾಡುತ್ತಿದೆ. ಕಾರಣ ಇವಳು ತನ್ನ ಮಾನರಕ್ಷಣೆಗಾಗಿ ಸತಿಹೋಗಲು ಮನಸ್ಸು ಮಾಡುತ್ತಾಳೆ. ಮಾದ್ರಿಯ ಮನಸ್ಥಿತಿ ಬಹುಜನ ಸ್ತ್ರೀಯರದಾಗಿತ್ತು ಎಂದು ಬೇರೆ ಹೇಳಬೇಕಾಗಿಲ್ಲ. ಗಂಡ ಸತ್ತ ನಂತರದಲ್ಲಿ ಪತ್ನಿಯರ ಮನಸ್ಥಿತಿಯ ಬತ್ತಲೆತನವನ್ನು ಹಲವು ಗಾದೆ ಮಾತುಗಳು ಬಿಂಬಿಸುವುದನ್ನು ಇಲ್ಲಿ ಸ್ಪಷ್ಟಪಡಿಸಬಹುದು. ''ಗಂಡ ಇದ್ದೋಳು ಗಂಡನ ತಬ್ಬಿಕೊಂಡ್ರೆ ಮು(ರ)ಂಡೆ ಗಳಿಗೆ ಸಬ್ಬಕೊಂಡ್ಲಂತೆ'' ಪಾಪಿಯ ಬದುಕು ಪರರಿಗೆ ಮುಂಡೆಯ ಬದುಕು ಕಂಡವರಿಗಂತೆ''

ಇತ್ಯಾದಿ ಗಾದೆಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು.[57] ಇವು ಮಾನವ ಮನಸ್ಸಿನ ಬತ್ತಲೆ ನಿದರ್ಶನಗಳಾಗಿವೆ. ಗಂಡನನ್ನು ಕಳೆದುಕೊಂಡ ವಿಧವೆಯ ಮಾನಸಿಕ ವೇದನೆಯ ವ್ಯಂಗ್ಯ ಇವುಗಳಲ್ಲಿದೆ ಇಂಥ ಮನೋವಿಕಾರಕ್ಕೆ ಗುರಿಯಾಗಿ ಬಾಳುಕೆಟ್ಟವರಾಗಿ ಬದುಕುವುದಕ್ಕಿಂತ ಮಾದ್ರಿಯಂತೆ ಸತ್ತಗಂಡನೊಡನೆ ಸತಿಹೋಗಲು ಸ್ತ್ರೀಯರು ಸ್ವಯಂ ನಿರ್ಧಾರ ಕೈಗೊತ್ತಿರಬೇಕು.

ಗಂಡನ ಮರಣದ ನಂತರ ಪರಪುರುಷ ತನ್ನನ್ನು ಮಾನಹರಣಕ್ಕೆ ಗುರಿಮಾಡ ಬಹುದೆಂಬ ಭಯದಿಂದ ಪತ್ನಿಯಾದವಳು ಸಹಗಮನ ಹೊಂದಲು ತಾನೇ ಸಿದ್ಧಳಾಗುತ್ತಿರ ಬೇಕು ಎಂಬುದೊಂದು ಮಾತಿದೆ. ಡಾ: ಎನ್.ಆರ್.ನಾಯಕ ಅವರು ''ಸಮರಾಂಗಣದಲ್ಲಿ ಕಡುಗಲಿಗಳಾದ ರಾಜರು, ದಂಡನಾಯಕರು, ತುಳಿಲಾಳ್ಗಳು ಸತ್ತಾಗ ಅವರ ಮಡದಿಯರು ವೈರಿಗಳಿಂದೊದಗಬಹುದಾದ ತಮ್ಮ ಮಾನ — ಹರಣವನ್ನು ತಪ್ಪಿಸಿಕೊಳ್ಳಲು ಚಿತೆಯೇರಿ ತಮ್ಮ ಗಂಡಂದಿರ ಸ್ವರ್ಗಯಾತ್ರೆಯಲ್ಲಿ ಸಹಚರೆಯರಾಗಿ ಪತಿ ಪರಾಯಣತೆಯನ್ನು ಮೆರೆದರು'' ಎಂದು ಬರೆಯುತ್ತಾರೆ.[58] ಡಾ: ಚೆನ್ನಕ್ಕ ಎಲಿಗಾರ ಅವರು ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಹೀಗೆ ಹೇಳುತ್ತಾರೆ : ''ಸಹಜಮರಣವನ್ನಪ್ಪಿದವನ ಮಡದಿಯರಿಗಿಂತ ಸಂಗ್ರಾಮ, ಗೋಗ್ರಹಣ, ಊರಳಿವು, ತುರುಗೊಳ್, ಪೆಣ್ಬುಯಲ್ ಪ್ರಸಂಗಗಳಲ್ಲಿ ಮಡಿದ ವೀರವ್ಯಕ್ತಿಯ ಮಡದಿಯರಿಗೆ ವೈರಿಗಳ ಬಲಾತ್ಕಾರದ ಭಯ ಅಧಿಕವಾಗಿರುವುದರಿಂದ ಇಂಥವರೇ ಅಧಿಕ ಸಂಖ್ಯೆಯಲ್ಲಿ ಸಹಗಮನ ಕೈಗೊಳ್ಳುತ್ತಿರಬೇಕು. ಹೀಗಾಗಿ ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಏಕಕಾಲಕ್ಕೆ ಅದರಲ್ಲಿಯೂ ಯುದ್ಧದಂಥ ಮಾರಣ ಹೋಮದ ಕಾಲಕ್ಕೆ ತಲೆಯೆತ್ತುತ್ತಿದ್ದವು''.[59] ಈ ಇಬ್ಬರು ಇಲ್ಲಿ ಸಂಭಾವ್ಯವಾದ ಊಹೆಯನ್ನೇ ಮಾಡಿದ್ದಾರೆ ಎಂದು ಹೇಳಬೇಕು. ಶಾಸನಗಳಲ್ಲಾಗಲಿ, ಕಾವ್ಯಗಳಲ್ಲಾಗಲಿ ಎಲ್ಲಿಯೂ ವೈರಿಭಯದಿಂದ ಸಹಗಮನ ಮಾಡುತ್ತಿದ್ದುದರ ನೇರ ಉಲ್ಲೇಖಗಳಿಲ್ಲ 'ಜೋಹಾರ ಆಚರಣೆ'ಯಲ್ಲಿ ಮಾತ್ರ ಈ ಭಯ ಎದ್ದು ಕಾಣುತ್ತದೆ.[60] ಆದರೆ ಜೋಹಾರ ಪ್ರಸಂಗಗಳಲ್ಲಿ ಮತ್ತು ಸತಿ ಆಚರಣೆಗಳಲ್ಲಿ ಪತ್ನಿಯರು ಸಾಯುವುದು ಹೆಚ್ಚು ಕಡಿಮೆ ಒಂದೇ ಬಗೆಯ ಉದ್ದೇಶಗಳಿಗಾಗಿಯೇ ಎಂಬುದರ ಹಿನ್ನೆಲೆಯಲ್ಲಿ ಮೇಲಿನ ಊಹೆಗಳು ಸತ್ಯಕ್ಕೆ ತೀರ ಹತ್ತಿರವೆನಿಸುತ್ತವೆ. ಕೆಲವು ಶಾಸನಗಳು ಯುದ್ಧದಲ್ಲಿ

ಸ್ತ್ರೀಯರನ್ನು ನೆರೆಹಿಡಿದ ಕುರಿತಾಗಿ ವಿವರಗಳನ್ನು ಒದಗಿಸುತ್ತವೆ.[61] ಈ ಸಂದರ್ಭದಲ್ಲಿ ನರಗುಂದದ ಸ್ವಾತಂತ್ರ್ಯ ಸಮರ ಕುರಿತಾಗಿರುವ ಲಾವಣಿಯನ್ನು ನೆನಪಿಸಿಕೊಳ್ಳಬಹುದಾಗಿದೆ. ಬಾಬಾಸಾಹೇಬನ ತಾಯಿ ಮತ್ತು ಪತ್ನಿ ವೈರಿಗಳ ಭೀತಿಯಿಂದ ಮರಣಹೊಂದುವ ಪ್ರಸಂಗವನ್ನು ಜನಪದಕವಿ ಹೀಗೆ ಚಿತ್ರಿಸುತ್ತಾನೆ:[62]

''ಅತ್ತೆ ಸೊಸೆಯನ್ನ ಕರದು ಹೇಳತಾಳ
ಇಂಬೇಕು ಇಲ್ಲ್ಯಾತಗ
ದಂಡಿನ ರುಳ್ಪಾಟಿಗೆ ಸಿಗಬಾರದವ್ವ
ಮುಳಗೂನು ನುಡಿ ಗಂಗಾದಾಗ
ಮಗಬಿಟ್ಟು ಹೋದನವ್ವ ನಮಗ
............. ....
.. .... . ... . ..
ನಿಂತಾರೊಕ್ಕ ಮಲ್ಲವ್ವನ ದಡದಾಗ
ಅಂಗೋಸ್ತ್ರದಿಂದ ನಡಕ ನಡಾಕಟ್ಟಿಕೊಂಡ
ಜಿಗದಾರು ಗಂಗಾದಾಗ ಹರಹರ ಅಂತ
ಜಿಗದಾರು ನಿರೊಳಗ —

ಬಾಬಾಸಾಹೇಬ ಯುದ್ಧದಲ್ಲಿ ಸೋತುಹೋದಾಗ, ವೈರಿಗಳ ಕೈಯಲ್ಲಿ ಸಿಕ್ಕು ಅಪಮಾನವಾಗುವುದನ್ನು ತಪ್ಪಿಸಲೋಸುಗ ಅವನ ಪತ್ನಿ ಮತ್ತು ತಾಯಿ ಇಬ್ಬರೂ ನೀರಿನಲ್ಲಿ ಹಾರಿ ಸಾಯುವ ಇಲ್ಲಿಯ ಚಿತ್ರ ಹೃದಯವಿದ್ರಾವಕವಾಗಿದೆ. ಈ ವಿವರಣೆಯ ಹಿನ್ನೆಲೆಯಲ್ಲಿ ಸ್ತ್ರೀಯರು ಸತಿಹೋಗಲು ಅವರಿಗಿದ್ದ ಆಕ್ರಮಣ ಭಯವೂ ಒಂದು ಕಾರಣವಾಗಿತ್ತು ಎಂದು ಸಾಮಾನ್ಯವಾದ ಅಭಿಪ್ರಾಯವೊಂದನ್ನು ತಾಳಬಹುದಾಗಿದೆ.

5. <u>ವಿಧವೆಯ ನಿಕೃಷ್ಟ ಜೀವನ :—</u> ಹೆಣ್ಣಿನ ಜೀವನದಲ್ಲಿ ವೈಧವ್ಯ ಎಂಬುದು ಕರಾಳಘಟ್ಟವಾಗಿದೆ. ಭಾರತದಲ್ಲಿ ವೇದಗಳ ಕಾಲದಲ್ಲಿದ್ದ ಸ್ತ್ರೀ — ಪುರುಷ ಸಮಾನತೆ ಬರಬರುತ್ತ ಇಲ್ಲದಾಗಿ ಪುರುಷನಿಗೆ ಪ್ರಾಮುಖ್ಯತೆದೊರಕಿ ಸ್ತ್ರೀಗೆ ಅವನು — ಅದರಲ್ಲಿಯೂ ಪತ್ನಿಗೆ ಪತಿ — ಆರಾಧ್ಯದೈವವಾಗಿ ಪರಿಣಮಿಸಿದುದು ಇತಿಹಾಸದ ವ್ಯಂಗ್ಯವಾಗಿದೆ. ಎಂದು ಪತಿ ಪ್ರಧಾನನೆನಿಸಿ ಪತ್ನಿ ಎರಡನೆಯ ಸ್ಥಾನಕ್ಕೆ ನೂಕಲ್ಪಟ್ಟಳೊ ಅಂದಿನಿಂದಲೇ ಸ್ತ್ರೀವರ್ಗದ ಶೋಷಣೆ ಸಾಮಾನ್ಯವಾಗಿ ಪ್ರಾರಂಭವಾಯಿತೆಂದು

ಹೇಳಬಹುದಾಗಿದೆ. ಸ್ತ್ರೀಗೆ ಪತಿ ಇದ್ದರೆ ಅವಳನ್ನು 'ಸೌಭಾಗ್ಯವತಿ' ಎಂದು ಗೌರವಿಸಲಾಯಿತು. ಈ ನೆಲೆಯಲ್ಲಿ ತಾಳಿ, ಮೂಗುತಿ, ಓಲೆ, ಕಾಲುಂಗುರ, ಬಳೆ, ಕುಂಕುಮ, ಅರಿಶಿನ — ಈ ಮೊದಲಾದವು ಅವಳಿಗೆ ಸೌಭಾಗ್ಯದ ಸಂಕೇತಗಳಾದವು. ಗಂಡನಿಲ್ಲವೆಂದರೆ ಇವಾವುಗಳೂ ಅವಳಿಗಿಲ್ಲ. ಅಷ್ಟೇ ಅಲ್ಲ, ಮಧ್ಯಕಾಲದ ಭಾರತದಲ್ಲಿ ಗಂಡಸತ್ತ ಪತ್ನಿಗೆ ಕ್ಲೇಶ ಮುಂಡನ ಪ್ರಾರಂಭವಾಯಿತು. ವಿಧವೆ ಎಂದರೆ ಯಾರಿಗೂ ಬೇಡವಾದ ಜೀವವಾಗಿ ಪರಿಣಮಿಸಿತು. ಇಂಥ ವಾತಾವರಣವು ಸತಿ ಆಚರಣೆಯನ್ನು ಹೆಚ್ಚು ಪ್ರಬಲಗೊಳ್ಳುವಂತೆ ಕಾರಣೀಭೂತವಾಗಿ ನಿಂತಿತು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ವೈಧವ್ಯ ಜೀವನ ; ಅದರ ಪರಿಣಾಮದಿಂದುಂಟಾದ ಸತಿಪದ್ಧತಿ — ಈ ವಿಷಯವನ್ನು ಕರ್ನಾಟಕದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈಗ ಕಂಡುಕೊಳ್ಳಬಹುದಾಗಿದೆ.

ಕನ್ನಡ ಗ್ರಂಥ — ಶಾಸನ — ಜನಪದ ಸಾಹಿತ್ಯಗಳು ವಿಧವಾವಸ್ಥೆಯನ್ನು ಅಸಹ್ಯವಾಗಿ, ಸೌಭಾಗ್ಯಾವಸ್ಥೆಯನ್ನು ಉನ್ನತವಾಗಿ ಕಂಡಿವೆ. "ನೀನೆನ್ನೋಲೆಯ ಕಡಗಣಿಸುವನೇಂ ನೋಡಿದಪಾ" — (ಪಂಪ), "ಸರಸ್ವತೀದೇವಿ ರಂಡೆಯುದೌಸತ್ಯಂ" — (ನಾಗವರ್ಮ), "ರಿಪುವನಿತೆಗಿತ್ತು ವೈಧವ್ಯ ದೀಕ್ಷೆಯಂ" — (ನಾಗಚಂದ್ರ), "ರಿಪುರಮಣಿಯರ ಸೀಮಂತಮಣಿಗಳ ನಿಮಿಷದಲಿ ತರಿಸುವೆನು" — (ಕುಮಾರವ್ಯಾಸ) "ಭೂಪನಸತಿಯು ಕಿವಿಯೊಳಗೋಲೆಯು ಸ್ಥಿರವಹ ತಾನೆಂದ" (ಕುಮಾರವ್ಯಾಸ) "ಮಾಂಗಲ್ಯಸೂತ್ರವ ಹರಿಯಬೇಡಲಿ ತಂದೆ" — (ಕುಮಾರವಾಲ್ಮೀಕಿ), "ಜವ್ವನ ಜಾಣವನಿತೆಯು ತುರುಬಬೆಳೀಸಬೇಡವಕಟ" — (ಕುಮಾರವಾಲ್ಮೀಕಿ) "ಪತಿಯ ಮರಣದಲಗಲಿ ಬದುಕಿದ ಸತಿಯು ಶಿರದಮೊಲಗಲದಲ ರಂಜಿಸಿತು ರವೆಯೋಲೆದ್ಯಾನ ರಾವಣನ" — (ಕುಮಾರವಾಲ್ಮೀಕಿ), "ಮರನಳಿಯಲು ವಿಧವಾವಸ್ಥೆಯದೊಂದು ಪರಿಯನದೇನ ಪೇಳುವೆನು" — (ದೇವಪ್ಪಕವಿ) — ಈ ಮೊದಲಾದ ಕಾವ್ಯಗಳ ಉಲ್ಲೇಖಗಳು ವಿಧವಾವಸ್ಥೆಯನ್ನು ಅಸಹ್ಯ ಎನ್ನುವಂತೆ ವರ್ಣಿಸಿವೆ.[63] ಮಹಾಕವಿ ಪಂಪ ತನ್ನ ಆದಿಪುರಾಣದಲ್ಲಿ ಲಲಿತಾಂಗನ ಸಾವಿನಿಂದ ಸ್ವಯಂಪ್ರಭೆಗುಂಟಾದ ಸ್ಥಿತಿಯನ್ನು ವರ್ಣಿಸುವಾಗ, ವಿಧವಾವಸ್ಥೆಯ ನೈಜ ಚಿತ್ರಣವನ್ನು ಹೀಗೆ ಕೊಡುತ್ತಾನೆ:

> ಅಲಕಂ ಮಂದಾರಶೂನ್ಯಂ ಕದಪುಮಕರಿಕಾಪತ್ರಶೂನ್ಯಂ ಲಲಾಟಂ
> ತಿಲಕಾಳಂಕಾರಶೂನ್ಯಂ ಘನಕುಚಯುಗಳಂ ಹಾರಶೂನ್ಯಂ ನಿತಂಬಂ
> ಕಲಕಾಂಚೀದಾಮಶೂನ್ಯಂ ಚರಣಯುಗಳಮುಂ ನೂಪುರಾಳಾಪಶೂನ್ಯಂ
> ಲಲಿತಾಂಗಂ ಪೋದೊಡಾಯ್ತಾಕೆಗೆ ದಿವಮನಿತುಂ ನಿರ್ಜ(ನಾ)ರಣ್ಯಶೂನ್ಯಂ
>
> (ಆದಿಪುರಾಣ, ಪುಟ—132).

ಅದೇ ರೀತಿ ಶಾಸನಗಳೂ ಕೂಡ ''ವೈರಿವಧೂವೈಧವ್ಯ ದೀಕ್ಷಾಗುರು'' 'ರಿಪುಯುವತೀ ವೈಧವ್ಯ ಶೀಲಶಿಕ್ಷಾದಕ್ಷ'' ''ವೈರಿಲಲನಾವೈಧವ್ಯಮಂ ಮಾಡಿ'', ವಿರೋಧಿವೀರವನಿತಾ ವೈಧವ್ಯಾನಳಃ ಎಂದು ಹೇಳುವುದರ ಹಿನ್ನೆಲೆಯಲ್ಲಿ ವಿಧವಾವಸ್ಥೆಯನ್ನು ಕೀಳಾಗಿ ಕಾಣುತ್ತವೆ.[64] ವಿಧವೆಯ ಆಭರಣರಹಿತ ಸ್ಥಿತಿಯನ್ನು ಶಾಸನವೊಂದು ಹೀಗೆ ಚಿತ್ರಿಸುತ್ತದೆ[65]

ಅದಟಿನಳುರ್ಕೆಯಿಂ ನೃಪನಸಾಹಸಮಂ ಧರೆಗಾನದಿಂತುಟಿ
ನ್ನುದೆಯಾಡಪೆ ತಾಮೆ ಪೇಳವೆ ವಿರೋಧಿಯ ಪೆಂಡಿರ ಕಂಕಣಂಗಳಿ
ಲ್ಲದ ಕಿವಿಕಾಂಚಿಯಿಲ್ಲದುಡೆ ನೂಪುರವಿಲ್ಲದ ಪಾದಪಲ್ಲವಂ::

ಜನಪದ ಸಾಹಿತ್ಯವಂತೂ ವೈಧವ್ಯ ಜೀವನವನ್ನು ತನ್ನ ನಿಟ್ಟುಸಿರಿನಲ್ಲಿ ಹಿಡಿದಿಟ್ಟಿದೆ.

ಗಂಡಸತ್ತರಿನ್ನ ಗಂಧಕುಂಕುಮವ್ಯಾಕ
ಬಂಗಾರವ್ಯಾಕ ಬಳಿಯಾಕ । ಕೊರಳಿನ
ಸಿಂಗಾರ ಶಿವನ ಕಸಗೊಂಡ ।।

ಅಲ್ಲಿ ನೀ ಬಾರವ್ವ ಇಲ್ಲಿ ನೀ ಬಾರವ್ವ
ಎಲ್ಲಿಯತನ ಈ ನಲ್ಲ ? ನಲ್ಲಾನ
ಇರುತನಕ ಮುಖ ನಮ್ಮ ಮಂದ ।।[66]

ಸತ್ತು ಹುಟ್ಟುವದೊಳ್ಳಿ ಸಾಯುಗಂಡನೊಳ್ಳಿ
ಸತ್ತಿಕರ ಮುಗಳ ಗೌರವ್ವ । ನಿನ್ನಂಥ
ಮುತ್ತೈದಿತನವ ಕೊಡು ನಮಗ ।।[67]

ಸುಣ್ಣ ಇಲ್ಲದ ಗೋಡಿ ದೇವರಿಲ್ಲದ ಜಗಲಿ
ಅರಸರಿಲ್ಲದ ಮನಿತನ । ಮಾಡೋದು
ಯಾತರ ಸುಖವು ಹಡೆದವ್ವ ।।

ಗಂಡ ಹೆಂಡಿರು ಎಂದು ಕಂಡಾಡಿದವರೆಲ್ಲ
ಕಂಡಾರ ಮೂರಿ ತಿರವೂರ । ಗಂಡಿಲ್ಲ
ನಾರೆವ್ವ ನಾರ ಕೊಳೆನೀರ ।।[68]

ಹೀಗೆ ವಿಧವೆಯ ಜೀವನವನ್ನು ನಿಕೃಷ್ಟವೆಂಬಂತೆ ವರ್ಣಿಸಿದ ಹಲವು ಜನಪದ ಪದ್ಯಗಳನ್ನುದಾಹರಿಸುತ್ತ ಹೋಗಬಹುದಾಗಿದೆ. ''ಕಂಡಕಂಡವರಿಗೆಲ್ಲಾ ಕೈಮುಗಿದರೂ ಗಂಡಸತ್ತ ಮುಂಡೆಗೆ ತಲಿ ಬೋಳಿಸದೆ ಬಿಡರು'' ''ದುಗ್ಗಾಣಿ ಮುಂಡೆಗೆ ದುಡ್ಡು ಕೊಟ್ಟು ತಲಿ ಬೋಳಿಸಿದ ಹಾಗೆ'' ''ಬೋಳಿ ತನ್ನ ತುರುಬ ನೆನಸಿಕೊಂಡ ಅತ್ತಳಂತ''

“ರಂಡಿಗ್ಯಾಕ ಹೂವಿನದಂಡಿ” ಇತ್ಯಾದಿ ಗಾದೆಮಾತುಗಳು ವಿಧವೆಯ ಜೀವನದ ಕ್ರೂರತೆಯನ್ನು ಚಿತ್ರಿಸುತ್ತವೆ.[69] ಇಂಥ ಅಸಹ್ಯ ಬದುಕನ್ನು ಸ್ತ್ರೀಯರು ಒಪ್ಪಿರಲಿಕ್ಕಿಲ್ಲ. ಈ ಕಾರಣದಿಂದಾಗಿ ತಮ್ಮ ಮುತ್ತೈದಿತನ ಅಖಂಡವಾಗಿರಲೆಂದು ಸ್ತ್ರೀ ಸಮಾಜ ಆಶಿಸಿತು ಈ ಹಿನ್ನೆಲೆಯಲ್ಲಿಯೇ “ಮುತ್ತೈದೆತನ ಅಖಂಡವಾಗಿ ಉಳಿಯಲೆಂದು ಆಶಿಸಿ ಅನೇಕ ಹಬ್ಬ ಹರಿದಿನಗಳನ್ನು ಆಚರಿಸುವ ರೂಢಿಯೂ ಉಂಟು. ಅವುಗಳಲ್ಲಿ ‘ಗೌರಿಹಬ್ಬ’ ಒಂದು”.[70] ಹೀಗೆ ವಿಧವಾ ಜೀವನದ ದುರಂತತೆಯನ್ನು ಮನಗಂಡ ಪತ್ನಿಯರು ಪತಿಯ ಮರಣದೊಂದಿಗೆ ಸಾಯಲಿಚ್ಛಿಸಿರಬೇಕು ಎಂದು ಹೇಳುವುದರಲ್ಲಿ ಯಾವ ತಪ್ಪಿಲ್ಲ. ಈ ಮಾತಿಗೆ ಪ್ರವಾಸಿಗರ ವರದಿಗಳು, ಗ್ರಂಥ — ಜನಪದ ಸಾಹಿತ್ಯಗಳು ಬೆಂಬಲಿಸುತ್ತವೆ.

‘ಡಿಯೊಡೊರಸ್ ಸಿಕುಲ್ಯಲಸ್’ ಎಂಬ ವಿದೇಶಿಪ್ರವಾಸಿ ಕ್ರಿ.ಶ.ಪೂ. 316 ರಲ್ಲಿ ಜರುಗಿದ ಹಿಂದೂಸೇನಾಯಕಥ ಕೆಟಿಯಾಸನ್ ಪತ್ನಿಯ ಸಹಗಮನವನ್ನು ವಿವರಿಸುತ್ತ, ಹಿಂದೂ ಸ್ತ್ರೀಯರು “ವಿಧವೆಯ ಅಸಹ್ಯ ಜೀವನ ಬಾಳುವುದಕ್ಕಿಂತ ಗಂಡನೊಡನೆ ಸಾಯುವುದೇ ಲೇಸೆಂದು ಭಾವಿಸಿದರು” ಎಂದು ಬರೆಯುತ್ತಾನೆ.[71] ಅಲ್ಬರೂನಿಯು “ಹಿಂದೂ ಹೆಂಗಸರು “ಚಿತೆಯನ್ನೇರುವುದೇ ವಿಧವೆಯಾಗಿರುವುದಕ್ಕಿಂತ ಉತ್ತಮವೆಂದು ಭಾವಿಸುತ್ತಾರೆ” ಎಂದು ಹೇಳುತ್ತಾನೆ.[72] ಮೊಗಲ್ ರಾಜ್ಯಕ್ಕೆ ಭೇಟ್ಟಿಕೊಟ್ಟ ಎಡ್ವರ್ಡ್ ಟೆರ್ರಿ ಹೀಗೆ ಬರೆಯುತ್ತಾನೆ. “ಚಿಕ್ಕ ವಯಸ್ಸಿನಲ್ಲಿ ವಿಧವೆಯಾದವಳು ಮತ್ತೊಮ್ಮೆ ಮದುವೆಯಾಗುವಂತಿಲ್ಲ. ಆಕೆ ತಲೆಬೋಳಿಸಿಕೊಂಡು ಯಾರಿಗೂ ಬೇಡವಾಗಿದ್ದ ಪ್ರಾಣಿಯಂತೆ ಜೀವಿಸಬೇಕು, ಸಾಯುವತನಕ. ಇಂಥ ಬಾಳಿಗಿಂತ ಸಾವೇ ಮೇಲೆಂದು ಅನೇಕ ಜನ ಸತ್ತಗಂಡನ ಜೊತೆಆತ್ಮಸಂತೋಷದಿಂದ ಅಗ್ನಿಯಲ್ಲಿ ಸಹಗಮನ ಮಾಡುತ್ತಾರೆ.[73] ಔರಂಗಜೇಬನ ಕಾಲದಲ್ಲಿ ಭಾರತಕ್ಕೆ ಬಂದ ಬಪತೀಸ್ಟ ಟಾವರನ್ಯೇಯು “ಇಂಡಿಯಾದ ವಿಗ್ರಹಾರಾಧಕರಲ್ಲಿ ಗಂಡಸತ್ತರೆ ಹೆಂಡತಿ ಮತ್ತೆ ಮದುವೆಯಾಗುವಂತಿಲ್ಲ. ಈ ಕಾರಣ ಗಂಡ ಸತ್ತ ಕೆಲವು ದಿನಗಳ ತರುವಾಯ ಆತನ ಹೆಂಡತಿ ತಲೆಬೋಳಿಸಿಕೊಂಡು, ಒಡವೆ, ವಸ್ತ್ರಗಳನ್ನೆಲ್ಲ ತಗೆದುಹಾಕಿ, ಎಲ್ಲಾ ಸುಖ ಸಂತೋಷಗಳಿಂದ ದೂರವಾಗಿ ಇದ್ದುಬಿಡುತ್ತಾಳೆ ಮನೆಯಲ್ಲಿ ಜೀತದ ಆಳಿಗಿಂತ ಕಡೆಯಾಗಿ ದುಡಿದುಕೊಂಡು ಕಾಲಹಾಕುತ್ತಾಳೆ. ಇಂಥ ಬಾಳಿಗಿಂತ ಸತ್ತಗಂಡನ ಚಿತೆಯೇರುವುದೇ ಮೇಲು ಎಂದು ಭಾವಿಸುತ್ತಾಳೆ” ಎಂದು ಬರೆಯುತ್ತಾನೆ [74] ಈ ವರದಿಗಳಿಂದ ಭಾರತದಲ್ಲಿ ವಿಧವೆಯ

ಸ್ಥಿತಿಗತಿಗಳು ಅಸಹ್ಯವಾಗಿದ್ದವೆಂಬುದು ತಿಳಿಯುವುದಲ್ಲದೆ, ಅಂಥ ಜೀವನದಿಂದ ಸ್ತ್ರೀಯರು ಮುಕ್ತರಾಗಲು ಸತಿಹೋಗುವ ಮಾರ್ಗವನ್ನು ಕಂಡುಕೊಂಡರೆಂಬುದು ಸ್ಪಷ್ಟವಾಗುತ್ತದೆ. ಕನಕದಾಸರ 'ಮೋಹನ ತರಂಗಿಣಿ' ಯಲ್ಲಿ ಕಾಮಸುಟ್ಟುಹೋಗಲು ಅವನ ಪತ್ನಿ ರತಿ ಈ ರೀತಿ ಗೋಳಿಡುತ್ತಾಳೆ.[75]

ಸರ್ವರೊಳಗೆ ಮುತ್ತೈದೆಯಾಗಿರ್ದವೈ
ಧವ್ಯವನಾಂತು ಬಾಳುವೆನೆ
ಗರ್ವದಿ ನುಡಿಯಲ್ಲಿ ತನಗೆ ತನ್ನಾಳ್ದನ
ತರ್ವಾಯ ಮಾಡೆಂದಳಳುತ

ಇಲ್ಲಿ ರತಿಯು ಮುತ್ತೈದೆತನವನ್ನು ಕಳೆದುಕೊಂಡು ವಿಧವೆಯ ಜೀವನ ಸಾಗಿಸುವುದನ್ನು ತಿರಸ್ಕರಿಸುತ್ತಾಳೆ. ಅವಳಿಗೆ ಅದಕ್ಕಿಂತಲೂ ಮರಣವೇ ಲೇಸಾಗಿ ಕಂಡಿದೆ. ಇದು ಅಂದಿನ ಕಾಲದ ( 16ನೆಯ ಶತಮಾನ ) ಸ್ತ್ರೀಸಮಾಜದ ಒಟ್ಟು ಧ್ವನಿಯಾಗಿದೆ ಎಂದೇ ಹೇಳಬೇಕು

ವಡ್ಡಗೆರೆ ನಾಗಮ್ಮ ಕಥನಗೀತೆಯಲ್ಲಿ ನಾಗಮ್ಮನನ್ನು ಹತ್ತು ವರಹ, ಇಪ್ಪತ್ತು ತೊಲಿ ( [illegible] ಬಂಗಾರ ) ಕೊಡುತ್ತೇವೆ ಸತಿಯಾಗಬೇಡವೆಂದು ಕೇಳಿಕೊಂಡಾಗ ಅವಳು ಉತ್ತರಿಸುವ ಮಾತುಗಳು ಸೌಭಾಗ್ಯವನ್ನು ಉನ್ನತಿವಾಗಿ ಕಾಣುವುದನ್ನು, ವಿಧವಾ ಬದುಕನ್ನು ಕೀಳಾಗಿ ಕಾಣುವುದನ್ನು ಚಿತ್ರಿಸುತ್ತವೆ.[76]

ಹತ್ತೊವರೆಂಬೂದು ನನ್ನಾವ್ಲೇಯ ಬಿಲಿಯಲ್ಲ
ನನ್ನಾಯಾದೆ ಲೇಸು ಅಡಿಗಿಚ್ಚು :
— — — ... ...
. . .
ಇಪ್ಪತ್ವರಿಂಬೂದು ಮಾಂಗಲ್ಯದ ಬಿಲಿಯಲ್ಲ
ಅತ್ತೇಯ ಮಗನೆ ಈರಣ್ಣ: ನ್ಹಿಂದುಗಡೆ
ನಾನಾಯದೆ ಲೇಸು ಅಡಿಗಿಚ್ಚು

ಓಲೆ ಮತ್ತು ಮಾಂಗಲ್ಯಗಳಿಲ್ಲದ ಸ್ತ್ರೀಗೆ ಯಾವ ಐಶ್ವರ್ಯವೂ ಶೂನ್ಯ ಎಂಬ ಭಾವ ಇಲ್ಲಿದೆ. ಪತಿ ಇಲ್ಲದವಳ ಬಾಳಿಗಿಂತ ಮರಣವೇ ಶ್ರೇಷ್ಠ ಎಂಬುದು ಸತಿ ಹೋಗಲು ಸಿದ್ಧಳಾದ ನಾಗಮ್ಮನ ಪಲ್ಲವಿಯಾಗಿದೆ. ಶಿವಮ್ಮವ್ವನಿಗೆ 'ಅರವತ್ತು ಕೊಟ್ಟಿನು ನಿಲುತಂಗಿ'' ಎಂದು ಕೇಳಲಾಗಿ ಹೀಗೆ ಉತ್ತರಿಸುತ್ತಾಳೆ[77]

ಅರವತ್ತು ನನ್ನ ತುರಬೀನ ಬೆಲೆಂತೇನು
ದುರುಗಾವನಾಳೋ ಮಗದೂರ
ದುರುಗಾವನಾಳೋ ಮಗದೂರ| ತೂಗುತಾನೆ
ಇರಬೀನ ಕಿಚ್ಚು ಕೊಡುಮಾವ

ಬಹುಶಃ ಗಂಡ ಸತ್ತನಂತರ ಪತ್ನಿಯು ತಲೆಬೋಳಿಸಿ ವಿರೂಪ ಮಾಡುತ್ತಿದ್ದುದರ ಸೂಚನೆ ಇಲ್ಲಿದೆ. ಇಂಥ ವಿರೂಪ ಬಾಳಿಗಿಂತ ಸತಿಹೋಗುವ ಕಿಚ್ಚು ವೀರತಿಮ್ಮವ್ವನಿಗೆ ಲೇಸಾಗಿ ಕಂಡ ಬಗೆ ಇಲ್ಲಿದೆ. 'ಈರೋಬಿ' ಜನಪದ ಖಂಡಕಾವ್ಯದಲ್ಲಿ ಈರೋಬಿ ತಾನು ಸತಿಹೋಗುವ ಕಾರಣವನ್ನು ಹೀಗೆ ಹೇಳುತ್ತಾಳೆ.[78]

ಗಂಡಸಾಯೋಕಿಂತ ಮುಂಡ್ಯಾಗೋಕಿಂತ
ಕಂಡೋರ ಮನೆಯ ಕಸನಾಕಿ — ಸಾಯೋಕಿಂತ
ಕೊಂಡವನ್ಹೋದೆ ಕಡುಲೇಸು.

ಗಂಡ ಸತ್ತ ಮುಂಡೆಯ ಬದುಕು ಅವಹೇಳನಕರವಾದುದು. ಅವಳು ತನ್ನ ಜೀವನೋಪಾಯಕ್ಕೆ ಪರಾವಲಂಬಿಯಾಗಬೇಕು, ಪರರ ಮನೆಯ ಕಸಗುಡಿಸಬೇಕು. ಹೀಗೆ ಸತ್ತು ಬದುಕುವ ಬಾಳಿಗಿಂತ ಕೊಂಡದಲ್ಲಿ ಬಿದ್ದು ಸತಿಹೋಗುವುದೇ ಒಳ್ಳೆಯದೆಂದು ಈರೋಬಿ ನಿರ್ಧರಿಸುತ್ತಾಳೆ. ''ಮುತ್ತೈದೆ ಚೆನ್ನಮ್ಮ'' ಜನಪದ ಗೀತೆ ವಿಧವೆಯ ಬದುಕಿನ ಕರಾಳತೆಯನ್ನೂ, ಅದು ಬೇಡವೆನಿಸಿ ಸತಿಹೋಗುವ ಸ್ತ್ರೀಯರ ಮನಸ್ಥಿತಿಯನ್ನೂ ತೆರೆದಿಡುತ್ತದೆ.[79]

ಹರಿಹೊತ್ತು ಏಳಲಾರೆ ಜಲದಿ ಮುಳುಗಲಾರೆ
ಬರಿದೋಳಿಲೆ ನಾನು ಇರಲಾರೆ | ಸೊ |
ಬರಿದೋಳಿಲ ನಾನು ಇರಲಾರೆಅತ್ತೆವ್ವ
ನನ್ನ ರಾಯರ ಕೂಡ ಕಳುವವ್ವ | ಸೋ |
ಒಪ್ಪತ್ತೇ ಉಣಲಾರೆ ನೆತ್ತಿ ಬೋಳಿಸಲಾರೆ
ಬಕ್ಕ ಮುಂಡ್ಯಾಗಿ ಇರಲಾರೆ | ಸೋ |
ಬಕ್ಕ ಮುಂಡ್ಯಾಗಿ ಇರಲಾರೆ ಅತ್ತೆವ್ವ
ನನ್ನ ಶೆಟ್ಟರ ಕೂಡ ಕಳುವವ್ವ | ಸೋ |
೧ ಅರಸಿಲ್ಲದ ಅವ್ವನ ಅರಿಶಿಣಕ ಕರದಾರ
ಅರಸಿಲ್ಲದೊಂದು ಬಡವೀನ! ಸೋ |
ಅರಸಿಲ್ಲದೊಂದು ಬಡವೀನ ಕಂಡರ
ತಂಬಿಗೆ ತಾಬಂಡಿ ಬೆಳಗೂಸೆ | ಸೊ |

ಅಲ್ಲದೆ, ವಿಧವೆಯರನ್ನು ಸುತ್ತಮುತ್ತಲಿನವರು ಕೀಳಾಗಿ ಕಾಣುವ ಚಿತ್ರವನ್ನು ಜನಪದ ಕವಿ ಒದಗಿಸುತ್ತಾನೆ. 'ಈರೆಲೋಬೆ' ತಾನು ಸತಿಹೋಗದಿದ್ದರೆ "ವಾರಾರಗಿತ್ತಿರು ಆಡುಕಾಂಯ್ತು ! ಸುವಿ !! ಅತ್ಯವ್ವ, ಮೈದುನರು, ಭಾವದೀರು ನಗುತಾರೆ" ಎಂದು ಹೇಳುತ್ತಾಳೆ.[80] ಸತಿಹೋಗದ ವಿಧವೆ ಹಲವರಿಂದ ನಿಂದೆ, ಅಪಹಾಸ್ಯಕ್ಕೆ ಈಡಾಗುತ್ತಿದ್ದಳೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಇಂದಿಗೂ ಆಚರಿಸಲ್ಪಡುವ ಮಾಸ್ತಿಜಾತ್ರೆಗಳಲ್ಲಿ ವಿಧವಾವಸ್ಥೆಯ ದುರಂತವನ್ನು, ಅವಳನ್ನು ಸುತ್ತಲಿನವರು ತೀವ್ರವಾಗಿ ಅವಹೇಳನ ಮಾಡುತ್ತಿದ್ದುದನ್ನು ಗುರುತಿಸಬಹುದಾಗಿದೆ. ಅಂಕೋಲೆಯ ಅಡುಕಟ್ಟೆಯಲ್ಲಿ ಬಂಡಿಹಬ್ಬದಂದು ಪ್ರತಿವರ್ಷ ವೀರನ ಪತ್ನಿ ಸತಿಹೋಗುವುದನ್ನು ಅಡಿತೋರಿಸುತ್ತಾರೆ. ವೀರ ಹೋರಾಡಿ ಮಡಿಯುತ್ತಾನೆ. ಅವನ ಪತ್ನಿಯನ್ನು ಸುತ್ತಮುತ್ತಲಿನವರು ಹಾಸ್ಯ — ವ್ಯಂಗ್ಯ ಮಾಡಿ ನಗುತ್ತಾರೆ. "ನೀನು ಯಾರು ? ಏನನ್ನು ಅರಸುತ್ತಿರುವಿ ? ನಿನ್ನ ಗಂಡ ಯುದ್ಧದಲ್ಲಿ ಸತ್ತಿದ್ದಾನೆ. ನಿನಗ್ಯಾಕೆ ಕುಂಕುಮ, ಬಳೆಗಳ ಸೌಭಾಗ್ಯ ?" — ಇತ್ಯಾದಿಯಾಗಿ ಅವಳನ್ನು ಕುರಿತು ಸುತ್ತಲಿನವರು ಆಡಿಕೊಳ್ಳುತ್ತಾರೆ. ವೀರನ ಪತ್ನಿ "ಇನ್ನು ಮುಂದೆ ಕುಂಕುಮ ಇಟ್ಟುಕೊಳ್ಳುವಂತಿಲ್ಲ, ಬಳೆ ತೊಡುವಂತಿಲ್ಲ, ಓಲೆ ಹಾಕುವಂತಿಲ್ಲ, ಇನ್ನೇಕೆ ಇರಬೇಕು, ಸತಿಯುರೇ ನಾನು ಕೊಂಡಕ್ಕೆ ಬೀಳುತ್ತೇನೆ" ಎಂದು ನುಡಿಯುತ್ತಾಳೆ. ಈ ಪ್ರಸಂಗದ ನಿರೂಪಣೆಯಿಂದ ವಿಧವಾವಸ್ಥೆಯ ಕಾಠಿಣ್ಯವೂ, ಅದರ ಪರಿಣಾಮದಿಂದ ಸತಿಹೋಗಲು ಸ್ತ್ರೀಯರು ಬಯಸುತ್ತಿದ್ದುದೂ ಗಮನಕ್ಕೆ ಬರುತ್ತನೆ.

ಈ ದೀರ್ಘ ವಿವರಣೆಯಿಂದ, ವಿಧವೆಯ ನಿಕೃಷ್ಟ ಜೀವನ ಸತಿಪದ್ಧತಿಗೆ ಕಾರಣವಾಗಿತ್ತು ಎಂಬುದು ಸ್ಪಷ್ಟಗೊಳ್ಳುತ್ತದೆ. ವೈಧವ್ಯ ಎಂಬುದು ಅಮಂಗಳವಾದದ್ದು. ಅದು ಹೆಣ್ಣಿನ ಜೀವನದಲ್ಲಿ ಭಯಂಕರ ದುಃಖ — ಸಂಕಟಗಳ ಪರಂಪರೆಗೆ ನಾಂದಿ ಹಾಡುವಂಥದ್ದು. ಪರಿಹರ ಕವಿ 'ವೈಧವ್ಯ ಹೆಣ್ಣಿನ ಸ್ಥಿತಿಗತಿಯನ್ನು ರತಿವಿಲಾಪದಲ್ಲಿ ಹೀಗೆ ಚಿತ್ರಿಸುತ್ತಾನೆ.[81]

"ಲಾವಣ್ಯಂ ಲಯಮಾಯ್ತು ವಿಭ್ರಮವಿಲಾಸ ಮಾಯವಾಯ್ತು ಕಟಾ
ಜೀವಂ ಬೆಂದುದಟ ಚೆಲ್ವು ಸತ್ತುದು ಸುಖಂ ಹಾಳಾಯ್ತು ಕಂದರ್ಪನದ್
ಭಾವಂ ಭಸ್ಮಮದಾಯ್ತು ಮುಂದೆಲ್ಗ್ರಮುಡಿಯುತ್ತುತ್ತಾಸಹವಿಂಗಿತ್ತು ...
..... .... ... .....

ವಿಧವೆಗೆ ಜೀಕು, ಜೀಡವೆಂಬುದಿಲ್ಲ, ಆಕೆಯ ರೂಪು ವಿರೂಪ, ಆಕೆ ಸಮಾಜದಲ್ಲಿ ಅಮಂಗಳೆ, ಸುತ್ತಲಿನ ಪರಿಸರ ಆಕೆಯನ್ನು ಕಂಡು ಹಾಸ್ಯಮಾಡಿ ನಗುವ ಸ್ಥಿತಿ ಇನ್ನೂ ಭಯಂಕರವಾದುದು. ಇಂಥ ಅಸಹ್ಯ – ಕ್ರೂರ – ಅಶಕ್ತ, ಬದುಕಿಗಿಂತ ಸಾವೇ ಉತ್ತಮಮಾರ್ಗವಾಗಿ ಹಲವು ಸ್ತ್ರೀಯರಿಗೆ ಕಂಡಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

(ಅ) <u>ಸಾಮಾಜಿಕ ಕಾರಣಗಳು:–</u>

ಮನುಷ್ಯ ಸಮಾಜ ಜೀವಿ ಸಮಾಜವೆಂದರೆ ಗಂಡು, ಹೆಣ್ಣು, ಕುಟುಂಬ, ಸಮೂಹ, ಸಮುದಾಯ ಎಲ್ಲವನ್ನೂ ಒಳಗೊಂಡದ್ದು ಎಂದೇ ಅರ್ಥ. ಅದರ ನಿಯಮ, ಕಟ್ಟುಪಾಡುಗಳು ಸಾರ್ವತ್ರಿಕವಾದವುಗಳು. ಹೆಣ್ಣು ಶೋಷಣೆಗೆ ಒಳಪಟ್ಟಾಗ ಪುರುಷ ಅವಳನ್ನು ತನ್ನ ಅಡಿಯಾಳನ್ನಾಗಿ ಮಾಡಿಕೊಂಡು ಸಮಾಜದ ಹೆಸರಿನಲ್ಲಿ ಹಲವು ನೀತಿ ನಿಯಮಗಳನ್ನು ರೂಪಿಸಿ, ಅವುಗಳಿಗೆ ಅವಳನ್ನು ಬದ್ಧಳನ್ನಾಗಿ ಮಾಡಿಕೊಂಡದ್ದು ಇತಿಹಾಸದ ಸತ್ಯವಾಗಿದೆ. ಈ ಪರಿಧಿಯಲ್ಲಿಯೇ ಕುಟುಂಬ, ಸಮಾಜಗಳು, ಅವಳಿಂದ ಇನ್ನೂ ಹೆಚ್ಚಿನದನ್ನು–ಅವಳ ಜೀವವನ್ನು – ಅಪೇಕ್ಷಿಸಿದವು. ಈ ಒಂದು ಸ್ತ್ರೀ ಬಲಿದಾನದ ತಳಹದಿಯ ಮೇಲೆಯೂ ಸತಿಪದ್ಧತಿ ಉಗಮಗೊಂಡು ಬೆಳೆದುಬಂದಿತು. ಈ ಹಿನ್ನೆಲೆಯುಳ್ಳ ಸತಿಪದ್ಧತಿಯ ಕಾರಣಗಳು ಸಾಮಾಜಿಕ ಕಾರಣಗಳೆನಿಸಿದವು. ಪತ್ನಿ ಅಗಲಬಾರದೆಂಬ ಪುರುಷನ ಸ್ವಾರ್ಥ, ಪತ್ನಿ, ಇನ್ನೊಬ್ಬರ ವಶವಾಗಬಾರದೆಂಬ ಪುರುಷನ ಇಚ್ಛೆ, ಪತ್ನಿ ತನ್ನನ್ನು ಸಾಯಿಸಬಾರದೆಂಬ ಪುರುಷನ ಪೂರ್ವಾಲೋಚನೆ, ಸಂಪತ್ತು, ಪಡೆಯುವ ಸಂಚು ಮತ್ತು ಮನೆತನದ ಹಾಗೂ ಸಮಾಜದ ಪ್ರತಿಷ್ಠೆ – ಇವುಗಳನ್ನು ಸತಿಪದ್ಧತಿಯ ಸಾಮಾಜಿಕ ಕಾರಣಗಳೆಂದು ಗುರುತಿಸಬಹುದಾಗಿದೆ.

1 <u>ಪತ್ನಿ ಅಗಲಬಾರದೆಂಬ ಪುರುಷನ ಸ್ವಾರ್ಥ:</u>

ಪತಿ – ಪತ್ನಿ ಸಮಾನ ಎಂಬ ಕಲ್ಪನೆ ಇಲ್ಲದಾಗಿ, ಪತಿ ಪ್ರಧಾನವೆನಿಸಿದ ಇತಿಹಾಸದ ಬೆಳವಣಿಗೆಯ ಹಂತದಲ್ಲಿ ಪುರುಷನ ಸ್ವಾರ್ಥಭಾವನೆ ಇನ್ನು ಹೆಚ್ಚು ಗರಿಗೆದರಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಪುರುಷನು ಪತ್ನಿಯನ್ನು ತನ್ನ

ಆಸ್ತಿ ಎಂದು ಗಣಿಸಿ ತಾನು ಮರಣಹೊಂದಿದಾಗ ಅವಳೂ ತನ್ನೊಡನೆ ಬರಬೇಕೆಂದು ಇಚ್ಛೆಪಟ್ಟಿರಬೇಕು. ಈ ಕಾರಣದಿಂದಾಗಿ ಪತಿ ಮರಣಹೊಂದಿದಾಗ ಪತ್ನಿಯನ್ನೂ ಅವನೊಡನೆ ಕಳುಹಿಸುವ ಯೋಜನೆ ಮಾಡಿರಬೇಕು. "ಮನೆವಸೆಯ ವಿರರಕನು ಸತ್ತಲಿ ಆತನ ಪದಾರ್ಧಾಂಗಿ ಅವಿಗಾವುಡಿ ಕೂಡೆ ಸ್ವರ್ಗಸ್ಥೆಯಾದಳು".[82] ನಾಗನ ( ಯು ) — ಕನು ಸೊರ್ಗಸ್ಥನಾದರೆ ಹೆಂಡತಿ ಕೂಡೆ ಹೋದಳು".[83] ( ದೇವಿ ) ನಾಯಕ ಅವನ ಮದವಳಿಗೆ ನಾಗಾಂಬು ದೇವಾಂಬುಗಳು ಮಹಾಸತಿಯರಾಗಿ ಆತನ ಸಂಘಾತ ಸ್ವರ್ಗಸ್ಥರಾದರು".[84] — ಇತ್ಯಾದಿಯಾಗಿ ಶಾಸನಗಳು ಸಹಗಮನ ಘಟನೆಗಳನ್ನು ವರ್ಣಿಸುವಲ್ಲಿ 'ಬಹುವ' 'ಕೂಡೆ' 'ಸಂಘಾತ' — ಈ ಪದಗಳು ಪತಿಯ ಮೇಲಿನ ಪ್ರೀತಿಯಿಂದ ಪತ್ನಿ ತಾನಾಗಿಯೇ ಸತಿಹೋದುದನ್ನು ಸೂಚಿಸುವವುಗಳಾಗಿವೆ. ಅದೇ ರೀತಿ ಪತಿಯು/ಪತ್ನಿಯನ್ನು ಅಗಲದೇ ಅವಳನ್ನೂ ತನ್ನೊಡನೆ ತಗೆದುಕೊಂಡು ಹೋದುದನ್ನು ಕೆಲವು ಶಾಸನಗಳು ಸೂಚಿಸುತ್ತವೆ. "ಹೆಗ್ಗಡೆಯ ತಮ್ಮಸೆಟ್ಟಿಯರು ಅವರ ಸತಿ ಬೊಮ್ಮಂಗೌಡಿಯರು ಸಹಿತ ದೇವಲೋಕಕ್ಕೆ ಪ್ರಾಪಿತರಾದರು" "ನಡೆ... ದ ಮಲ್ಲಹರುಮನಕಡುಭುಜಬಳನೆನಿಸಿ ಮುಹೂರ್ತವತಂಮುಗರಣದೊಳು ಪೊಡವೀರಶರಮಡಿಹಿಂತುತಾನಡಗಿದ ಸತಿಗೂಡಿ ಶಿವನಪದಪಂಕಜದೊಳು" ಬಯಿರಗೌಡರು ಆತನ ಸತಿ ಸಂಗಡ ಸಹಿತ ಮಯಿಕುಂಟ ಪ್ರಾಪಿತರಾದರು", "ಅಬಿಮಗೌಡನು ತನ ತಂನಮದವೊಳಿಗೆ ಜಬಿಗಾವುಡಿ ಸಹಿತ ಸ್ವರ್ಗ........" ಈ ಶಾಸನಗಳು ಪತಿಯು ಪತ್ನಿಯನ್ನು ಉದ್ದೇಶಪೂರ್ವಕವಾಗಿ ತನ್ನೊಡನೆ ಸ್ವರ್ಗಕ್ಕೆ ಕರೆದುಕೊಂಡು ಹೋಗುವುದನ್ನು ಸೂಚಿಸುವವುಗಳಾಗಿವೆ.[85] ಚಟಯನಾಯಕನು ಜೋಮಿದೇವ ಜಂಗುಳಿಮಂಣೆಯರಗಂಡಗೆ ಕೊಟ್ಟಭಾಷೆಗೆ ತಲೆಕೊಡುವಾಗ ತನ್ನ ಹೆಂಡತಿಯನ್ನೂ ತಲೆಕೊಡಿಸುವಂತೆ ಮಾಡುವ ಸನ್ನಿವೇಶದ ವಿವರಣೆ ಮಾಸ್ತಿಕಲ್ಲಿನ ಉಪರೂಪದ ಪಾಠಗಳಲ್ಲಿ ಒಂದಾಗಿದೆ.[86] ಆ ನಾಯಕನು ತನ್ನ ಒಡೆಯನಿಗೆ ಕೊಟ್ಟ ಭಾಷೆಯನ್ನು ಪೂರ್ಣಗೊಳಿಸುವಲ್ಲಿ ಹೆಂಡತಿ ಸಹಿತ ತಲೆಕೊಡಬೇಕೆಂದು ಇಚ್ಛಿಸಿ, ಆ ರೀತಿ ನಡೆದುಕೊಂಡುದು ಪತಿಯು ಪತ್ನಿಯನ್ನು ಅಗಲಲಾರದ ಭಾವವನ್ನೇ ತೋರಿಸುವುದಾಗಿದೆ.

ಪುರುಷರು ತಮ್ಮ ಮರಣವಾದಾಗ ತಮ್ಮೊಡನೆ ಮರಣಹೊಂದುತ್ತೇವೆ ಎಂದು ಮಾತುಕೊಟ್ಟವರನ್ನು ಪತ್ನಿಯರನ್ನಾಗಿ ಸ್ವೀಕರಿಸಲು ಇಚ್ಛಿಸುತ್ತಿದ್ದರೆನ್ನಿಸುತ್ತದೆ.

ವಾತ್ಸ್ಯಾಯನನು ತನ್ನ ಕಾಮಸೂತ್ರದಲ್ಲಿ 'ನರ್ತನ ಮಾಡುವ ಹೆಣ್ಣುಮಕ್ಕಳು ತಮ್ಮ ಪ್ರಿಯಕರನನ್ನು ಒಲಿಸಿಕೊಳ್ಳುವ ಸಲುವಾಗಿ ಸಹಗಮನದ ಮಾತುಗಳನ್ನು ಹೇಳುತ್ತಿದ್ದರು'' ಎಂದು ಹೇಳುವ ಮಾತುಗಳನ್ನು ಇಲ್ಲಿ ಸ್ಮರಿಸಬಹುದು [87] ಅಂದರೆ ಸಹಗಮನ ಮಾಡುವ ಸ್ತ್ರೀಯರನ್ನು ಅಂದಿನ ಪುರುಷರು ಮೆಚ್ಚಿಕೊಳ್ಳುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅದೇ ರೀತಿ ವಿಜಯನಗರಕ್ಕೆ ಭೇಟಿಕೊಟ್ಟ 'ನಿಕೊಲೊ ಡಿ ಕೊಂತಿ 'ಹೇಳುವ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ವಿಜಯನಗರ ರಾಜನ ಹನ್ನೆರಡುಸಾವಿರ ಹೆಂಡತಿಯರಲ್ಲಿ ''ಎರಡು ಮೂರು ಸಾವಿರ ಹೆಂಡತಿಯರು ರಾಜನು ಸತ್ತಾಗ ತಮ್ಮ ಆತ್ಮಸಂತೋಷದಿಂದ ಚಿತೆಯೊಳಗೆ ಬಿದ್ದು ಪ್ರಾಣತ್ಯಾಗ ಮಾಡುತ್ತೇವೆಂಬ ವಾಗ್ದಾನ ಮಾಡಿ ರಾಜನ ಕೈ ಹಿಡಿದಿರುತ್ತಾರೆ.[88] ವಿದೇಶಿ ಪ್ರವಾಸಿಯ ಈ ವರದಿ ಪತ್ನಿಯರನ್ನು ತಮ್ಮ ಮರಣದೊಂದಿಗೆ ತಗೆದುಕೊಂಡು ಹೋಗಬೇಕೆಂಬ ಪುರುಷನ ಸ್ವಾರ್ಥಭಾವವನ್ನುಪ್ರಕಟಿಸುತ್ತದೆ. ಜನಪದ ಗೀತೆಯೊಂದರಲ್ಲಿ ಯುದ್ಧಕ್ಕೆ ಹೋಗುವ ಪತಿ ತನ್ನ ಪತ್ನಿಯನ್ನು ಈ ರೀತಿ ಕೇಳುತ್ತಾನೆ[89]

''ದಂಡೀಗ್ ಹೋಗುತೇ ಗಿಂಡೀಲ್ ಉದಿಕತ್ತಾರೇ
ಬಂದೀಯ ತ್ತಾರೇ ಕುದುರೀಗೆ ಯಲುಹೆಣ್ಣೇ
ನಂಬ್ಯಾಗಿ ಕೊಡೇ ಬಲಗೈಲಿ::

''ದಂಡಿಗೆ ಹೋಗಲು ಹೊರಟ ನಲ್ಲನೊಬ್ಬನು ಹೆಂಡತಿಯ ಹತ್ತಿರ ''ತನಗೆ ನಿಷ್ಠಳಾಗಿಯೇ ಇರುವೆನೆಂದು ಬಲಗೈಯಲ್ಲಿ ನಂಬಿಗೆಕೊಡು ( ಭಾಷೆಕೊಡು )' ಎಂದು ಕೇಳುತ್ತಾನೆಎಂದು ಡಾ: ಎಲ್.ಆರ್. ಹೆಗಡೆ ಅವರು ವಿವರಿಸುತ್ತಾರೆ.[90] ಯುದ್ಧವೀರನೊಬ್ಬನು ತಾನು ಸತ್ತನಂತರ ತನ್ನೊಡನೆ ತನ್ನವಳು ಬರಬೇಕೆಂದು ಕೇಳಿಕೊಳ್ಳುವುದನ್ನು, ಅದಕ್ಕಾಗಿ ನಂಬಿಗೆಯ ಭಾಷೆ ಕೇಳುವುದನ್ನು ಇಲ್ಲಿ ಕಾಣುತ್ತೇವೆ. ಇದು ಪುರುಷ ತನ್ನ ಮರಣದಲ್ಲೂ ಪತಿಯನ್ನು ಅಗಲಬಾರದೆಂಬ ಸ್ವಾರ್ಥಭಾವನೆಯೇ ಆಗಿದೆ ಇಂಥ ಪುರುಷವರ್ಗದ ಆಸೆ–ಆಕಾಂಕ್ಷೆಗಳು ಸತಿಪದ್ಧತಿಗೆ ಪ್ರೇರಕ ಶಕ್ತಿಗಳಾಗಿ ನಿಂತಿರಬೇಕು ಎನ್ನುವಲ್ಲಿ ಯಾವ ತಪ್ಪೂ ಕಾಣಿಸದು.

**2. ಪತ್ನಿ ಇನ್ನೊಬ್ಬರ ವಶವಾಗಬಾರದೆಂಬ ಪುರುಷನ ಇಚ್ಛೆ :—** ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಪತಿ ತನ್ನ ಪತ್ನಿಯ ಗೌರವ — ಅಪಮಾನಗಳನ್ನು ತನ್ನವೆಂದೇ ಭಾವಿಸಿಕೊಂಡು ಬಂದಿದ್ದಾನೆ. ಅವನು ತಾನು ಜೀವಂತವಿರುವಾಗ ಅಥವಾ ತಾನು ಮರಣ ಹೊಂದಿದ ನಂತರದಲ್ಲಿ ತನ್ನ ಪತ್ನಿ ಗೌರವದಿಂದ ಇರಬೇಕೆಂದೇ ಇಚ್ಛಿಸಿದನು. ಆ ಪತಿಯು ತನ್ನ ವಿಧವೆ ಮತ್ತೊಬ್ಬರ ವಶವಾಗುವ ಸಾಧ್ಯತೆಗಳನ್ನು ಎರಡು ರೀತಿಯಲ್ಲಿ ಕಂಡುಕೊಂಡನು. ಒಂದು; ವಿಧವೆಯಾದವಳು ಪರಪುರುಷರ ಆಕ್ರಮಣಕ್ಕೀಡಾಗಿ ಅವರ ವಶವಾಗುವುದು, ಎರಡು; ವಿಧವೆಯಾದವಳು ತನ್ನ ಕಾಮನೆಗಳ ತೃಪ್ತಿಗಾಗಿ ಪರಪುರುಷರ ವಶವಾಗುವದು. ಈ ರೀತಿ ತನ್ನವಳು ತನ್ನ ಮರಣದ ನಂತರ ಪರಪುರುಷನೊಡನೆ ಬದುಕುವುದನ್ನು ಸಹಿಸದ ಪುರುಷನು ಅವಳನ್ನು ಸತಿಹೋಗುವಂತೆ ಮಾಡಿ ತನಗೊದಗಬಹುದಾದ ಅಗೌರವವನ್ನು ಪರಿಹರಿಸಿಕೊಂಡು ನೆಮ್ಮದಿಯ ಉಸಿರೆಳೆದಿರಬೇಕು.

(ಯುದ್ಧದಲ್ಲಿ ಗೆದ್ದವರು ಸೋತವರ ಪಕ್ಷದಲ್ಲಿಯ ಸಂಪತ್ತು ಕೊಳ್ಳೆ ಹೊಡೆಯುವುದಿಲ್ಲದೆ, ಸ್ತ್ರೀಯರನ್ನು ಅಪಹರಿಸಿಕೊಂಡು ಹೋಗುತ್ತಿದ್ದರು. ಅಂಥ ಸಮಯಗಳಲ್ಲಿ ಸ್ತ್ರೀಯರು ಮಾನಹರಣಕ್ಕೆ ಒಳಗಾಗುತ್ತಿದ್ದರು. ಇದನ್ನು ತಪ್ಪಿಸಿಕೊಳ್ಳಲಿಕ್ಕೆ ಕೆಲವು ಸ್ತ್ರೀಯರು ಸ್ವತಃ ಮರಣಹೊಂದುತ್ತಿದ್ದರು. ಅಲ್ಲದೇ ಹೋರಾಟವರ್ಗವು ತಮ್ಮ ಸ್ತ್ರೀಯರ ಮಾನಹರಣದಂಥ ಸಂಕಟ ಪರಿಸ್ಥಿತಿಯ ಪರಿಹಾರಕ್ಕಾಗಿ ಎರಡು ಯೋಜನೆಗಳನ್ನು ರೂಪಿಸಿಕೊಂಡಿತು. ಒಂದು; ಜೋಹಾರ್ ಪದ್ಧತಿ ಇನ್ನೊಂದು; ಸತಿಪದ್ಧತಿ, ಮೊದಲನೆಯದು ವೈರಿಗಳ ಆಕ್ರಮಣವಾಗದಂತೆ ಯುದ್ಧ ಪೂರ್ವದಲ್ಲಿಯೇ ತಮ್ಮ ಸ್ತ್ರೀಯರನ್ನೆಲ್ಲ ಕೊಲ್ಲುವುದು ಜೋಹಾರ್ ಎನಿಸಿಕೊಳ್ಳುವುದು. ಇಲ್ಲಿ ಪತಿ ಇದ್ದಾಗ್ಯೂ ಮಾನರಕ್ಷಣೆಗಾಗಿ ಸ್ತ್ರೀಯರು ತಮ್ಮ ಆತ್ಮಬಲಿದಾನಕ್ಕೆ ಸಿದ್ಧರಾಗಿರುತ್ತಾರೆ. ಎರಡನೆಯದು, ವೈರಿಗಳ ಆಕ್ರಮಣವಾಗದಂತೆ ಪತಿ ಮರಣಾನಂತರ ಪತ್ನಿಯರು ಮರಣಹೊಂದುವುದು 'ಸತಿ' ಎನಿಸಿಕೊಳ್ಳುವದು. ಇಲ್ಲಿ ಪತಿಯನ್ನು ಕಳೆದುಕೊಂಡಂಥ 'ಅಬಲೆಯರು' ಮಾನರಕ್ಷಣೆಗಾಗಿ ತಮ್ಮ ಆತ್ಮಬಲಿದಾನಕ್ಕೆ ಸಿದ್ಧರಾಗಿರುತ್ತಾರೆ. ಈ ಎರಡೂ ಯೋಜನೆಗಳ ಉದ್ದೇಶ ತಮ್ಮ ಸ್ತ್ರೀಯರು ಪರಪುರುಷರ ವಶವಾಗಿ ಅಪಮಾನಪಡಬಾರದು ಎಂಬುದೇ ಆಗಿದೆ.)

ಹಲವು ಶಾಸನಗಳು ಯುದ್ಧದಲ್ಲಿ ಸ್ತ್ರೀಯರನ್ನು ಸೆರೆಹಿಡಿದುದನ್ನು ತಿಳಿಸುತ್ತವೆ.[91] ರಾಮವಿಜಯಕಾವ್ಯದಲ್ಲಿ ರಾವಣನು ಆಪ್ತಜನರಿಗೆ ಹೇಳುವ ಮಾತೊಂದು ಹೀಗೆ ಬರುತ್ತದೆ. "ಪರನೆಲನಲ್ಲದೆ ಪರಸತಿಯಲ್ಲದೆ। ಪರವಸ್ತುಗಳಲ್ಲದಿನ್ನು।। ಅರಸುಗಳಿಗೆ ಬರ್ಪ ತೆರನಾವುದೆಂದಾ। ನರನಾಥ ನುಡಿದನವರಿಗೆ ।।[92] ಈ ಮಾತು ಯುದ್ಧದಲ್ಲಿ ಪಡೆಯಬಹುದಾದ ಭೂಮಿ, ಸ್ತ್ರೀ, ವಸ್ತುಗಳನ್ನು ಸೂಚಿಸುವುದೇ ಆಗಿದೆ. ಜನಪದ ಸಾಹಿತ್ಯದಲ್ಲಿ 'ಬಾಗೂರಿನ ಕಾಳಗ'ದ ಕೊನೆಯಲ್ಲಿ "ಹೆಂಗಸರೆಲ್ಲರ ಎಳೆದಾಡಿದರು".[93] ಎಂದೂ, ಕಾಲಜ್ಞಾನದ ಹಾಡೊಂದರಲ್ಲಿ "ಅರಸೀಯರೆಲ್ಲರೂ ಸೆರೆಸೂರೆಯಾದರು"[94] ಎಂದೂ ಹೇಳಲಾಗಿದೆ. ಗಂಡ ಇಲ್ಲದೋಳು ದಂಡಿಗೆ ಬಜಾರಿ", ಗಂಡ ಗಾಳೀ ಪಾಲು, ಹೆಂಡತಿ ಹೆರರ ಪಾಲು", "ದಂಡಿನಲ್ಲಿ ಕೆಟ್ಟದು ಹಾದ್ರವಲ್ಲ" — ಈ ಮೊದಲಾದ ಗಾದೆಮಾತುಗಳು ಯುದ್ಧ ವೀರರ ಪತ್ನಿಯರಿಗೆ, ಅವರ ಮಾನಕ್ಕೆ ಸಂಬಂಧಿಸಿದವುಗಳಾಗಿವೆ.[95] ಗಂಡನನ್ನು ಕಳೆದುಕೊಂಡ ವೀರನಪತ್ನಿ ಪರರ ವಶವಾಗುವ, ಮಾನಹರಣಕ್ಕೆ ಗುರಿಯಾಗುವ ಸಂಗತಿಗಳನ್ನು ಇವು ತಿಳಿಸುತ್ತವೆ. ಈ ಕಾರಣದಿಂದಾಗಿ ಹೋರಾಟವರ್ಗವು ಸತಿ ಆಚರಣೆಯಂಥ ಮಾರ್ಗವನ್ನು ಸ್ತ್ರೀಯರಿಗಾಗಿ ರೂಪಿಸಿಕೊಟ್ಟಿರುವುದೆಂಬುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಈ ಸಂದರ್ಭದಲ್ಲಿ ವಿಜಯನಗರ ಕಾಲದ ಸತಿಪದ್ಧತಿಯನ್ನು ವಿವರಿಸುವಾಗ ಡಾ: ಬಿ. ಎ. ಸಾಲೆತೊರೆಅವರು ನ್ಯೂನಿಜ್ ಒದಗಿಸಿದ ವರದಿಯನ್ನು ವಿವರಿಸುತ್ತ ಹೇಳಿದ ಮಾತನ್ನು ಸ್ಮರಿಸಬಹುದಾಗಿದೆ. "ಸಂಘಟಿತ ಕಾರ್ಯಾಚರಣೆ ಯಶಸ್ಸು ಹೊಂದದೇ ಇದ್ದಾಗ, ರಾಣಿಯರು ಮತ್ತು ಸ್ತ್ರೀಜನರು ಮಹಮ್ಮದೀಯರ ಕೈಯಲ್ಲಿ ಅಪಮಾನ ಪಡುವುದನ್ನು ತಪ್ಪಿಸಿಕೊಳ್ಳಲಿಕ್ಕೆ ಸಹಗಮನವನ್ನು ಆಚರಿಸಲೇಬೇಕಾಗುತ್ತಿದ್ದಿತು.[96] ಅಂದರೆ ವೈರಿಭಯದಿಂದ ಸ್ತ್ರೀಯರು ತಮ್ಮ ಗಂಡಂದಿರ ಮರಣಾನಂತರ ಸತಿಹೋಗುತ್ತಿದ್ದರು ಎಂಬುದೇ ಆಗಿದೆ. ಇದನ್ನು ಸ್ತ್ರೀಯರು ಸ್ವಸಂತೋಷದಿಂದ ಆಚರಿಸುತ್ತಿದ್ದರೂ ಪ ಪುರುಷರ ಒತ್ತಾಸೆಯೇ ಇದಕ್ಕೆ ಇರಲಿಲ್ಲವೆಂದು ಹೇಳುವಂತಿಲ್ಲ.

ವಿದೇಶಿಪ್ರವಾಸಿ ಅಲ್ಬಿರೂನಿಯು ಸತಿಪದ್ಧತಿಯ ಕಾರಣವನ್ನು ಹೀಗೆ ಗುರುತಿಸುತ್ತಾನೆ: "ರಾಜರು ಸತ್ತರೆ ಅವರ ಹೆಂಡತಿಯರನ್ನು ಅವರು ಇಚ್ಛೆಪಡಲಿ, ಪಡದಿರಲಿ ಸುಟ್ಟುಬಿಡುತ್ತಾರೆ ಇದರ ಉದ್ದೇಶ ವಿಧವೆಯಾದ ಹೆಂಡತಿ ಪ್ರಖ್ಯಾತನಾದ ರಾಜನಿಗೆ ಅವಮರ್ಯಾದೆ ಆಗುವಂತಹ ಅಪಕೃತ್ಯ ಮಾಡದಿರಲಿ ಎಂದು.[97] ಅಲ್ಬಿರೂನಿಯು

ಈ ವರದಿಯು, ವಿಧವೆಯು ಅವಮರ್ಯಾದೆಯುಂಥ ಅಪಕೃತ್ಯ — ಅಂದರೆ ಪರಪುರುಷನೊಡನೆ ಬಾಳುವಂಥ ಅಪಕೃತ್ಯ — ಮಾಡಬಹುದೆಂಬ ಪೂರ್ವಾಲೋಚನೆಯಿಂದ ಅವಳನ್ನು ಸುಟ್ಟುಬಿಡಲಾಗುತ್ತಿತ್ತು ಎಂದು ವಿವರಿಸುತ್ತದೆ. ಇಕ್ಕೇರಿಯಲ್ಲಿ ಜರುಗಿದ ಗಿಯುಕ್ಕಮನ ಸಹಗಮನ ಕಾಲಕ್ಕೆ ( 17ನೆಯ ಶತಮಾನ ಪೂರ್ವಾರ್ಧ ) ತಾನು ಸಂದರ್ಶನ ನಡೆಸಿರುವುದನ್ನು ಪಿಯೆತ್ರೋ ದೆಲ್ಲಾವಲ್ಲೆ ಎಂಬ ಪ್ರವಾಸಿ ಹೀಗೆ ವಿವರಿಸುತ್ತಾನೆ : ಸಹಗಮನ ಕಾಲಕ್ಕೆ ''ಬಲಾತ್ಕಾರ ಮಾಡುವುದುಂಟೆ ಎಂದು ಅಲ್ಲಿದ್ದವರನ್ನು ಕೇಳಿದೆ. ಅವರು ಸಾಮಾನ್ಯವಾಗಿ ಹಾಗೆ ಮಾಡುವುದಿಲ್ಲ, ಎಲ್ಲೋ ಕೆಲವು ವೇಳೆ ದೊಡ್ಡ ಮನೆತನದ ಕಿರಿಯ ವಯಸ್ಸಿನ ಹೆಂಡತಿ ಸತಿಯಾಗಲು ಒಪ್ಪದಿದ್ದರೆ, ಆಕೆ ಮತ್ತೆ ಮದುವೆಯಾಗಿ ಕುಲಕ್ಕೆ ಕಳಂಕ ತರದಿರಲೆಂದು ಆಕೆಯನ್ನು ಬಲಾತ್ಕಾರ ಮಾಡುವುದುಂಟೆಂದು ಹೇಳಿದರು''.[98] — ಈ ವರದಿಯು, ಪತ್ನಿಯಾದವಳು ಗಂಡನ ಮರಣದ ನಂತರ ಮತ್ತೊಬ್ಬರನ್ನು ಮದುವೆಯಾಗಿ ಮೊದಲ ಪತಿಯ ಪ್ರತಿಷ್ಠೆಗೆ ಭಂಗತರಬಹುದೆಂಬ ಭಯದಿಂದ ಅವಳನ್ನು ಸತಿಯಾಗುವಂತೆ ಒತ್ತಾಯಿಸುವುದನ್ನು ಸೂಚಿಸುತ್ತದೆ. ಹೀಗೆ ಪತ್ನಿಯಾದವಳು ಮನಸ್ಸಿಲ್ಲದೆಯೋ ಮನಸ್ಸಿದ್ದೋ ಪರಪುರುಷನ ವಶವಾಗಬಹುದೆಂಬ ಕಾರಣದಿಂದಾಗಿ ಪುರುಷವರ್ಗ ಉದ್ದೇಶಪೂರ್ವಕವಾಗಿ ಸತಿ ಆಚರಣೆಯನ್ನು ಬೆಳೆಸಿಕೊಂಡು ಬಂದಿತೆಂದು ಹೇಳಬಹುದಾಗಿದೆ.

3. **ಪತ್ನಿ ತನ್ನನ್ನು ಸಾಯಿಸಬಹುದೆಂಬ ಪುರುಷನ ಪೂರ್ವಾಲೋಚನೆ:—** ಪತಿ — ಪತ್ನಿಯರಲ್ಲಿ ವೈಮನಸ್ಸು ಬೆಳೆದು ಅದು ದುರಂತದಲ್ಲಿ ಕೊನೆಗೊಳ್ಳುವುದೇನೂ ವಿಶೇಷವಲ್ಲ. ಪ್ರಾಚೀನ ಭಾರತದಲ್ಲಿ ಪತ್ನಿಯರು ತಮ್ಮ ಪತಿಯಂದಿರನ್ನು ಕೊಲ್ಲುತ್ತಿದ್ದ ವಿಷಯವನ್ನು ವಿದೇಶಿ ಪ್ರವಾಸಿಗರು ತಿಳಿಸುತ್ತಾರೆ. ಅಷ್ಟೇ ಅಲ್ಲದೆ, ಇದು ಸತಿಪದ್ಧತಿಯ ಉಗಮಕ್ಕೆ ಕಾರಣವಾಯಿತು ಎಂದೂ ಅವರು ಉಲ್ಲೇಖಿಸುತ್ತಾರೆ. ಸತಿಪದ್ಧತಿಯ ಈ ಕಾರಣದೆಡೆಗೆ ಗಮನಸೆಳೆಯುವ ಸಾಮಗ್ರಿಗಳೆಂದರೆ, ವಿದೇಶಿಪ್ರವಾಸಿಗರ ವರದಿಗಳೆಂದೇ ಹೇಳಬೇಕು ಇನ್ನುಳಿದ ಸಾಮಗ್ರಿಗಳು ಈ ಕುರಿತು ಮೌನವಹಿಸುತ್ತವೆ ಎಂದೇ ಹೇಳಬೇಕು;

''ಸ್ಟ್ರಾಬೋ' ಎಂಬ ವಿದೇಶಿ ಪ್ರವಾಸಿ ಸತಿಪದ್ಧತಿಯ ಕಾರಣವನ್ನು ಹೀಗೆ ಗುರುತಿಸುತ್ತಾನೆ: ಕಥಾಯಿಯ ಜನರಲ್ಲಿ ''ಗಂಡ ಸತ್ತರೆ ಹೆಂಡತಿಯರು ಚಿತೆಯಲ್ಲಿ ಬಿದ್ದು ಸಾಯುತ್ತಾರೆ. ಹೆಂಡತಿ ಕೆಲವು ವೇಳೆ ಪರಪುರುಷನನ್ನು ಪ್ರೇಮಿಸಿ ಕೈಹಿಡಿದ ಗಂಡನಿಗೆ ವಿಷಹಾಕಿ ಸಾಯಿಸಿಬಿಡಬಹುದೆಂಬ ಅಥವಾ ಅವನನ್ನು ಬಿಟ್ಟು ಓಡಿಹೋಗಬಹುದೆಂಬ

ಅನುಮಾನಗಳೇ ಈ ಪದ್ಧತಿಗೆ ಕಾರಣ.[99] ಅದೇ ರೀತಿ ಕ್ರಿ.ಶ.ಪೂ.316 ರಲ್ಲಿ ಭಾರತದಲ್ಲಿದ್ದ ವಿದೇಶಿ ಪ್ರವಾಸಿ ಡಿಯೋಡೋರಸ್ ಸಿಕ್ಯಾಲಸ್ ಈ ವಿಷಯವನ್ನು ಇನ್ನೂ ವಿವರವಾಗಿ ಸ್ಪಷ್ಟಗೊಳಿಸುತ್ತಾನೆ: ಇಂಡಿಯಾ ದೇಶದಲ್ಲಿ ಯುವಕ ಯುವತಿಯರು 'ಇಚ್ಛಿಸಿದರೆ ತಂದೆ ತಾಯಿಗಳ ತೀರ್ಮಾನದಂತೆ ಮದುವೆಯಾಗದೇ ತಮ್ಮಿಷ್ಟ ಬಂದಂತೆ ಮದುವೆಯಾಗಬಹುದಾಗಿತ್ತು. ಆದರೆ ಅನೇಕ ವೇಳೆ ಈ ಅನನುಭವಿಗಳಾದ ಯುವಕ ಯುವತಿಯರ ತೀರ್ಮಾನ ಸರಿಯಾಗುತ್ತಿರಲಿಲ್ಲ. ತಾವು ಮಾಡಿದ್ದು ತಪ್ಪೆಂದು ಅವರಿಗೆ ಅರಿವಾಗಿ ಅದಕ್ಕೆ ಪಶ್ಚಾತ್ತಾಪಪಟ್ಟು ತಮಗೆ ಬೇಕಾದ ಪರಪುರುಷ ಅಥವಾ ಪರಸ್ತ್ರೀ ಸಹವಾಸಕ್ಕೆ ಬೀಳುತ್ತಿದ್ದರು. ಪರಪುರುಷರಲ್ಲಿ ಮೋಹಗೊಂಡ ಹೆಂಗಸರು ಕೈಹಿಡಿದ ಗಂಡನಿಗೆ ವಿಷಹಾಕಿ ಸಾಯಿಸುತ್ತಿದ್ದರು. ಹೀಗೆ ಎಷ್ಟೋ ಜನ ಗಂಡಸರು ಹೆಂಗಸರಿಗೆ ಬಲಿಯಾದುದನ್ನು ಕಂಡ ಅಂತಹ ನೀಚ ಹೆಂಗಸರಿಗೆ ಕಠಿಣ ಶಿಕ್ಷೆ ವಿಧಿಸಬೇಕೆಂಬ ನಿಯಮ ಮಾಡಿದರು. ಅದಕ್ಕೂ ಹೆಂಗಸರು ಹೆದರದೆ ಹೋದರು. ಈ ದುಷ್ಟವರ್ತನೆ ಸಾಮಾನ್ಯ ಪದ್ಧತಿಯಾಯಿತು. ಆಗ ಒಂದು ಕಟ್ಟಳೆ ಮಾಡಿದರು. ಗಂಡ ಸತ್ತರೆ ಹೆಂದತಿಯೂ ಅವನೊಡನೆ ಸಾಯಬೇಕೆಂಬುದೇ ಆ ಕಟ್ಟಳೆ.[100] ಈ ವಿದೇಶಿ ಪ್ರವಾಸಿಗರ ವರದಿಗಳಿಂದ ಕ್ರಿ.ಶ.ಪೂ.ದಲ್ಲಿಯೇ ಪತ್ನಿಯರು ಪ್ರಿಯತಮನಿಗಾಗಿ ಪತಿಯಂದಿರರನ್ನು ಕೊಲ್ಲುತ್ತಿದ್ದುದಕ್ಕಾಗಿ ಸತಿ ಆಚರಣೆಯಂಥ ಕಟ್ಟಳೆ ಜಾರಿಯಾಯಿತೆಂದು ತಿಳಿದುಬರುತ್ತದೆ. ಜಾನನ್ ಹೂಫ್ಟಿನ್ ಥನ್ ಲನ್ ಫಾಟನ್,[101] ನಿಕೊಲೋ ಮನೂಚಿ[102] ಈ ಪ್ರವಾಸಿಗರು ಪತ್ನಿಯರು ಪತಿಯಂದಿರರಿಗೆ ವಿಷಹಾಕುತ್ತಿದ್ದ ವಿಷಯವನ್ನು ಹೇಳುತ್ತಾರೆ. ಫ್ರಾನ್ಸ್ವಾಸ್ ಬೆರ್ನೆಯ್ರೇ ಪ್ರವಾಸಿಯಂತೂ ಪತ್ನಿ ಪತಿಗೆ ವಿಷಹಾಕಿ ಕೊಂದ ಘಟನೆಯನ್ನು ತಿಳಿಸುವನಲ್ಲದೆ, ಅವಳು ಅನಿವಾರ್ಯವಾಗಿ ಗಂಡನೊಡನೆ ಸತಿಹೋಗಬೇಕಾಗಿ ಬಂದುದನ್ನೂ, ಆಗ ಅವಳು ಪ್ರಿಯತಮನನ್ನು ಒತ್ತಾಯದಿಂದ ಚಿತೆಯಲ್ಲಿ ಎಳೆದುಕೊಂಡು ಬಿದ್ದುದನ್ನು ಚಿತ್ರಿಸುತ್ತಾನೆ: ''ಒಬ್ಬ ಹೆಂಗಸಿಗೂ ನೆರೆಮನೆಯ ಮಹಮ್ಮದೀಯ ಯುವಕನಿಗೂ ಗೆಳೆತನ ಬೆಳೆಯಿತು. ಆ ಯುವಕ ವೃತ್ತಿಯಲ್ಲಿ ದರ್ಜಿ. ಆತನಿಗೆ ತಂಬೂರಿ ನುಡಿಸಲು ಬರುತ್ತಿತ್ತು. ಆತನ ಮೇಲಿನ ಪ್ರೀತಿಗಾಗಿ ಆಕೆ ಕೈಹಿಡಿದ ಗಂಡನನ್ನು ವಿಷಹಾಕಿ ಸಾಯಿಸಿದಳು. ಆ ಯುವಕ ತನ್ನನ್ನು ಮದುವೆಯಾಗುವನೆಂದು ಆಕೆ ಭಾವಿಸಿಕೊಂಡು, ಆಕೆ ತಾನು ಮಾಡಿದ ಕೆಲಸವನ್ನು ತನ್ನ ಪ್ರಿಯತಮನಿಗೆ ತಿಳಿಸಿದಳು, ಕೂಡಲೇ ಇಬ್ಬರೂ ಓಡಿಹೋಗೋಣವೆಂದು ಹೇಳಿದಳು. ನಿಧಾನ ಮಾಡಿದರೆ ತಾನು ಗಂಡನ ಶವದೊಡನೆ ಚಿತೆಯಲ್ಲಿ ಬೀಳಬೇಕಾಗುತ್ತದೆ

ಎಂದು ತನ್ನ ಕಾತರವನ್ನು ವ್ಯಕ್ತಪಡಿಸಿದಳು. ಇದನ್ನು ಕೇಳಿದ ದರ್ಜಿ, ಓಡಿ ಹೋದರೆ ತುಂಬಾ ಅಪಾಯಕ್ಕೆ ಸಿಕ್ಕಿಬೀಳಬೇಕಾಗುತ್ತದೆ ಎಂದು ಹೆದರಿ, ಅದಾಗುವುದಿಲ್ಲ ಎಂದು ಹೇಳಿಬಿಟ್ಟ. ಈ ತಿರಸ್ಕಾರದಿಂದ ನಿರಾಶಳಾದ ಆಕೆ ತನ್ನ ಗಂಡ ಅಕಸ್ಮಾತ ಸತ್ತನೆಂಬ ಸುದ್ದಿಯನ್ನು ನೆಂಟರಿಷ್ಟರಿಗೆ ತಿಳಿಸಿ, ತಾನು ಚಿತೆಯಲ್ಲಿ ಬೀಳುವ ನಿರ್ಧಾರ ಕೈಗೊಂಡಳು.

ಗಂಡನ ಶವವನ್ನು ದಹನಮಾಡಲು ಕೊಂಡ ಸಿದ್ಧವಾಯಿತು........ ಜನ ಸೇರಿದ್ದರು. ಅವರಲ್ಲಿ ಆಕೆಯ ಪ್ರಿಯತಮನಾದ ಆ ದರ್ಜಿಯೂ ಇದ್ದ....... ಆಕೆ ತನ್ನ ಪ್ರಿಯತಮನನ್ನು ಸಮೀಪಿಸಿ, ಆತನಿಂದ ಬೀಳ್ಕೊಳ್ಳುವ ರೀತಿಯ ನೋಟವನ್ನು ಬೀರಿ ನೋಡುತ್ತ ಇದ್ದಕ್ಕಿದ್ದಂತೆ ಆತನ ಅಂಗಿಯನ್ನು ಹಿಡಿದು ಕೊಂಡ ಗುಂಡಿಯ ಬಳಿಗೆ ಎಳೆದುಕೊಂಡು ಬಂದು, ಆತನ ಸಮೇತ ಧಗಧಗ ಉರಿಯುತ್ತಿದ್ದ ಬೆಂಕಿಯಲ್ಲಿ ಬಿದ್ದುಬಿಟ್ಟಳು".[103] ಹೀಗೆ ಪ್ರವಾಸಿಗರ ವರದಿಗಳು ಸ್ತ್ರೀಯರು ಗಂಡಂದಿರನ್ನು ಕೊಲ್ಲುವುದನ್ನು, ಅದಕ್ಕಾಗಿ ಪುರುಷವರ್ಗ ಸತಿ ಆಚರಣೆ ರೂಪಿಸಿದ್ದನ್ನು, ಹೀಗೆ ಕಟ್ಟಳೆ ಇದ್ದಾಗ್ಯೂ ಕೆಲವು ಪತ್ನಿಯರು ಗಂಡಂದಿರನ್ನು ಕೊಂದು ಅವರೊಡನೆ ಅನಿವಾರ್ಯವಾಗಿ ಚಿತೆಯೇರುತ್ತಿದ್ದುದನ್ನು ಚಿತ್ರಿಸುತ್ತವೆ.

ಪತ್ನಿಯರು ಪತಿಯಂದಿರನ್ನು ಕೊಲ್ಲಬಯಸುವ, ಕೊಂದ ವಿವರಗಳನ್ನು ಜನಪದ ಸಾಹಿತ್ಯ, ಗ್ರಂಥಸಾಹಿತ್ಯಗಳು ಒದಗಿಸುತ್ತವೆ. ಶಾಸನವೊಂದು "........... ಕೋಜನಸೂಸಿ ಮಹಾದೇವಿ ತನ್ನ ಗಂಡನಂಕೊಂದು ಸುರಲೋಕಪ್ರಾಪ್ತಿಯಾದಳು" ಎಂದು ಉಲ್ಲೇಖಿಸುತ್ತದೆ.[104] ಮಹಾದೇವಿ ತನ್ನ ಗಂಡನನ್ನು ಕೊಂದು ಸ್ವರ್ಗಕ್ಕೆ ಹೋದಳು ಎಂದು ಅರ್ಥಮಾಡಬಹುದಾದ ಈ ಶಾಸನಪಾಠ ಅಪರೂಪವೆನಿಸಿದೆ. ಆದರೆ ಈ ವಿವರಣೆ ಇಷ್ಟರಿಂದಲೇ, ಮಹಾದೇವಿ ತನ್ನ ಗಂಡನ ಮೇಲಿನ ವೈಮನಸ್ಸಿನಿಂದ ಅಥವಾ ಪರಪುರುಷನ ಮೇಲಿನ ಅನುರಾಗದಿಂದ ಗಂಡನನ್ನು ಕೊಂದಳೆಂದೂ, ಅವಳು ಅನಿವಾರ್ಯಕ್ಕೆ ಒಳಗಾಗಿ ಸತಿಹೋದಳೆಂದೂ ಹೇಳುವದು ಕಷ್ಟವೆನಿಸುತ್ತದೆ. ಕೆಲವು ಶಾಸನಗಳು ಪತಿಹಿತರಲ್ಲದ, ಪತಿಯನ್ನು ವಂಚಿಸುವ ಸತಿಯರನ್ನು ಉಲ್ಲೇಖಿಸುತ್ತವೆ.[105] ಈ ವಿಷಯವನ್ನು ಜನಪದ ಕಥೆಗಳು, ಗೀತೆಗಳು, ಗಾದೆಮಾತುಗಳು, ಹೆಚ್ಚು ಪುಷ್ಟೀಕರಿಸುತ್ತವೆ. ರಾಜಕುಮಾರ ಮಂತ್ರಿಕುಮಾರ, 'ನನಗಾಗಿ ಬಂದಿರೋ ಜಡಿಗಾಗಿ ಬಂದಿರೋ' — ಈ ಕತೆಗಳಲ್ಲಿ

' ಹೆಂಗಸಿನ ಧೈರ್ಯ ' ಎಂಬ ಪದದಲ್ಲಿ ಪರಪುರುಷನ ಮೇಲಿನ ಪ್ರೀತಿಯಿಂದ ಗಂಡನನ್ನು ಕೊಲ್ಲುವುದನ್ನು ಕಾಣುತ್ತೇವೆ.[106] ಹಲವು ಜನಪದ ಗೀತೆಗಳು ಹೀಗೆ ವಿಷಯ ನಿರೂಪಿಸುತ್ತವೆ.

ಅತ್ತಿ ಸಾಯಬೇಕ ಹತ್ತುಮಿಟ್ಟಿ ಕಟ್ಟುವೆ ।
ಮೈದುನಗ ಹಾವ ಕಡಿಯಲಿ । ನನ ಗೆಣೆಯಾ
ಗಂಡನ ಸಿಡಿಲ ಬಡಿಯಲಿ ।। 107.

ದಂಡಿಗೆಯೇದಾ ಮಿಂಡ ಸುಖದಲ್ಲಿ । ಬಂದಾರೆ
ಗಂಡನ ಆಹೂತಿ ಕೊಡುವೇನು ।। 108

ಇಲ್ಲಿ ಪ್ರಿಯತಮನಿಗಾಗಿ ಗಂಡನನ್ನು ಕೊಲ್ಲಬಯಸುವ ಪತ್ನಿಯರನ್ನು ಕಾಣುತ್ತೇವೆ. '' ಮಿಂಡನ ನಚ್ಚ್ಕೊಂಡು ಗಂಡನ ತಿನ್ಯಾಕಂಡ್ಹಂತೆ '' ಎಂಬಂಥ ಗಾದೆಮಾತುಗಳು ಇಂಥ ಘಟನೆಗಳ ಹಿನ್ನೆಲೆಯಲ್ಲಿಯೇ ಜನಜೀವನದಲ್ಲಿ ಮೂಡಿಬಂದವುಗಳಾಗಿವೆ. ರಾಮಚಂದ್ರ ಚರಿತ ಪುರಾಣ, ಯಶೋಧರ ಚರಿತೆಗಳಲ್ಲಿ ಪ್ರಿಯತಮನಿಗಾಗಿ ಗಂಡನನ್ನು ಕೊಲ್ಲುವ ಸ್ತ್ರೀಯರನ್ನು ಕವಿಗಳು ಚಿತ್ರಿಸಿದಾರೆ.[110] ಹೀಗೆ ಪತಿಯ ಮೇಲಿನ ಪ್ರೀತಿ ಪತ್ನಿಗೆ ಇಲ್ಲದಾಗಿ ದೈಹಿಕ — ಮಾನಸಿಕ — ಸುಖಕ್ಕಾಗಿ ಮತ್ತೊಬ್ಬ ಪುರುಷನನ್ನು ಆಶ್ರಯಿಸಿ ಗಂಡನನ್ನೇ ಕೊಲ್ಲುವ ಪತ್ನಿಯರನ್ನು ಚಿತ್ರಿಸುವ ಜನಪದ — ಗ್ರಂಥಸಾಹಿತ್ಯದ ಬಾಹುಲ್ಯತೆಯನ್ನು ನೋಡಿದರೆ ಇಂಥ ಘಟನೆಗಳು ಹೆಚ್ಚು ಹೆಚ್ಚು ಜರುಗುತ್ತಿದ್ದವು ಎನಿಸುತ್ತದೆ. ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿದ್ದ ವಿದೇಶಿ ಪ್ರವಾಸಿ ಲಿನಸ್ಕೋತೆನ್, ಇಡೀ ಭಾರತೀಯ ಸ್ತ್ರೀಯರು '' ವರ್ಷಕ್ಕೆ ಇಪ್ಪತ್ತು ಮೂವತ್ತು ಗಂಡಸರಿಗೆ ವಿಷಹಾಕಿ ಸಾಯಿಸದೇ ಒಂದು ವರ್ಷವೂ ಕಳೆಯುವುದಿಲ್ಲ. ಇಷ್ಟೆಲ್ಲಾ ಕೇವಲ ಅವರ ಹೊಲಸು ಆಸೆಯನ್ನು ತೀರಿಸಿಕೊಳ್ಳಲು '' ಎಂದು ಬರೆಯುತ್ತಾನೆ.[111] ಈ ದೀರ್ಘ ವಿವರಣೆಯಿಂದ, ಪತ್ನಿಯರು ಗಂಡಂದಿರರನ್ನು ಕೊಲ್ಲುವಂಥ ಹೇಯ ಘಟನೆಗಳು ಸಾಮಾನ್ಯವಾಗಿದ್ದವೆಂದೂ ಅದಕ್ಕಾಗಿ ಪುರುಷವರ್ಗ ಸತಿಪದ್ಧತಿಯಂಥಯೋಜನೆಯನ್ನು ರೂಪಿಸಿ ತಂದಿತು ವಿದೇಶಿಪ್ರವಾಸಿಗರು ಹೇಳುವ ಮಾತಿನಲ್ಲಿ ಸತ್ಯಾಂಶವಿದೆ ಎಂದು ಸ್ಪಷ್ಟವಾಗುತ್ತದೆ.

4. ಸಂಪತ್ತು ಪಡೆಯುವ ಹಂಚು:— ಪತ್ನಿಯನ್ನು ಸತ್ತ ಗಂಡನೊಡನೆ ಸತಿಹೋಗುವಂತೆ ಮಾಡಿ, ಅವಳ ಸಂಪತ್ತನ್ನು ಪಡೆಯುವ ಯೋಜನೆಯೊಂದನ್ನು ಬಹುಶಃ ಪುರುಷವರ್ಗ ರೂಪಿಸಿಕೊಂಡಿರಬಹುದೆನ್ನಬಹುದಾಗಿದೆ. ಪುರುಷವರ್ಗ ಸತಿಹೋಗುವವಳ

ಸಂಪತ್ತನ್ನು ಎರಡು ರೀತಿಯಲ್ಲಿ ಪಡೆಯುತ್ತಿದ್ದಿತು. ಒಂದು, ಪತ್ನಿ ಸತಿಹೋಗುವಾಗ ತನ್ನ ಬೆಲೆಯುಳ್ಳ ಆಭರಣಗಳನ್ನೆಲ್ಲ ಹಂಚುವಂತೆ ಮಾಡಿ ಅವಳ ಸಂಪತ್ತನ್ನು ಪಡೆಯುವುದು, ಎರಡು, ಮಕ್ಕಳಿಲ್ಲದ ಪತ್ನಿ ಸತಿಹೋದಾಗ ಅವಳ ಗಂಡನ ಪರಂಪರಾಗತ ಆಸ್ತಿಯನ್ನು ಪಡೆಯುವುದು. ಹೀಗೆ ಸಂಪತ್ತು ಪಡೆಯುವ ಪುರುಷವರ್ಗದ ಸಂಚಿನಿಂದಾಗಿ ಸತಿ ಆಚರಣೆ ಹೆಚ್ಚು ಹೆಚ್ಚಾಗಿ ರೂಢಿಯಲ್ಲಿ ಬಂದಿತೆನಿಸುತ್ತದೆ.

''ಬಷಿಲೇಸ್ ಟಾವರ್ನ್ಯೇ'' ಯು ಬ್ರಾಹ್ಮಣರು ಸತಿಹೋಗುವವಳ ಸಂಪತ್ತನ್ನು ಪಡೆಯುವ ಸಂಚನ್ನು ಉಲ್ಲೇಖಿಸುತ್ತಾನೆ. ಆ ವಿದೇಶಿಪ್ರವಾಸಿ, ''ಸತಿಯಾಗುವವಳು ಮದುವೆಯ ಹೆಣ್ಣಿನಂತೆ ಅಲಂಕಾರ ಮಾಡಿಕೊಂಡು ದಹನವಾಗುವ ಸ್ಥಳಕ್ಕೆ ಮೆರವಣಿಗೆಯಲ್ಲಿ ಹೋಗುತ್ತಾಳೆ. ಬ್ರಾಹ್ಮಣರು ಕೂಗಿ ಹೇಳುತ್ತಲಿ ಇರುತ್ತಾರೆ. 'ಧೈರ್ಯವಾಗಿರಬೇಕು, ಮನಸ್ಸು ಬದಲಿಸಬಾರದು' ಎಂದು. ಅವಳು ಸತ್ತರೆ ಬ್ರಾಹ್ಮಣರಿಗೆ ಅನುಕೂಲ. ಏಕೆಂದರೆ ಆಕೆಯ ಮೈಮೇಲಿನ ಆಭರಣಗಳೆಲ್ಲಾ ಅವರಿಗೆ ಸೇರುತ್ತವೆ. ಇದು ಅವರ ಹಕ್ಕು. ವಿಧವೆಯನ್ನು ಸುಟ್ಟನಂತರ ಬೂದಿಯನ್ನು ಹುಡುಕಿ ತಡಕಿ ಸಿಕ್ಕು ಚೂರುಪಾರುಗಳನ್ನು ಆಯ್ದು ಕೊಳ್ಳುತ್ತಾರೆ'' ಎಂದು ಬರೆಯುತ್ತಾನೆ.[112] ಸತಿಹೋಗುವವಳ ಮೈಮೇಲಿನ ಆಭರಣಗಳನ್ನು ಪಡೆಯುವ ಕುತಂತ್ರದಿಂದ ಪುರೋಹಿತವರ್ಗ ಸತಿ ಆಚರಣೆಯನ್ನು ಪ್ರೋತ್ಸಾಹಿಸುತ್ತಿದ್ದರೆಂಬುದು ಈ ವಿವರಣೆಯಿಂದ ತಿಳಿದು ಬರುತ್ತದೆ. ಜನಪದ ಹಾಗೂ ಗ್ರಂಥ ಸಾಹಿತ್ಯಗಳಲ್ಲಿ ಸತಿ ವಧುವಿನಂತೆ ಸಿಂಗರಿಸಿಕೊಂಡು ಚಿತೆಗೆ ಹೋಗುವುದನ್ನು, ತನ್ನ ಆಭರಣಗಳನ್ನು ಸುತ್ತಲಿನ ಬಳಗಕ್ಕೆ ಹಂಚುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

ಪುರುಷನು ಮಕ್ಕಳಿಲ್ಲದೆ ಸತ್ತರೆ ಅವನ ವಿಧವೆಯನ್ನು ಸತಿಹೋಗುವಂತೆ ಮಾಡಿ ಅವನ ಆಸ್ತಿಯನ್ನು ಪಡೆಯುವ ಪುರುಷವರ್ಗದ ಸಂಚನ್ನು ಬ್ರಹ್ಮಶಿವ ಹೀಗೆ ತಿಳಿಸುತ್ತಾನೆ:[113]

ಪುರುಷಂ ಸತ್ತೊಡೆ ಪುತ್ರನುಳ್ಳವರು ಸಾಯಲೊಲ್ಲದಿಂಬರ್ದರಾ
ಮರಕೇಕಾಗಮ ನಿಯಮಮಾಗಿ ಧನಮಂ ನಿಃಪುತ್ರನಾವಾಗಳಾ
ದರದಿಂದಂ ತವಗಿತ್ತು ಸಾವಡೆನತುಂ ಸಾಯಲ್ಕೆ ವೇಳ್ವರ್ದಹಾ
ಪುರುಷರ್ಸತ್ತೊಡೆ ಬದ್ದಕೊಂದೊಡವೆಯಂ ಕೊಳುವೊಂದುಪಾಯಮಿಪ್ರಗಲ್

ಈ ವಿಷಯದತ್ತ ಮೊದಲಿಗೆ ಗಮನಹರಿಸಿದ ಡಾ: ಎಂ.ಎಂ.ಕಲಬುರ್ಗಿ ಅವರು, ಬ್ರಹ್ಮಶಿವನು ಸತಿ ಅಗ್ನಿಪ್ರವೇಶಮಾಡಬೇಕೆಂದು ಹೇಳುವವರ ಮನಸಿನಲ್ಲಿ ತುಂಬಿರುವ

ಸ್ವಾರ್ಥವನ್ನು ಈ ಪದ್ಯದ ಮೂಲಕ ಬಯಲಿಗೆಳೆಯುತ್ತಾನೆ ಎಂದು ಹೇಳುತ್ತಾರೆ.[114] ಅಷ್ಟೇ ಅಲ್ಲದೆ, ಅವರು ಮುಂದುವರಿದು, 'ಸಪುತ್ರಕ ವಿಧವೆಗೆ ಅಗ್ನಿಪ್ರವೇಶಸಲ್ಲದು, ಅಪುತ್ರಕ ವಿಧವೆಗೆ ಅಗ್ನಿಪ್ರವೇಶ ನಿಯತ ಎಂದು ಹೇಳುವವರನ್ನು ಅವಳ ಆಸ್ತಿಯನ್ನು ಸೆಳೆದುಕೊಳ್ಳುವ ಹೊಂಚುಗಾರರೆಂದು ನಿಂದಿಸಿ, ಈ ಆಚರಣೆಯನ್ನು ವಾಸ್ತವಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾನೆ'' ಎಂದು ಬರೆಯುತ್ತಾರೆ.[115] ಮಹಾಪುರುಷರು — ಅಂದರೆ ಬಹುಶಃ ಶ್ರೀಮಂತ ವರ್ಗದವರು — ಮರಣ ಹೊಂದಿದರೆ ಅವರ ದೊಡ್ಡ ಪ್ರಮಾಣದ ಆಸ್ತಿ ದೊರಕಿಸಿಕೊಳ್ಳುವ ಪ್ರಯತ್ನವನ್ನು ಬೃಹಸ್ಪತಿಯು ತೆಗಳುತ್ತಾನೆ. ಮಕ್ಕಳು ಇಲ್ಲದಿದ್ದರೆ ಸತಿಹೋಗಬೇಕೆಂಬ ವಿವರವನ್ನು ಹಲವು ವಿದೇಶಿ ಪ್ರವಾಸಿಗರ ವರದಿಗಳು, ಕಾವ್ಯಗಳು ಒದಗಿಸುತ್ತವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು. ಈ ಸಂಗತಿಗಳ ಹಿಂದೆ ಇದ್ದ ಉದ್ದೇಶ ಆಸ್ತಿಯನ್ನು ಪಡೆಯುವುದೇ ಆಗಿದೆ.

ಹೀಗೆ ಸತಿಪದ್ಧತಿಯ ಹಿಂದಿರುವ ಆಶಯ ಪತ್ನಿಯನ್ನು ಗಂಡನೊಡನೆ ಮರಣ ಹೊಂದುವಂತೆ ಮಾಡಿ ಅವಳ ಸಂಪತ್ತನ್ನು ಪುರುಷವರ್ಗ ಪಡೆಯುವುದೇ ಆಗಿದೆ. ಆದರೆ ಈ ಒಂದು ಸ್ವಾರ್ಥಭಾವನೆಯಿಂದಲೇ ಮಾತ್ರ ಸತಿ ಆಚರಣೆ ಉಗಮಗೊಂಡಿತೆಂದು ಹೇಳುವಂತಿಲ್ಲ. ಸತಿಪದ್ಧತಿ ಉಗಮದ ಕಾರಣಗಳಲ್ಲಿ ಇದೂ ಒಂದಾಗಿರಬಹುದು. ಇಲ್ಲವೆ ಸತಿಪದ್ಧತಿ ಬೆಳವಣಿಗೆಯ ಮಹತ್ವದ ಹಂತದಲ್ಲಿ ಅದಕ್ಕೆ ಮುಖ್ಯ ಶಕ್ತಿಯಾಗಿ ಇದು ನಿಂತಿರಬೇಕು.

5. ಮನೆತನದ ಹಾಗೂ ಸಮಾಜದ ಪ್ರತಿಷ್ಠೆ :— ಗಂಡ ಮರಣಹೊಂದಿದ ಮೇಲೆ ಪತ್ನಿ ಸತಿಹೋಗುವುದು ಜೀವನಮೌಲ್ಯವಾಗಿ ಪರಿಣಮಿಸಿ, ಸ್ತ್ರೀ ಅದರಂತೆ ನಡೆದುಕೊಳ್ಳುವುದು ಮನೆತನಕ್ಕೆ, ಸಮಾಜಕ್ಕೆ ಹಿತ—ಗೌರವ — ತರುವಂಥದೆನಿಸಿಕೊಂಡಿರಬೇಕು. ಜನಪದರು ನಂಬಿಕೊಂಡಂಥ ಜೀವನಮೌಲ್ಯಗಳು ವೈಯಕ್ತಿಕವಾಗಿ ವ್ಯಕ್ತಿಗೆ ಅಹಿತಕರವಾಗಿದ್ದರೂ ಅವನು ಅಥವಾ ಅವಳು ಅವುಗಳನ್ನು ಒಪ್ಪಿಕೊಂಡು ಹೋಗಬೇಕಾಗುತ್ತದೆ. ಜೀವನ ಮೌಲ್ಯಗಳನ್ನು ವ್ಯಕ್ತಿ ಪ್ರಶ್ನಿಸುವಂತಿಲ್ಲ, ಪ್ರತಿಭಟಿಸುವಂತಿಲ್ಲ. ವ್ಯಷ್ಟಿಹಿತ ಸಮಷ್ಟಿಹಿತದ ಮುಂದೆ ಮುಖ್ಯವಲ್ಲ, ಅಮುಖ್ಯ ಕುಟುಂಬದ ಮತ್ತು ಸಮಾಜದ ಸದಸ್ಯರು ಸತಿ ಹೋಗುವುದನ್ನು ಜೀವನಮೌಲ್ಯವೆಂದು ಗಟ್ಟಿಯಾಗಿ ನಂಬಿಕೊಂಡ ಪರಿಸರದಲ್ಲಿ ಸ್ತ್ರೀಯೊಬ್ಬಳು ಅದನ್ನು ಎದುರಿಸುವಂಥ ಪ್ರಶ್ನೆಯೇ ಹೋಗಿರಬೇಕು. ಹೀಗೆ ಕುಟುಂಬದ — ಸಮಾಜದ ಒತ್ತಾಸೆಗಳು — ಪ್ರತಿಷ್ಠೆಗಳು — ಸತಿಪದ್ಧತಿಗೆ ಕಾರಣಗಳಾಗಿವೆ ಎಂದು ಹೇಳಬಹುದಾಗಿದೆ.

ಬೆಳತೂರ ಶಾಸನ ದೇಕಬ್ಬೆಯನ್ನು ತಂದೆ–ತಾಯಿ–ಬಂಧುಗಳು ಬಂದು ಸತಿಯಾಗದಂತೆ ಕೇಳಿಕೊಳ್ಳಲು ಅವಳು ಹೇಳುವ ಮಾತುಗಳು ಅಂದಿನ ಜನಜೀವನದ ಆದರ್ಶದ ಪ್ರತಿಬಿಂಬವಾಗಿವೆ: ''ನಗುನಾಡಧಿಪತಿ ರವಿಗನ ಮಗಳಾಗಿಯುಮಾಪಸಿಂದನವಿಲೆ ನಾಡಧಿಪತಿಗಾಂ ಸೊಸೆಯಾಗಿ ಬಾಳ್ವುದು ಬಗೆದರ್ಪನೆ ಕೊಟ್ಟಕೊಂಡ ಮನೆಯುಮಂ ಮೆಟ್ಟಿಯುಲ್ ;''[116] — ದೇಕಬ್ಬೆಯ ಈ ಮಾತು ಸತಿಯಾಗದೇ ಉಳಿಯುವುದೆಂದರೆ ಹೆಣ್ಣನ್ನು ಕೊಟ್ಟ — ಕೊಂಡ ಮನೆಗಳ ಅಂದರೆ ತವರು ಮತ್ತು ಗಂಡನ ಮನೆಗಳ ಯಶವನ್ನು ನಾಶಮಾಡಿದಂತೆಯೇ ಎಂಬುದನ್ನು ಸೂಚಿಸುತ್ತದೆ. ಹೆಣ್ಣೊಬ್ಬಳು ಗಂಡನ ಮರಣಾನಂತರ ಸತಿಹೋಗುವುದು ಹತ್ತನೆಯ ಶತಮಾನದಲ್ಲಿ ಕೊಟ್ಟ — ಕೊಂಡಮನೆತನಗಳ ಪ್ರತಿಷ್ಠೆಯಾಗಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದೇ ಕಾಲದವನಾದ ರನ್ನ 'ಅಜಿತ ಪುರಾಣ'ದಲ್ಲಿ ಗುಂಡಮಬ್ಬೆ ಸತಿಹೋಗುವ ಸಂದರ್ಭದಲ್ಲಿ ಸತಿಹೋಗುವುದನ್ನು 'ಶುಭಚರಿತದ ಮರಣಂ' ಎಂದು ಕರೆದಿರುವುದನ್ನು ಇಲ್ಲಿ ಸ್ಮರಿಸಬಹುದು.[117] ಈ ಹಿನ್ನೆಲೆಯಲ್ಲಿಯೇ ಸತಿಹೋದವಳ ಸ್ಮಾರಕವಾಗಿ ಅವಳ ಮನೆತನದವರು, ಸಮಾಜದವರು ಮಾಸ್ತಿಕಲ್ಲುಗಳನ್ನು ನಿಲ್ಲಿಸುತ್ತಿದ್ದರೆಂದು ಹೇಳಬಹುದಾಗಿದೆ. ಅಂಥ ಕಲ್ಲುಗಳನ್ನು ನಿಲ್ಲಿಸುವುದೆಂದರೆ ತಮ್ಮ ಮನೆತನದ — ಸಮಾಜದ ಪ್ರತಿಷ್ಠೆಗಳನ್ನು ಕೀರ್ತಿಸಿದಂತೆಯೇ ಎಂದು ಭಾವಿಸಿಕೊಂಡಿದ್ದರೆನಿಸುತ್ತದೆ. ಅದಕ್ಕಾಗಿಯೇ ಸತಿಹೋದವಳ ಮಗ, ನಾದಿನಿ, ತಂಗಿ, ತಂದೆ, ಬಂಧುಗಳು ಮಾಸ್ತಿಕಲ್ಲುಗಳನ್ನು ನೆಟ್ಟ ಉದಾಹರಣೆಗಳು ಸಿಗುತ್ತವೆ.[118] ತಮ್ಮ ಊರ, ಮನೆಯ ಹೆಣ್ಣುಮಗಳು ಸತಿಹೋದವಳೆಂಬುದನ್ನು ಹೆಮ್ಮೆಯಿಂದ ಕೆಲವು ಶಾಸನಗಳಲ್ಲಿ ಉದ್ದೇಶಪೂರ್ವಕವಾಗಿ ಉಲ್ಲೇಖಿಸಲಾಗಿದೆ. ಉದಾಹರಣೆಗೆ, ''ಬೆನಊರ ಕುಂಬಾಳ್ ಮಹಬಳದೇವನ ಮಗ ಬೊಂಮಂದಿರ ಆತನಸೊಸೆ ಚಂಡವೆಯುವರಿಬರು ಸ್ವರ್ಗವನೆಯ್ದಿದರು'', ''ಸಿರಿಊರಿ ಬೊಂಮಣನ ಮಗಳು ವೀರಸ್ವರ್ಗಲೋಕಪ್ರಾಪ್ತೆಯಾದಳು'' ಎಂಬಂಥ ಶಾಸನಪಾಠಗಳನ್ನು ನೋಡಬಹುದು.[119] ಕೆಲವು ಶಾಸನಗಳು ಸತಿಹೋದವಳ ಗೌರವಾರ್ಥ ಉಂಬಳಿ — ದತ್ತಿ ಕೊಟ್ಟುದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬಹುದು.[120] ಹೀಗೆ ಕಲ್ಲು ನೆಡುವುದಾಗಲೀ ತಮ್ಮ ಹೆಣ್ಣುಮಗಳೆಂದು ಕರೆದುಕೊಳ್ಳುವುದಾಗಲೀ, ಉಂಬಳಿ — ದತ್ತಿಕೊಡುವುದಾಗಲೀ — ಇವೆಲ್ಲ ಕಾರ್ಯಾಚರಣೆಗಳು, ಸಮಾಜ ಮತ್ತು ಸತಿ ಮನೆತನಗಳು ಸತಿ ಆಚರಣೆಯನ್ನು ತಮ್ಮ ಪ್ರತಿಷ್ಠೆಗೆ ಮೆರಗು ಕೊಡುವಂಥವು ಎಂದು ತಿಳಿದುಕೊಂಡಿರುವುದನ್ನು ಸೂಚಿಸುತ್ತವೆ. ಇಂದಿಗೂ ಮಾಸ್ತಿ ಮನೆತನದವರು ( ಉದಾ — ಶ್ರೀರಂಗಪಟ್ಟಣದ ಶ್ರೀ ವೀರಮಾಸ್ತಿಯಮ್ಮನವರ ಮನೆತನ )

ತಮ್ಮ ಹೆಣ್ಣುಮಗಳು ಪೂರ್ವಕಾಲದಲ್ಲಿ ಸತಿಹೋದುದು ತಮ್ಮ ಮನೆಯ ಪ್ರತಿಷ್ಠೆಯ ಕುರುಹು ಎಂದು ಹೇಳುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆನಂದಕಂದರು ಸತಿ ಘಟನೆಯೊಂದನ್ನು ಕಥಾರೂಪದಲ್ಲಿ ರಚಿಸಿದ್ದಾರೆ. ಅವರು ಸತಿಯಾದವಳ 'ಕಂಕಣದ ಕೈ'ಯನ್ನು ಅವಳ ಮನೆತನದವರು ಇನ್ನೂ ಸ್ಮಾರಕವಾಗಿ ಉಳಿಸಿಕೊಂಡು ಬಂದುದನ್ನು ಬರೆಯುತ್ತ ಹೀಗೆ ಹೇಳುತ್ತಾರೆ: ಸತಿ "ಸಂತತಿಯವರು ಈಗಲೂ ಕುಂಚನೂರಿನಲ್ಲಿ ಇದ್ದಾರೆ. ಅವರ ಮನೆತನಕ್ಕೆ ಈ 'ಕಂಕಣದ ಕೈ' ಒಂದು ಹೆಮ್ಮೆಯ ಬಾವುಟವಾಗಿ ಇದೆ. ಬೇಕಾದವರು ಹೋಗಿ ನೋಡಬಹುದು, ಪ್ರೀತಿಯಿಂದ ಅದನ್ನು ಎಲ್ಲರಿಗೂ ತೋರಿಸುವರು[121] ಆನಂದಕಂದರ ಈ ಮಾತುಗಳು ಸತಿ ಆಚರಣೆಯನ್ನು ಹೆಮ್ಮೆಯ ಪ್ರತೀಕವೆಂದು ತಿಳಿದ ಸತಿ ಮನೆತನವೊಂದನ್ನು ಪರಿಚಯಿಸುವುದೇ ಆಗಿದೆ.

ಹದಿನಾಲ್ಕನೆಯ ಶತಮಾನದಲ್ಲಿ ಭಾರತದಲ್ಲಿದ್ದ ಇಬ್‌ — ನ — ಬತೂತಾ — ಜನರು "ಗಂಡ ಸತ್ತ ಮೇಲೆ ಹೆಂಡತಿಯು ಚಿತೆಯಲ್ಲಿ ಬೀಳುವುದು ಬಹಳ ಮೆಚ್ಚಿದ ಕೆಲಸವೆಂದು ಭಾವಿಸುತ್ತಾರೆ. ಆದರೆ ಬಲಾತ್ಕಾರವಿಲ್ಲ. ವಿಧವೆಯಾದವಳು ಈ ರೀತಿ ದಹನಮಾಡಿಕೊಂಡರೆ ಆಕೆಯ ಮನೆತನದ ಹೆಸರು ಹೆಚ್ಚುತ್ತದೆಯಲ್ಲದೆ, ಆಕೆ ಪತಿವ್ರತೆ ಎಂಬ ಹೆಸರನ್ನು ಪಡೆಯುತ್ತಾಳೆ" ಎಂದು ಬರೆಯುತ್ತಾನೆ.[122] ಹದಿನೇಳನೆಯ ಶತಮಾನದ ಪೂರ್ವಾರ್ಧದಲ್ಲಿ ಇಕ್ಕೇರಿಯಲ್ಲಿ ಜರುಗಿದ ಗಿಯಕ್ಕಮನ ಸಹಗಮನ ಕಾಲಕ್ಕೆ ಅವಳ ಸೋದರಮಾವನನ್ನು 'ಪಿಯತ್ರೊ ದೆಲ್ಲಾವಲ್ಲೆ' ಸಂದರ್ಶಿಸಿದಾಗ "ತನ್ನ ಸೊಸೆ ಮಾಡುತ್ತಿರುವುದು ತನಗೆ ಬಹಳ ಸಂತೋಷವಾದ ವಿಚಾರವೆಂದು ಆತ ಖುಷಿಯಾಗಿ ಮಾತನಾಡಿದ" ಎಂದು ಉಲ್ಲೇಖಿಸುತ್ತಾನೆ.[123] ಈ ಪ್ರವಾಸಿಗರ ವರದಿಗಳಿಂದ ಸ್ತ್ರೀ ಸತಿಹೋಗುವುದು ಅವಳ ಮನೆತನದ ಪ್ರತಿಷ್ಠೆಯ ದ್ಯೋತಕವಾಗಿತ್ತೆಂದು ಸ್ಪಷ್ಟವಾಗುತ್ತದೆ.

'ಈರೆಲೋಬೆ' ಜನಪದ ಖಂಡಕಾವ್ಯದಲ್ಲಿ, ಈರೆಲೋಬೆಯನ್ನು 'ಗಂಡಸತ್ತೋರಿಲ್ಲವೆ' ಎಂದು ಸತಿಯಾಗದಂತೆ ಕೇಳಿಕೊಳ್ಳಲಾಗಿ, ಅವಳು "ಗಂಡಸತ್ತೋತವರೆ ಮುಂಡೇರಾದೋರವರ ಹೀನ ಬತ್ತಲ್ಲಿ ಕುಲಕೆಲ್ಲ" ಎಂದು ಉತ್ತರಿಸುತ್ತಾಳೆ.[124] ಸತಿಯಾಗದೇ ಉಳಿಯುವುದು ಕುಲದ ಶ್ರೇಷ್ಠತೆಗೆ ಅಡ್ಡಿಯನ್ನುಂಟು ಮಾಡಿದಂತೆಯೇ ಸರಿ. ಈ ನಂಬಿಕೆಯುಳ್ಳ ಸ್ತ್ರೀಯರು ಸತಿಹೋಗುತ್ತಿದ್ದರು. ಹೀಗೆ ಮನೆತನದ ಸಮಾಜದ ಪ್ರತಿಷ್ಠೆ ಸತಿ ಆಚರಣೆಗೆ ಕಾರಣವಾಗಿ ನಿಂತಿರುವುದನ್ನು ಕಾಣುತ್ತೇವೆ.

## ಅಲೌಕಿಕ ಕಾರಣಗಳು

ಮಾನವನಿಗೆ ಸಾವಿನ ಕುರಿತಾಗಿರುವ ಭಯ, ವಿಸ್ಮಯಗಳು; ಅದರ ರಹಸ್ಯ, ಭೇದಿಸಲಾಗದ ಅವನ ಕೌತುಕ, ಅಸಹಾಯಕತೆಗಳು ಅವನ ಹಲವು ನಂಬಿಕೆ — ಕಲ್ಪನೆಗಳಿಗೆ ಜನ್ಮಕೊಟ್ಟವು. ಸಾವಿನ ಆಚೆಯನ್ನು ಅವನು ಚಿಂತಿಸಿದ ಫಲವಾಗಿ ಪರಲೋಕ, ಪುನರ್ಜನ್ಮ ಕಲ್ಪನೆಗಳು ಸಹಜವಾಗಿ ಹುಟ್ಟಿಕೊಂಡವು. ಪರಲೋಕ ಕಲ್ಪನೆಯಲ್ಲಿ ಸ್ವರ್ಗ — ನರಕಗಳು ಮುಖ್ಯಭಾಗವೆನಿಸಿದವು. ಸತ್ತವ್ಯಕ್ತಿ ಸ್ವರ್ಗಕ್ಕೋ, ನರಕಕ್ಕೋ, ಪುನರ್ಜನ್ಮಕ್ಕೋ ಹೋಗುತ್ತಾನೆಂಬುವ ಸಿದ್ಧಾಂತದ ಹಿನ್ನೆಲೆಯಲ್ಲಿ ಸಾವಿನ ಆಚೆಯೂ ಜೀವನದ ಮುಂದುವರಿಕೆಯನ್ನು ಒಪ್ಪಿಕೊಂಡಂಥ ಮಾನವ ಸಮಾಜ ಸತ್ತವರೊಡನೆ ಅವರ ಉಪಯುಕ್ತ ವಸ್ತುಗಳನ್ನು ಕಳುಹಿಸುವ ಯೋಜನೆಯನ್ನು ರೂಪಿಸಿಕೊಂಡಿತು. ಈ ನೆಲೆಯಲ್ಲಿಯೇ ಪತ್ನಿ ಸತ್ತ ಪತಿಯೊಡನೆ ಸತಿಹೋಗುವಂತಾಯಿತು. ಹೀಗೆ ಈ ಪರಲೋಕ ಕಲ್ಪನೆ, ಪುನರ್ಜನ್ಮ ಕಲ್ಪನೆಗಳು ಸತಿಪದ್ಧತಿಯ ಅಲೌಕಿಕ ಕಾರಣಗಳೆನಿಸಿಕೊಂಡವು. ಇವು ಸತಿಪದ್ಧತಿಯ ಅತಿ ಮುಖ್ಯ ಕಾರಣಗಳಾಗಿವೆ.

(ಅ) ಪರಲೋಕ ಕಲ್ಪನೆ:—

ಈ ಲೋಕವನ್ನುಳಿದು ಇನ್ನೊಂದು ಲೋಕ ಇದೆ; ಎಂಬ ಭಾವನೆ ಪೂರ್ವಕಾಲದ ಮಾನವನಲ್ಲಿಯೇ ನೆಲೆಯೂರಿತ್ತೆಂಬ ವಿಷಯ ಇಂದು ಸಾಮಾನ್ಯ ಸಂಗತಿ ಎನಿಸಿದೆ. ಇದರ ಜೊತೆ ಈ ಲೋಕದಲ್ಲಿ ಕೆಟ್ಟದ್ದನ್ನು ಮಾಡಿದ ವ್ಯಕ್ತಿ ನರಕಕ್ಕೂ, ಒಳ್ಳೆಯದನ್ನು ಮಾಡಿದ ವ್ಯಕ್ತಿ ಸ್ವರ್ಗಕ್ಕೂ ಹೋಗುತ್ತಾನೆ ಎನ್ನುವ ಕಲ್ಪನೆಯೂ ಸಮೃದ್ಧವಾಗಿ ಬೆಳೆದುಬಂದಿತು. ಹೀಗೆ ಸ್ವರ್ಗ — ನರಕಗಳ ಕಲ್ಪನೆಯುಳ್ಳ ಸಮಾಜ, ಸತ್ತವನೊಡನೆ ಅವನಪ್ರಿಯವಸ್ತುಗಳನ್ನು ಕಳುಹಿಸುವ ಯೋಜನೆಯೆಡೆಗೆ ಮನಸ್ಸು ಮಾಡಿತು. ಸ್ತ್ರೀ ಈ ಒಂದು ನಂಬಿಕೆಗೆ ಬದ್ಧವಾದ ಕಾರಣದಿಂದಾಗಿ ಗಂಡನ ಮರಣದೊಡನೆ ಅವಳು ತನ್ನ ಆತ್ಮಬಲಿದಾನಕ್ಕೂ ಸಿದ್ಧವಾಗಬೇಕಾಯಿತು. ಸತ್ತ ಗಂಡನೊಡನೆ ಪತ್ನಿಯನ್ನು ಕಳುಹಿಸುವ ಯೋಜನೆಯನ್ನು ರೂಪಿಸಿದ ಮಾನವ ಸಮಾಜ, ಸ್ತ್ರೀ ಸತಿಹೋಗುವುದರಿಂದ ಮೃತಪತಿಗೆ ಸ್ವರ್ಗದೊರೆಕೊಳ್ಳುವುದೆಂಬ ನಂಬಿಕೆಯನ್ನು ಜೊತೆಗೆ ಹುಟ್ಟುಹಾಕಿತು. ಈಗ ಸತಿಪದ್ಧತಿಗೆ ಕಾರಣವಾದ ಪರಲೋಕ ಕಲ್ಪನೆಯಲ್ಲಿಯ ಎರಡು ವಿಧಗಳನ್ನು ಹೀಗೆ ಗುರುತಿಸಬಹುದಾಗಿದೆ:

1. ಸತ್ತವನೊಂದಿಗೆ ಪ್ರಿಯವಸ್ತುಗಳನ್ನು ಕಳಿಸುವ ನಂಬಿಕೆ.

2. ಸತಿ–ಪತಿಗಳಿಬ್ಬರೂ ಸ್ವರ್ಗ ಪಡೆಯುವ ನಂಬಿಕೆ.

1. <u>ಸತ್ತವನೊಂದಿಗೆ ಪ್ರಿಯವಸ್ತುಗಳನ್ನು ಕಳಿಸುವ ನಂಬಿಕೆ :</u> ಸಾವಿನ ಅನಂತರವೂ ಜೀವದ ಅಸ್ತಿತ್ವವನ್ನು ಗುರುತಿಸಿಕೊಂಡ ಮಾನವ ಸತ್ತವ್ಯಕ್ತಿಯೊಡನೆ ಅವನ ಪ್ರಿಯವಾದ ವಸ್ತುಗಳನ್ನು ಕಳುಹಿಸಲು ಯೋಜಿಸಿದ್ದು ಸಹಜವೇ ಆಗಿದೆ. ಪುರುಷ ಪ್ರಧಾನ ಸಮಾಜವು ಪುರುಷನ ಇಷ್ಟವಾದ ವಸ್ತುಗಳಲ್ಲಿ ಸ್ತ್ರೀಯನ್ನು ಕಲ್ಪಿಸಿಕೊಂಡ ಕಾರಣದಿಂದ ಅವನ ಮರಣದೊಂದಿಗೆ ಅವಳ ಮರಣವನ್ನು ಇಚ್ಛಿಸಿರುವುದನ್ನು ಕಾಣುತ್ತೇವೆ. ಈ ಕುರಿತು ಪೂರ್ವ ಕಾಲದಲ್ಲಿ ನಡವಳಿಕೆಯಲ್ಲಿದ್ದ ಕೆಲವು ಉದಾಹರಣೆಗಳನ್ನು ಜ್ಞಾಪಿಸಿಕೊಂಡರೆ ಈ ವಿಷಯ ಮನದಟ್ಟಾಗುತ್ತದೆ. ಸುಮೇರಿಯನ್ನರ 'ಉರ್' ನಗರದಲ್ಲಿ ಭೂಶೋಧನೆಯ ಕಾಲದಲ್ಲಿ ಕ್ರಿ.ಶ.ಪೂರ್ವ 4000 ವರ್ಷಗಳ ಕಾಲದ ರಾಜರ ಸಮಾಧಿಯಲ್ಲಿ ಸಾರಥಿಗಳು, ಸೈನಿಕರು, ಆಸ್ಥಾನಿಕರು, ಗಾಯಕರು, ಅಂತಃಪುರದ ಸ್ತ್ರೀಯರು ಇದ್ದಿರುವುದು ಗಮನಕ್ಕೆ ಬಂದಿದೆ.[125] ಕ್ರಿ.ಶ.ಪೂ.3000 ವರ್ಷಗಳ ಕಾಲದ ಪ್ರಸಿದ್ಧವಾದ ಚಿಯಾಪ್ಸ್ ( Cheops ) ಪಿರಾಮಿಡ್ಡು ರಾಣಿಯರಿಗಾಗಿ ಬೇರೆ ಕೋಣೆಯನ್ನು ಹೊಂದಿರುವುದನ್ನು ಇಲ್ಲಿ ಸ್ಮರಿಸಬಹುದು.[126] 'ಈಜಿಪ್ತಿನ 'ಟ್ಯುರ್' ನ ಸಮಾಧಿಗೆ ಹೊಂದಿದಂತೆ ಇರುವ ಸಮಾಧಿಯಲ್ಲಿ 275 ಅಂತಃಪುರದ ರಾಣಿಯರೂ, ರಾಜಮನೆತನದ 43 ಜನರೂ ಹಾಗೂ ಒಂದು ಮೈಲು ಅಂತರದಲ್ಲಿ 269 ಜನರು ಹುಗಿಯಲ್ಪಟ್ಟಿರುವುದು ಕಂಡುಬಂದಿದೆ.[127] ನಮ್ಮ ದೇಶದಲ್ಲಿಯೂ ಪ್ರಾಚೀನ ಸಮಾಧಿಗಳನ್ನು ತೆಗೆದಾಗ ಅಲ್ಲಿ ಹೂಳಿದ್ದ ವ್ಯಕ್ತಿಯ ಅಸ್ಥಿಪಂಜರದ ಜೊತೆಯಲ್ಲಿ ಅನೇಕ ಕುಡಿಕೆಗಳು, ಆಭರಣಗಳು ದೊರಕಿರುವುದನ್ನು ಇಲ್ಲಿ ನೆನೆಯಬಹುದು ಸಿಥಿಯನ್ನರಲ್ಲಿ ರಾಜನು ಸತ್ತಾಗ ಅವನೊಡನೆ ಅವನ ಅಡಿಗೆಯವರನ್ನು, ಆಳುಗಳನ್ನು, ಕುದುರೆಗಳನ್ನು ಹೂಳುತ್ತಿದ್ದ ಪದ್ಧತಿಯನ್ನು ಹೆರೊಡೊಟಸ ಹೇಳುತ್ತಾನೆ.[128] ಕ್ರಿ.ಶ.1220ರ ಟ್ಯೂಟಾನಿಕ್ ಐತಿಹ್ಯಕಾವ್ಯ 'ಎಡ್ಡಾ' ದಲ್ಲಿ ಜರ್ಮನ್ ದೇವತೆ 'ಓಡಿನ್' ತನ್ನ ಆರಾಧಿಕರಿಗೆ ನೀಡುವ ಆದೇಶವನ್ನು ಇಲ್ಲಿ ಸ್ಮರಿಸಿದರೆ ಈ ವಿಷಯ ಇನ್ನು ಸ್ಪಷ್ಟಗೊಳ್ಳುತ್ತದೆ. –ವಲ್ಹಲ್ಲಾಕ್ಕೆ ( Valhalla –ಯುದ್ಧ ವೀರರು ಮಡಿದ ಬಳಿಕ ಬಂದು ಸೇರುವ ವಾಸಸ್ಥಾನ) ಯಾರೆ ಬರಲಿ ಅವನು ಬರುವಾಗ ತನಗೆ ಸೇರಿದ ಎಲ್ಲ ಸಂಪತ್ತನ್ನು ಜೊತೆಗೆ ತಗೆದುಕೊಂಡೇ ಬರಬೇಕು.[129] ಪುರುಷನೊಬ್ಬನು ಮಡಿದಾಗ ಅವನ ಜೊತೆಯಲ್ಲಿ

ಅವನ ಹೆಂಡತಿಯಲ್ಲದೆ ಅವನ ತಾಯಿ, ಸಹೋದರಿಯರು, ಮಂತ್ರಿಗಳು, ದಾಸ-ದಾಸಿಯರು ಪ್ರಾಣತ್ಯಾಗ ಮಾಡಿಕೊಳ್ಳುತ್ತಿದ್ದ ವಿಷಯವನ್ನು ಕಲ್ಹಣನು ಹೇಳುತ್ತಾನೆ[130] ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಶಿವದುರ್ಗದಲ್ಲಿ ನೆಲದಲ್ಲಿ ಹೂಳಿದ ಮಾಸ್ತಿಕಲ್ಲಿನ ಕೆಳಗೆ ಬೆಳ್ಳಿ ನಾಣ್ಯಗಳಿಂದ ತುಂಬಿದ ತಾಮ್ರದ ಬಿಂದಿಗೆ ಸಂಶೋಧನೆಯ ಕಾಲದಲ್ಲಿ ದೊರಕಿರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು[131] ಈ ಎಲ್ಲ ಉದಾಹರಣೆಗಳು ಸಾವಿನಾಚೆಯ ಜೀವನದ ಮುಂದುವರಿಕೆಯಲ್ಲಿಯ ನಂಬಿಕೆಯನ್ನು, ಅದಕ್ಕಾಗಿ ಸತ್ತ ವ್ಯಕ್ತಿಗಾಗಿ ಅವನ ಇಷ್ಟದ ವಸ್ತುಗಳನ್ನು ಕಳುಹಿಸಿಕೊಡುತ್ತಿದ್ದುದನ್ನು ತಿಳಿಸುತ್ತವೆ. ಈ ನಂಬಿಕೆಯ ಅನುಸರಣೆಯ ಹಿನ್ನೆಲೆಯಲ್ಲಿ ಪತ್ನಿ ಪತಿಯೊಡನೆ ಸತಿಹೋಗುವ ಪರಿಪಾಠ ಬೆಳೆದುಬಂದಿತು.

ಸತಿಕಲ್ಲಿನಲ್ಲಿ ಪತ್ನಿ ಸತಿಹೋದುದನ್ನು ತಿಳಿಸಲು ಹೆಚ್ಚಾಗಿ 'ಸಹಗಮನ' ಎಂಬ ಪಾಠವನ್ನೇ ಬಳಸಲಾಗಿದೆ. ಉದಾಹರಣೆಗೆ ಈ ಕೆಲವು ಶಾಸನಪಾಠಗಳನ್ನು ಗಮನಿಸಬಹುದು : ಉದಾಹರಣೆಗೆ ಈ ಕೆಲವು ಶಾಸನಪಾಠಗಳನ್ನು ಗಮನಿಸಬಹುದು: 'ಬೀರಹೂರ ಬೊಂಮಗೌಡನ ಮಗನು ಮಾದಪ್ಪನು ಸ್ವರ್ಗಸ್ಥನಾದನು ಆತನ ಮದವಳಿಗೆ ಮಸಣಕ್ಕನು ಸಹಗಮನವಾದಳು[132] 'ಗಣಪಗೌಡರ ಮಗಬೊಂಮಗೌಡರು ಸ್ವರ್ಗಸ್ತನಾದ ಆಲತನ ಮದುವಳಿಗೆ ಬೊಂಮಿಗೌಡಿ ಸಹಗಮನಮಾಡಿದಳು.[133] '.......... ಆತನ ಮದವಳಿಗೆ ಭೈರಾಯಿಸಹಗ· ನವಮಾಡಿದಳು.[134] ......'ಇಲ್ಲಿಯ ಪತ್ನಿಯರು ಸತಿಹೋದುದು ಮರಣವಲ್ಲ, ಗಂಡನ ಜೀವನದೊಂದಿಗೆ ಸ್ವರ್ಗಕ್ಕೆ ಅವರ ಗಮನವಾಗಿದೆಯಷ್ಟೇ. ಇನ್ನು ಕೆಲವು ಪಾಠಗಳಲ್ಲಿ ಸತಿಹೋದದ್ದು ಹೀಗೆ ಬರುತ್ತದೆ: 'ಮನೆಮನೆಯ ವಿಠಕನು ಸತ್ತಲ ಆತನವರ್ಧಾಂಗಿ ಆಮಿಗೌಡಿ ಕೂಡೆಸ್ವರ್ಗಸ್ತೆಯಾದಳು..[135] ಅವರಮದವಳಿಗೆ ಚಿಕ್ಕಗೌಡಿ ಅವರ ಕೂಡೆ ಸಮಾಧಿಯನು ಪೊಕ್ಕು ಸ್ವರ್ಗಸ್ಥರಾದರು.[136] 'ಗುಂಜನೂರ ವಿಜಾರ್ಯಮಾಡಿನಂ.... ಕನ ಮಾಗಡಿವರದನ ಮುಲನಾಗೆನ (ಯ) ಕನು ಸೊರ್ಗಸ್ತನಾದರೆ ಹೆಂಡತಿ ಕೂಡೆಹೋದಳು.[137] — ಇವುಗಳಲ್ಲಿಯ ಕೂಡೆ' ಎಂಬ ಪದ ಪತ್ನಿಯರು ಗಂಡಂದಿರೊಡನೆ ಇನ್ನೊಂದು ಲೋಕಕ್ಕೆ ಹೋದುದನ್ನು ಸ್ಪಷ್ಟಪಡಿಸುವುದೇ ಆಗಿದೆ. ( ದೇವಿ ) ನಾಯಕ ಅವನ ಮದವಳಿಗೆ ನಾಗಾಯಿ ದೇಮಾಯಿಗಳು ಮಹಾಸತಿಯರಾಗಿ ಆತನು ಸಂಘಾತಸ್ವರ್ಗಸ್ಥರಾದರು[138] 'ಹಯಾರ ಅಂಮಗೌಡನ ಬಯ — ರಮಗೌಡಿ ತಂಮಸ್ತ್ರೀಯರು ಸಹಸಂಗತಿಯುಡಿದರು[139] 'ಹೆಗ್ಗೋಡೆಯ ತಂಮಸೆಟ್ಟಿಯರು ಅವರ ಸತಿಬೊಮ್ಮಂಗೌಡಿಯರು ಸಹಿತ ದೇವಲೋಕಕ್ಕೆ ಪ್ರಾಪ್ತರಾದರು.[140] 'ಹೆಗ್ಗೋಡೆಗ್ರಾಮದ

ಮಹಾಪ್ರಭು ಬೀರಗೂಡರಮಗ ಬಯ್ಯರಗೂಡರು ಆತನ ಸತಿ ಸಂಗಡ ಸಹಿತ ವಯ್ಯುಕುಂಟ ಪ್ರಪಿತರಾದರು[141] ಇತ್ಯಾದಿ ಅಪರೂಪದ ಪಾಠಗಳು ಮಾಸ್ತಿಕಲ್ಲಿನಲ್ಲಿ ದೊರಕುತ್ತವೆ. ಇವುಗಳಲ್ಲಿಯ 'ಸಂಘಾತ', 'ಸಹಸಂಗತಿ' 'ಸಹಿತ', ಸಂಗಡ ಸಹಿತ — ಈ ಪದಗಳು ಪತಿಯೊಂದಿಗೆ ಪತ್ನಿಯ ಗಮನವನ್ನು ಒತ್ತಿಹೇಳುವವುಗಳೇ ಆಗಿವೆ. ಅಂದಿನ ಸಮಾಜ ಗಂಡನ ಮರಣವನ್ನು ಮತ್ತೊಂದು ಲೋಕದ ಪಯಣವೆಂದು ಭಾವಿಸಿ, ಅವನ ಕೂಡೆ — ಸಂಗತಿ — ಸಹಿತ — ಅವನಪತ್ನಿಯನ್ನು ಕಳುಹಿಸುವ ಒತ್ತಾಸೆ ಹೊಂದಿರುವುದು ಈ ವಿವರಣೆಯಿಂದ ಸ್ಪಷ್ಟಗೊಳ್ಳುತ್ತದೆ. ಮಾಸ್ತಿಕಲ್ಲಿನ ಶಿಲ್ಪಗಳು ಪತಿಯೊಂದಿಗೆ ಸತಿಯ ಪರಲೋಕದ ಪಯಣವನ್ನು ಒಳಗೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು

ಜನಪದ ಸಾಹಿತ್ಯದಲ್ಲಿ ಗಂಡನ ಮರಣದ ನಂತರ ಪತ್ನಿಯು ಸತಿಹೋಗುವುದನ್ನು ಗಂಡನಮನೆಗೆ ,ಅತ್ತೆಯ ಮನೆಗೆ ಹೋಗುವ ಕ್ರಿಯೆಗೆ ಹೋಲಿಸಲಾಗುತ್ತದೆ. 'ನಾಗವ್ವ' ಜನಪದ ಖಂಡಕಾವ್ಯದಲ್ಲಿ ಚಿಂದಯ್ಯನನ್ನು ಹಾಳುಬೇಡರು ಕಡಿಯುತ್ತಾರೆ. ಅವನ ಪತ್ನಿ 'ನಾಗವ್ವ' ಸತಿಹೋಗುವ ಸಂದರ್ಭದಲ್ಲಿ ಪದ್ಯಗಳು ಹೀಗೆ ಬರುತ್ತವೆ:[142]

ಕೊಂಡದಲ್ಲಿರುವ ಕೆಂಡದ ಜವಳಿಯ
ತಕೊಂಡು ಬಾರೆಣ್ಣೆ ಇದುರೀಗೆ ! ನಾಗವ್ವನ
ಗಂಡನ ಮನೆಗೆ ಕಳುವೋನ.

ಕಿಚ್ಚಿನಾಗಿರುವ ಕುಚ್ಚಿನ ಜವರಿಯ
ತಕ್ಕೊಂಡು ಬಾರೆಣ್ಣೆ ಇದುರೀಗೆ ! ನಾಗವ್ವನ
ಅತ್ತೆಯ ಮನೆಗೆ ಕಳುವೋನ

ಚಿಂದಯ್ಯ ಸತ್ತು ಪರಲೋಕದಲ್ಲಿ ಇದ್ದಾನೆ. ಅವನಿರುವ ಆ ಸ್ಥಾನವೇ ಪತ್ನಿ ನಾಗವ್ವಳ ಗಂಡನಮನೆ, ಅತ್ತೆಯಮನೆ, ಗಂಡನಿದ್ದಲ್ಲಿಗೆ ಪತ್ನಿಯೂ ಸೇರಲಿ ಎಂಬ ಬಯಕೆ ಇಲ್ಲಿ ಎದ್ದು ಕಾಣುತ್ತದೆ. ನಾಗವ್ವ ಅಗ್ನಿಕುಂಡದಲ್ಲಿ ಬೀಳುವುದನ್ನು ಜನಪದ ಕವಿ ಇನ್ನು ಅರ್ಥವತ್ತಾಗಿ ನೀಡುತ್ತಾನೆ:[143]

ಕಿಚ್ಚಿನ ಸುತ್ತ ನುಚ್ಚುಕಿಕ್ಕಿ ಹಸೆಯುಂಯುಂ
ಮುತ್ತಿನ ಕಳಸ ನಡುವಿರಿಸಿ : ನಾಗವ್ವನ
ಕೊಂಡಕೆ ಧಾರೆ ಎರೆದಾರು:

ಮದುವೆಯ ಸಮಯದಲ್ಲಿ ಹೆಣ್ಣನ್ನು ಧಾರೆಯೆರೆದು ಕೊಡುವುದು ಸಂಪ್ರದಾಯ. ಸತಿಹೋಗಲಿರುವ ನಾಗವ್ವ ಕೊಂಡದಲ್ಲಿ ಬೀಳುವುದೂ 'ಧಾರೆ' ಎರೆಯುವ ಕ್ರಿಯೆಗೆ ಹೋಲಿಸಿರುವುದು ತುಂಬ ಔಚಿತ್ಯಪೂರ್ಣವಾಗಿದೆ. ಗಂಡನ ಸಾವು ಸಾವಲ್ಲ, ಅವನು ಇನ್ನೊಂದು ಲೋಕದಲ್ಲಿ ಬದುಕಿದ್ದಾನೆ. ಅಲ್ಲಿಗೆ ಅವನ ಸತಿಯೂ ಹೋಗಲಿದ್ದಾಳೆ. ಅದಕ್ಕಾಗಿಯೇ ಇಂಥ ಪ್ರಸಂಗಗಳಲ್ಲಿ ಜನಪದ ಕವಿಗಳು, ವಿದೇಶಿಪ್ರವಾಸಿಗರು ಸತಿಹೋಗಲಿರುವವಳನ್ನು ಮುತ್ತೈದೆಯಂತೇ ವರ್ಣಿಸುವುದನ್ನು ಇಲ್ಲಿ ಸ್ಮರಿಸಬಹುದು. ಮಾಸ್ತಿಕಲ್ಲಿನ ಶಿಲ್ಪಗಳಲ್ಲಿಯೂ ಸತಿಯರನ್ನು ಮುತ್ತೈದೆಯರಂತೆಯೇ ಕಂಡರಿಸಲಾಗಿರುವುದು . ಈ ವಿಷಯಕ್ಕೆ ಇನ್ನು ಅರ್ಥವಂತಿಕೆಯನ್ನು ನೀಡುತ್ತದೆ. ಈ ವಿವರಣೆಗಳಲ್ಲಿ ಪತಿ ಸತ್ತು ಇನ್ನೊಂದು ಲೋಕದಲ್ಲಿ ಇರುವನೆಂದೂ ಅವನಲ್ಲಿಗೆ ಪತ್ನಿ ಹೋಗಬೇಕಾಗಿರುವ ಅನಿವಾರ್ಯತೆಯನ್ನು ಸೂಚಿಸುತ್ತವೆ.

2. ಸತಿ — ಪತಿಗಳಿಬ್ಬರೂ ಸ್ವರ್ಗಪಡೆಯುವ ನಂಬಿಕೆ:—

ಸ್ವರ್ಗದ ಕಲ್ಪನೆ ಮತ್ತು ಅದರ ಸುತ್ತಲಿರುವ ನಂಬಿಕೆಗಳು ಕೇವಲ ಭಾರತದಲ್ಲಿ ಮಾತ್ರ ಇರದೇ ಪ್ರಪಂಚದಲ್ಲೆಲ್ಲ ಪ್ರಚಲಿತದಲ್ಲಿರುವುದನ್ನು ಕಾಣುತ್ತೇವೆ. ಭಾರತದಲ್ಲಿ ವೀರ, ಮಹಾಸತಿ — ಇವುಗಳಿಗೆ ಜೀವನವುಳ್ಳದ ಸ್ಥಾನ ದೊರಕಿದ್ದರಿಂದ ಹಾಗೆ ಮರಣಹೊಂದಿದವರು ಸ್ವರ್ಗಕ್ಕೆ ಹೋಗುತ್ತಾರೆ ಎಂದು ತಿಳಿಯಲಾಯಿತು. ಹೋರಾಟಮಾಡುವಾಗ ವೀರನಿಗೆ ಹಾಗೂ ಗಂಡನ ಮರಣದ ನಂತರ ಸತಿಹೋಗಲಿರುವ ಪತ್ನಿಗೆ ಸಾವಿನ ಕುರಿತಾಗಿ ಮೂಡಬಹುದಾದ ಭಯವನ್ನು ಹೋಗಲಾಡಿಸಲು ಮುಂದೆ ದೊರಕಲಿರುವ ಸ್ವರ್ಗದ ಚಿತ್ರವನ್ನು ನೀಡಲಾಯಿತು. ಇದು ಸಾವನ್ನು ಒಂದು ಬಗೆಯಲ್ಲಿ ಸಹ್ಯಗೊಳಿಸುವ ಪ್ರಯತ್ನವಾಗಿದೆ.

ಮಹಾಭಾರತದಲ್ಲಿ ಹೆಣ್ಣುಪಾರಿವಾಳವೊಂದು ಗಂಡು ಪಾರಿವಾಳದ ಮರಣದ ನಂತರ ತಾನು ಮರಣಹೊಂದಿ ಸ್ವರ್ಗದಲ್ಲಿ ಗಂಡುಪಾರಿವಾಳದ ಜೊತೆಗೆ ಸುಖವನ್ನು ಅನುಭವಿಸುತ್ತದೆ — ಎಂಬ ಕಥೆಯೊಂದು ಬರುತ್ತದೆ. ಈ ದೃಷ್ಟಾಂತ ಕಥೆಯ ನಂತರ 'ಸ್ತ್ರೀಯೂ ಸಹ ಹೀಗೆಯೇ 'ಸತಿ' ಆದರೆ ಪಾರಿವಾಳದಂತೆ ಸ್ವರ್ಗಸುಖವನ್ನು ಅನುಭವಿಸುತ್ತಾಳೆ ಎನ್ನುವ ವಿವರಗಳು ಬರುತ್ತವೆ.[144] ಈ ಕಥೆ ಹಾಗೂ ಅದರ ನಂತರದ ವಿವರಣೆಗಳು ಪತ್ನಿ ಸತಿಹೋದರೆ ಸ್ವರ್ಗಸುಖವನ್ನು ಹೊಂದುತ್ತಾಳೆ ಎಂಬ ವಿಷಯದೆಡೆಗೆ ಒತ್ತುಕೊಟ್ಟಿವೆ. ಅದೇ ರೀತಿ ಅಗ್ನಿಪುರಾಣವೂ ಕೂಡ, 'ಮಡಿದ ಗಂಡನ ಜೊತೆಯಲ್ಲಿ ಅಗ್ನಿ ಪ್ರವೇಶಮಾಡಿದ ವಿಧವೆ ಪತಿ ಸಹಿತ ಸ್ವರ್ಗಕ್ಕೆ ಹೋಗುತ್ತಾಳೆ' ಎಂದು ತಿಳಿಸುತ್ತದೆ.[145] ಇದು ಪತ್ನಿ ಸತಿಹೋಗುವಿಕೆ

ಯನ್ನು ಪ್ರೋತ್ಸಾಹಿಸುವುದೇ ಆಗಿದೆ. ಈ ಸ್ವರ್ಗ ಕಲ್ಪನೆಯನ್ನಿಟ್ಟುಕೊಂಡು ಮಹಿಳಾವರ್ಗ ಸತಿಹೋಗಲು ಮನಸ್ಸು ಮಾಡಿರಬಹುದಾಗಿದೆ. ಅದಕ್ಕಾಗಿಯೇ ಬಾಣನಂಥ ಕವಿ ಸತ್ತಗಂಡನ ಹಿಂದೆ ಸಾಯುವುದು ಯಾವ ರೀತಿಯಿಂದಲೂ ಫಲದಾಯಕವಲ್ಲವೆಂದು ಹೇಳಬೇಕಾಗಿ ಬಂದಿತು. ಅಷ್ಟೇ ಅಲ್ಲದೆ ಅವನು ಸತಿಹೋಗುವಿಕೆ ಸತ್ತವನಿಗೆ ಸ್ವರ್ಗಕ್ಕೆ ಹೋಗಲು ಯಾವ ರೀತಿಯ ಸಹಾಯವನ್ನು ಮಾಡುವುದಿಲ್ಲವೆಂದು ಹೇಳಿದನು.[146] ಹೀಗೆ ಬಾಣಕವಿ ಹೇಳಬೇಕಾಗಿ ಬಂದಿರುವಲ್ಲಿ, ಅಂದಿನ ಸಮಾಜದಲ್ಲಿ ಪತ್ನಿ ಸತಿಹೋದರೆ ಸ್ವರ್ಗಸೇರುತ್ತಾಳೆ ಹಾಗೂ ಅವಳ ಪತಿಗೆ ಸ್ವರ್ಗದೊರಕೊಳ್ಳುತ್ತದೆ ಎಂಬ ನಂಬಿಕೆಗಳೇ ಪ್ರೇರಣೆಗಳಾಗಿವೆ.

ಕ್ರಿ.ಶ. 700 ರ ನಂತರ ಬಂದ ಸ್ಮೃತಿ — ಧರ್ಮಶಾಸ್ತ್ರಗಳು ಸತಿಹೋಗುವುದರಿಂದ ಸ್ವರ್ಗ ದೊರಕೊಳ್ಳುವುದೆಂಬ ಕಲ್ಪನೆಯನ್ನು ಬೆಂಬಲಿಸುತ್ತವೆ. 'ಹಾರೀತನು' 'ಪತ್ನಿ ತನ್ನ ಗಂಡನ ಹಿಂದೆಯೇ ಸುಟ್ಟು ಸಹಗಮನ ಮಾಡಿಕೊಂಡರೆ, ಅವಳು ತನ್ನ ಗಂಡನ ಭಯಂಕರ ಘೋರ ಪಾಪಕರ್ಮಗಳನ್ನು ಪರಿಶುದ್ಧಮಾಡಬಲ್ಲವಳಾಗುತ್ತಾಳೆ. ಮತ್ತು ಇವರಿಬ್ಬರೂ ಮೂರುವರೇ ಕೋಟಿ ವರ್ಷಗಳ ಕಾಲ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾರೆ' ಎಂದು ಹೇಳುತ್ತಾನೆ.[147] ಪರಶರಸ್ಮೃತಿಯಲ್ಲಿ 'ಹುತ್ತದಿಂದ ಹಾವನ್ನು ಹಾವಾಡಿಗ ಹಿಡಿದು ಎಳೆಯುವಂತೆ, ನರಕದಿಂದ ಗಂಡನನ್ನು ಸತಿಯಾದವಳು ಎಳೆದುಕೊಂಡು ಬಂದು ಸ್ವರ್ಗದಲ್ಲಿ ಇಬ್ಬರೂ ಮೂರುವರೆ ಕೋಟಿ ವರ್ಷಗಳವರೆಗೆ ಸುಖವಾಗಿರುತ್ತಾರೆ. ಅಲ್ಲದೆ ಅವಳು ಸತಿಯಾಗುವ ಇಚ್ಛೆ ಇಲ್ಲದೇ ಸಹಗಮನ ಮಾಡಿದರೂ ಕೂಡ ಅವರಿಬ್ಬರಿಗೆ ಸ್ವರ್ಗದ ಈ ಸ್ಥಳ ಕಾದಿರಿಸಿದ್ದೇ ಆಗಿದೆ —[148] ಎಂದು ಹೇಳಲಾಗಿದೆ. ಈ ವಿವರಣೆಗಳು ಸತಿಹೋಗುವುದರಿಂದ ಪತಿ–ಪತ್ನಿಯರಿಬ್ಬರಿಗೂ ದೊರಕೊಳ್ಳುವ ಸ್ವರ್ಗಫಲವನ್ನು ಚಿತ್ರಿಸುತ್ತವೆ. ಈ ಕಾರಣದಿಂದಾಗಿಯೇ 7ನೆಯ ಶತಮಾನದ ನಂತರದಲ್ಲಿ ಭಾರತದಲ್ಲಿ ಸತಿಘಟನೆಗಳು ಹೆಚ್ಚು ಜರುಗಿದಂತೆ ತೋರುತ್ತವೆ.

ಹಲವು ಶಾಸನಗಳಲ್ಲಿ ಸತಿಹೋದವರನ್ನು ಈ ರೀತಿ ವರ್ಣಿಸಲಾಗಿದೆ. ''ಚಿಂಮಾಯಿ ಸಹಗಮನವ ಮಾಡಿ ಸ್ವರ್ಗಪ್ರಾಪ್ತೆ ಆದಳು'',[149] ''ಜಿಂನಕ್ಕನು ಸಹಗಮನದಿಂ ಸ್ವರ್ಗಸ್ಥೆಯಾದಳು,[150] ''ಚಂಡನಾಯಕಿ ಸಹಗಮನವನೆಯ್ದಿದರು ದೇವಲೋಕಪ್ರಾಪ್ತರಾದರು[151] ''ಸಿರಿಯಾಚಿಂಮಣನ ಮಗಳು ವೀರಕ್ಕನು ವೀರಸ್ವರ್ಗಲೋಕಪ್ರಾಪ್ತೆಯಾದಳು —[152] ಇಂಥ ವಿವರಣೆಗಳು ಪತ್ನಿಯು ಸತಿಹೋಗಿ ಸ್ವರ್ಗಪಡೆದಳೆಂದು ತಿಳಿಸುವವಾಗಿವೆ. ಇನ್ನೂ

ಕೆಲವು ಶಾಸನಗಳಲ್ಲಿ ಗಂಡ– ಹೆಂಡರಿಬ್ಬರೂ ಕೂಡಿ ಸ್ವರ್ಗಸೇರಿದರೆಂಬ ಅಪರೂಪದ ವಿವರಣೆಗಳು ದೊರಕುತ್ತವೆ.[153] ಮಾಸ್ತಿಕಲ್ಲಿನ ಶಿಲ್ಪಗಳ ಮೇಲ್ಭಾಗದಲ್ಲಿ ಶಿವಲಿಂಗದೊಡನೆ ಇಲ್ಲವೆ ತೀರ್ಥಂಕರರೊಡನೆ ಬಹುತರವಾಗಿ ಗಂಡ – ಹೆಂಡಿರನ್ನು ಕಂಡರಿಸಿರುವುದನ್ನು ಇಲ್ಲಿ ಸ್ಮರಿಸಬಹುದು.[154]

ಮಹಾಕವಿ ಪಂಪನು 'ವಿಕ್ರಮಾರ್ಜುನ ವಿಜಯ'ದಲ್ಲಿ ಮಡಿದ ಯೋಧನನ್ನು ದೇವಕನ್ನಿಕೆಯರು ಪಡೆಯುವರೆಂಬ ಕಲ್ಪನೆಯ ಹಿನ್ನೆಲೆಯಲ್ಲಿ ಪತ್ನಿಯರು ಸತಿ ಯಾಗುತ್ತಿದ್ದುದನ್ನು ಸೂಕ್ಷ್ಮವಾಗಿ ಒಂದು ಪ್ರಸಂಗದಲ್ಲಿ ತಿಳಿಸಿದ್ದಾನೆ.[155]

ತಾಂ ಗಿಡ ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಪ್ಪನಿಲ್ಲಿ ಮಾ
ಣಾಂ ಗಡವಿರ್ಪನಂತನಿತು ಬೆಳ್ಪನೆ ಮುನ್ನಮೆ ಪೋಗಿ ನಲ್ಮೆಗೆ:
ಲ್ಲಂಗೊಳಿ ದೇವಲೋಕದೊಳಧೀಶನನಾನಿದಿರ್ಗೊಳ್ವೆನೋ ಮಾ ಸ
ಗ್ಗಂಗಳಿಂದಿರ್ಪ ದೇವತಿ ತೊಳ್ತರೊಳಳ್ತುಯನಾಗಲೀವೆನೇ ::

ರನ್ನಕವಿ ನಾಗದೇವನ ಪತ್ನಿ ಗುಂಡಮಬ್ಬೆ ಸತಿ ಹೋಗಿ ಗಂಡನೊಡನೆ ಸ್ವರ್ಗದಲ್ಲಿ ಇದ್ದುದನ್ನು ಇನ್ನೂ ಕಲಾತ್ಮಕವಾಗಿ ಚಿತ್ರಿಸುತ್ತಾನೆ. ''ಒಡಸತ್ತು ಪತಿವ್ರತೆ ಗುಂಡಮಬ್ಬೆ ಸೌಂದರಸುಭಟಂಗೆ ಸಗ್ಗದೊಳವುಲ್ಲಿ ಮನಃಪ್ರಿಯೆಯಾದಳೆಂದು ಮಚ್ಚರಿ ಸುಮರಿಂದ್ರ ಸೌಂದರಿಯರೇಂ ಸೊಬಗೋ ಸುಭಟತ್ರಿಣೇತ್ರನಾ''[156] ದೇವಕನ್ನಿಕೆಯರು ಸತ್ತ ವೀರ ನಾಗದೇವ ತಮ್ಮವನಾಗದೇ ಸತಿಹೋದ ಗುಂಡಮಬ್ಬೆಯವನಾಗಿಯೇ ಉಳಿದುದನ್ನು ಕಂಡು ಮತ್ಸರಪಡುತ್ತಿದ್ದರು ಎಂಬ ಕಲ್ಪನೆ ಮನಮೋಹಕವಾಗಿದೆ. ಗಂಡನ ಮರಣದ ನಂತರ ಪತ್ನಿ ಸತಿಹೋದರೆ ಸ್ವರ್ಗಪಡೆಯುತ್ತಾಳೆಂಬ ನಂಬಿಕೆಯನ್ನು, ಅದನ್ನು ಹೇಳುವ ಬೋಧಕರನ್ನು ಬ್ರಹ್ಮಶಿವ ವಿಡಂಬಿಸುವುದನ್ನು ಇಲ್ಲಿ ಸ್ಮರಿಸಬಹುದು.[157]

ಪುರುಷನ ಪರೋಕ್ಷದೊಳ್ ಪೆರ
ಗಿರದಾಗಡೆ ಸತ್ತಳಪ್ಪೊಡಾಕೆಗೆ ಸಗ್ಗಂ
ದೊರಕೊಳ್ಗುಮೆಂಬ ದುರ್ಬೋಧ
ಧರಮಾತಂ ಕೇಳ್ದು ನಂಬಿ ಕಿಚ್ಚಂ ಪುಗುವರ್

ಬ್ರಹ್ಮಶಿವನ ಕಾಲದಲ್ಲಿ ಸತಿಹೋಗಿ ಸ್ವರ್ಗ ಪಡೆಯುವ ಕಲ್ಪನೆ ಸ್ಪಷ್ಟವಾಗಿರುವುದು ಈ ಪದ್ಯದ ಹಿನ್ನೆಲೆಯಲ್ಲಿ ಕಂಡುಬರುತ್ತದೆ. ನಯಸೇನನು ಯುದ್ಧಭೂಮಿ, ಬೆಂಕಿ, ಜಲ ಮುಂತಾದವುಗಳಲ್ಲಿ ಬಿದ್ದು ಸ್ವರ್ಗಸೇರುತ್ತೇನೆ. ಎನ್ನುವ ದಡ್ಡನನ್ನು ಲೋಕಮೂಢ

ಎಂದಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು[158] ಮಹಾಕವಿ ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ' ಯಲ್ಲಿ ಪದ್ಯವೊಂದು ಹೀಗೆ ಬರುತ್ತದೆ:[159]

ಮೂರು ಕೋಟಿಯು ಕೋಟಿ ಧರ್ಮವ
ಮೀರದಿಹ ರೋಮಾಳಿ ಸಂಖ್ಯೆಯೊ
ಳಾರೆನ್ನದೆ ನಿಜಪತಿಯು ಸಹಗಮನದಲಿ ತನುವ
ಮಾರಿದಬಲೆಯರುಗಳ ದೆಸೆಯಿಂ
ದಾರುಮಡಿ ಸ್ವರ್ಗಾದಿ ಭೋಗವ
ಸೂರೆಗೊಂಬುದು ತಪ್ಪದವನೀಪಾಲ ಕೇಳೆಂದ

ತನ್ನ ಪತಿಯೊಡನೆ ಸಹಗಮನಗೊಂಡು ಪತ್ನಿ ಸ್ವರ್ಗಪಡೆಯುತ್ತಾಳೆಂಬ ಜನ ಕಲ್ಪನೆಯನ್ನು ನಾರಣಪ್ಪ ಇಲ್ಲಿ ಸಹಜವಾಗಿ ಉಲ್ಲೇಖಿಸಿದ್ದಾನೆ 'ಸಿರುಮಣನಾಯಕನ ಸಾಂಗತ್ಯದಲ್ಲಿ ವೀರಣ್ಣನ ಮರಣದ ನಂತರ ಅವನ ಪತ್ನಿಯರು ಸತಿಹೋಗುವ ಸಮಯದಲ್ಲಿ 'ವೀರಣ್ಣನಡಿಗೆ ವಂದಿಸಿ ಬೇಡಿಕೊಂಡರು ವೀರಸ್ವರ್ಗವನು ಕೊಡೆಂದು' ಎಂದು ವಿವರಣೆ ಬರುತ್ತದೆ.[160] ಅಲ್ಲದೆ ಅವರು ಸಮಾಧಿಗೊಂಡು ಕೈಲಾಸಕ್ಕೆ ಹೋದರು ಎಂಬ ಪದ್ಯ ಹೀಗೆ ಬರುತ್ತದೆ[161]

ಬಾಗಿನವನು ಕೊಟ್ಟು ಬಂದರು ಸತಿಯರು
ಬೇಗಸಮಾಧಿಗೆ ಕುಳಿತು
ಭೋಗಿಭೂಷಣಕೈಲಾಸಕೆ ನಡೆಯೆನು ತ
ತಾಗ ಸಮಾಧಿ(ಯು) ಮುಗಿಯೆ

ಜನಪದ ಸಾಹಿತ್ಯವೂ ಸಹಗಮನಗೊಂಡ ಪತ್ನಿ ಸ್ವರ್ಗಕ್ಕೆ ಹೋಗುತ್ತಾಳೆ ಎನ್ನುವ ನಂಬಿಕೆಯನ್ನು ಒಳಗೊಂಡಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. 'ಮಹಾಸತಿ ಕಾಟವ್ವ' ಗೀತೆಯಲ್ಲಿ ಕಾಟವ್ವ ಸತಿಹೋದಾಗ 'ಪೋದಾಳೆ ಕಾಟವ್ವ ಸಿವನರಮನಿಗೆ'' ಎಂದು ವಿವರಣೆ ಬರುತ್ತದೆ.[162] 'ಮಡ್ಡೆಗೆರೆನಾಗಮ್ಮ' ಗೀತೆಯಲ್ಲಿ ತಾನು ಗಂಡನ ಹಿಂದೆ ಹೋದರೆ ಮುಕ್ತಿಸಿಗುತ್ತದೆ ಎಂದು ನಾಗಮ್ಮ ಹೇಳುತ್ತಾಳೆ.[163]

ರಾಜ್ಯವಾಳಾಕೆ ನನಗೆ ಪುಣ್ಯವಿಲ್ಲ
ಸಮರಾಜ್ಯವಾಳೋರ ಮಗ ಮುಂದೆ: ಸೊಸಿ ಹಿಂದೆ
ತೀರೊಯ್ದ್ರೆ ಮುಕುತಿ ಪಡದೇನು

ಪತಿ ಮರಣಹೊಂದಿದ್ದಾಗ್ಯೂ ಅವನು ಸ್ವರ್ಗಲೋಕದಲ್ಲಿ ಇದ್ದಾನೆಂದು ಮರಣಹೊಂದುವ ಈ 'ನಾಗಮ್ಮ' ಕೊಂಡದಲ್ಲಿ ಕುಳಿತಾಗ ಕಟ್ಟಿಗೆ ಹಾಕುವ ಮಾವನನ್ನು ಕುರಿತು ಹೇಳುವ ಮಾತುಗಳು ಮನಕರಗುವಂತಿವೆ.[164]

ಗಂಜಿ ಸೀರೆ ಮೇಲೆ ಗಂಧದ ಬಟ್ಟಿನಮೇಲೆ
ಅಂದವಾಗಿ ಪಟ್ಟಣ್ಣ ಎದೆಗೂರಡು ನಿನಮಗ
ಗಂಧ ಮಾಸಿದರೆಲ್ಲಿ ಬೈದಾನೆ :

ಒಟ್ಟುವ ಕಟ್ಟಿಗೆಯು ಅಸ್ತವ್ಯಸ್ತತೆಯಿಂದ ತಾನು ಹಚ್ಚಿಕೊಂಡ ಗಂಧ ಮಾಸಿ ಹೋದರೆ ಸ್ವರ್ಗದಲ್ಲಿರುವ ಗಂಡ ಬೈಯುತ್ತಾನೆ, ಎನ್ನುವ ನಾಗಮ್ಮನ ಮಾತು ಜನಪದರ ಪ್ರಾತಿನಿಧಿಕ ಮಾತಾಗಿದೆ, ಪತ್ನಿ ಸತಿಹೋಗಿ ಸ್ವರ್ಗಸೇರುವಳೆಂಬ ನಂಬಿಕೆಯನ್ನು ಡಾ:ಎಂ. ಚಿದಾನಂದಮೂರ್ತಿ ಅವರು ಅಧ್ಯಯನ ನಡಸಿರುವ ಚಿಕ್ಕದೇವಿನ ಮಾಸ್ತಿ ವಿವರಣೆಯಲ್ಲಿಯೂ ಗುರುತಿಸಬಹುದಾಗಿದೆ.[165] 17ನೆಯ ಶತಮಾನದಲ್ಲಿ ಭಾರತದಲ್ಲಿದ್ದ ನಿಕೋಲಿಯೋ ಮನುಚಿ ಹೇಳುವ ಮಾತುಗಳನ್ನು ಇದೇ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳಬಹುದು. ಚಿತೆಯ ಮೇಲೆ ಪತಿಯ ಶವದೊಂದಿಗೆ ಪತ್ನಿಯನ್ನು ಮಲಗಿಸಿದ ನಂತರ ''ಮೂರು ಸಲ ಆಕೆಯ ಹೆಸರು ಹಿಡಿದು ಕರೆದು ಸ್ವರ್ಗಕ್ಕೆ ಹೋಗಲು ಆಕೆಗೆ ಆಸೆ ಇದೆಯೋ ಎಂದು ಕೇಳುತ್ತಾರೆ. ಆಕೆಯಿಂದ ಉತ್ತರ ಬಂದಕೂಡಲೇ ಬೆಂಕಿ ಹಚ್ಚುತ್ತಾರೆ.[166] ಪತ್ನಿಯನ್ನು ಪತಿಯೊಂದಿಗೆ ದಹಿಸಲು ಬಂದ ಜನಸಮೂಹದಲ್ಲಿ ''ಸ್ವರ್ಗ ಕಲ್ಪನೆ'' ಇರುವುದನ್ನು ನಿಕೋಲಿಯೋಮನುಚಿ ಇಲ್ಲಿ ಎತ್ತಿ ತೋರಿಸಿದ್ದಾನೆ. ಹೀಗೆ ಮಾನವನಲ್ಲಿರುವ ಈ ಸ್ವರ್ಗದ ನಂಬಿಕೆಯು ಸತಿಪದ್ಧತಿಯ ಉಗಮ — ಬೆಳವಣಿಗೆಗೆ ಹಿನ್ನೆಲೆಯಾಗಿದ್ದುಕೊಂಡು ಅದನ್ನು ಹುಟ್ಟುಹಾಕಿಕೊಂಡು ಬಂದಿರುವುದನ್ನು ಕಾಣುತ್ತೇವೆ.

(ಆ) ಪುನರ್ಜನ್ಮ ಕಲ್ಪನೆ:

ಪ್ರಾಚೀನ ಭಾರತದ ಜನಜೀವನದ ತಿಳುವಳಿಕೆಯಲ್ಲಿ ಪುನ:ರ್ಜನ್ಮ ಕಲ್ಪನೆ ಸಾಮಾನ್ಯವಾಗಿತ್ತು. ಈ ಮಾತಿಗೆ ಕರ್ನಾಟಕವು ಹೊರತಾಗಿಲ್ಲ. ಈ ಕಾರಣದಿಂದ ಮೃತನ ಪತ್ನಿಯು ಸತಿಹೋಗಿ ಮರುಜನ್ಮ ಪಡೆಯಲಿಚ್ಛಿಸಿರಬೇಕು.

ಜನಪದ ಸಾಹಿತ್ಯದಲ್ಲಿ, ಗಂಡಸತ್ತಾಗ ಪತ್ನಿ ಸತ್ತು ಮರುಹುಟ್ಟಿನಲ್ಲಿ ಅವನನ್ನು ಪಡೆಯಬೇಕೆನ್ನುವ ಚಿತ್ರವೊಂದು ಅಪರೂಪವಾಗಿ ದೊರಕುತ್ತದೆ. ಉತ್ತರದೇವಿ ಗಂಡ ಚೆನ್ನಯ್ಯ ಮಡಿದಾಗ ಅವಳು ಹೀಗೆ ದುಃಖಿಸುತ್ತಾಳೆ:

ಬಿಟ್ಟಿ ಈ ಜನುಮ ಸುಟ್ಟಿ ಈ ಕರುಮ
ಕಟ್ಟಿದ್ಯಾದೋ ಮುಂದಿನಾ ಜನುಮಾಕೆ.[167]

ಈ ಜನ್ಮ ಬಿಟ್ಟು ಮುಂದಿನ ಜನ್ಮಕ್ಕೆ ( ಗಂಡನಿದ್ದಲ್ಲಿಗೆ ) ಹೋಗಬೇಕೆಂದು ಅಪೇಕ್ಷಿಸಿ ದುಃಖಿಸುವ ಉತ್ತರದೇವಿ, ಸತಿಹೋಗುವ ಸ್ತ್ರೀಯರ ಪ್ರತೀಕದಂತೆ ಇದ್ದಾಳೆ. 'ಸಿಗನೆಂಬ ಜಕ್ಕಣ್ಣ ಮಗನೆಂಬ ಬ್ಯಾಟಿಕಾರ' ಲಾವಣಿಯಲ್ಲಿ ಗಂಡನಾಗಬಹುದಾದವನು ಮೃತಹೊಂದಲು, ಸತಿಹೋಗಲು ಇಚ್ಛಿಸಿದ ಮಳಿಕೆಗೌಡನ ಮಗಳು ತನ್ನ ಮಾವನಿಗೆ ಹೀಗೆ ಹೇಳುತ್ತಾಳೆ :

'ಮಾವಯ್ಯ ಮಾವಯ್ಯ
ಒಂದಾನೆ ಒಂದು ದಿವಸ
ನಿನ್ನನೆ ಮನೆಯಿಂದ
ಹುಟ್ಟುತೀವಿ ಮಾವಯ್ಯ
ಕತ್ತುರ ಜಿಡ್ಡಾಗಿ
ಹುಟ್ಟುತಾನೆ ನಿನ ತಮ್ಮ
ದೊಡ್ಡನೆ ಜಿಂಡಾಗಿ
ಹುಟ್ಟುತೀನಿ ನಾನಿನ್ನ
ಎಸರ ಗುರ್ತುಗಳಿನ್ನ
ಅದೇ ಕಣೋ ಮಾವಯ್ಯ[168]

ಮಳಿಕೆಗೌಡನ ಮಗಳು ಗಂಡನೊಡನೆ ಚಿತಾಪ್ರವೇಶ ಮಾಡಿ ಮುಂದಿನ ಜನ್ಮದಲ್ಲಿ ತಾವಿಬ್ಬರೂ ಜಿಂಡು ಹೂವಾಗಿ ಹುಟ್ಟುತ್ತೇವೆ ಎಂದು ಹೇಳುವ ಮಾತು ತುಂಬ ಗಮನಾರ್ಹವಾಗಿದೆ. ಸತ್ತಗಂಡ ಹಾಗೂ ಸತಿಹೋಗಲಿರುವ ಗೌಡನ ಮಗಳು ಇಬ್ಬರೂ ಮುಂದಿನ ಜನ್ಮದಲ್ಲಿ ಮಾವನ ಮನೆಯಲ್ಲಿಯೇ ಜಿಂಡು ಹೂವಾಗಿ ಹುಟ್ಟುವ ಇಲ್ಲಿಯ ಕಲ್ಪನೆ ಜನಪದರಲ್ಲಿದ್ದ ಸಾವಿನಾಚೆಯ ಜೀವನ ಮುಂದುವರಿಕೆಯ ನಂಬಿಕೆಯನ್ನು ಸೂಚಿಸುವುದೇ ಆಗಿದೆ.

ಸತಿಹೋದವಳು ಗಂಡನನ್ನು ಮುಂದಿನ ಜನ್ಮದಲ್ಲಿ ಪಡೆದುಕೊಳ್ಳುತ್ತಾಳೆ ಎನ್ನುವ ಜನರ ನಂಬಿಕೆಯನ್ನು ಭಾರತಕ್ಕೆ ಬಂದ ವಿದೇಶಿ ಪ್ರವಾಸಿಗರು ಕಂಡುಕೊಂಡು

ಅದನ್ನು ಉಲ್ಲೇಖಿಸಿದ್ದಾರೆ. ಕ್ರಿ.ಶ. 1321 ರಲ್ಲಿ ಪಶ್ಚಿಮ ಭಾರತಕ್ಕೆ ಭೇಟಿಕೊಟ್ಟ ಫ್ರೈಯರ್ ಓಡೋರಿಕ್' ಅಲ್ಲಿಯ ಜನರನ್ನು ಕುರಿತು ಹೀಗೆ ಬರೆಯುತ್ತಾನೆ.[169] 'ಇಲ್ಲಿ ಸತ್ತವನನ್ನು, ಸುಟ್ಟು ಬದುಕಿರುವ ಅವನ ಹೆಂಡತಿಯನ್ನು ಸುಡುತ್ತಾರೆ. ಇದಕ್ಕೆ ಕೊಡುವ ಕಾರಣವೇನೆಂದರೆ ಸತ್ತವನು ಇನ್ನೊಂದು ಸಲ ಜನ್ಮವೆತ್ತಿದಾಗ ಅವನ ಹೆಂಡತಿಯೂ ಅವನೊಡನೆ ಜನ್ಮವೆತ್ತಲಿ ಎಂದು''. 17ನೆಯ ಶತಮಾನದಲ್ಲಿ ಭಾರತದಲ್ಲಿದ್ದ 'ಬಪ್ತೀಸ್ಟ ಟಾವರ್ನ್ಯೇ'ಯು ಹೀಗೆ ಬರೆಯುತ್ತಾನೆ.[170] '....... ಬ್ರಾಹ್ಮಣರ ಚಿತಾವಣಿ ಬೇರೆ. ಸತ್ತ ಗಂಡನೊಡನೆ ಚಿತೆಯೇರಿದರೆ ಇಬ್ಬರೂ ಮತ್ತೊಮ್ಮೆ ಗಂಡ — ಹೆಂಡಿರಾಗಿಯೇ ಹುಟ್ಟಿ ಈಗಿಗಿಂತ ಇನ್ನು ಹೆಚ್ಚು ಸುಖವಾಗಿ ಬಾಳುವೆ ಮಾಡಬಹುದೆಂದು ಬ್ರಾಹ್ಮಣರು ಪುಸಲಾಯಿಸುತ್ತಾರೆ''. ಈ ಪ್ರವಾಸಿಗರು ಸತಿಪದ್ಧತಿಗೆ ಹಿನ್ನೆಲೆಯಾಗಿರುವ ಜನರ ಮರುಜನ್ಮದ ನಂಬಿಕೆಯನ್ನು ಇಲ್ಲಿ ಸೂಚಿಸುವುದನ್ನು ಕಾಣುತ್ತೇವೆ. ಹೀಗೆ ಜನಜೀವನದಲ್ಲಿ ಗಾಢವಾಗಿ ನೆಲೆಯೂರಿದ್ದ ಪುನರ್ಜನ್ಮ ಕಲ್ಪನೆಯು ಸತಿಪದ್ಧತಿಯ ಉಗಮಕ್ಕೂ, ಅದರ ಬೆಳವಣಿಗೆಗೂ ಕಾರಣವಾಗಿರುವುದನ್ನು ಕಂಡುಕೊಳ್ಳಬಹುದಾಗಿದೆ.

o—o

ಅಡಿಟಿಪ್ಪಣಿಗಳು:—

1· ಸೋಷಿಯಲ್ ಆ್ಯಂಡ್ ಪೊಲಿಟಿಕಲ್ ಲೈಫ್ ಇನ್ ದಿ ವಿಜಯನಗರ ಎಂಪಾಯರ್–II:
ಡಾ: ಬಿ·ಎ·ಸಾಲೆತೊರೆ, ಪು· 94 : ಅದೇ ಪುಟದಲ್ಲಿ ನ್ಯೂನಿಜನ್ ವರದಿ:
"Then he (KrishnaDevaRay) took a ring from his finger and gave it to one of his pages, so that he might show it to his queens in token of his death, that they might burn themselves according to Custom".

2· ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಿಲೈಜೇಶನ್:
ಡಾ: ಎ·ಎಸ್· ಅಲ್ತೇಕರ್· ಪು· 115—116·

3· ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ: ಎಂ·ಚಿದಾನಂದಮೂರ್ತಿ
ಪು·313 ( ಅಡಿಟಿಪ್ಪಣಿ)

4· ಅದೇ

5· ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಡಾ: ಎಚ·ತಿಪ್ಪೇರುದ್ರಸ್ವಾಮಿ, ಪು· 250

6· ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ: ಎಂ·ಎಂ·ಕಲಬುರ್ಗಿ
ಪು· 25—26·

7· ಅದೇ· ಪು· 26—27·

8· ಜಾನಪದ : ಸಾಮಾಜಿಕ ಕಥನಗೀತೆಗಳಲ್ಲಿ ದು:ಖಾಂತ ನಿರೂಪಣೆ : ದೇವೇಂದ್ರಕುಮಾರ
ಹಕಾರಿ; ಪು· 262·

9· ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ· ಪು·3·

10· ಸಂಗಮ್ ರಾಜಕೀಯ ಸಾಮಾಜಿಕ ವ್ಯವಸ್ಥೆ : (ಮೂಲ) ಎನ್·ಸುಬ್ರಮಣಿಯನ್:
(ಅನು): ನಿರಂಜನ, ಪು 365 — 366·

11· ಕವಿಚಕ್ರವರ್ತಿ ಜನ್ನ ವಿರಚಿತ ಅನಂತನಾಥಪುರಾಣ, ಪು·278:

12. ಮಹಾಕವಿ ರನ್ನ ವಿರಚಿತವಪ್ಪ ಅಜಿತತೀರ್ಥಂಕರ ಪುರಾಣತಿಲಕಂ. ಪು.10.

13. ನಾಗವರ್ಮ ವಿರಚಿತ ಕರ್ಣಾಟಕ ಕಾದಂಬರಿ, ಪು.150: ವಿಶ್ವಕವಿ ರತ್ನಾಕರನ ಭರತೇಶ ವೈಭವ. ಪು.505.

14. ಗದಾಯುದ್ಧ ದರ್ಪಣಂ. ಪು. 376, ಹರಿಹರ ಕವಿಯ ಗಿರಿಜಾ ಕಲ್ಯಾಣ ಮಹಾಪ್ರಬಂಧ ಪು. 285 —29: ಕನಕದಾಸರ ಮೋಹನ ತರಂಗಿಣಿ ಸಂಗ್ರಹ, ಪು.25, ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ, ಪು 621 — 622.

15. ಆಯ್ದ ಜನಪದ ಕಥೆಗಳು: (ಸಂ) ಜೀ. ಶಂ. ಪರಮಶಿವಯ್ಯ ಮಾಣಿಕ್ಯಶೆಟ್ಟಿ, ಪು.107, ಕೊಂಡದ ಚಿನ್ನಮ್ಮ, ಪು. 138, ಕನ್ನಡ ಐತಿಹ್ಯಗಳು: ಜಿ.ವಿ.ಡಿ., ಉರುಳೂರಮ್ಮ, ಪು.40.

16. ಜನಪದ ಖಂಡಕಾವ್ಯಗಳು: (ಸಂ) ಜೀ. ಶಂ. ಪರಮಶಿವಯ್ಯ. ಪು. 261.

17. ಜನಪದ ಕಥನ ಗೀತೆಗಳು: ( ಸಂ) ಕ.ರಾ.ಕೃ. ಪು. 67.

18. ಇ.ಸಿ. VIII - II ,134, ಹಿರೇಆವಲಿ, ಸೊರಬ, ಕ್ರಿ.ಶ.1393, ಅದೇ, 163 ಹರೂರ, ಕ್ರಿ.ಶ. 1442.

19. ಅದೇ. 104 ಹಿರೇಆವಲಿ, ಕ್ರಿ.ಶ. 1354, ಎಸ್ ಆಯ್ ಆಯ್ XVIII 413 ಚಿಂತಾಲ ರಾಣಿಬೆನ್ನೂರ, ಕ್ರಿ.ಶ. 1404.

20. ಪ್ರ.ಕಂ.ಇಂ — ಸಂ — 2: (ಸಂ) ಎಚ್.ಎಲ್. ನಾಗೇಗೌಡ. ನಿಕೋಲೋ ದಿ ಕೊಂತಿ. ಪು. 125 : ಅದೇ, ಸಂ — 4, ಗಾಸ್ಪರೋ ಬಾಲ್ಬಿ, ಪು.78 : ಅದೇ ಒಬ್ಬ ಅನಾಮಧೇಯ, ಪು.116: ಅದೇ ಪಿಯತ್ರೊ ಡೆಲ್ಲಾವಲ್ಲೆ, ಪು.243: ಅದೇ, ಸಂ — 5, ಫ್ರಾನ್ಸ್ವಾಸ್ ಬರ್ನಿಯೇ, ಪು.221.

21. ಯುಗಯಾತ್ರೀ ಭಾರತೀಯ ಸಂಸ್ಕೃತಿ : (ಪ್ರಸಂ.) ಡಾ: ಕೆ.ವಿ.ಪುಟ್ಟಪ್ಪ - ಪು. 217.

22. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, ಅಬ್ಬೆ ಜೆ ಡುಬಾಯ್ಸ್, ಪು.138, ಸರ್ ಡಬ್ಲ್ಯೂ. ಎಚ್. ಸ್ಲೀಮನ್. ಪು.142.

23. ಜನಪದ ನಂಬಿಕೆಗಳು : ರಾಗೌ. ಪು. 4

24. ಗ್ರಾಮೀಣ : ಡಾ: ಎಂ. ಚಿದಾನಂದಮೂರ್ತಿ. 'ಸೌಭಾಗ್ಯ ಲಕ್ಷಣಗಳು', ಪು. 153.

25. ಪ್ರ. ಕಂ. ಇಂ – ಸಂ – 2: (ಸಂ) ಎಚ್.ಎಲ್. ನಾಗೇಗೌಡ. 76,

26. ಅದೇ ಪು. 296 : ಅದೇ ಸಂ – 6, ಪು. 295

27. ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ, ಪು. 241.

28. ನಾಗಚಂದ್ರ ವಿರಚಿತ ಚರಿತ ಪುರಾಣಂ. ಪು. 267.

29. ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ – ಸಂ – 2: ಪು. 660

30. ಜೀವನ ಜೋಕಾಲಿ, ಭಾಗ – 2 : ಡಾ: ಎಮ್.ಎಸ್. ಸುಂಕಾಪುರ, 'ಸ್ತ್ರೀಶೀಲನೀತಿ ಜೋಗುಳ'' ಪು. 98.

31. ಹಾಡ್ಲೇಳಿ ತಂಗೀ ನೀ ದನಿ ಎತ್ತಿ: (ಸಂ) ಕಾವ್ಯಜೀವಿ, 'ಮುತ್ತೈದೆತನ'' ಪು. 105.

32. ಜನಪದ ನಂಬಿಕೆಗಳು : ರಾಗೌ. ಪು. 31.

33. ಗಾದೆಗಳ ಭಂಡಾರ, ಭಾಗ – 1 : (ಸಂ). ಜಂಗಮಕೋಟೆ ಕೃಷ್ಣಶಾಸ್ತ್ರೀ. ಪು. 142.

34. ಇ.ಸಿ. V – II 137, ಹಿರೇಹಳ್ಳಿ, ಬೇಲೂರು, ಕ್ರಿ.ಶ. 1183, ಧಾ.ತಾ.ಶಾ. 57, ಮುಗದ, ಕ್ರಿ.ಶ. 1125

35. ಇ.ಸಿ. VII – I, 141, ಬೆಳಗಾವಿ, ಶಿಕಾರಿಪುರ, ಕ್ರಿ.ಶ. 1286.

36. ಇ.ಸಿ. III 60, ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057.

37. ಕರ್ನಾಟಕದ ಇತಿಹಾಸ : ಪಂಚಮುಖಿ ಆರ್.ಎಸ್. ಪು. 195.

38. ಮಹಾಕವಿ ಕವಿರನ್ನ ವಿರಚಿತಮಪ್ಪ ಅಜಿತತೀರ್ಥಂಕರ ಪುರಾಣ ತಿಲಕಂ. ಪು. 10

39. ಬಸವಣ್ಣನವರ ವಚನಗಳು, 678.

"ಮುನ್ನಿನ ಪುರುಷಪ್ರತಿಯುರುಬಲಿಸಿದ ಅಂಬುತವ
ಪರಿಪರಿಯುಲು ಬಣ್ಣಿಸಲು ಬಹುದಲ್ಲದೆ
ಪುರುಷನಿರ್ವಾಣಕ್ಕುರಿವಗ್ನಿಯು ಬಂದು ಹೊಕ್ಕು ತೋರಲುಬಾರದು"

40· ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ — ಸಂ —2, ಪು·140

41· ಅಖಂಡೇಶ್ವರ ವಚನ ( ಷಣ್ಮುಖಸ್ವಾಮಿ ) ಪ· 138

42· ಕತ್ತಾಲ ದಾರಿ ದೂರ : (ಸಂ) ಕೃಷ್ಣಮೂರ್ತಿ ಹನೂರ, ಪು·98·

43· ಸಂಗಮ ರಾಜಕೀಯ — ಸಾಮಾಜಿಕ ವ್ಯವಸ್ಥೆ : (ಮೂಲ ) ಎಸ್ ಸುಬ್ರಮಣಿಯನ್:
(ಅನು) ನಿರಂಜನ, ಪು·362 — 363·

44· ಪ್ರ·ಕಂ· ಇಂ· — ಸಂ — 1 : (ಸಂ) ಎಚ್·ಎಲ್·ನಾಗೇಗೌಡ· ಪು·75

45· ಅದೇ, ಸಂ — 4, ಪು· 248·

46· ಇ·ಸಿ·III, 60, ಬೆಳತೂರು ಹೆಗ್ಗಡೆದೇವನಕೋಟೆ, ಕ್ರಿ·ಶ· 1057·

47· ಇ·ಸಿ·VIII-II, 483, ದುಸೂರು, ಸೊರಬ, ಕ್ರಿ·ಶ·1388 : ಅದೇ, 25, ಕಳೂರು,
ನಗರ, ಕ್ರಿ· ಶ· 1425, ಎಸ್· ಅಯ್·ಐಯ್·XVIII 276, ಕಣವಿ, ಗದಗ,
ಕ್ರಿ·ಶ· 1407, ಈ ವಿಷಯಕ್ಕೆ ಈ ಕೆಲವು ಶಾಸನಗಳನ್ನು ನೋಡಬಹುದು :
ಇ· ಸಿ VIII-II, 533, ಹುನವಳ್ಳಿ, ಸೊರಬ, ಕ್ರಿ·ಶ· 1437, ಅದೇ 484,
ದುಗೂರು, ಕ್ರಿ·ಶ·14010, ಇ·ಸಿ IV 226, ಮಲದೇವನಹಳ್ಳಿ ಚಾಮರಾಜನಗರ, ?
ಎಮ್·ಎ·ಆರ್·1923, 89·ಕ್ರಿ·ಶ· 1386, ಎಂ·ಎ·ಆರ್· 1928· 88, ಕ್ರಿ·ಶ
1399·

48· ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, XVI : 70—85

49· ಇ·ಸಿ·VIII-II, , 495, ಕುಪ್ಪೇಗ್ರಾಮ, ಸೊರಬ, ಕ್ರಿ·ಶ·1445

50· ಪಂಪಕವಿ ವಿರಚಿತ ಪಂಪಭಾರತಂ : ಪು· 138, ಮಹಾಕವಿ ಕವಿರನ್ನ ವಿರಚಿತಮಪ್ಪ
ಅಜಿತತೀರ್ಥಂಕರ ಪುರಾಣತಿಲಕಂ·ಪು·10

51· ಎಂ·ಎ· ಆರ್· 1943 — 12 ಕ್ರಿ· ಶ· 1117: ಇ·ಸಿ· IV 87, ದೇವರಹಳ್ಳಿ
ನಾಗಮಂಗಲ, ಕ್ರಿ·ಶ· 1181·

52· ಪ್ರ·ಕಂ·ಇಂ — ಸಂ — 6: (ಸಂ) ಎಚ್·ಎಲ್·ನಾಗೇಗೌಡ· ಪು·291·

53· ಗ್ರಂಥಸ್ಥ ಗಾದೆಗಳು: (ಸಂ) ಎಚ್·ಎಸ್· ಅಜ್ಜಪ್ಪ· ಪು·101 — (ಕರ್ಣಪಾರ್ಯನ
ನೇಮಿನಾಥಪುರಾಣ, ಕ್ರಿ·ಶ·1140), ಪು·139 — (ರುದ್ರಭಟ್ಟನ ಜಗನ್ನಾಥ ವಿಜಯ,

ಕ್ರಿ.ಶ. 1185), ಪು. 332 — ( ನಿಜಗುಣ — ಶಿವಯೋಗಿಗಳ ಕೈವಲ್ಯ ಪದ್ಧತಿ, ಕ್ರಿ.ಶ.1500), ಪು.496— (ವಿಜಯ —ದಾಸರು, ಕ್ರಿ.ಶ.1750)

54. ಬಿತ್ತ್ರಿ ಗಾದಗೆಳು: ( ಸಂ)ಬಿ. ಬಿ. ಬಿರಾದಾರ, ಪು.111.

55. ಯುಗಯಾತ್ರೀ ಭಾರತೀಯ ದರ್ಶನ : ಸಂ — 2: (ಪ್ರ.ಸಂ) ಡಾ:ಕೆ.ವಿ. ಪುಟ್ಟಪ್ಪ, ಪು.486.

56. ಮಹಾಭಾರತ — 1, 138,71—2.

57. ಬಿತ್ತ್ರಿ ಗಾದೆಗಳು: (ಸಂ) ಬಿ. ಬಿ. ಬಿರಾದಾರ, ಪು.33,54,

58. ಕಾರವಾರ ಜಿಲ್ಲೆಯ ಜನಪದ ಗೀತೆಗಳು: (ಸಂ) ಎನ್.ಆರ್.ನಾಯಕ, ಪು.101—102.

59. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ : ಚೆನ್ನಕ್ಕ ಎಲಿಗಾರ. ಪು. 437.

60. ಜಾನಪದ ಕಥನ ಗೀತೆಗಳು: (ಸಂ) ಕ.ರಾ.ಕೃ. 'ಪಿರಿಯಾ ಪಟ್ಟಣ ಕಾಳಗ' — ವಿರಾಜಿದೊರೆಯ ಪತ್ನಿಯರ ಜೋಹಾರ್ ಪ್ರಸಂಗ, ಪು. 345.

61. ಎಸ್.ಆಯ. ಆಯ್. III-I 21, ಕರಪಾಕಂ, ಕೋಯಿಲಮತ್ತೂರು ? ಅದೇ, 28, ಮಣಿಮಂಗಲಂ, ಚಿಂಗಲಪೇಟೆ, ಕ್ರಿ.ಶ. 1046, ಅದೇ, II-III 67 ಜಂಜಾವೂರ, ಜಂಜಾವೂರ, ? ಇತ್ಯಾದಿ.

62. ಜಾನಪದ ನರಗುಂದ : (ಸಂ) ಎ.ಎಸ್.ಹೂಗಾರ, 1973.

63. ಪಂಪಕವಿ ವಿರಚಿತ ಪಂಪಭಾರತಂ : ಪು.586,
ನಾಗವರ್ಮ ವಿರಚಿತ ಕರ್ನಾಟಕ ಕಾದಂಬರಿ: ಪು.14 9, ನಾಗಚಂದ್ರ ವಿರಚಿತ ರಾಮಚಂದ್ರ ಚರಿತ ಪುರಾಣಂ. ಪು.500, ಕುಮಾರವ್ಯಾಸ ಮಹಾಕವಿಯ ಕರ್ನಾಟ ಭಾರತ ಕಥಾ ಮಂಜರಿ, ಪು. 82, 338, ಕುಮಾರವಾಲ್ಮೀಕಿ ವಿರಚಿತ ತೊರವೆ ರಾಮಾಯಣ, ಪು.41, 278, 508, : ದೇವಪ್ಪಕವಿ ವಿರಚಿತ ರಾಮವಿಜಯ ಕಾವ್ಯ. 130.

64. ಎಸ್.ಆಯ್.ಆಯ. XI-I 45, ಕುರ್ತಕೋಟಿ, ನವಲಗುಂದ, ಕ್ರಿ.ಶ.980
ಇ.ಸಿ. VIII-II, 192, ದಾನಶಾಲೆ, ತೀರ್ಥಹಳ್ಳಿ, ಕ್ರಿ.ಶ.1103,
ಅದೇ, 276, ದೇವಸ್ಥಾನಹಕ್ಕಲುಗ್ರಾಮ ಸೊರಬ, ಕ್ರಿ.ಶ.1070 ಇ.ಸಿ. VI, 39

ಗೋವಿಂದನಹಳ್ಳಿ, ಕೃಷ್ಣರಾಜಪೇಟೆ, ಕ್ರಿ.ಶ. 1236,

65. ಎಚ್.ಎ.ಎಸ್. VIII ಪು.5, ಕ್ರಿ.ಶ. 1058.

66. ಗರತಿಯ ಹಾಡು: (ಸಂ) ಹಲಸಂಗಿ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ, ಮೊದಲಾದ ಗೆಳೆಯರು, ಪು.107.

67. ಕನ್ನಡ ಜಾನಪದ ಗೀತೆಗಳು: ಡಾ: ಜಿ.ಎಸ್.ಗದ್ದಗಿಮಠ ಪು. 86,

68. ಗರತಿಯ ಹಾಡು: (ಸಂ) ಹಲಸಂಗಿ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ, ಮೊದಲಾದ ಗೆಳೆಯರು, ಪು.83, 109.

69. ಗಾದೆಗಳ ಭಂಡಾರ (ಭಾಗ –1) : ಜಂಗಮಕೋಟೆ ಕೃಷ್ಣಶಾಸ್ತ್ರಿ.ಪು.10, 132, 133 : ಉತ್ತರ ಕರ್ನಾಟಕದ ಗಾದೆಗಳು: (ಸಂ) ಡಾ: ಬಿ.ಬಿ. ಹೆಂಡಿ, ಡಾ: ಎಂ.ಎಸ್.ಲಠ್ಠೆ, ಪು. 65,77.

70. ಸೌಭಾಗ್ಯವತಿ : ಸಂ: ವಿದ್ಯಾ ಪುರಾಣಿಕ. ಪು .142.

71. ಪ್ರ.ಕಂ.ಇಂ.ಸಂ – 1: ಡಾ: ಎಚ್.ಎಲ್.ನಾಗೇಗೌಡ.ಪು.75.

72. ಅದೇ ಪು.389.

73. ಅದೇ ಸಂ – 3, ಪು. 316.

74. ಅದೇ ಸಂ – 5, ಪು. 471–472.

75. ಕನಕದಾಸರ ಮೋಹನ ತರಂಗಿಣೀ ಸಂಗ್ರಹ. ಪು. 26.

76. ಬಯಲು ಸೀಮೆಯ ಲಾವಣಿಗಳು: (ಸಂ) ಕಾಳೇಗೌಡ ನಾಗವಾರ, ಹಿಡ್ಡಗೆರೆ ನಾಗಮ್ಮ — ಪು.73.

77. ಕತ್ತಾಲದಾರಿ ದೂರ : ಕೃಷ್ಣಮೂರ್ತಿ ಹನೂರ, ಪು. 36.

78. ಜನಪದ ಖಂಡಕಾವ್ಯಗಳು: (ಸಂ) ಜೀ.ಶಂ.ಪರಮಶಿವಯ್ಯ.ಪು.16. ಡಾ: ಬಿ.ಬಿ. ಹೆಂಡಿ. ಪು.37.

80. ಜನಪದ ಖಂಡಕಾವ್ಯಗಳು: ಜೀ. ಶಂ. ಪರಮಶಿವಯ್ಯ 'ಈರೋಬಿ' ಪು.20.

81. ಹರಿಹರ ಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧ. ಪು. 286.

82. ಇ.ಸಿ. VIII - II 26, ಮನೆಮನೆಗ್ರಾಮ, ಸೊರಬ, ಕ್ರಿ.ಶ.1411.

83. ಅದೇ, 37, ಗುಂಜನೂರು, ಸೊರಬ, ?

84. ಎಸ್.ಆಯ್.ಆಯ್. XVIII - 276, ಕಣವಿ, ಗದಗ, ಕ್ರಿ.ಶ. 1407.

85. ಇ.ಸಿ. VIII - II 566, ಹೆಗ್ಗೋಡು, ಸೊರಬ, ಕ್ರಿ.ಶ. 1415, ಅದೇ 259, ಕಪ್ಪಗನೂರು, ಸೊರಬ, ? & ಅದೇ, 565, ಹೆಗ್ಗೋಡು, ಸೊರಬ, ಸು.ಕ್ರಿ.ಶ. 1200.

86. 'ಸ್ವಸ್ತಿ ಶ್ರೀಮತು ಮಯುಳುಗುಂಡದ ನರಲೋಕ (ವೀರ) ಜಗದಾಳ ಬೊಮ್ಮಿದೇವ ಜಂಗುಳಿಮಯೆನೆಯರಗಂಡಗೆ (ಎ) ಕಟಿಗಬಯನಾಯಕನು ತನ್ನ ಹೆಂಡತಿ ಸಹಿತ ಯುಬರುಂ ಮೊಡಿಯಂಗೆ ಕೊಟ್ಟಭಾಷೆಗೆ ತಲೆಗೊಟ್ಟರು' ಎಸ್.ಆಯ್.ಆಯ್. XVIII 262, ಬಿನಕನಕೊಂಡ, ರಾಣಿಬೆನ್ನೂರು, ಕ್ರಿ.ಶ. 1284 — ಈ ಕಲ್ಲಿನ ಶಿಲ್ಪ ಮಾಸ್ತಿ ಶಿಲ್ಪವಾಗಿರುವುದು ಈ ವಿಷಯ ನಿರೂಪಣೆಗೆ ಇನ್ನಷ್ಟು ಹೆಚ್ಚಿನ ಒತ್ತುಕೊಡುತ್ತದೆ.

87. ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ: ಬಸವರಾಜ ಕಲ್ಗುಡಿ, ಪು.25

88. ಪ್ರ.ಕಂ.ಇಂ — ಸಂ — 2: (ಸಂ) ಎಚ್.ಎಲ್.ನಾಗೇಗೌಡ. ಪು. 126.

89. ಸಮ್ಮಿಗೆ ಸಮ್ಮಿಗೆ ಸುವ್ವಾಲಿ : (ಸಂ) ಡಾ: ಎಲ್.ಆರ್. ಹೆಗಡೆ, 'ಗಂಡನ ಮನೆ' ಪು.72.

90. ಅದೇ

91. ಎಸ್.ಆಯ್.ಆಯ್. III — I 21, ಕರಪೂರ, ಕೊಲ್ಲಿಮತ್ತೂರು, ? : ಅದೇ, 28 ಮನಿಮಂಗಲಂ, ಚಿಂಗಲಪೇಟೆ, ಕ್ರಿ.ಶ. 1046 : ಅದೇ — II-III 67, ಜಂಜಾವೂರ, ಜಂಜಾವೂರ ಇತ್ಯಾದಿ.

92. ದೇವಪ್ಪ ಕವಿ ವಿರಚಿತ ರಾಮವಿಜಯ ಕಾವ್ಯ. ಪು. 186.

93. ಜಯ ಕರ್ನಾಟಕ — ಸಂ — 2, ಪು 435 — 1932.

94. ಉತ್ತರ ಕರ್ನಾಟಕದ ಜನಪದ ಸಾಹಿತ್ಯ: ಡಾ: ಎಂ.ಎಂ.ಕಲಬುರ್ಗಿ, 'ಕಾಲಜ್ಞಾನದ ಹಾಡು'. ಪು. 18–19.

95. ಚಿತ್ತರಗಿ ಗಾದೆಗಳು : (ಸಂ) ಬಿ.ಬಿ.ಬಿರಾದಾರ, ಪು.4,33,47.

96. ಸೋಶಿಯಲ್ ಅ್ಯಂಡ್ ಪೊಲಿಟಿಕಲ್ ಲೈಫ್ ಇನ್ ದಿ ವಿಜಯನಗರ ಎಂಪಾಯರ್ — II ಡಾ: ಬಿ.ಎ.ಸಾಲೆತೊರೆ, ಪು.94.

97. ಪ್ರ.ಕಂ.ಇಂ — ಸಂ — 1: (ಸಂ) ಎಚ್.ಎಲ್.ನಾಗೇಗೌಡ, ಪು.385,

98. ಅದೇ ಸಂ — 4, ಪು.248.

99. ಅದೇ ಸಂ — 1, ಪು. 62.

100. ಅದೇ ಪು. 75

101. ಅದೇ ಸಂ— 2, ಪು.500

102. ಅದೇ ಸಂ —6, ಪು.57

103. ಅದೇ — ಸಂ — 5, ಪು. 221–222 1975.

104. ಇ.ಸಿ. V – II, 81, ಕೋಳಿಗುಂದ, ಅರಸಿಕೆರೆ ಪು. ಕ್ರಿ.ಶ. 1225, ಈ ಕಲ್ಲಿನ ಶಿಲ್ಪ ವಿಶೇಷ ಅಥವಾ ಕೊನುದಂ ಎಂಬುದು ಕೊನುಡ್ಡಂ ಎಂದು ಏನಾದರೂ ಶಾಸನಪಾಠವಿದ್ದೀತೆ ಎಂಬುದನ್ನು ಗಮನಿಸಲು ಕೋಳಿಗುಂದದ ಹೊಂಡಗಟ್ಟೆಗೆ ಹೋದರೆ ನಿರಾಸೆಯುಂಟಾಯಿತು. ಈಗ ಈ ಕಲ್ಲು ಈ ಸ್ಥಾನದಲ್ಲಿ ಕಂಡುಬರಲಿಲ್ಲ. ಇದು ಹೊಂಡದ ನೀರಿನಲ್ಲಿ ಮುಚ್ಚಿಯೂ ಹೋಗಿರಬೇಕು.

105. ಉದಾಹರಣೆಗೆ ಇ.ಸಿ VIII – II 249, ಕುಪ್ಪಟೂರು, ಸೊರಬ, ಕ್ರಿ.ಶ.1065, ಅದೇ, 47, ಹುಂಚ, ನಗರ, ಕ್ರಿ.ಶ. 1062

106. ಮಣ್ಣಿನ ಮಿಡಿತ :(ಸಂ) ಡಿ. ಲಿಂಗಯ್ಯ ಪು.88, : 115, ಜಾನಪದ ಕಿರುಕತೆಗಳು: ಎಂ. ಎ.ಜಯಚಂದ್ರ.ಪು. 31, ತಿಮ್ಮಕ್ಕನ ಪದಗಳು: ಡಾ: ಎಲ್.ಆರ್. ಹೆಗಡೆ, ಪು. 100.



107. ಹಾಲಸ್ವಾಮಿಯ ಸುತ್ತ ಮಯಾಲಕ್ಕಿ ಬೆದಾಂವ : (ಸಂ) ಶ್ರೀ.ಎಸ್.ಎಂ.ಬೆದರಿ. ಪು. 58.

108. ಕೋಲೆಲ ಕೋಲೆಲ್ ಕೂಡಿ ಬರಲೆ : ಡಾ: ಎಸ್.ವಿ. ರಂಗಣ್ಣ, ಪು.26.

109. ಬಿತ್ತಲಿ ಗಾದೆಗಳು: (ಸಂ) ಬಿ. ಬಿ. ಬಿರಾದಾರ, ಪು.68.

110. ನಾಗಚಂದ್ರ ವಿರಚಿತ ರಾಮಚಂದ್ರ ಚರಿತ ಪುರಾಣಂ. ಪು. 222, 493, ಯಶೋಧರ ಚರಿತೆ. ಪು.100

111. ಪ್ರ.ಕಂ.ಇಂ. ಸಂ — 3: ಎಚ್.ಎಲ್.ನಾಗೇಗೌಡ. ಪು. 537.

112. ಅದೇ ಸಂ — 5, ಪು.472,

113. ಸಮಯ ಪರೀಕ್ಷೆ ಪು. 392.

114. ಪ್ರಬುದ್ಧ ಕರ್ಣಾಟಕ, ಸಂ — 56, ಸಂಚಿಕೆ — 1, ''ಆತ್ಮಬಲಿದಾನ : ಬ್ರಹ್ಮಶಿವನ ವಿಚಾರಗಳು'' : ಡಾ: ಎಂ.ಎಂ. ಕಲಬುರ್ಗಿ, ಪು.70, 1974.

115. ಅದೇ.

116. ಇ.ಸಿ. III 60, ಬೆಳತೂರು ಹೆಗ್ಗಡೆದೇವನಕೋಟೆ, ಕ್ರಿ.ಶ. 1057.

117. ಮಹಾಕವಿ ಕವಿರನ್ನ ವಿರಚಿತಮಪ್ಪ ಅಜಿತತೀರ್ಥಂಕರ ಪುರಾಣ ತಿಲಕಂ. ಪು. 10.

118. ಇ.ಸಿ. VI 66, ಕೋಟೀಪೂರು, ಚಿಕ್ಕಮಗಳೂರು, ಕ್ರಿ.ಶ. 1089 : ಇ.ಸಿ. VIII-II 78, ಸೇಣಗೆ, ಸಾಗರ, ಕ್ರಿ.ಶ. 1265, ಅದೇ, 457, ಬಿನ್ನಾಪುರು, ಸೊರಬ, ಕ್ರಿ.ಶ. 972, ಇ.ಸಿ. III 60 ಬೆಳತೂರು ಹೆಗ್ಗಡೆದೇವನಕೋಟೆ ಕ್ರಿ.ಶ. 1057.

119. ಇ.ಸಿ. VIII-II 461 ಬಿನ್ನಾಪುರು, ಸೊರಬ, ಕ್ರಿ.ಶ. 1423. ಅದೇ, 397, ಹಿರೇಕಬ್ಬಾರ, ಸೊರಬ, ಕ್ರಿ.ಶ. 1223.

120. ಇ.ಸಿ. III 61, ಹೆಬ್ಬಲಗುಪ್ಪೆ ಹೆಗ್ಗಡೆದೇವನಕೋಟೆ, ಸು.ಕ್ರಿ.ಶ.1088–89, ಅದೇ 60, ಬೆಳತೂರು, ಹೆಗ್ಗಡೆದೇವನಕೋಟೆ, ಕ್ರಿ.ಶ. 1057.ಎಸ್ ಆಯ್.ಆಯ್. XVIII 262, ಬೆನಕನಕೊಂಡ, ರಾಣಿಬೆನ್ನೂರ, ಕ್ರಿ. ಶ. 1284.

121. ಮಾತನಾಡುವ ಕಲ್ಲು: ಆನಂದಕಂದ, ಪು. 61.

122. ಪ್ರ.ಕಂ. ಇಂ – ಸಂ – 2, (ಸಂ) ಎಲ್.ಎಲ್.ನಾಗೇಗೌಡ. ಪು.75,

123. ಅದೇ ಸಂ – 4, ಪು. 247.

124. ಜನಪದ ಖಂಡಕಾವ್ಯಗಳು: ಜೀ.ಶಂ. ಪರಮಶಿವಯ್ಯ, ಪು. 20,

125. ನ್ಯೂ ಲೈಟ್ ಆನ್ ದಿ ಮೋಸ್ ಎನ್ಸಿಯಂಟ್ ಈಸ್ಟ್ : ಗೋರ್ಡನ್ ಚಾಯಿಲ್ಡ್,
ಪು. 152.

126. ಮಿರರ್, ಜನೇವರಿ, 1981 – " ದಿ ರಿಟರ್ನ ಆಫ ಸತಿ " : ಎ.ಆರ್ ಶರೀಫ.
ಪು.24.

127. ನ್ಯೂ ಲೈಟ್ ಆನ್ ದಿ ಮೋಸ್ಟ್ ಎನ್ಸಿಯೆಂಟ್ ಈಸ್ಟ್ : ಗೋರ್ಡನ್
ಚಾಯಿಲ್ಡ್ : ಪು. 83.

128. ಕನ್ನಡ ಶಾಸನಗಳ ಸಂಸ್ಕೃತಿಕ ಅಧ್ಯಯನ : ಡಾ: ಎಂ. ಚಿದಾನಂದಮೂರ್ತಿ,
ಪು. 313 ( ಅಡಿಟಿಪ್ಪಣಿ )

129. ' ದಿ ಸಂಡೆ ಸ್ಟ್ಯಾಂಡರ್ಡ ', 20 – 8 – 1978, ' ಸತಿ ವಾಜ್ ಪ್ರಿವೆಲಂಟ್ ಆಲ್
ಓವರ್ ದಿ ವರ್ಲ್ಡ ' : ಇಕ್ಬಾಲ್ ಕೌಲ್.

130. ದಿ ಪೋಜಿಶನ್ ಅಫ ವುಮೆನ್ ಇನ್ ಹಿಂದು ಸಿವಿಲೈಜೇಶನ್,
ಡಾ: ಎ.ಎಸ್.ಅಲ್ತೇಕರ್, ಪು. 127–8.

131. ಉತ್ಥಾನ್, ಅಗಸ್ಟ 1980 : ಅವಶೇಷ: ಟಿ.ಕೆ. ಗಂಗಾಧರ. ಪು.92.

132. ಇ.ಸಿ. VIII – II 63, ಮರೂರು, ಸಾಗರ, ಕ್ರಿ. ಶ. 1410.

133. ಅದೇ 50, ಮರತೂರು, ಕ್ರಿ. ಶ. 1455.

134. ಅದೇ 338, ಕಣಿತಿಪ್ಪ, ಸೊರಬ, ಕ್ರಿ.ಶ. 1439.

135. ಅದೇ 26, ಮನೆಮನೆಗ್ರಾಮ, ಕ್ರಿ. ಶ. 1411.

136. ಅದೇ, 36, ಗುಂಜನೂರು, ?

137. ಅದೇ, 37, ಗುಂಜನೂರು, ?

138 ಎಸ್·ಐ·ಐ· XVIII, 276, ಕಣವಿ, ಗದಗ, ಕ್ರಿ· ಶ· 1407·

139. ಇ·ಸಿ· VIII-II, 163, ಹರೂರ, ಸೊರಬ, ಕ್ರಿ· ಶ· 1442·

140. ಅದೇ 566, ಹೆಗ್ಗೋಡು, ಕ್ರಿ· ಶ· 1451

141. ಅದೇ, 565, ಹೆಗ್ಗೋಡು, ಕ್ರಿ· ಶ· 1424·

142. ಜನಪದ ಖಂಡ ಕಾವ್ಯಗಳು: (ಸಂ) ಜೀ· ಶಂ· ಪರಮಶಿವಯ್ಯ 'ನಾಗವ್ವ' ಪು· 25·

143. ಅದೇ, ಪು· 26·

144. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ· ಪು·23

145. ಅಗ್ನಿಪುರಾಣ· 122, ಪು·796·

146. ಕಾದಂಬರಿ, ಪೂರ್ವಾರ್ಧ· ಪು·308·

147. ಉಲ್ಲೇಖ : ದಿ ಪೊಜಿಶನ್ ಆಫ್ ವುಮೆನ್ ಇನ್ ಹಿಂದೂ ಸಿವಿಲೈಜೇಶನ್, ಪು· 126·

148. ಅದೇ·

149. ಎಸ್·ಐ·ಐ· XVIII, 409, ಇಟಗಿ, ರಾಣಿಬೆನ್ನೂರು, 14ನೆಯ ಶತಮಾನ·

150. ಇ·ಸಿ· VIII-II 104, ಹಿರೇಅವಲಿ, ಸೊರಬ, ಕ್ರಿ·ಶ· 1354·

151. ಅದೇ, 497, ಕುಂಬತ್ತಿಗ್ರಾಮ, ಕ್ರಿ·ಶ· 1432·

152. ಅದೇ, 397, ಹಿರೇಕಬ್ಬೂರ, ಕ್ರಿ· ಶ· 1223·

153. ಅದೇ, 214, ಜಡ್ಡಹಳ್ಳಿ, ? : ಅದೇ, 544, ಇಂಡುವಳ್ಳಿ ?

154. ಕಿಪ್ಪಡಿ, ಸಾಗರ (ತಾ), ಶಿವಮೊಗ್ಗ — ( ಕೋಟೆಹಕ್ಕಲನಲ್ಲಿಯ ವೀರಗಲ್ಲು), ಹರಿತಾಳು, ಸಾಗರ (ತಾ: ಶಿವಮೊಗ್ಗ — (ವೀರಗಲ್ಲು) ಇತ್ಯಾದಿ·

155. ಪಂಪಕವಿ ವಿರಚಿತ ಪಂಪಭಾರತಂ, ಪು·503·

156. ಮಹಾಕವಿ ಕವಿರನ್ನ ವಿರಚಿತಮಪ್ಪ ಅಜಿತತೀರ್ಥಂಕರ ಪುರಾಣ ತಿಲಕಂ·ಪು·10

157. ಸಮಯ ಪರೀಕ್ಷೆ, ಪು·380·

158. ನಯಸೇನ ವಿರಚಿತ ಧರ್ಮಾಮೃತಂ, ಪು. 361.

159. ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ, ಪು.313.

160. ಸಿರುಮಣ ನಾಯಕನ ಸಾಂಗತ್ಯ. ಪು.67.

161. ಅದೇ ಪು.68.

162. ಕತ್ತಲ ದಾರಿ ದೂರ: ಕೃಷ್ಣಮೂರ್ತಿ ಹನೂರ, ಪು.115.

163. ವಡ್ಡಗೆರೆ ನಾಗಮ್ಮ: (ಸಂ) ಮೌಜಯಂತಿಮಾಲ. ಪು.68

164. ಅದೇ ಪು.84.

165. ಗ್ರಾಮೀಣ: ಡಾ: ಎಂ.ಚಿದಾನಂದಮೂರ್ತಿ, ಪು.122,

ವಿವರ: ''ಮಾಸ್ತಿಯಮ್ಮಳ ಸಹಗಮನದ ವಿಷಯದಲ್ಲಿ ಊರಿನವರು ಸಹಕರಿಸಲಿಲ್ಲ ಮತ್ತು ತಾವು ಆ ಜಾಗಕ್ಕೆ ಬರುವುದಿಲ್ಲವೆಂದು ಖಂಡಿತವಾಗಿ ನುಡಿದರು. ಅವಳ ಮಹಿಮೆಯಿಂದ ಎಂಟು ಬಂಡಿಯಷ್ಟು ಶ್ರೀಗಂಧದ ಕಟ್ಟಿಗೆ ಬಂತು. ಅವಳು ಚಿತೆ ಏರುವ ಮುನ್ನ, ತನ್ನ ಸಾವಿನ ಕುರುಹಾಗಿ ಊರ ಹೆಬ್ಬಾಗಿಲಿನ ಬಳಿಯ ಹುಣಿಸೇಮರದ ಹತ್ತಿರ (ಈಗ ಗುಡಿ ಇರುವ ಜಾಗ) ಮೂರು ವಸ್ತುಗಳು ಆಕಾಶದಿಂದ ಉದುರುತ್ತವೆ, ಎಂದು ಹೇಳಿದ್ದಳು. ಅವಳು ಬೆಂಕಿಗೆ ಹಾರುತ್ತಲೇ ಒಂದು ಬೆಳ್ಳಿಯ ನಿಂಬೆಹಣ್ಣು, ಒಂದು ಕನ್ನಡಿ ಮತ್ತು ಕತ್ತಿ ಉದುರಿದವು. ಅವಳು ಸತ್ತ ವೀರನ ಹೆಂಡತಿಯೆಂಬುದು ನಿಜವೆಂದು ಅವಳು ಹೋಗಿ ಸ್ವರ್ಗದಲ್ಲಿ ತನ್ನ ಗಂಡನನ್ನು ಸೇರಿಕೊಂಡಳೆಂದು ಜನಕ್ಕೆ ನಂಬಿಕೆ ಹುಟ್ಟಿತು''.

166. ಪ್ರ.ಕಂ.ಇಂ — 6: (ಸಂ) ಎಚ.ಎಲ್.ನಾಗೇಗೌಡ. ಪು.291.

167. ಜಾನಪದ ಸೌಂದರ್ಯ: ದೇಜಗೌ. ಪು.48,

168. ಲಾವಣಿಗಳು: ಸಂ: ಕೆ. ಮರುಳಸಿದ್ದಪ್ಪ, ಪು. 113,

169. ಪ್ರ.ಕಂ.ಇಂ — ಸಂ.2, (ಸಂ: ಎಚ್.ಎಲ್.ನಾಗೇಗೌಡ. ಪು.55.

170. ಅದೇ ಸಂ, 5: ಪು. 472;

— —

Chapter-5

## ಅಧ್ಯಾಯ – 5

## ಕರ್ನಾಟಕದಲ್ಲಿ ಸತಿಘಟನೆಗಳು

ಉತ್ತರ ಭಾರತದ ಜೀವನವಿಧಾನವನ್ನು ಹಲವು ದೃಷ್ಟಿಗಳಿಂದ ದಕ್ಷಿಣ ಭಾರತವು ಅನುಸರಿಸಿದೆ. ಅವುಗಳಲ್ಲಿ ಸತಿಪದ್ಧತಿಯೂ ಒಂದು. ಇದು ಉತ್ತರ ಭಾರತದಲ್ಲಿ ಹೆಚ್ಚು ಆಚರಿಸಲ್ಪಟ್ಟಿದೆ. ಆ ಪ್ರದೇಶವು ಮೇಲಿಂದ ಮೇಲೆ ಪರಕೀಯ ಆಕ್ರಮಣಗಳಿಗೆ ತುತ್ತಾಗುತ್ತಿದ್ದುದೇ ಇದಕ್ಕೆ ಕಾರಣವಿರಬೇಕು. ದಕ್ಷಿಣ ಭಾರತದಲ್ಲಿ ಇಂಥ ಪರಕೀಯ ಆಕ್ರಮಣಗಳು ಕಡಿಮೆ ಎಂದೇ ಹೇಳಬೇಕು. ಹೀಗಾಗಿ ಯುದ್ಧಜೀವನದ ಹಿನ್ನೆಲೆಯಲ್ಲಿಯೇ ರೂಪಗೊಂಡ ಈ ಸತಿ ಆಚರಣೆಯು ದಕ್ಷಿಣ ಭಾರತದಲ್ಲಿ ಕಡಿಮೆ ಪ್ರಮಾಣದಲ್ಲಿ ಆಚರಿಸಲ್ಪಟ್ಟಿದ್ದರೆ ಆಶ್ಚರ್ಯವೇನೂ ಇಲ್ಲ. ಕರ್ನಾಟಕದಲ್ಲಿಯ ಸತಿಪದ್ಧತಿಗೂ ಇದೇ ಮಾತು ಅನ್ವಯಿಸುತ್ತದೆ ಎಂದು ಬೇರೆ - ಹೇಳಬೇಕಾಗಿಲ್ಲ. ಉಪಲಬ್ಧ ದಾಖಲೆ ಮತ್ತು ಮಾಹಿತಿಗಳ ಬಲದಿಂದ ಈ ಘಟನೆಗಳನ್ನು ಐತಿಹಾಸಿಕವಾಗಿ, ಪ್ರಾದೇಶಿಕವಾಗಿ, ಸಾಮಾಜಿಕವಾಗಿ ಇಲ್ಲಿ ಸಮಾಲೋಚಿಸಬಹುದು.

**ಐತಿಹಾಸಿಕ ಬೆಳವಣಿಗೆ :** ಕರ್ನಾಟಕದಲ್ಲಿಯ ಸತಿಘಟನೆಗಳು ಸಾಮಾನ್ಯವಾಗಿ ಮೃತನ ಪತ್ನಿಯ ಸ್ವಇಚ್ಛೆಯಿಂದಲೇ ಜರುಗಿದವುಗಳಾಗಿವೆ. ಶಾಸನ, ಕಾವ್ಯ ಇತ್ಯಾದಿ ಆಕರಗಳಲ್ಲಿ ಸ್ತ್ರೀಯನ್ನು ಒತ್ತಾಯಪೂರ್ವಕವಾಗಿ ಸತಿಹೋಗುವಂತೆ ಬಲತ್ಕರಿಸಿದ ಉದಾಹರಣೆಗಳು ಕಂಡು ಬರುವುದಿಲ್ಲ. ಇದಕ್ಕೆ ಬದಲಾಗಿ ಅವಳನ್ನು ಸತಿಹೋಗದಂತೆ ಒತ್ತಾಯಿಸುತ್ತಿದ್ದ ವಿವರಗಳೇ ದೊರಕುತ್ತವೆ. ಇದರಿಂದಾಗಿ ಸಹಜವಾಗಿಯೇ ಕರ್ನಾಟಕದಲ್ಲಿ ವಿರಳವೆನಿಸಿದವು. ತೀರ ಪ್ರಾಚೀನ ಕರ್ನಾಟಕದಲ್ಲಿ ಸತಿಘಟನೆಗಳು ಇಲ್ಲವೆನಿಸುವಷ್ಟರಮಟ್ಟಿಗೆ ಜರುಗಿದರೆ ಮಧ್ಯಕಾಲೀನ ಕರ್ನಾಟಕದಲ್ಲಿ ಅವು ಹೆಚ್ಚಿನ ಸಂಖ್ಯೆಯಲ್ಲಿ ಜರುಗಿದವು.

ಕವಡಿಶಾಸನವು ಸತಿಹೋದ ಘಟನೆಯನ್ನು ತಿಳಿಸುವ ಕರ್ನಾಟಕದ ಮೊಟ್ಟಮೊದಲನೆಯ ಶಾಸನವೆಂದು ಸಾಮಾನ್ಯವಾಗಿ ಇಂದು ತಿಳಿಯಲಾಗಿದೆ. ಆ ಶಾಸನವು ಸಂಸ್ಕೃತಭಾಷೆಯಲ್ಲಿದ್ದು ಅದರ ಪೂರ್ಣಪಾಠ ಹೀಗಿದೆ :[1]

" ಶ್ರೀ ಮೃಗೇಶ ಸುತಶ್ಚಾಯ :
...ಹಮಲ್ಲ ತಾಂ ರಾಜ್ಞೀ ಶ್ರೀರವಿವರ್ಮಣಾ
.. ಕಂಯಕಾ ಸಾಮಕಾ ವೈರವಿಕ್ರೀಜಸಾ
.. ಲಕ ಸಂಯುಕ್ತೋಯೋಪ ಹರ್ಷ್ಯಭರವೇನ್ನರ :
ಪಾಪೇನ ಭೂಂತೋಪಿನರಕೇಪಚ್ಯತೇ ಚಿರಂ "

ಈ ಶಾಸನವನ್ನು ಕುರಿತು ಡಾ: ಎಂ ಚಿದಾನಂದಮೂರ್ತಿ ಅವರು ಹೀಗೆ ಬರೆಯುತ್ತಾರೆ : ''ಕರ್ನಾಟಕದಲ್ಲಿ ಸಹಗಮನದ ಅತ್ಯಂತ ಪ್ರಾಚೀನ ಉಲ್ಲೇಖವೆಂದರೆ ಬಹುಶ: ಕ್ರಿ.ಶ.ಸು.400 ರ ಸೊರಬ ತಾಲೂಕಿನ ಶಾಸನ. ಕದಂಬ ವಂಶದ ರಾಣಿಯೊಬ್ಬಳು ರವಿವರ್ಮನೊಡನೆ-ಈತ ಆಕೆಯ ಗಂಡನಾಗಿರಬೇಕು — 'ಮುಕ್ತಳಾದಂತೆ' ಆ ಶಾಸನವು ತಿಳಿಸುತ್ತದೆ. ''ಕರ್ನಾಟಕದ ಅರಸುಮನೆತನಗಳ'' ಕರ್ತೃಗಳು ರವಿವರ್ಮನ ಕಾಲವು ಕ್ರಿ.ಶ. 503 ರಿಂದ ಕ್ರಿ.ಶ. 538 ಎಂದು ಅಭಿಪ್ರಾಯಪಡುವುದರಿಂದ ಮೇಲಿನ ಶಾಸನವು ಆರನೆಯ ಶತಮಾನದ್ದೆಂದು ಭಾವಿಸಬೇಕಾಗುತ್ತದೆ.[2] ಈ ಶಾಸನದಲ್ಲಿ ಕದಂಬ ವಂಶದ ರಾಣಿಯು ಸಹಗಮನಗೊಂಡದ್ದನ್ನು ಸ್ಪಷ್ಟವಾಗಿ ತಿಳಿಸಿಲ್ಲ, ಶಾಸನ ತ್ರುಟಿತವಾಗಿರುವುದರಿಂದಲೂ ಅಸ್ಪಷ್ಟವಾಗಿರುವುದರಿಂದಲೂ ಯಾವುದೂ ಅರ್ಥ ಸ್ಪಷ್ಟಗೊಳ್ಳುವುದಿಲ್ಲ. ಆದರೂ ಶಾಸನದಲ್ಲಿರುವ 'ಸಾಮುಕ್ತಾ' ಎಂಬುದು ಅವಳು 'ಮುಕ್ತಳಾದಳು' ಎಂದು ಹೇಳುವುದರಿಂದ, ರವಿವರ್ಮನ ರಾಣಿಯಾಗಿರಬಹುದಾದೊಬ್ಬಳು ಅವನೊಡನೆ (ಯುಕ್ತಾ) ಮರಣಹೊಂದಿರಬಹುದು. ರವಿವರ್ಮನು ಯಾರು ಎಂಬುದಕ್ಕೂ ಶಾಸನದಲ್ಲಿ ಹೆಚ್ಚಿನ ವಿವರಣೆಗಳಿಲ್ಲ. ಮತ್ತು ಶಾಸನದಲ್ಲಿ ಕಾಲದ ಸ್ಪಷ್ಟ ಉಲ್ಲೇಖವಿಲ್ಲ. ಈ ಎಲ್ಲ ತೊಂದರೆಗಳಿದ್ದರೂ ಇಲ್ಲಿಯ ರವಿವರ್ಮನು ಕದಂಬವಂಶದ ರಾಜನೆಂದೂ, ಅವನ ರಾಣಿ ಸತಿಹೋದಳೆಂದೂ ಸಧ್ಯಕ್ಕೆ ಗ್ರಹಿಸಬಹುದಾಗಿದೆ. ಅಲ್ಲದೆ ವಿದ್ವಾಂಸರು ಹೇಳುವಂತೆ ಶಾಸನದ ಕಾಲವು ಆರನೆಯ ಶತಮಾನವೆಂದು ತಿಳಿದುಕೊಳ್ಳಬಹುದಾಗಿದೆ.

ರವಿವರ್ಮನ ರಾಣಿಯ ಸಹಗಮನದ ನಂತರ ಸು.9ನೆಯ ಶತಮಾನದವರೆಗೆ ಯಾವ ಸತಿಘಟನೆಗಳ ಉಲ್ಲೇಖಗಳೂ ದೊರಕುವುದಿಲ್ಲ. ಈ 300 ವರ್ಷಗಳ ದೀರ್ಘಾವಧಿಯಲ್ಲಿ ಕರ್ನಾಟಕದಲ್ಲಿ ಸತಿಘಟನೆಗಳೇ ಜರುಗಿಲಿಲ್ಲವೇ ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟವಾಗಿದೆ. ಬಹುಶಃ ಈ ಅವಧಿಯಲ್ಲಿ ಸತಿಘಟನೆಗಳು ಜರುಗಿದ್ದರೂ ಅವುಗಳಿಗಾಗಿ ಶಾಸನ ಬರೆದಿರಲಿಕ್ಕಿಲ್ಲ. ಅಥವಾ ಹಾಗೆ ಬರೆಸಿದ್ದರೂ ಅವು ಇದುವರೆಗೆ ದೊರೆತಿಲ್ಲವೆಂದು ತಿಳಿದುಕೊಳ್ಳಬಹುದಾಗಿದೆ. ಸು.9ನೆಯ ಶತಮಾನದ್ದೆಂದು ಹೇಳಲಾದ ಶಾಸನವೊಂದರಲ್ಲಿ ಕಲಾಯಿಯು ತನ್ನ ಪತಿಯೊಂದಿಗೆ ಚಿತೆ ಏರಿದ ಉಲ್ಲೇಖವಿದೆ.[3] ಇದೇ ರೀತಿ ಸು. 9 — 10ನೆಯ ಶತಮಾನಗಳಿಗೆ ಸೇರಿದ ಮಾಸ್ತಿಕಲ್ಲುಗಳೆರಡು ಹಾನಗಲ್ಲ ತಾಲೂಕಿನ ಬೈಲವಾಳದಲ್ಲಿ ದೊರಕುತ್ತವೆ.[4] ಒಂದು ಶಾಸನದಲ್ಲಿ ಸ್ತ್ರೀಯೊಬ್ಬಳ ಮರಣ ಮತ್ತು ಭೂದಾನದ ಉಲ್ಲೇಖವಿದ್ದರೆ, ಇನ್ನೊಂದು ಶಾಸನದಲ್ಲಿ

ಒಬ್ಬರ ಮರಣದ ಉಲ್ಲೇಖ ಮಾತ್ರ ಇದೆ. ಇವೆರಡೂ ಶಿಲ್ಪದೃಷ್ಟಿಗಳಿಂದ ಮಾಸ್ತಿಕಲ್ಲುಗಳಾಗಿರುವುದರಿಂದ ಇವು ಸತಿಘಟನೆಗಳನ್ನು ಸೂಚಿಸುತ್ತವೆ ಎಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಕ್ರಿ. ಶ. 908 – 9 ರ ಶಾಸನವೊಂದು ಬಳಕ್ಕನ ಸಹಗಮನವನ್ನು ಸೂಚಿಸುವಂತಿದೆ. ಈ ಶಾಸನವೂ ಸ್ಪಷ್ಟವಿಲ್ಲವೆಂಬುದನ್ನು ಗಮನಿಸಬೇಕು. ಬಳಕ್ಕನು ಸತಿಹೋಗಿರಬಹುದಾದುದನ್ನು ತಿಳಿಸುವ ಶಾಸನಪಾಠ ಹೀಗಿದೆ: ''ಆತನ ಹೆಗ್ಗಡಿ ತೊಮ್ಮನೆವೊಬ್ಬ ........ ( ಅಜಿ ) ಯೊಳ್ಕಾದಿ, ಸತ್ತೊಡಾತನ ಪೆಣ್ಡತಿ ... ಬಳಕ್ಕನ ...... ಸದೊಕಾಯ್ಸೊಜ..''[5] ಇಲ್ಲಿ 'ತೊಮ್ಮ' ಎಂಬವನು ಯುದ್ಧದಲ್ಲಿ ಕಾದಿ ಮಡಿದುದು ಸ್ಪಷ್ಟವಿದೆ. ಆದರೆ ಹೆಂಡತಿಯು ಸಹಗಮನಮಾಡಿಕೊಂಡಿರಬಹುದಾದುದನ್ನು ಹೇಳುವ ಶಾಸನಭಾಗ ತ್ರುಟಿತವಾಗಿ ಹೋಗಿದೆ.

ಕ್ರಿ.ಶ. ಸು. 945 ರಲ್ಲಿ ರಚನೆಗೊಂಡ 'ವಿಕ್ರಮಾರ್ಜುನ ವಿಜಯ' ದಲ್ಲಿ ಮಾದ್ರಿಯ ಸಹಗಮನದ ವಿಷಯವಿದೆ.[6] ಇದನ್ನು ಐತಿಹಾಸಿಕಘಟನೆ ಎಂದು ಭಾವಿಸುವಂತಿಲ್ಲ. ಅಲ್ಲದೆ, ವ್ಯಾಸಭಾರತದಲ್ಲಿಯ ಮಾದ್ರಿಯ ಸಹಗಮನವನ್ನು ಪಂಪ ಚಿತ್ರಿಸಹೊರಟಿರುವುದನ್ನು ಮರೆಯಬಾರದು. ಇದೇ ಕಾವ್ಯದಲ್ಲಿ ಯುದ್ಧ ಸಂದರ್ಭದಲ್ಲಿಯ ವಿವರಣೆಯೊಂದು ಹೀಗೆ ಬರುತ್ತದೆ: ''ಒಂದೆಡೆಯೊಳೊರ್ವಳ್ ಧರ್ಮಶಯನಸ್ಥನಾದ ನಿಜಪ್ರಾಣೇಶ್ವರನ ಪರಿಚ್ಛೇದಮನಱಿದು ತನ್ನ ಸಾವಂ ಪರಿಚ್ಛೇದಿಸಿ —

ತಾಂ ಗಡ ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಪರ್ನಿಲ್ಲ ಮಾ
ಣಾಂ ಗಡಮುಪೇಕ್ಷನಂತನಿತು ಬೆಳ್ಳನೆ ಮುನ್ನಮೆ ಪೋಗಿ ನಲ್ಲಿಗೆ
ಲ್ಲಂಗೊಳಿ ದೇವಲೋಕದೊಳ್ಗ್ಗಿದೀಶನನಾನಿಗೊರ್ಳ್ಕಿನೊಲ್ಪೊಸ
ಗ್ಗಂಗಳೊಳಿರ್ಪ ದೇವಡಿತಿ ತೋಳ್ತ್ರೆರೊಳ್ಕಳ್ತ್ರಯನಾಗಲೇವನೇ ॥

ಎಂದು ಕೈದಮಿಲ್ಲದ ನಲ್ಮೆಯಂ ನಾಲಗೆಯ ತುದಿಗೆ ತಂದು ನುಡಿದಳ್''.[7] ಇಲ್ಲಿ ಪತಿಯು ಮಡಿದು ದೇವತಾಸ್ತ್ರೀಯರನ್ನು ಕೂಡಿಕೊಳ್ಳುವ ''ಮುನ್ನಮೆ ಪೋಗಿ ನಲ್ಲಿ ಗೆಲ್ಲಂಗೊಳಿ ದೇವಲೋಕದೊಳ್ಗ್ಗಿದೀಶನನಾನಿದಿಗೊರ್ಳ್ಕಿನು'' ಎನ್ನುವ ಪತ್ನಿಯ ಚಿತ್ರಣವನ್ನು ಪಂಪಕೊಟ್ಟಿದ್ದಾನೆ. ಗಂಡನು ಮಡಿದ ತಕ್ಷಣ ಅವನೊಡನೆ ಸಹಗಮನ ಮಾಡಿದ ಪತ್ನಿ ದೇವಲೋಕಕ್ಕೆ ಹೋಗುವಳು ಎಂಬ ನಂಬಿಕೆಯನ್ನು ಮಹಾಕವಿ ಈ ಮೂಲಕ ಅಭಿವ್ಯಕ್ತಿಸಲು ಪ್ರಯತ್ನಿಸಿದಂತಿದೆ. ಇಲ್ಲಿ ಬಳಕೆಗೊಂಡ ''ಮುನ್ನಮೆ'' ಎಂಬ ಪದ ಬಹುಮುಖ್ಯವಾದುದಾಗಿದೆ. ಬಹುಶಃ ಗಂಡನ ಮರಣಪೂರ್ವದಲ್ಲಿ ಪತ್ನಿ ಮಡಿದು ದೇವಲೋಕದಲ್ಲಿ ಅವನನ್ನು ಇದಿರು

ಗೊಳ್ಳುವ ನಡವಳಿಕೆಯ ಚಿತ್ರಣವನ್ನು ಈ ಪದ್ಯ ಕೊಡುತ್ತಿರಬಹುದೆ ? ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಹೀಗೆ ಈ ಪದ್ಯವನ್ನು ಅರ್ಥೈಸಿಕೊಂಡರೆ ಇಲ್ಲಿ ಸತಿ ಸೂಚನೆ ಇರದೇ 'ಜೋಹರ್' ಸೂಚನೆ ಇದೆ ಎಂದು ಹೇಳಬೇಕಾಗುತ್ತದೆ. ಗಂಡನು ಯುದ್ಧಕ್ಕೆ ಹೋಗುವ ಪೂರ್ವದಲ್ಲಿ ತನ್ನ ಪತ್ನಿಯರನ್ನು ಕೊಂದು ಹೋಗುತ್ತಿದ್ದುದು ಅಥವಾ ಗಂಡನ ಮರಣವನ್ನು ನಿಶ್ಚಯಿಸಿದ ಪತ್ನಿಯರು ಮರಣಗೊಳ್ಳುತ್ತಿದ್ದುದು ಜೋಹರವೆಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಪಂಪಭಾರತ ರಚನೆಯ ಸು.30 ವರ್ಷಗಳ ಅನಂತರದಲ್ಲಿ ರಚನೆಗೊಂಡ ಕ್ರಿ.ಶ.972 ರ ಬಿನ್ನೂರು ಶಾಸನದಲ್ಲಿ ಜಕ್ಕಬ್ಬೆಯ ಸಹಗಮನದ ಸ್ಪಷ್ಟ ಉಲ್ಲೇಖ ದೊರಕುತ್ತದೆ.[8] 'ಬದಿಯಣ್ಣನು' ಬಹುಶಃ 'ಜಕ್ಕಬ್ಬೆಯ' ಪತಿಯಾಗಿದ್ದು ಮರಣ ಹೊಂದಿರಬೇಕು. ಈತನ ಮರಣವನ್ನು ಸೂಚಿಸುವ ಶಾಸನ ಪಾಳಿ ತ್ರುಟಿತವಾಗಿದೆ. 'ಜಕ್ಕಬ್ಬೆ ಒಡನೆ ಸುರಲೋಕಕೆಯ್ದಿದಳು' ಎಂದು ತಿಳಿಸಿ, ಅವಳಿಗಾಗಿ ಅವಳ ತಂಗಿ ಜಾಬೆ ಕಲ್ಲನ್ನಿಲ್ಲಿಸಿದ್ದನ್ನು ಶಾಸನದಲ್ಲಿ ಹೇಳಲಾಗಿದೆ.

ಕವಿರನ್ನನು ( ಕ್ರಿ. ಶ. 993 ) ತನ್ನ 'ಅಜಿತನಾಥಪುರಾಣದಲ್ಲಿ ಗುಂಡಮಬ್ಬೆಯ ಸಹಗಮನವನ್ನು ಉಲ್ಲೇಖಿಸಿದ್ದಾನೆ. ಸಮಕಾಲೀನ ಐತಿಹಾಸಿಕ ಘಟನೆಯೊಂದನ್ನು ತನ್ನ ಪುರಾಣ ಕಾವ್ಯದಲ್ಲಿ ಚಿತ್ರಿಸಿದ ರನ್ನ ಕರ್ನಾಟಕದ ಇತಿಹಾಸಕ್ಕೆ ಉಪಕಾರ ಮಾಡಿದ್ದಾನೆಂದೇ ಹೇಳಬೇಕು. ಸಹೋದರಿಯರಾದ ಅತ್ತಿಮಬ್ಬೆ — ಗುಂಡಮಬ್ಬೆಯರ ಪತಿ ನಾಗದೇವನು ಚಾಲುಕ್ಯ ಚಕ್ರವರ್ತಿ ಆಹವಮಲ್ಲದೇವನ ಭುಜಾದಂಡದಂತೆ ಇದ್ದವನು. ಅವನು ಮರಣಹೊಂದಿದ ಸಂದರ್ಭದಲ್ಲಿ ಕವಿಯು ಪದ್ಯವೊಂದನ್ನು ಹೀಗೆ ಕೊಡುತ್ತಾನೆ :[9]

ಎರಡೆ ವಲಂ ಕುಲವಧುಗಾ
ಚರಿಸಲ್ ಪತಿಯುಂ ಪರೋಕ್ಷಮಾದೊಡೆ ಜಿನದೀಕ್ಷಾ ।
ಚರಣಂ ಮೇಣ್ ಶುಭಚರಿತದ-
ಮರಣಂ ಮೇಣಿಳಿಪಿಂದೆ ಬಾಳ್ವುದು ದೊರೆಯೇ ॥

ಪತಿ ಮರಣಾನಂತರ ಪತ್ನಿಯಾದವಳು ( ಕುಲವಧು ) ಎರಡು ಮಾರ್ಗಗಳನ್ನು ಅನುಸರಿಸಬಹುದಾಗಿತ್ತೆಂದು ರನ್ನ ತಿಳಿಸುತ್ತಾನೆ. ಒಂದು: ಜಿನದೀಕ್ಷಾಚರಣೆಯಾದರೆ, ಇನ್ನೊಂದು ಶುಭಚರಿತದ ಮರಣವಾಗಿದೆ. ಇದೇ ಕಾವ್ಯದಲ್ಲಿ ಸಗರನ ಪತ್ನಿಯರು ತಮ್ಮ ಮಕ್ಕಳೆಲ್ಲ ಮರಣ-

ಹೊಂದಲಾಗಿ ಪತಿಯನ್ನು ಕುರಿತು ಹೀಗೆ ಕೇಳಿಕೊಳ್ಳುತ್ತಾರೆ :[10]

"ಒಗೆದ ಪತಿವಿರಹತಾಪದಿ-
ಪುಗಲಿರ್ದರ್ ಜಿನಗೃಹಂಗಳಂ ಶಿಖಿಶಿಖೆಯಂ।
ಪುಗಲಿರ್ದ ಸೊಸೆವಿರೆಲ್ಲರ
ಮೊಗಂಗಳಂ ದೇವ್ ನೋಡಿ ಕರುಣಿಸಬೇಡಾ ।।

ಇಲ್ಲಿ ಸಗರನ ಸೊಸೆಯರೆಲ್ಲ ಗಂಡಂದಿರ ಮರಣವನ್ನು ತಿಳಿದು ಜಿನಗೃಹಗಳನ್ನು, ಶಿಖಿಶಿಖೆಯನ್ನು ಪ್ರವೇಶಿಸುವ ಸಿದ್ಧತೆಯಲ್ಲಿದ್ದರೆಂಬುದು ತಿಳಿದುಬರುತ್ತದೆ.

ರನ್ನನು ನಾಗದೇವನ ಪತ್ನಿ ಗುಂಡಮಬ್ಬೆ ಸಹಗಮನಗೊಂಡದ್ದನ್ನು ಅತ್ಯಂತ ಉತ್ಕೃಷ್ಟವಾಗಿ ಚಿತ್ರಿಸಿದ್ದಾನೆ,[11] ಅತ್ತಿಮಬ್ಬೆಗೆ ಮಗನಿದ್ದ ಕಾರಣ ಗುಂಡಮಬ್ಬೆಯು "ನಾಗದೇವನೊಡನಾಂ ಬೆಸವೇಳ್ವೆನೆಂದು ಬೇಡಿಕೊಂಡಿನಿಯನಪ್ಪಿಕೊಂಡುಚಿತಮಾಗೆ ಚಿತಾಗ್ನಿಯೊಳಣ್ಮಿ" ಸಾಯುತ್ತಾಳೆ.[12] ಹಾಗೆ ಸತ್ತ ಅವಳನ್ನು 'ಗುಂಡಿಲ್ಲಂ' ಹೊಗಳುತ್ತದೆ. ಅಲ್ಲದೆ "ಒಡಸತ್ತು ಪತಿವ್ರತೆ ಗುಂಡಮಬ್ಬೆ ಸೌಂದರಸುಭಟಂಗೆ ಸಗ್ಗದೊಳಮಿಲ್ಲ ಮನಃಪ್ರಿಯೆಯುಮಾದಳಿಂದು ಮಚ್ಚರಿಸುವರಿಂದ್ರ ಸೌಂದರಿಯರು" ಎಂದೂ, 'ಅಂತಿರ್ವರು ಗಿರ್ವಾಣಲೋಕದೊಳ್ ದಂಪತಿಗಳಾಗೆ" ಎಂದು ರನ್ನನು ಅಪೂರ್ವವಾದ ವಿವರಣೆಗಳನ್ನು ನೀಡುತ್ತಾನೆ.

ಹತ್ತನೆಯ ಶತಮಾನದ ಉತ್ತರಾರ್ಧದವರೆಗೆ ಕೇವಲ ಆರು ಶಾಸನಗಳು ಸತಿ ಘಟನೆಗಳನ್ನು ತಿಳಿಸುವುದರ ಹಿನ್ನೆಲೆಯಲ್ಲಿ, ರನ್ನನ ಈ ವಿವರಗಳು ಅತ್ಯಂತ ಮಹತ್ವದವುಗಳಾಗಿ ಕಾಣಿಸುತ್ತವೆ. ಹತ್ತನೆಯ ಶತಮಾನದ ಕರ್ನಾಟಕದಲ್ಲಿ ಸತಿಘಟನೆಗಳು ವಿರಳವಲ್ಲದ ರೀತಿಯಲ್ಲಿ ಜರುಗುತ್ತಿದ್ದಿರಬೇಕು. ಈ ಹಿಂದೂ ಮರಣವು ಜೈನರ ಮೇಲೆ ಪ್ರಭಾವಬೀರುವಷ್ಟು ಈ ಕಾಲದಲ್ಲಿ ಪ್ರಚಲಿತದಲ್ಲಿತ್ತೆನಿಸುತ್ತದೆ.

ಹನ್ನೊಂದನೆಯ ಶತಮಾನದಲ್ಲಿ ಐದು ಸತಿಘಟನೆಗಳು ಜರುಗಿದ ಕುರಿತಾಗಿ ಶಾಸನಗಳು ಉಲ್ಲೇಖಿಸುತ್ತವೆ. ಕ್ರಿ. ಶ. 1051 ರ ಉತ್ತರಾಣಿಹಳ್ಳಿ ಶಾಸನವು ಬೋಗಾರ ಕರಡಿಸೆಟ್ಟಿಯ ಮದವಳಿಗೆ ನಾಗಮ್ಮ 'ಸಹಗಮನ' ಮಾಡಿಕೊಂಡಿದ್ದನ್ನು ಸೂಚಿಸುತ್ತದೆ.[13]

ಕ್ರಿ.ಶ. 1057 ರ ಬೆಳತೂರು ಶಾಸನವು ನುಗುನಾಡಧಿಪತಿ ರವಿಗನ ಮಗಳು ಪೆರ್ಗಡೆಯ ಏಚನ ಪತ್ನಿಯೂ ಆದ ದೇಕಬ್ಬೆಯು ಸತಿಹೋದುದನ್ನು ತಿಳಿಸುತ್ತದೆ.[14] ಏಚನನ್ನು ದಾಯಾದಿಗಳು ತಲಕಾಡಿಗೆ ಒಯ್ದುಕೊಲ್ಲುತ್ತಾರೆ. ಇದನ್ನು ಕೇಳಿದ ಲಲಿತಾಂಗಿ ದೇಕಬ್ಬೆಯು ತಂದೆ – ತಾಯಿ – ಬಂಧುಗಳು ವಿರೋಧಿಸಿದರೂ ಅಗ್ನಿಪ್ರವೇಶಮಾಡುತ್ತಾಳೆ. ಇವಳ ಮರಣ ಅನುಮರಣ ಅಥವಾ ಅನುಗಮನವಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಕ್ರಿ. ಶ. 1088 – 89 ರ ಹುಬ್ಬಳಗುಪ್ಪೆ ಶಾಸನವು "ಪೆರ್ಗಡೆಯರ ಅಳ್ತಿಗೆಯು ಜೋಳವಿಂ ಆತನ ಮಗಂ ನವಲಾಷಿರಾಜ ಸತ್ತಡೆ ಆತನ ಎಳೆತಿ ತಪಳ್ಗೆಯು ಕಳಿಮ್ಯಾರಿವುಯುಂ ಸತ್ತ" ವಿಷಯವನ್ನು ನಿರೂಪಿಸುತ್ತದೆ.[15] ಡಾ: ಎಂ ಎಂ ಕಲಬುರ್ಗಿ ಅವರು ಹೇಳುವಂತೆ ಈ ಶಾಸನವು ಸತಿಯ ಊರ್ಧ್ವಪತನ ಮರಣವನ್ನು ಸೂಚಿಸುತ್ತದೆ.[16] ( ಚಿತ್ರ – 52) (ಮುಂದೆ ವಿವರಿಸಲಾಗುವುದು ). ದೇಕಬ್ಬೆಯ ಪತಿ ಏಚನೂ ಪೆರ್ಗಡೆಯನವನೆಂಬುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದಾಗಿದೆ. ದೇಕಬ್ಬೆ ಮತ್ತು ನವಲಾಷಿರಾಜನ ಎಳೆತಿ ಇವರಿಬ್ಬರೂ ಪೆರ್ಗಡೆಯರ ಅಂದರೆ ಈಗಿನ ಹುಬ್ಬಳಗುಪ್ಪೆಯ ಸೊಸೆಯಂದಿರರಾಗಿರುವುದು ವಿಶೇಷವಾಗಿದೆ. ಒಬ್ಬಳ್ ಕ್ರಿ.ಶ. 1057 ರಲ್ಲಿ ಅಗ್ನಿಪ್ರವೇಶಮಾಡಿದರೆ, ಇನ್ನೊಬ್ಬಳು ಕ್ರಿ. ಶ. 1088 – 89 ರಲ್ಲಿ ಕಮ್ಮರಿಯಿಂದ ಹಾರಿಕೊಂಡಿದ್ದಾಳೆ. ಇವೆರಡೂ ಸತಿಘಟನೆಗಳಲ್ಲಿ ಸು. 31–2 ವರ್ಷಗಳ ಅಂತರವಿರುವುದನ್ನು ಕಾಣುತ್ತೇವೆ. ಬಹುಶ: ಏಚನ ಮರಣಾನಂತರ ಅವನ ಸಂಬಂಧಿಗಳಲ್ಲಿ ಒಬ್ಬನಾದ ಅಳ್ತಿಗೆಯ ಜೋಳವಿ ನವಿಲೆನಾಡಿನ ಅಧಿಪತಿಯಾಗಿರಬೇಕು.[17] ಈ ಊಹೆ ಸಂಭಾವ್ಯವಾಗಿದ್ದರೆ ಡಾ: ಎಂ. ಚಿದಾನಂದಮೂರ್ತಿ ಅವರು ಹೇಳುವಂತೆ ನವಲಾಷಿರಾಜನ ಪತ್ನಿ ಏಚನ ವಂಶದ ಸೊಸೆಯಾಗುತ್ತಾಳೆ.[18]

ಕ್ರಿ.ಶ. 1089 ರ ಕೋಟಿಪುರು ಶಾಸನವೊಂದರಲ್ಲಿ ಕನಕವ್ವೆ ಎಂಬವಳು ಮಡಿದಾಗ ಆಕೆಯ ವೇಳೆವಾಳಿಯಾದ ಗೋರವನಾಯಕನು ಮಡಿಯುತ್ತಾನೆ. ಈತನ ಮದವಳಿಗೆ ಬಮ್ಮಕ್ಕನು ಸತಿಹೋಗುತ್ತಾಳೆ.[19] ಇದೇ ರೀತಿ ಕೊಡಗು ಜಿಲ್ಲೆಯ ಮುಳ್ಳೂರುಗ್ರಾಮದ ಕ್ರಿ. ಶ. 1077 ರ ಶಾಸನವೊಂದರಲ್ಲಿ, ರಾಜೇಂದ್ರಚೋಳನ ಪಟ್ಟದರಸಿ ಪದಲದೇವಿ ಮಡಿಯಲಾಗಿ, ಬಹುಶ: ಗರುಡನಾಗಿದ್ದವನೊಬ್ಬನು ತನ್ನ ಪತ್ನಿಯೊಂದಿಗೆ ಮರಣಹೊಂದಿದ ವಿಷಯ ಬಂದಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[20] ದುರ್ದೈವದಿಂದ ಈ ಶಾಸನ ತ್ರುಟಿತ

ವಾಗಿರುವುದರಿಂದ ಅರ್ಥಸ್ಪಷ್ಟಗೊಳ್ಳುವುದಿಲ್ಲ.

ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಹತ್ತು ಸತಿಘಟನೆಗಳು ಜರುಗಿದ ಕುರಿತಾಗಿ ಶಾಸನಗಳಿಂದ ತಿಳಿದುಬರುತ್ತದೆ. ಇದೇ ಕಾಲದಲ್ಲಿಯೇ ಬಸವಣ್ಣ, ಮಾದಾರ – ಧೂಳಯ್ಯ ಅಕ್ಕಮಹಾದೇವಿ, ಬ್ರಹ್ಮಶಿವ, ಜನ್ನ – ಇವರು ಸತಿಆಚರಣೆಯ ಕುರಿತಾಗಿ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[21] ಕ್ರಿ. ಶ. 1117 ರ ಶಾಸನವೊಂದು ಹೊಯ್ಸಳ ಬಿಟ್ಟಿದೇವನ ಸಾಹಣಿ ಬಾಸಯ ವೀರಮರಣಹೊಂದಲು ಅವನ ಮಡದಿಯು ಸತಿಹೋದಳೆಂದು ತಿಳಿಸುತ್ತದೆ.[22] ಕ್ರಿ. ಶ. 1118 ರ ಎಚಲವಾಡಿ ತವಿ[illegible]ಶಾಸನವೊಂದು ಹುಲಿಯೊಡನೆ ಹೋರಾಡಿ ಮಡಿದ ವೀರನೊಬ್ಬನ ಪತ್ನಿ ಸಿಕ್ಕಮಾಯಿ ಎಂಬವಳು ಅಗ್ನಿಪ್ರವೇಶಿಸಿ ಸತಿಹೋದುದನ್ನು ತಿಳಿಸುತ್ತದೆ.[23] ಕ್ರಿ. ಶ. 1134 ರ ಹುತ್ತಗ್ರಾಮದ ಶಾಸನವು ಸೂರ್ಯಲೋಕಪ್ರಾಪ್ತನಾದ ಪತಿಯ ಮರಣಾನಂತರ 'ದೇವಿಯಕ್ಕ' 'ಪುರುಷಬ್ರತ' ದಿಂದ ಸತ್ತುದನ್ನು ತಿಳಿಸುತ್ತದೆ.[24] ಇಲ್ಲಿ 'ಪುರುಷಬ್ರತ' ಎಂಬ ಪದವು 'ಸಹಗಮನ'ಕ್ಕೆ ಪರ್ಯಾಯವಾಗಿ ಬಳಕೆಗೊಂಡದ್ದನ್ನು ಕಾಣುತ್ತೇವೆ. ಕ್ರಿ. ಶ. 1150 ರ ಕಸಲಗೆರೆ ಶಾಸನದಲ್ಲಿ ''ಮಾರದೇವನರಮಣಿ ಮನೋಹರಿ ಮಹಾಸತಿಶೀಲಗುಣಾಭೂಮಿ ಕಾಮಿನಿ ಮಹದೇವಿ''ಯ ಸಹಗಮನದ ವಿಷಯವಿದೆ.[25] ಕ್ರಿ. ಶ. 1180 ರ ಶಾಸನವು ಬೇಚಿರಾಜನ ಇಬ್ಬರು ಪತ್ನಿಯರಾದ ಬಿಲ್ಲಿಯಕ್ಕ, ಮಲಪನೀಯಕ್ಕರ ಸಹಗಮನವನ್ನು ತಿಳಿಸುತ್ತದೆ.[26] ಕ್ರಿ. ಶ. 1181 ರ ಶಾಸನವು 'ಸತಿಘಟನೆಯನ್ನು ತಿಳಿಸಿದ್ದಲ್ಲದೆ ಸತಿ ಹೋದವಳನ್ನು 'ಶಿವಪಾದಶೇಖರಿ ಶಿವಕಥಾಳಾಪೆ' ಎಂದು ಕರೆದಿದೆ.[27] ಕ್ರಿ. ಶ. 1191 ರ ಹಿರೇಹಾರಕ ಶಾಸನವು, ಪತಿ ಮರಣಹೊಂದಲಾಗಿ ''ಜಕ್ಕಿಬೆಯವ್ವೆ ಕಲ್ಲನಿಕ್ಕಿಸುವಲ್ಲಿ ಕೊಡಿ- ಸತ್ತುಸ್ವರ್ಗ್ಗವಂ ಸೂರೆಗೊಂಡಳು'' ಎಂದು ಹೇಳುತ್ತದೆ.[28] ಇದೇ ರೀತಿ ಹನ್ನೆರಡನೆಯ ಶತಮಾನಕ್ಕೆ ಸೇರಿದ ಹಿರೇಕಬ್ಬೂರ ಶಾಸನದಲ್ಲಿ 'ಬಿಮ್ಮಗೌಡನ' ಮದವಳಿಗೆ 'ಜಬಗೌಡಿ'ಯು ಸತಿಹೋದುದನ್ನು, ಕಮ್ಮನಹಳ್ಳಿ ಶಾಸನದಲ್ಲಿ ಬೇಡರ ಬೀರಗವುಡಿಯರು ಸಹಗಮನ- ಗೊಂಡದ್ದನ್ನು ತಿಳಿಸಲಾಗಿದೆ.[29] ಹನ್ನೆರಡನೆಯ ಶತಮಾನದ ಉತ್ತರಾರ್ಧದ ಸಿದ್ಧಾಪುರ ತಾಲೂಕಿನ ಶಾಸನವೊಂದು ಸತಿಹೋದ ರಾಮಗೌಡನ ಸತಿ ಮಸಣಿಗವುಡಿಗಾಗಿ 'ವೀರಮಹಾಸತಿಕಂಬ'' ನಿಲ್ಲಿಸಿದುದನ್ನು ಹೇಳುತ್ತದೆ.[30]

ಬಿಜ್ಜಳನ ತಾಯಿಯಂತು ಸಹಗಮನವನ್ನು ಇದೇ ಸಂದರ್ಭದಲ್ಲಿ ಉಲ್ಲೇಖಿಸಬಹುದಾಗಿದೆ. ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಕಲಚುರಿ ಮನೆತನದ ಅರಸನಾಗಿ ಬಿಜ್ಜಳನು ರಾಜ್ಯಭಾರ ಮಾಡಿದ್ದು ತಿಳಿದು ಬರುತ್ತದೆ. ಈತನು ಚಿಕ್ಕವನಿರುವಾಗಲೇ ಅವನ ತಾಯಿಯಂತೂ ಗಂಡ ಮರಣ ಹೊಂದಲಾಗಿ ಸಹಗಮನಮಾಡಿಕೊಂಡಳೆಂದು 'ಸಿಂಗಿರಾಜಪುರಾಣ'ವು ಹೇಳುತ್ತದೆ.[31] ಡಾ: ಎಂ.ಎಂ.ಕಲಬುರ್ಗಿ ಅವರು "ಬಸವಣ್ಣನವರ ಮರಣಕ್ಷಣದಲ್ಲಿ ನೀಲಮ್ಮನವರು ಲಿಂಗೈಕ್ಯರಾದುದು ಸ್ಥೂಲವಾಗಿ ಸಹಗಮನ ( ಗಂಡನ 'ಸಹ' ಮರಣಹೊಂದಿದುದು ) ವೆನಿಸಬಹುದು" ಎಂದು ಹೇಳಿರುವುದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.[32]

ಹದಿಮೂರನೆಯ ಶತಮಾನದಲ್ಲಿ ಹತ್ತೊಂಬತ್ತು ಸತಿಘಟನೆಗಳು ಜರುಗಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. 1201 ರ ನಾಡಕಳಸಿ ಶಾಸನವು "ಚೊಮ್ಮರಸಿಯುಮಾ ಕಲಿಸಿಯು ರಾಮಗೌಡನು ಸಾಯುಜ್ಯವನೆಯ್ದಿದರು" ಎಂದು ಹೇಳುತ್ತದೆ,[33] ಕ್ರಿ.ಶ. 1218 ರ ಕಳೂರಕಟ್ಟೆ ಶಾಸನವು ರುದ್ರಗೌಡನ ಪತ್ನಿ ಅಗ್ನಿಪ್ರವೇಶಗೈದುದನ್ನು ತಿಳಿಸುತ್ತದೆ.[34] ಕ್ರಿ.ಶ.1223 ರ ಶಾಸನವೊಂದು "ಬೊಮ್ಮಣಸ್ವರ್ಗಸ್ತನಾದ ಆತನ ಮದವಳಿಗೆ ಸಿರಿಯಾರ ಬೊಮ್ಮಣನ ಮಗಳು ವೀರಕ್ಕನು ವೀರಸ್ವರ್ಗಲೋಕಪ್ರಾಪ್ತೆಯಾದಳು" ಎಂದು ಹೇಳುತ್ತದೆ. ಕ್ರಿ.ಶ. 1225 ರ ಕೋಳಿಗುಂದ ಶಾಸನವು "ರೋಜನಸೋಸಿ ಮಹಾದೇವಿ ತನ್ನ ಗಂಡನಂ — ಕೊನುಭ್ರಂ ಸುರಲೋಕಪ್ರಾಪ್ತೆಯಾದಳು" ಎಂದು ವಿವರಿಸುತ್ತದೆ.[36] ಇಲ್ಲಿ ಮಹಾದೇವಿ ಗಂಡನನ್ನು ಕೊಂದು ಸತಿಹೋದಂತೆ ವಿವರವಿದೆ. ಬಹುಶ: ಇಲ್ಲಿಯ 'ಕೊನುಧಂ' ಎಂಬುದು 'ಕೊನುಬಂ' ಎಂದು ಇದ್ದಿರಬೇಕೆನಿಸುತ್ತದೆ. ಹರಿತಾಳು ಗ್ರಾಮದ ಕ್ರಿ.ಶ. 1228 ರ ಶಾಸನದಲ್ಲಿ ತಿರಿಕ್ಕಿಗೌಡ ಬೇಡರೊಡನೆ ಹೋರಾಡಿ ಮಡಿಯಲಾಗಿ ಅವನ ಮದವಳಿಗೆ ಬೊಂಮಯಕ್ಕನು ಸಹಗಮನವನ್ನು ಮಾಡಿಕೊಂಡ ವಿವರ ಇದೆ.[37] ಇದು ಅತ್ಯಂತ ಸುಂದರವಾದ ಶಿಲ್ಪವನ್ನುಳ್ಳ ವೀರಗಲ್ಲಾಗಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಕ್ರಿ.ಶ. 1259 ರ ಶಾಸನದಲ್ಲಿ ವೀರಪ್ಪನ ಹೆಂಡತಿ ಸತಿಹೋದ ವಿವರವಿದೆ.[38] ಕ್ರಿ.ಶ. 1265 ರ ಸೇಣಿಗೆಶಾಸನದಲ್ಲಿ ಬೊಂಮೆಯನಾಯಕನ ಪತ್ನಿಯ ಸಹಗಮನವನ್ನು "ಬಾಸೆಯ ಬೊಂಮಕ್ಕಬೊಂಮೆಯನಾಯಕನ ಕೂಡೆ ಕಿಚ್ಚುಪರಯುದದೂ" ಎಂದು ತಿಳಿಸಲಾಗಿದೆ.[39] ಕ್ರಿ.ಶ. 1284 ರ ಶಾಸನವೊಂದರಲ್ಲಿ 'ಪುಳುಗುಂದದ ನರಲೋಕ (ವೀರ)ಜಗದಾಳಬೊಮ್ಮಿದೇವಜಂಗುಳಿ ಮುಂಸಿಯರ

ಗಂಡಗೆ(ಎ)

ಕಟಿಗ ಚಟಂಯನಾಯಕನು ತನ ಹೆಂಡತಿ ಯುಬರುಂ ಪೊಡೆಯಂಗೆ ಕೊಟ್ಟುಭಾನೆಗೆ ತಲೆಗೊಟ್ಟರು '' ಎಂದು ಹೇಳಲಾಗಿದೆ.[40] ಒಡೆಯನಿಗಾಗಿ ಮಡಿದ ಕಟಿಗಚಟಂಯನಾಯಕನ ಪತ್ನಿ ಸತಿಹೋದಳೆಂದು ಈ ಸ್ಮಾರಕಶಿಲ್ಪದ ಹಿನ್ನೆಲೆಯಲ್ಲಿ ಹೇಳಬಹುದಾಗಿದೆ ( ಚಿತ್ರ 53) ಕ್ರಿ.ಶ. 1286 ರ ಬೆಳಗಾವಿ ಶಾಸನವೊಂದು ''ಯಲ್ಲಬಾಯಿಯ ಕುಮಾರ ಸಕಳಗುಣ ಸಂಪನ್ನನಪ್ಪ ಗಣೇಶ್ವರನು ಆತನ ಪ್ರಾಣೇಶ್ವರಿ ಜೋಂಮಾಯಿ ಕೂಡಿ ಪತಿವ್ರತಾಗುಣದಿಂ ಅಗ್ನಿಪ್ರವೇಶ ಮಾಡಿ ಸಂಗ್ರಾಮರಂಗದೊಳು ಸ್ವರ್ಗಪ್ರಾಪ್ತರಾದರು '' ಎಂದು ವಿವರಿಸುತ್ತದೆ.[41] ಇದು ಬಹುಶಃ ಸಂಗ್ರಾಮದಲ್ಲಿ ಮಡಿದ ಗಣೇಶ್ವರನೊಡನೆ ಅವನ ಪತ್ನಿ ಜೋಳಮಾಯಿ ಯುದ್ಧಭೂಮಿಯಲ್ಲಿಯೇ ಅಗ್ನಿಪ್ರವೇಶಮಾಡಿದ ಅಪರೂಪದ ವಿವರವನ್ನು ಕೊಡುವಂತಿದೆ. ಕ್ರಿ. ಶ. 1286 ಶಾಸನವೊಂದರಲ್ಲಿ ತುರುಗೋಳದಲ್ಲಿ ಸತ್ತ ಬೊಮ್ಮರಸನ ಮಡದಿ ''..... ಬಚನಾಯಕಿತ್ತಿ '''. 'ತೋಳುಕೆಯ್ಗೊಟ್ಟ' ವಿಷಯವಿದೆ.[42] ಶಂಕರನಹಳ್ಳಿ ಶಾಸನವೊಂದು ಸುರಿಗೆಯ ನಯಜನ ಮಗಳು ಚಿಯಕಸಾಯಿಯ ನಾಯಕನ ಮಗ ವೀರಪ್ಪ ಕೂಡ ಕಿಚ್ಚ ಪ್ರವೇಶಿಸಿದ್ದನ್ನು ಹೇಳುತ್ತದೆ.[43] ಹದಿಮೂರನೆಯ ಶತಮಾನಕ್ಕೆ ಸೇರಿದ, ಸಿಡೇನೂರು ಶಾಸನದಲ್ಲಿ ಚಂನಪ್ಪನ ಪತ್ನಿಯು, ಮುಡಿಗೊಂಡ ಶಾಸನದಲ್ಲಿ ಸ್ತ್ರೀಯೊಬ್ಬಳು, ಹಾದ್ರಿಹಳ್ಳಿ ಶಾಸನದಲ್ಲಿ ಸೋಮಾಯಿಯು, ಕೆಳವರಕೊಪ್ಪ ಶಾಸನದಲ್ಲಿ ಬೊಮ್ಮಕ್ಕನು ಸಹಗಮನಮಾಡಿಕೊಂಡ ವಿವರಗಳಿವೆ.[44] ಈ ಶತಮಾನದ ಮಲ್ಲಿಗಾರ ಗ್ರಾಮದ ಶಾಸನವೊಂದರಲ್ಲಿ ವ್ಯಕ್ತಿಯೊಬ್ಬನ ವೀರಮರಣದ ಉಲ್ಲೇಖವಿದೆ.[45] ಈ ಸ್ಮಾರಕವು ಸತಿಶಿಲ್ಪವನ್ನು ಒಳಗೊಂಡಿರುವುದನ್ನು ಕಾಣುತ್ತೇವೆ. ಇದರಿಂದಾಗಿ ವೀರನ ಪತ್ನಿ ಸಹಗಮನಗೊಂಡಿದ್ದಾಳೆಂದು ಹೇಳಬಹುದಾಗಿದೆ. ಇದೇ ರೀತಿ, ನಿಡನೇಗಿಲ್ಲ ಮಾಸ್ತಿಕಲ್ಲಿನ ಪಾಠದಲ್ಲಿ ಬೀರಗೌಡನ ಮಗ ಮಲೆಯನಾಯಕನ ಉಲ್ಲೇಖ ಮಾತ್ರ ಇರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[46] ಬಾಚಹಳ್ಳಿ ಶಾಸನವೊಂದರಲ್ಲಿ ಸತಿಯ ಅಗ್ನಿಪ್ರವೇಶದ ಸೂಚನೆ ಇದೆ.[47] ಈ ಸ್ಮಾರಕಶಿಲೆಯ ಪಾಠ ಅತೀ ತ್ರುಟಿತಗೊಂಡಿರುವುದರಿಂದ ಅರ್ಥ ಸ್ಪಷ್ಟವಾಗುವುದಿಲ್ಲ. ಕ್ರಿ. ಶ. 1300 ರ ದುಮ್ಮಳ್ಳಿ ಶಾಸನವೊಂದು ಹೊಯ್ಸಳ ವೀರರಾಮನಾಥ ಮಡಿಯಲು ಅವನ ರಾಣಿಯರು ಸತಿಹೋದುದನ್ನು ತಿಳಿಸುತ್ತದೆ.[48] ಹೀಗೆ ಹದಿಮೂರನೆಯ ಶತಮಾನದ ಕರ್ನಾಟಕದಲ್ಲಿ ಸತಿಘಟನೆಗಳು ಜರುಗಿರುವುದು ಶಾಸನಗಳಿಂದ ತಿಳಿದು ಬರುತ್ತದೆ.

ವಿಜಯನಗರ ಸಾಮ್ರಾಜ್ಯಕಾಲದಲ್ಲಿ ಸತಿಘಟನೆಗಳು:

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವರೆಗೆ ಕರ್ನಾಟಕದಲ್ಲಿ ಒಟ್ಟು ನಾಲ್ವತ್ತು ಸತಿಘಟನೆಗಳು ಜರುಗಿರುವುದು ಶಾಸನಗಳಿಂದ ತಿಳಿದುಬರುತ್ತದೆ. ವಿಜಯನಗರ ಕಾಲದಲ್ಲಿ (ಕ್ರಿ.ಶ. 1336–ಕ್ರಿ.ಶ.1646) ಇವುಗಳ ಸಂಖ್ಯೆ ಹೆಚ್ಚುತ್ತ ಹೋಯಿತು. ಈ ಕಾಲದಲ್ಲಿ ಒಟ್ಟುತೊಂಬತ್ತೊಂದು ಸತಿಘಟನೆಗಳು ಜರುಗಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಈ ಸಾಮ್ರಾಜ್ಯವು ಮುಖ್ಯವಾಗಿ ಹಿಂದೂಧರ್ಮರಕ್ಷಣೆಗಾಗಿ ಉದಯಗೊಂಡದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ. ಇದು ಪರಕೀಯ ಆಕ್ರಮಣಗಳಿಗೆ ಎದುರಿಸಿ ನಿಂತು ಹೋರಾಡಿತು. ಮುಸ್ಲಿಂ ಅರಸರೊಡನೆ ವಿಜಯನಗರ ಅರಸರು ಹೋರಾಡಿದ ಸಂಘರ್ಷಣೆಯುಗ ಇದಾಗಿದೆ. ಈ ಕಾಲದಲ್ಲಿ ಯುದ್ಧವು ಕರ್ನಾಟಕದ ಜನಜೀವನದ ಒಂದು ಅಂಗವಾಗಿ ಬೆಳೆದು ಬಂದಿತ್ತು. ಹೀಗಾಗಿ ಯುದ್ಧವೀರರ ಪತ್ನಿಯರು ಸತಿಹೋಗುವುದು ಈ ಕಾಲದಲ್ಲಿ ಸಹಜವಾಗಿಯೇ ಹೆಚ್ಚಾಗಿರಬೇಕು.

ಕ್ರಿ. ಶ. 1354 ರ ಹಿರೇಆವಲಿ ಶಾಸನವು ವಿಜಯನಗರ ಕಾಲದ ಮೊಟ್ಟ ಮೊದಲನೆಯ ಸತಿಉಲ್ಲೇಖವುಳ್ಳದಾಗಿದೆ.[49] ಈ ಶಾಸನವು ಶ್ರೀವೀರಹರಿಯಪ್ಪವೊಡೆಯರು ರಾಜ್ಯವಾಳುತ್ತಿದ್ದಾಗ, ಅವಲಿಗ್ರಾಮದ ಕಾಮಗೌಡನ ಮೊಮ್ಮಗನೂ ಸಿರಿಯಮಗವುಡನ ಮಗನೂ ಆದ ಮಲಗವುಡನು ಸನ್ಯಾಸನ ಮರಣಹೊಂದಿದ್ದನೆಂದೂ ಆಗ ಅವನ ಪತ್ನಿ 'ಚೆಂನಕ್ಕ' ಸಹಗಮನ ಮಾಡಿಕೊಂಡಳೆಂದೂ ಹೇಳುತ್ತದೆ.[50] ಇದೇ ಊರಿನಲ್ಲಿಯ ಕ್ರಿ. ಶ. 1376 ರಲ್ಲಿಯ ಇನ್ನೊಂದು ಶಾಸನವು, ಬೀಚಿಗೌಂಡನು ಪಂಚನಮಸ್ಕಾರದಿಂದ ಮಡಿಯಲಾಗಿ ಆತನ ಕಿರಿಯ ಮದವಳಿಗೆ ಮುದಿಗೌಂಡಿ ಸಹಗಮನಹೊಂದಿದಳೆಂದು ತಿಳಿಸುತ್ತದೆ. ಈ ಕಾಲದಲ್ಲಿ ಬುಕ್ಕರಾಯ ವಿಜಯನಗರವನ್ನು ಆಳುತ್ತಿದ್ದನೆಂದು ಈ ಶಾಸನವು ಉಲ್ಲೇಖಿಸುತ್ತದೆ. ಇವೆರಡೂ ಶಾಸನಗಳು ಜೈನಸಮಾಧಿಮರಣವನ್ನು ಹೇಳುತ್ತವೆ. ಹಾಗೆ ಮರಣಹೊಂದಿದವರ ಪತ್ನಿಯರು ಸಹಗಮನಮಾಡಿಕೊಂಡಿರುವುದು ಇಲ್ಲಿಯ ವಿಶೇಷವಾಗಿದೆ. ವಿಜಯನಗರಕಾಲದಲ್ಲಿ ಸತಿ ಆಚರಣೆಯು ಜೈನರಲ್ಲಿಯೂ ನಡೆದುಕೊಂಡು ಬಂದಿರುವುದು ಈ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಚೆಂನಕ್ಕ ಮತ್ತು ಮುದಿಗೌಂಡಿ ಇಬ್ಬರೂ ಒಂದೇ ಊರಿನ ಸೊಸೆಯರಾಗಿದ್ದು ಸಹಗಮನಹೊಂದಿದವರಾಗಿದ್ದಾರೆ. ಚನ್ನಕ್ಕ ಕ್ರಿ.ಶ. 1354 ರಲ್ಲಿ ಸತಿಹೋಗಿದ್ದರೆ ಮುದಿಗೌಂಡಿ ಕ್ರಿ.ಶ. 1376 ರಲ್ಲಿ ಸತಿಹೋಗಿದ್ದಾಳೆ. ಇವೆರಡು ಸತಿಘಟನೆಗಳ ಮಧ್ಯೆ

ಇಪ್ಪತ್ತೆರಡು ವರ್ಷಗಳ ಅಂತರವಿದೆ. ಬಹುಶಃ ಮುದಿಯಗೌಡಿಯು ಚಿನ್ನಕ್ಕಳ ಸಹಗಮನ ಘಟನೆಯನ್ನು ಕಂಡವಳಾಗಿರಬೇಕು.

ಕ್ರಿ.ಶ. 1362 ರ ಅರುಹನಹಳ್ಳಿ ಶಾಸನ ಬೈಚಪ್ಪನ ಪತ್ನಿ 'ಬೈಯಿಚಕ್ಕ'ನ ಸಹಗಮನವನ್ನು ತಿಳಿಸುತ್ತದೆ.[52] ಬುಕ್ಕರಾಯನ ಕಾಲದಲ್ಲಿಯ ಕ್ರಿ. ಶ. 1377 ರ ಆರಗ ಶಾಸನವೊಂದು ''ವೇದಗಿರಿ ವಿರುಪಣ ಒಡೆಯರ ಕೂಡಿ ಮಂಜಾದೇವಿ ಸ್ವರ್ಗ್ಗವನೊಳ್ಗೊಂಡಳು'' ಎಂದು ತಿಳಿಸುತ್ತದೆ.[53] ಈ ಸತಿಘಟನೆಯ ಮರು ವರ್ಷದಲ್ಲಿ ತುಂಬುರ-ಹೊಸೂರಿನಲ್ಲಿ ಇನ್ನೊಂದು ಸತಿಘಟನೆ ಜರುಗಿದ ಉಲ್ಲೇಖ ಕ್ರಿ.ಶ.1376 ರ ಶಾಸನದಲ್ಲಿದೆ.[54] ಕ್ರಿ. ಶ. 1381 ರಲ್ಲಿ ಪೊಲಿಯನಾಯಕ ಮತ್ತು ಸಿಂಗಣರ ಪತ್ನಿಯರು, ಮತ್ತು ಮೊಲೆಯನಾಯಕನ ಪತ್ನಿ ಆಚಿನಾಗತಿಯು ಸಹಗಮನಗೊಂಡಿದ್ದನ್ನು ಭೈರವನಪಾದದ ಶಾಸನಗಳೆರಡು ತಿಳಿಸುತ್ತವೆ.[53] ಕ್ರಿ. ಶ. 1382 ರ ಮುತ್ತೂರು ಶಾಸನವು ಬೊಂಮಯ್ಯನ ಪತ್ನಿ ಕಾಮಾಯಿ ಕಿಚ್ಚು ಪ್ರವೇಶಿಸಿದ್ದನ್ನು ಹೇಳುತ್ತದೆ.[56] ಕ್ರಿ.ಶ.1383 ರ ಶಾಸನವು ನುಂಕಗೌಡ ಮರಣಹೊಂದಲಾಗಿ ಅವನ ಅರಸಿ ಅಗ್ನಿಪ್ರವೇಶ ಮಾಡಿದಳೆಂದು ತಿಳಿಸುತ್ತದೆ.[57] ಕ್ರಿ.ಶ. 1384 ಥವನಗುಂಡಿ ಶಾಸನವೊಂದು ಮಲ್ಲಪ್ಪನು ಸ್ವರ್ಗಸ್ಥನಾದುದನ್ನು ಸೂಚಿಸುತ್ತದೆ.[58] ಈ ಸ್ಮಾರಕ ಶಿಲೆಯಲ್ಲಿ ಮಲ್ಲಪ್ಪನ ಪತ್ನಿಯರು ಮೂವರು ಸತಿ ಹೋದುದನ್ನು ಶಿಲ್ಪದ ಮೂಲಕ ತೋರಿಸಲಾಗಿದೆ. ( ಚಿತ್ರ — 54). ಶಾಸನವು ತ್ರುಟಿತವಾಗಿರುವುದರಿಂದ ಇಲ್ಲಿಯ ವಿಷಯ ಸ್ಪಷ್ಟಗೊಳ್ಳುವುದಿಲ್ಲ. ಕ್ರಿ.ಶ. 1386 ರ ಶಾಸನವು ಬೊಮ್ಮಕ್ಕನ ಸಹಗಮನವನ್ನು ತಿಳಿಸುತ್ತದೆ.[59] ಕ್ರಿ.ಶ. 1387 ರ ಚಿಟ್ಟೂರು ಶಾಸನವು ಅತೀ ತ್ರುಟಿತಗೊಂಡಿರುವುದರಿಂದ ಅರ್ಥಸ್ಪಷ್ಟಗೊಳ್ಳುವುದಿಲ್ಲ[60] ಆದರೆ ಈ ಸ್ಮಾರಕಶಿಲೆ ಸತಿಶಿಲ್ಪವನ್ನೊಳಗೊಂಡಿದ್ದರಿಂದ ಇದು ಸತಿಘಟನೆಯನ್ನು ನಿರೂಪಿಸುತ್ತದೆ ಎಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಹರಿಹರರಾಯನ ಆಳಿಕೆಯ ಕಾಲದಲ್ಲಿ ಕ್ರಿ.ಶ. 1388 ರ ಒಂದೇ ವರ್ಷದಲ್ಲಿ ಮೂರು ಸತಿಘಟನೆಗಳು ಜರುಗಿದ ಕುರಿತಾಗಿ ಶಾಸನಗಳು ತಿಳಿಸುತ್ತವೆ. ಚಿಕ್ಕಗೊಂಡನ ಮಗ ಕೋವಿಕಾಳಿದೇವೆಯನಯ್ಯನು ಸರ್ಪಕಚ್ಚಿ ಮರಣಹೊಂದಲಾಗಿ ಆತನ ಸತಿ 'ಮುದಿಯನಕೆತಿ' ಮಹಾಸತಿಯಾದಳೆಂದು ದುಗೂರುಶಾಸನ ಹೇಳುತ್ತದೆ.[61] ಹಿರೇಆವಲಿ ಶಾಸನವು ರಾಯನ ಮದವಳಿಗೆಯು ಮತ್ತು ಸಂಡದಶಾಸನವು ಮಾಳೆಯಗೌಡನ ಪತ್ನಿ ಮಲ್ಲಾಯಿತಿಯು ಸತಿ ಹೋದುದನ್ನು ತಿಳಿಸುತ್ತದೆ.[62] ಕ್ರಿ.ಶ. 1391 ರ ಶಾಸನವು ಚೊಕ್ಕಗೌಡನ ಪತ್ನಿಯು

ಸಹಗಮನವನ್ನು ಹೇಳಿದರೆ ಕ್ರಿ.ಶ. 1393 ರ ಶಾಸನವು ಬೈಚನಾಯ್ಕನ ಪತ್ನಿಯು ಸಹಗಮನವನ್ನು ಹೇಳುತ್ತದೆ.[63] ಕ್ರಿ.ಶ.1397 ರ ಶಾಸನವೊಂದು ಹರಿಯಮಗವುಡನ ಅರಸಿಯರಾದ ಬಾಯಿಬೆ, ಲಖಮಾಯಿಗಳು ಸಹಗಮನಮಾಡಿಕೊಂಡದ್ದನ್ನು,[64] ಕ್ರಿ.ಶ. 1399 ರ ಶಾಸನವು ಪೋಚಿದೇವನು ಪೆಣ್ಬುಯಲಿನಲ್ಲಿ ಮರಣಹೊಂದಲಾಗಿ ಆತನ ಸತಿ 'ವಿಜಯ'' ಸತಿಹೋದುದನ್ನು ತಿಳಿಸುತ್ತದೆ.[65] ಇದೇ ರೀತಿ ಹದಿನಾಲ್ಕನೆಯ ಶತಮಾನಕ್ಕೆ ಸೇರಿದ, ತವನಂದಿಗ್ರಾಮದ ಶಾಸನ 'ಮಹಾಲಕು'ಯು, ಇಟಗಿ ಶಾಸನ 'ಚಿಂವಾಯಿ' ಯುಸಹಗಮನಮಾಡಿಕೊಂಡದ್ದನ್ನು ತಿಳಿಸುತ್ತವೆ.[66] ಇದೇ ಶತಮಾನಕ್ಕೆ ಸೇರಿದ ಕುಂದಗೋಳಿನ ಮಾಸ್ತಿಕಲ್ಲಿನ ಶಾಸನವೊಂದು ತ್ರುಟಿತವಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[67]

ಹದಿನೈದನೆಯ ಶತಮಾನದಲ್ಲಿ ಸಹಗಮನಗಳು ಕರ್ನಾಟಕದಲ್ಲಿ ಇನ್ನು ಹೆಚ್ಚಿನ ಪ್ರಮಾಣದಲ್ಲಿ ಘಟಿಸಿದುದು ಶಾಸನಗಳಿಂದ ತಿಳಿದುಬರುತ್ತದೆ. ಹದಿನಾಲ್ಕನೆಯ ಶತಮಾನದಲ್ಲಿ ಇಪ್ಪತ್ತೆರಡು ಸತಿಘಟನೆಗಳು ಜರುಗಿದರೆ ಹದಿನೈದನೆಯ ಶತಮಾನದಲ್ಲಿ ಐವತ್ತೆಂಟು ಸತಿಘಟನೆಗಳು ಜರುಗಿವೆ. ಕ್ರಿ. ಶ. 1401 ರಲ್ಲಿ ಸಂಡದ ಎಂಬ ಹಳ್ಳಿಯಲ್ಲಿ ಎರಡು ಸತಿಘಟನೆಗಳು ನಡೆದಿವೆ. ಒಂದು ಶಾಸನದಲ್ಲಿ ಬೋಳಗೌಡರ ಮಗ ಬೋಜಗೌಡರು ಸ್ವರ್ಗಸ್ಥರಾಗಲು ಅವರ ಮದವಳಿಗೆ ತ್ಯಾಬುವನು (?) ಸತಿಹೋದುದನ್ನು ತಿಳಿಸಲಾಗಿದೆ. ಆಗ ವೀರ ಹರಿಹರರಾಯರು ರಾಜ್ಯ ವಾಳುತ್ತಿದ್ದರೆಂದು ಶಾಸನ ತಿಳಿಸುತ್ತದೆ.[68] ಇನ್ನೊಂದು ಶಾಸನದಲ್ಲಿ ಜಕ್ಕಗೌಡನಮಗ ನಾಗಪ್ಪನು ಸ್ವರ್ಗಸ್ಥನಾಗಲು ಆತನ ಮದವಳಿಗೆ ತಂಗಿಗುಡಿ ಸಹಗಮನ ಮಾಡಿದಳೆಂದು ಹೇಳಲಾಗಿದೆ.[69] ಕ್ರಿ.ಶ. 1402 ರ ಶಾಸನವೊಂದರಲ್ಲಿ ಕಂಪೆಯನಾಯ್ಕ ಮತ್ತು ಸಿಂಗೆಯನಾಯ್ಕ ತಂದೆಮಕ್ಕಳು ಮಡಿದ ವಿವರಗಳಿವೆ.[70] ಈ ಸ್ಮಾರಕ ಶಿಲೆಯಲ್ಲಿ ಸತಿಶಿಲ್ಪವನ್ನು ಬಿಡಿಸಲಾಗಿದೆ. ಕಾರಣ ಈ ಸ್ಮಾರಕವು ಸತಿಹೋದುದನ್ನು ಧ್ವನಿಸುತ್ತದೆ ಎಂದು ಹೇಳಬಹುದಾಗಿದೆ. ಈ ಘಟನೆಯ ಆರುವರ್ಷಗಳ ಅನಂತರದಲ್ಲಿ ಜರುಗಿದ ಸತಿಘಟನೆಯನ್ನು ತಿಳಿಸುವ ಕುಪ್ಪಟೂರು ಸ್ಮಾರಕಶಿಲೆಯನ್ನು ಇಲ್ಲಿ ಸ್ಮರಿಸಬಹುದಾಗಿದೆ. ಈ ಸ್ಮಾರಕದ ಶಾಸನವು ಸತಿವಿಷಯವನ್ನು ತಿಳಿಸುವುದಿಲ್ಲ.[71] ಆದರೆ ಇದರ ಶಿಲ್ಪವು ಸತಿಘಟನೆಯನ್ನು ಸಾರುತ್ತದೆ. ಕ್ರಿ.ಶ. 1402 ರಲ್ಲಿ ಬೊಮ್ಮಣನ ಮದವಳಿಗೆ ನಾಗಾಯಿ, ಕ್ರಿ.ಶ. 1403 ರಲ್ಲಿ ಬೊಂಮನಾಯಕನ ಮಗಳು ಕಾಳಿದೇವಿ ಮತ್ತು ಚಿಕ್ಕರಸಿಗಂಬಾಯಿ ಸಹಗಮನಮಾಡಿಕೊಂಡದ್ದನ್ನು ಶಾಸನಗಳು ತಿಳಿಸುತ್ತವೆ.[72] ಕ್ರಿ.ಶ.1404 ರಲ್ಲಿ ರಾಮನಾಯಕಿ ಲಿಂಗೈಕ್ಯನಾದಾಗ ಆತನಹೆಂಡತಿ ಮಲದೇವಿ 'ನಡಸಮಾಧಿ'.[0]

---

0 'ನಡಸಮಾಧಿ' ಎಂಬುದನ್ನು ಯಾವ ರೀತಿ ಅರ್ಥೈಸಬೇಕೋ ತಿಳಿಯದು.

ಹೋದಳೆಂದು ಹೆಡಿಯಾಲ ಶಾಸನ ತಿಳಿಸುತ್ತದೆ.[73] ಕ್ರಿ.ಶ. 1407 ರ ಶಾಸನವೊಂದು “(ದೇವಿ) ನಾಯಕ ಅವನ ಮದವಳಿಗೆ ನ್ಯಾಗಾಯಿ ದೇವಮಾಯಿಗಳು ಮಹಾಸತಿಯರಾಗಿ ಆತನ ಸಂಘಾತಸ್ವರ್ಗಸ್ಥರಾದರು” ಎಂದು ಹೇಳುತ್ತದೆ.[74] ಕ್ರಿ.ಶ. 1408 ರ ವರಾಹ ಶಾಸನವೊಂದು ಚಿಕ್ಕಸೆಟ್ಟಿಯ ಪತ್ನಿ ಚಿಕ್ಕವ್ವೆ ಸಹಗಮನಗೊಂಡದ್ದನ್ನು ತಿಳಿಸುತ್ತದೆ.[75] ವೀರದೇವರಾಯರ ಕಾಲದ ಕ್ರಿ.ಶ. 1410 ರ ದುಗೂರು ಶಾಸನವು ನಾರಪ್ಪನಾಯಕರ ಮದವಳಿಗೆ ಜೊಂವಕ್ಕ ಮಹಾಸತಿಯಾದುದನ್ನು ಹೇಳುತ್ತದೆ.[76] ಇದೇ ಅರಸನ ಆಳಿಕೆಯ ಇದೇ ವರ್ಷದಲ್ಲಿ ಮಾದಪ್ಪನ ಪತ್ನಿ ಮಸಣಕ್ಕ ಸತಿಹೋದುದನ್ನು ಮರೂರ ಶಾಸನ ತಿಳಿಸುತ್ತದೆ.[77] ಇದೇ ವರ್ಷದಲ್ಲಿ ಸಾಯಕ್ಕನು ಮಾಸ್ತಿಯಾದುದನ್ನು ಜಂಬನೆಗ್ರಾಮದ ಶಾಸನವು, ಮಾರಗಾವುಂಡನ ಪತ್ನಿಯು ಸಹಗಮನವನ್ನು ನಿಟೂರಿನ ಶಾಸನವು ತಿಳಿಸುತ್ತವೆ.[78] ಹೀಗೆ ಹದಿನೈದನೆಯ ಶತಮಾನದ ಮೊದಲನೆಯ ಹತ್ತು ವರ್ಷಗಳಲ್ಲಿಯೇ ಹದಿನಾಲ್ಕು ಸತಿಘಟನೆಗಳು ಜರುಗಿರುವುದನ್ನು ಕಾಣುತ್ತೇವೆ.

ಕ್ರಿ.ಶ. 1411 ರ ಶಾಸನವೊಂದು, ವೀರದೇವರಾಯರಕಾಲದಲ್ಲಿ ಅವ್ವಿಗೌಡಿ ಸಹಗಮನವಮಾಡಿಕೊಂಡದ್ದನ್ನು ತಿಳಿಸುತ್ತದೆ.[79] ಈ ಸತಿಘಟನೆಯ ಮರುವರ್ಷದಲ್ಲಿ ಜರುಗಿದ ಸತಿಘಟನೆಯೊಂದನ್ನು ಮಂಗಳೂರು ಶಾಸನವು “ಸೆಟ್ಟಿ ಒಡರು ಸ್ವರ್ಗಸ್ಥರಾಗಲು ಆತನ ಮದವಳಿಗೆ” ಯಂಗೌಡಿಅಗ್ನಿಪ್ರವೇಶವನು ಮಾಡಿದಳು” ಎಂದು ವಿವರಿಸುತ್ತದೆ.[80] ಕ್ರಿ.ಶ. 1416 ರ ಶಾಸನವೊಂದು ‘ಹರಿಮಾಇ’ಯ ಸಹಗಮನವನ್ನು ತಿಳಿಸುತ್ತದೆ.[81] ರಾಮಗೌಡನ ಸ್ತ್ರೀ ಬೊಮ್ಮಗೌಡಿ ಸಹಗಮನಮಾಡಿಕೊಂಡದ್ದನ್ನು ಕ್ರಿ.ಶ. 1417 ರ ಹಿರೇಹಾರಕ ಶಾಸನವು ಹೇಳುತ್ತದೆ. ಇದೇ ವರ್ಷದಲ್ಲಿ ನಾಗಕ್ಕ ಸತಿಹೋದುದನ್ನು ಮೆಣಗರವಳ್ಳಿ ಶಾಸನವು ಮತ್ತು ಬುತಿಖರನು ಸ್ವರ್ಗಸ್ಥನಾಗಲು ಅವನ ಮೂರುಜನ ಪತ್ನಿಯರು ತೊಳಕಯ್ಕೊಟ್ಟುದನ್ನು ಮುರಶಾಸನವು ತಿಳಿಸುತ್ತವೆ.[83] ಕ್ರಿ.ಶ. 1419 ರ ಕೆಳದಿ ಶಾಸನದಲ್ಲಿ ರಾಮಕ್ಕ ಮತ್ತು ಕ್ರಿ.ಶ.1420 ರ ಕಿಪಡಿ ಶಾಸನದಲ್ಲಿ ಗೌರಾಯಿ ಸಹಗಮನಮಾಡಿಕೊಂಡ ವಿವರಗಳಿವೆ.[84] ಹೀಗೆ ಕ್ರಿ.ಶ.1411 ರಿಂದ ಕ್ರಿ.ಶ. 1420 ರ ಅವಧಿಯಲ್ಲಿ ಒಟ್ಟು ಎಂಟು ಸತಿಘಟನೆಗಳು ಜರುಗಿರುವುದನ್ನು ಕಾಣುತ್ತೇವೆ.

ಕ್ರಿ.ಶ. 1421 ರಿಂದ ಕ್ರಿ.ಶ.1430 ರ ಮಧ್ಯದ ಹತ್ತು ವರ್ಷಗಳಲ್ಲಿ ಏಳು ಸತಿಘಟನೆಗಳು ಘಟಿಸಿದ್ದನ್ನು ಶಾಸನಗಳು ಉಲ್ಲೇಖಿಸುತ್ತವೆ. ಕ್ರಿ.ಶ. 1422 ರ ಬೆಳಗಾಮಿ

ಶಾಸನವು ಬಳ್ಳಿದೇವನ ಮಯೂವರು ಪತ್ನಿಯರು 'ಸಮಾಧಿಗೊಂಡಲ'ನ್ನು ಕೊಟ್ಟದ್ದನ್ನು ಹೇಳುತ್ತದೆ,[85] ಕ್ರಿ.ಶ.1423 ರ ಶಾಸನವು ಕುಂಬಾಳಿ ಮಹಬಳದೇವನ ನೊಣಿ ಚಂಡವೆ, ಕ್ರಿ.ಶ. 1424 ರ ಶಾಸನವು ಬಯಿರಗೌಡರ ಪತ್ನಿ, ಕ್ರಿ.ಶ.1425 ರ ಶಾಸನವು ಕಾಮಾಯಿ ಸತಿಹೋದುದನ್ನು ತಿಳಿಸುತ್ತವೆ.[86] ಕ್ರಿ.ಶ. 1429 ರ ಶಾಸನವೊಂದು ಮಾದಿಗಸಿ (?) ಸ್ವರ್ಗಸ್ಥನಾಗಲು ಆತನ ಪತ್ನಿ ಸ್ವರ್ಗಸ್ಥಳಾದುದನ್ನು ಹೇಳುತ್ತದೆ.[87] ಇದೇ ವರ್ಷದಲ್ಲಿಯೇ ಇನ್ನೊಂದು ಸತಿಘಟನೆ ಜರುಗಿರುವುದು ಎರಿಯೂರು ಶಾಸನದಲ್ಲಿ ಬರುತ್ತದೆ.[88] ಕ್ರಿ.ಶ. 1430 ರ ಶಾಸನವೊಂದು ಪ್ರಭುಗವುಡನ ಪತ್ನಿ ಮಾಲ... ಬ್ಬೆಯ ಸಹಗಮನವನ್ನು ತಿಳಿಸುತ್ತದೆ.[89]

ವಿಜಯನಗರವನ್ನು ವೀರಪ್ರತಾಪದೇವರಾಯರು ಆಳುತ್ತಿದ್ದಾಗ, ಕ್ರಿ.ಶ.1431 ರಲ್ಲಿ ಬೊಮ್ಮಗೌಡರ ಮದವಳಿಗೆ ಬೊಮ್ಮಿಗೌಡಿ ಸಹಗಮನ ಮಾಡಿಕೊಂಡದ್ದನ್ನು ಕಾನಲೆಶಾಸನ ತಿಳಿಸುತ್ತದೆ.[90] ಕ್ರಿ.ಶ. 1432 ರ ಕುಂಬತಿಗ್ರಾಮದ ಶಾಸನದಲ್ಲಿ ಚೂಡನಾಯಕಿ, ಕ್ರಿ.ಶ.1434ರ ನಿಡಗೋಡು ಶಾಸನದಲ್ಲಿ 'ಸಿದ್ದಣ'ನೆಂಬವನ ತಂಗಿ, ಕ್ರಿ.ಶ.1437 ರ ಹುನವಳ್ಳಿ ಶಾಸನದಲ್ಲಿ ಕಾಮೆಯನಾಕಿತ್ತಿ ಸಹಗಮನಮಾಡಿಕೊಂಡಿರುವ ಉಲ್ಲೇಖಗಳಿವೆ [91] ಕ್ರಿ.ಶ.1435 ರ ಶಾಸನವೊಂದು ಕಮಗೌಡರು ಸ್ವರ್ಗಸ್ಥರಾದುದನ್ನು ತಿಳಿಸುತ್ತದೆ. ಈ ಸ್ಮಾರಕವು ಸತಿಶಿಲ್ಪವನ್ನು ಒಳಗೊಂಡಿದ್ದರಿಂದ, ಇದು ಸತಿಘಟನೆಯನ್ನು ಧ್ವನಿಸುತ್ತದೆ ಎಂದು ಹೇಳಬಹುದಾಗಿದೆ.[92] ಕ್ರಿ.ಶ.1438 ರಲ್ಲಿ ಎರಡು ಸತಿಘಟನೆಗಳು ಜರುಗಿರುವುದನ್ನು ಹುನವಳ್ಳಿ ಮತ್ತು ಹಿರೇಕೆರೂರ ಶಾಸನಗಳು ತಿಳಿಸುತ್ತವೆ.[93] ಕ್ರಿ.ಶ.1439 ರಲ್ಲಿಯೂ ಎರಡು ಸತಿಘಟನೆಗಳು ಜರುಗಿರುವುದನ್ನು ಶಾಸನಗಳು ಸೂಚಿಸುತ್ತವೆ. ಒಂದರಲ್ಲಿ ಭೈರಾಯಿ ಸಹಗಮನ ಮಾಡಿಕೊಂಡದ್ದನ್ನು ಇನ್ನೊಂದರಲ್ಲಿ ಮಂಚಾಯಿ ಸತಿಹೋದುದನ್ನು ಹೇಳಲಾಗಿದೆ.[94] ಹೀಗೆ ಕ್ರಿ.ಶ 1431 ರಿಂದ ಕ್ರಿ.ಶ.1440 ರ ಮಧ್ಯದ ಹತ್ತುವರ್ಷಗಳಲ್ಲಿ ಒಂಬತ್ತು ಸತಿಘಟನೆಗಳು ಜರುಗಿರುವುದು ಕಂಡುಬರುತ್ತದೆ.

ಕ್ರಿ.ಶ. 1442 ರ ಹರೂರ ಶಾಸನದಲ್ಲಿ ಬಯಿರವಗೌಡಿ, ಕ್ರಿ.ಶ.1444 ರ ಹುನವಳ್ಳಿ ಶಾಸನದಲ್ಲಿ ಚೂಡಗೌಡನ ಪತ್ನಿ ಸಹಗಮನ ಮಾಡಿದ ವಿವರಗಳಿವೆ.[95] ಕ್ರಿ.ಶ.1445 ರ ಶಾಸನವೊಂದರಲ್ಲಿ ಬೊಮ್ಮರಸಗೌಡನ ಪತ್ನಿ ಬಲುಚಕ್ಕ ಸಹಗಮನ ಮಾಡಿದ ವಿಷಯವಿದೆ.[96] ಅವಳನ್ನು ಶಾಸನವು 'ಭೂತಳಗುಳ್ಳ ಯುವತಿಯರಸಿರೋಮಣಿ' ಎಂದು ಬಣ್ಣಿಸಿದೆ. ಇದೇ ವರ್ಷದಲ್ಲಿ ಭಯಿರವಗೌಡರ ಪತ್ನಿ ಭಯಿರಿಗೌಡಿ ಸಹಗಮನ ಮಾಡಿದ್ದನ್ನು ಹಿರೇಹಾರಕ ಶಾಸನ

ತಿಳಿಸುತ್ತದೆ; ಕ್ರಿ.ಶ. 1447 ರ ಬಂದಲಿಕೆ ಶಾಸನದಲ್ಲಿ ಮಾದವರಸನಾಯ್ಕರ ಇಬ್ಬರು ಪತ್ನಿಯರಾದ ಬುಳ್ಳರಸಿ ಮತ್ತು ಕಂಚಾಯಿಗಳು "ಗಂಡನ ವಿಜಯಶ್ರೀಯುನೆಯ್ದಿ ಸುರಲೋಕಪ್ರಾಪ್ತರಾದರು" ಎಂದು ಹೇಳಲಾಗಿದೆ.[98] ಇದೇ ವರ್ಷದಲ್ಲಿ ಮಲೆಯನಾಯಕ ಮತ್ತು ಇನ್ನೊಬ್ಬ ವ್ಯಕ್ತಿ ಹುಲಿಯೊಡನೆ ಹೋರಾಡಿ ಮಡಿಯಲಾಗಿ ಅವರ ಪತ್ನಿಯರು ಸಹಗಮನಗೊಂಡದ್ದನ್ನು ವರಾಹ ಶಾಸನವೊಂದು ತಿಳಿಸುತ್ತದೆ.[99] ಕ್ರಿ.ಶ. 1448 ರ ಕೊಂಡಗಳಲೆ ಶಾಸನವು ಮಾಡಿಗೊಂಡನು ತುರುಗಳ್ಳರೊಡನೆ ಹೋರಾಡಿ ಮಡಿಯಲಾಗಿ ಅವನ ಪತ್ನಿ ತಾಯಿಗೌಡಿ ಸಹಗಮನಮಾಡಿಕೊಂಡದ್ದನ್ನು ವಿವರಿಸುತ್ತದೆ.[100] ಕ್ರಿ.ಶ.1450 ರ ಶಾಸನವೊಂದರಲ್ಲಿ ಬಳಿಗೊಂಡಿಯ ಸಹಗಮನದ ವಿಷಯವಿದೆ.[101] ಕ್ರಿ.ಶ. 1441 ರಿಂದ ಕ್ರಿ.ಶ.1450 ರ ವರೆಗೆ — ಈ ಹತ್ತುವರ್ಷಗಳಲ್ಲಿ ಎಂಟು ಸತಿಘಟನೆಗಳು ಜರುಗಿರುವುದು ಶಾಸನಗಳಿಂದ ತಿಳಿದುಬರುತ್ತದೆ, ಹೀಗೆ ಹದಿನೈದನೆಯ ಶತಮಾನದ ಮಧ್ಯಭಾಗದವರೆಗೆ ಒಟ್ಟು ನಲ್ವತ್ತಾರು ಸತಿಘಟನೆಗಳು ಜರುಗಿರುವುದನ್ನು ಕಾಣುತ್ತೇವೆ. ಮುಂದಿನ ಅರ್ಧ ಶತಮಾನದಲ್ಲಿ (1451–1500) ಕೇವಲ ಹನ್ನೆರಡು ಸತಿಘಟನೆಗಳು ಜರುಗಿರುವುದು ಗಮನಕ್ಕೆ ಬರುತ್ತದೆ.

ಕ್ರಿ.ಶ. 1451 ರ ಹೆಗ್ಗೋಡು ಶಾಸನದಲ್ಲಿ, ಮಲ್ಲಿಕಾರ್ಜುನರಾಯರು ಆಳುತ್ತಿದ್ದಾಗ "ತಂಮಸೆಟ್ಟಿಯರು ಅವರಸತಿ ಬೊಮ್ಮಗೌಡಿಯರುಸಹಿತ ದೇವಲೋಕಕ್ಕೆ ಪ್ರಾಪಿತರಾದರು" ಎಂದು ಹೇಳಲಾಗಿದೆ.[102] ಇದೇ ವರ್ಷದಲ್ಲಿ ಕರಿಯನಾಯಕನ ಪತ್ನಿ ತೆಂಬಾಯಮ್ಮ ಸಹಗಮನ ಮಾಡಿದ ಉಲ್ಲೇಖ ಕುಗ್ವೆಹಳ್ಳಿ ಶಾಸನದಲ್ಲಿದೆ.[103] ಕ್ರಿ.ಶ. 1454ರ ಶಿರೂರ ಶಾಸನವು ಚೆಯಗೌಡಿ, ಕ್ರಿ.ಶ.1455 ರ ಮರತೂರು ಶಾಸನವು ಬೊಮ್ಮಿಗೌಡಿ ಸಹಗಮನ ಹೊಂದಿದ್ದನ್ನು ಉಲ್ಲೇಖಿಸುತ್ತವೆ.[104] ಕ್ರಿ.ಶ.1458 ರ ಶಾಸನವು ತಂಗಣಗೌಡಿಯ ಸಹಗಮನವನ್ನು ಸೂಚಿಸುತ್ತದೆ.[105] ಈ ಶಾಸನವು ಕುತೂಹಲಕರವಾದ ವಿಷಯವನ್ನು ತಿಳಿಸುವುದನ್ನು ಇಲ್ಲಿ ಗಮನಿಸಬಹುದಾಗಿದೆ. "ಕುಪ್ಪೆಯ ಬಮ್ಮಪ್ಪಗೌಡರ ಮಗ ಸಿರಿಯಗೌಡರೂ ದೇವರ ಪಾದವನು ಕೂಡಿದನು, ಆತನ ಮದವಳಿಗೆ ತಂಗಣಗೌಡಿಯು ಅಬೊಮ್ಮಗೌಡನ ಕೂಡೆ ಸಮಾಧಿಯನು ಕೂಳಿದಳು" ಎಂದು ಶಾಸನವು ವಿವರಿಸುತ್ತದೆ. ಇಲ್ಲಿ ಕುಪ್ಪೆಗ್ರಾಮದ ಬಮ್ಮಪ್ಪಗೌಡರ ಮಗನಾದ ಸಿರಿಯಗೌಡರು ಮರಣಗೊಂಡದ್ದು ಸ್ಪಷ್ಟವಿದೆ. ಆತನ ಪತ್ನಿ ತಂಗಣಗೌಡಿಯೂ ಸಮಾಧಿಮೂಲಕ ಸತಿಹೋಗಿರುವುದು ಸ್ಪಷ್ಟವಿದೆ. ಆದರೆ ಅವಳು ಸತಿಹೋಗುವಾಗ 'ಬೊಮ್ಮಗೌಡನ ಕೂಡೆ ಸಮಾಧಿಯನು ಕೂಳಿದಳು" ಎಂದು ಹೇಳಿರುವುದು ವಿಚಿತ್ರವಾಗಿ ತೋರುತ್ತದೆ.

ಗಂಡ ಮರಣ ಹೊಂದಲಾಗಿ ಅವಳು ಮಾವನಾದ ಬಮ್ಮಪ್ಪಗೌಡನೊಡನೆ ಕುಳಿತು ಸತಿ ಹೋದಳು ಎಂದು ಇಲ್ಲಿ ಅರ್ಥಹೊರಡುತ್ತದೆ. ಬಹುಶಃ ಸಿರಿಯಗೌಡ ಮರಣಹೊಂದಲಾಗಿ ಅವನ ತಂದೆಯೂ ಮರಣಹೊಂದಲು ನಿಶ್ಚಯಿಸಿದಂತೆ ತೋರುತ್ತದೆ. ಹೀಗಾಗಿ ಸೊಸೆ — ಮಾವ ಇಬ್ಬರು ಕೂಡಿ ಸಿರಿಯಗೌಡನ ಸಮಾಧಿಯಲ್ಲಿ ಕುಳಿತು ಮಣ್ಣುಮುಚ್ಚಿಸಿಕೊಂಡು ಮರಣಹೊಂದಿರಬೇಕು. ಮಗನಿಗಾಗಿ ತಂದೆ, ಗಂಡನಿಗಾಗಿ ಪತ್ನಿ ಮರಣಗೊಂಡ ಉದಾಹರಣೆ ಇದಾಗಿರಬೇಕು.

ಕ್ರಿ.ಶ. 1465 ರ ಕವಡಿ ಶಾಸನವು ''ಕವಡಿಯ ಬೆಳಗಾವುಂಡ ಮದವಳಿಗೆ ಲಾಖಯು ಹೆಗ್ಗಡಿಸತಿಗೊಡದುಲಿಂಗದ ಒಳಗಾದಳು'' ಎಂದು ಹೇಳುತ್ತದೆ.[106] ಕ್ರಿ.ಶ. 1478 ರ ಶಾಸನವೊಂದು ವಿರುಪಾಕ್ಷರಾಯರು ರಾಜ್ಯವನ್ನಾಳುತ್ತಿದ್ದಾಗ ಕೇಸವ.... ಗೌಡರ ಮಣ್ಯ ಸ್ತ್ರೀಯರು ಸಹಗಮನ ಮಾಡಿದ್ದನ್ನು ತಿಳಿಸುತ್ತದೆ.[107] ಕ್ರಿ.ಶ. ಸು. 1495 ರ ಶಾಸನವೊಂದು, ತಮ್ಮುಗನು ಸತಿಗೂಡಿ ಶಿವಪಾದಸೇರಿದ್ದನ್ನು ತಿಳಿಸುತ್ತದೆ.[108] ಇದೇ ರೀತಿ 15ನೆಯ ಶತಮಾನಕ್ಕೆ ಸೇರಿದ ಕಬ್ಬೂರ ಶಾಸನವೊಂದು, ಬೊಮ್ಮಗೌಡನ ಮದವಳಿಗೆ ಏಚಗೌಡಿಯ ಸಹಗಮನವನ್ನು ಉಲ್ಲೇಖಿಸುತ್ತದೆ.[109]

ಕ್ರಿ.ಶ. 1451 ರ ಹುನವಳ್ಳಿ ಶಾಸನ, ಕ್ರಿ.ಶ. 1457 ರ ಕಿಪಡಿಶಾಸನ, 1465 ರ ಬೆನ್ನೂರು ಶಾಸನ — ಇವು ಅತಿ ತ್ರುಟಿತವಾಗಿರುವುದರಿಂದ ಮತ್ತು ಅಸ್ಪಷ್ಟವಾಗಿರುವುದರಿಂದ ಇವು ಅಭಿವ್ಯಕ್ತಿಸುವ ವಿಷಯ ಸ್ಪಷ್ಟಗೊಳ್ಳುವುದಿಲ್ಲ.[110] ಆದರೆ ಈ ಸ್ಮಾರಕಗಳು ಮಾಸ್ತಿಶಿಲ್ಪಗಳನ್ನು ಕಂಡರಿಸಿದ್ದರಿಂದ ಇವು ಸತಿಘಟನೆಗಳನ್ನು ತಿಳಿಸುತ್ತವೆ ಎಂದು ಹೇಳಬಹುದಾಗಿದೆ.

ಕ್ರಿ.ಶ. 1506 ರ ಉದ್ರಿಗ್ರಾಮದ ಶಾಸನವೊಂದು ಮಲ್ಲಗೌಡನ ಮಗನ ಮರಣವನ್ನು ತಿಳಿಸುತ್ತದೆ.[111] ಈ ಸ್ಮಾರಕಶಿಲೆಯು ಮಾಸ್ತಿಶಿಲ್ಪವುಳ್ಳದಾಗಿದೆ. ಕಾರಣ ಮೃತನ ಪತ್ನಿ ಸತಿಹೋದುದು ಸ್ಪಷ್ಟವಾಗುತ್ತದೆ. ಕ್ರಿ.ಶ. 1509 ರ ಹರೂರ ಶಾಸನ ''ಬೊಮ್ಮಗೌಡ ಸ್ವರ್ಗಸ್ಥನಾದಲ್ಲಿ ಆತನ ಮದವಳಿಗೆ ಬೊಮ್ಮಿಗೌಡಿ ಸಮದಿಕುಳಿತು ಸ್ವರ್ಗಕ್ಕೆ ಸಂದಳು'' ಎಂದು ತಿಳಿಸುತ್ತದೆ.[112] ಚೆನ್ನಮಳಗುಂದದ ಕ್ರಿ.ಶ. 1520 ರ ಶಾಸನದಲ್ಲಿ ಸ್ತ್ರೀಯೊಬ್ಬಳ ಸಹಗಮನದ ವಿಷಯವಿದೆ.[113] ಕ್ರಿ.ಶ. 1582 ರ ಗೌಜಗ್ರಾಮದ

ಶಾಸನ ಬಾಚಿಯಕ್ಕನ ಸಹಗಮನವನ್ನು, ಕ್ರಿ. ಶ. 1586 ರ ಅರಸಾಳುಗ್ರಾಮದ ಶಾಸನವು ತಿಪ್ಪಯ್ಯನ ಮದವಳಿಗೆಯ ಸಹಗಮನವನ್ನು ತಿಳಿಸುತ್ತವೆ.[114] ಗುಳಿಡನ ಮದವಳಿಗೆಯರು ಸತಿಹೋದುದನ್ನು ತಿಳಿಸುವ ಮಾದಕಹಳ್ಳಿ ಶಾಸನ, ಗಂಗಗೌಡನ ಸೊಸೆ ತೋಳಕೈಗೊಟ್ಟಳು ಎಂದು ಹೇಳುವ ಸಂತೆಮೂವತ್ತೂರಿನ ಶಾಸನ, ಏಚಕ್ಕನ ಸಹಗಮನವನ್ನು ತಿಳಿಸುವ ಕಬ್ಬೂರ ಶಾಸನ — ಇವೆಲ್ಲ ಹದಿನಾರನೆಯ ಶತಮಾನಕ್ಕೆ ಸೇರಿದವುಗಳಾಗಿವೆ.[115] ಇದೇ ರೀತಿ ಬೊಮ್ಮ-ನಾಯಕನನ್ನು ಉಲ್ಲೇಖಿಸುವ ಹೆರೂರ ಮಾಸ್ತಿ ಸ್ಮಾರಕ ಶಿಲ್ಪ, ಮತ್ತು ಕಠಾರಿಜೀಯ ಹಾಗೂ ನಾಗಯ್ಯರ ಮರಣವನ್ನು ಹೇಳುವ ದಾಸನಕೊಪ್ಪ ಮಾಸ್ತಿಸ್ಮಾರಕ ಶಿಲ್ಪ ಇವರೆಡೂ ಹದಿನಾರನೆಯ ಶತಮಾನದವುಗಳಾಗಿವೆ.[116] ಈ ಮೇಲೆ ಉಲ್ಲೇಖಿಸಿದ ಮಾದಕಹಳ್ಳಿ, ಸಂತೆ ಮೂವತ್ತೂರು, ಕಬ್ಬೂರು, ಹೆರೂರ, ದಾಸನಕೊಪ್ಪ ಈ ಶಾಸನಗಳಿಂದ ನಿರ್ದಿಷ್ಟವಾದ ವರ್ಷವನ್ನು ತಿಳಿಯಲು ಸಾಧ್ಯವಾಗುವುದಿಲ್ಲ.

ಕ್ರಿ.ಶ. 1619 ರ ಕೆಳದಿ ಶಾಸನ "ದೇವರಾಯ ಒಡೆಯರು ಸ್ಥಿರರಾಜ್ಯಂಗೆಯ್ಯುತಮಿರ್ದಕಾಲದಲು ... ಕೆಳದಿಯ ಕರಿಯ ತಿಂಮೇಗೌಡನು ಸ್ವರ್ಗಸ್ಥನಾದಲ ಆತನ ಮದವಳಿಗೆ ರಾಮಕ್ಕನು ಮಹಾಸತಿಯಾದಳು ಶ್ರೀ" ಎಂದು ಹೇಳುತ್ತದೆ.[117] ಈ ಶಾಸನವೇ ವಿಜಯನಗರಕಾಲದಲ್ಲಿಯ ಸತಿಘಟನೆಯನ್ನು ಉಲ್ಲೇಖಿಸುವ ಕೊನೆಯ ಶಾಸನವಾಗಿದೆ. ಅಷ್ಟೇ ಅಲ್ಲದೆ, ಅದು ಕರ್ನಾಟಕದಲ್ಲಿಯ ಸತಿಘಟನೆಯನ್ನು ಉಲ್ಲೇಖಿಸುವ ಕೊನೆಯ ಶಾಸನವೂ ಆಗಿದೆ. ಡಾ: ಎಂ.ಎಂ. ಕಲಬುರ್ಗಿ ಅವರು ಚಿನ್ನಿಕಟ್ಟೆ ಮತ್ತು ಅಲದಕಟ್ಟೆ ಶಾಸನಗಳೆರಡರ ಅಕ್ಷರಗಳನ್ನು ಈಚಿನವು ಎಂದು ಹೇಳಿರುವುದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.[118] ಚಿನ್ನಿಕಟ್ಟೆ ಶಾಸನ ಬೋಲಿನಾಯಕನ ಮರಣ ಮತ್ತು ಆತನ ಮೂವರು ಸತಿಯರ ಸಹಗಮನವನ್ನು ತಿಳಿಸುತ್ತದೆ. ಅಲದಕಟ್ಟೆ ಶಾಸನ ಗೌಡಮರಬಸವನ ಮರಣವನ್ನು ಸೂಚಿಸುತ್ತದೆ. ಈ ಸ್ಮಾರಕಶಿಲೆ ಸತಿಶಿಲ್ಪವನ್ನೊಳಗೊಂಡಿದ್ದರಿಂದ ಗೌಡ ಮರಬಸವನ ಪತ್ನಿ ಸತಿಹೋಗಿದ್ದಾಳೆಂದು ಹೇಳಬಹುದಾಗಿದೆ.

ವಿಜಯನಗರ ಕಾಲದಲ್ಲಿ ಕರ್ನಾಟಕಕ್ಕೆ ಭೇಟಿಕೊಟ್ಟ ನಿಕೊಲೊ ದೆ ಕೊಂತಿ, ದುಆರ್ತೆ ಬಾರ್ಬೋಸಾ, ಪೆರ್ನಾಂವ್ ನೂನಿಜ್, ಸೀಜರ್ ಫ್ರೆಡೆರಿಕ್, ಮಾನುಯೆಲ್ ಬರ್ರಾಡಾಸ್ — ಈ ವಿದೇಶಿಪ್ರವಾಸಿಗರು ಸತಿಘಟನೆಗಳ ಕುರಿತಾಗಿ ಬರೆದಿದ್ದಾರೆ. ಅವರ ವರದಿಗಳಲ್ಲಿ ಅಪೂರ್ವವಾದ

ವಿವರಗಳಿವೆ. ಹದಿನೈದನೆಯ ಶತಮಾನದ ಮಧ್ಯದಲ್ಲಿ ಎರಡನೆಯ ದೇವರಾಯನ ಕಾಲಕ್ಕೆ ಬಂದಿದ್ದ ನಿಕೊಲಿಯೋ ಡಿ ಕೊಂತಿ ಹೀಗೆ ಹೇಳುತ್ತಾನೆ: ಬಿಜಿನೆಗಾಲಿಯಾ ( ವಿಜಯನಗರ ) "ನಿವಾಸಿಗಳು ತಮ್ಮ ಇಚ್ಛೆ ಬಂದಷ್ಟು ಜನ ಹೆಂಡತಿಯರನ್ನು ಮದುವೆ ಆಗುತ್ತಾರೆ. ಗಂಡನು ಸತ್ತರೆ ಹೆಂಡತಿಯರೆಲ್ಲ ಚಿತೆಯಲ್ಲಿ ಬಿದ್ದು ಸಾಯುತ್ತಾರೆ...... ಬಿಜಿನೆಗಾಲಿಯಾ ರಾಜನು ಇಂಡಿಯಾ ದೇಶದ ರಾಜರೆಲ್ಲರಿಗಿಂತ ಬಹಳ ಬಲಾಢ್ಯನಾಗಿದ್ದಾನೆ. ಇವನಿಗೆ ಹನ್ನೆರಡು ಸಾವಿರ ಹೆಂಡತಿಯರಿದ್ದಾರೆ.......... ಇವರಲ್ಲಿ ಎರಡು ಮೂರು ಸಾವಿರ ಹೆಂಡತಿಯರು ರಾಜನು ಸತ್ತಾಗ ತಮ್ಮ ಆತ್ಮಸಂತೋಷದಿಂದ ಚಿತೆಯೊಳಗೆ ಬಿದ್ದು ಪ್ರಾಣತ್ಯಾಗ ಮಾಡುತ್ತೇವೆಂಬ ವಾಗ್ದಾನವಮಾಡಿ ರಾಜನ ಕೈಹಿಡಿದಿರುತ್ತಾರೆ"...[119] ಈ ಪ್ರವಾಸಿಯ ವರದಿಯು ವಿಜಯನಗರ ಕಾಲದಲ್ಲಿ ಸಾಮಾನ್ಯ ಜನರಲ್ಲಿ ಹಾಗೂ ರಾಜಮನೆತನದಲ್ಲಿ ಇದ್ದ ಸತಿಪದ್ಧತಿಯ ಚಿತ್ರವನ್ನು ಕೊಡುತ್ತದೆ. ಕ್ರಿ. ಶ. 1500 ರಲ್ಲಿ ವಿಜಯನಗರಕ್ಕೆ ಬಂದಿದ್ದ ದುಆರ್ತೆಬಾರ್ಬೋಸಾ ಸತಿ ಆಚರಣೆಯ ವಿವರಣೆಯನ್ನು ಹೀಗೆ ಕೊಡುತ್ತಾನೆ: "ಬಡವಳಾದವಳು ಆತ್ಮಸಂತೋಷದಿಂದ ಸೀದಾಹೋಗಿ ಗಂಡನ ಚಿತೆಯಲ್ಲಿ ಬಿದ್ದು ಸಾಯುತ್ತಾಳೆ. ಅನುಕೂಲಸ್ಥಳಾದವಳು ಚಿತೆಗೆ ಬೇಕುವ ಮುನ್ನ ನೆಂಟರಿಷ್ಟರನ್ನೆಲ್ಲಾ ನೇರಿಸಿ ಉಪಚಾರ ಮಾಡಿ ಕುದುರೆಯ ಮೇಲೆ ಮೆರವಣಿಗೆ ಹೊರಡುತ್ತಾಳೆ. ಕುದುರೆ ಬೂದೂ ಬಣ್ಣದಿರಬೇಕು. ಅಥವಾ ಬಿಳಿ ಬಣ್ಣದ್ದಿರಬೇಕು. ಕುದುರೆಯ ಮೇಲೆ ಮೆರವಣಿಗೆ ಹೊರಟು ಗಂಡನ ಚಿತೆ ಇರುವ ಬಳಿಗೆ ಹೋಗುತ್ತಾಳೆ. ...... ಆಕೆಯ ಕೈಗೆ ಎಣ್ಣೆಯ ಗಡಿಗೆಯನ್ನು ಕೊಡುತ್ತಾರೆ. ಆಕೆ ಅದನ್ನು ತಲೆಯ ಮೇಲಿಟ್ಟುಕೊಂಡು ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಾಳೆ. ಚಿತೆಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಪೂರ್ವಾಭಿಮುಖವಾಗಿ ನಿಂತು ವಂದನೆಗೈಯುತ್ತಾಳೆ. ಅಮೇಲೆ ಗಡಿಗೆಯ ಎಣ್ಣೆಯನ್ನು ಅದರೊಳಗೆ ಎಸೆದು, ಚಿತೆಯೊಳಗೆ ಧುಮುಕುತ್ತಾಳೆ......... ಆ ಅಗಾಧ ಜ್ವಾಲೆಯಲ್ಲಿ ಆಕೆ ಒಂದರಗಳಿಗೆಯಲ್ಲಿ ಸುಟ್ಟು ಭಸ್ಮವಾಗಿ ಬಿಡುತ್ತಾಳೆ".[120] ಇದೇ ರೀತಿಯ ಚಿತ್ರಣವನ್ನು ಸೀಜರ ಫ್ರೆಡೆರಿಕನು ಕೊಡುತ್ತಾನೆ. ಅಲ್ಲದೆ, ಅವನು ಅಚ್ಯುತರಾಯ "ರಾಜನಿಗೆ ಐನೂರು ಜನರ ಹೆಂಡತಿಯರಿದ್ದಾರೆ, ಬೇಕೆಂದರೆ ಇನ್ನಷ್ಟು ಜನರು ಅವನ ಭೋಗಕ್ಕೆ ಸಿದ್ಧರಾಗಿರುತ್ತಾರೆ. ಇವರೊಡನೆ ರಾಜನು ಕಾಲ ಕಳೆಯುತ್ತಾನೆ. ಸತ್ತಾಗ ಇವರೆಲ್ಲರೂ ಅವನೊಡನೆ ಚಿತೆಯಲ್ಲಿ ಬೇಳುತ್ತಾರೆ" ಎಂದು ಬರೆಯುತ್ತಾನೆ.[121]

ಹದಿನೇಳನೆಯ ಶತಮಾನದ ಪೂರ್ವಾರ್ಧದಲ್ಲಿ ವಿಜಯನಗರ ರಾಜ್ಯಕ್ಕೆ ಬಂದಿದ್ದ ಮಾನುಯೆಲ್ ಬರ್ರಾಡಾಸನು, ವಿಜಯನಗರ ಅರಸ ವೆಂಕಟಪತಿಯು ಮರಣಹೊಂದಲಾಗಿ ಅವನ ಪತ್ನಿಯರು ಸತಿಹೋದುದನ್ನು ಹೀಗೆ ತಿಳಿಸುತ್ತಾನೆ : "ಬಿಸ್ನಾಗ (ವಿಜಯನಗರ ) ದ ವೃದ್ಧರಾಜನಾದ ವೆಂಕಟಪತ್ತಿ ಕಾಲವಾದ. ಆಗ ಅವನಿಗೆ 67 ವರ್ಷ ವಯಸ್ಸು. ಗಂಧ ಮುಂತಾದ ಪರಿಮಳಯುಕ್ತ ದ್ರವ್ಯಗಳನ್ನು ಹಾಕಿ ಶವಸಂಸ್ಕಾರ ಮಾಡಿದರು. ಶವವನ್ನು ಅನುಸರಿಸಿ ಅವನ ಮೂರು ಜನ ರಾಣಿಯರೂ ಚಿತಾಗ್ನಿಯನ್ನೇರಿದರು. ಅವರಲ್ಲಿ ಒಬ್ಬಳಿಗೆ ರಾಜನಷ್ಟೇ ವಯಸ್ಸಾಗಿತ್ತು. ಇಬ್ಬರಿಗೆ 37 ವರ್ಷಗಳು. ಅವರು ಚಿತೆಯನ್ನೇರುವಾಗ ತೋರಿದ ಧೈರ್ಯ ಮತ್ತು ತಾಳ್ಮೆ ಅಸಾಧಾರಣವಾಗಿತ್ತು."[122] ಕ್ರಿ. ಶ. 1623 ರಲ್ಲಿ ಇಕ್ಕೇರಿಗೆ ಭೇಟಿ ಕೊಟ್ಟಿದ್ದ ಪಿಯತ್ರೋದೆಲ್ಲಾವೆಲ್ಲೆಯು ಅಲ್ಲಿ ತಾನು ಕಂಡ ತೆಲ್ಲಿಂಗಾ ಜಾತಿಗೆ ಸೇರಿದ ಗಿಯಕ್ಕಮಳು ( Giaccama ) ಅನುಗಮನ ಮೂಲಕ ಸತಿಹೋಗಲಿರುವುದನ್ನು ತುಂಬ ದೀರ್ಘವಾಗಿ ವಿವರಿಸಿದ್ದಾನೆ.[123] ಈತನ ವಿವರಣೆಯಲ್ಲಿ, — ಸತಿಹೋಗುವವಳು ಲಂಬೆಹಣ್ಣು — ಕನ್ನಡಿ ಹಿಡಿಯುತ್ತಿದ್ದುದು, ಅವಳು ಮೆರವಣಿಗೆಗೊಳ್ಳುವಾಗ ಅವಳಿಗೆ ಛತ್ರಿ ಹಿಡಿಯುತ್ತಿದ್ದುದು, ಹಲವು ದಿನಗಳವರೆಗೆ ನಗರದಲ್ಲಿ ಸತಿಯು ಮೆರವಣಿಗೆ ತೆಗೆದುಕೊಳ್ಳುತ್ತಿದ್ದುದು, ಅವಳು ಎಲ್ಲರೊಡನೆ ಮಾತನಾಡುತ್ತ ಸಂತೋಷವಾಗಿರುತ್ತಿದ್ದುದು, ಅವಳು ಸತಿಹೋಗುವುದು ಬಂಧು — ಬಾಂಧವರಿಗೆ ಸಂತೋಷ ತಂದುದು ಇತ್ಯಾದಿ ವಿಷಯಗಳ ನಿರೂಪಣೆ ಇದೆ. ಈ ರೀತಿಯಾಗಿ ಮಧ್ಯಯುಗದ ಪ್ರವಾಸಿಗಳ ವರದಿಗಳು ಸತಿಘಟನೆಗಳನ್ನು ತಿಳಿಸುವ ಹಿನ್ನೆಲೆಯಲ್ಲಿ ಅದರ ಪ್ರಚಾರ — ಪ್ರಸರಣಗಳು ಗಮನಕ್ಕೆ ಬರುತ್ತವೆ.

ಕರ್ನಾಟಕದ ಮಧ್ಯಯುಗದ ಗ್ರಂಥ ಸಾಹಿತ್ಯವೂ ಸತಿಘಟನೆಗಳನ್ನು ವಿವರಿಸುವುದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾಗಿದೆ. ಕುಮಾರವ್ಯಾಸ, ಕನಕದಾಸ, ಕುಮಾರವಾಲ್ಮೀಕಿ, ನಂಜುಂಡ, ವಿರಕ್ತತೋಂಟದಾರ್ಯ, ಷಣ್ಮುಖಶಿವಯೋಗಿ — ಈ ಮೊದಲಾದವರು 'ಸತಿ' ಪ್ರಸಂಗಗಳನ್ನು ಚಿತ್ರಿಸಿದ್ದಾರೆ.[124] ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ಮತ್ತು ಸಿರುಮಣನಾಯಕನ ಸಾಂಗತ್ಯಗಳಲ್ಲಿ ವಿವರಿಸಲ್ಪಟ್ಟ ಸತಿಘಟನೆಗಳಂತೂ ಐತಿಹಾಸಿಕ ದೃಷ್ಟಿಯಿಂದ ತುಂಬ ಮಹತ್ವದವುಗಳಾಗಿವೆ. ತೋಂಟದರಾಯನ ಮಡದಿ ಚೆನ್ನಬಸವಮ್ಮ ಸತಿಹೋದ ಪ್ರಸಂಗವನ್ನು ಇಮ್ಮಡಿಚಿಕ್ಕಭೂಪಾಲನ ಸಾಂಗತ್ಯದಲ್ಲಿ ವಿವರಿಸಿದ್ದಾರೆ, ವೀರಣ್ಣನ ಪತ್ನಿಯರು

ಸತಿಹೋದುದನ್ನು ಸಿರುಮಣನಾಯಕ ಸಾಂಗತ್ಯದಲ್ಲಿ ವಿವರಿಸಲಾಗಿದೆ·[125] ಇವೆರಡೂ ಕಾವ್ಯಗಳು ಸತಿ ಆಚರಣೆಯ ಉತ್ಕೃಷ್ಟ ಚಿತ್ರವನ್ನು ಕೊಡುತ್ತವೆ·

ಮೈಸೂರು ಅರಸುಮನೆತನದಲ್ಲಿ ನಡೆದ ಸತಿಘಟನೆಗಳ ಉಲ್ಲೇಖಗಳು 'ಹಡಿರಪಟ್ಟು ಬಿ – 4'' ಕಾಗದಪ್ರತಿಯಲ್ಲಿವೆ· ಅವುಗಳ ವಿವರ :[0]

ಯಿಂಮಡಿರಾಜವಡೆರೈಯಯ್ಯನವರಿಗೆ
ವಿವಾಹವಾದದ್ದು
ಕೋಟೆಚೆನ್ನರಾಜವಡೆರವರಕೋಮಾರ್ತಿ
ವೆಂಕಟಮ್ಮನವರ ಜ 1
ಮುದ್ದೂರ ನಂಜೈಯಯ್ಯನವರ ಕೊಮಾರ್ತಿ
ನಂಜಮ್ಮನವರ ಜ 1
ಜನ 2ಕ್ಕೆ ಕುಮಾರರು ಯಿಲ್ಲಾ
ಯೀಶ್ವರಸಂವತ್ಸರದ ವೈಶಾಖ ಬ ೩ಕ್ಕೆ ಪಟ್ಟಾಭಿ
ಷೇಕ
ಬಹುಧಾನ್ಯಸಂವತ್ಸರದ ಅಶ್ವಿಜಶುದ್ಧ 11 ಲ್ಲು
ಸ್ವರ್ಗಸ್ಥರಾದರು
ಸಂಗಡಾ ಅಮ್ಮನವನರು ಜ 2
ಬಂಗಾರದ ಅವ್ವೆರ ಜ 17
..... . (ಪು · 124)
ಗುಂಡಲದಲ್ಲಿ ಸಷ್ವರ್ಗಸ್ಥರಾದರು
ಗುಂಡಾಲದಲಿ ದಹನಾ ಸಹಗಮನ ಬಿ
ಳುಗಲಿ ತಿಂಮರಾಜಮ್ಮನವರ ಜ 1
ಬಂಗಾರದವರು ಜ 5 (ಪು ·131)
ಶಕ 1581 ವಿಶಾಖ ಸಂವತ್ಸರದ ಶ್ರಾವಣ ಬ 8ಲ್ಲು
16 ಘಳಿಗೆಯಲ್ಲು ಕಂಠೀರವ ನರಸರಾ
ಜವಡೇರೈಯಯ್ಯನವರು ಸ್ವರ್ಗಸ್ಥರಾದರು
ಸಹಗಮನವಾದರು
ಅಂಮ್ಮನವರ ಜ 10
ಅವೆರುಗಳ ಜ 172 (ಪು ·134)
ಶಕ 1582 ನೇ
ವಿಕ್ರಮಸಂವತ್ಸರದ ಜೇಷ್ಠ ಬ 1ಲ್ಲು ಸತ್ಯಾ
ಗಾಲದಲ್ಲಿ ಮುಪ್ಪಿನದೇವರಾಜವಡೆರೈ
ಯಯ್ಯನವರು ಸ್ವರ್ಗಸ್ಥರಾದರು·

---

0· ಇಂಡಿಯಾ ಆಫೀಸ್ ಲೈಬ್ರರಿ ಲಂಡನದಲ್ಲಿರುವ ಈ 'ಹಡಿರಪಟ್ಟು–ಬಿ–4' ಕಾಗದ ಪ್ರತಿಯನ್ನು ತಾವು ಸಂಗ್ರಹಿಸಿಕೊಂಡು ಬಂದುದನ್ನು ಡಾ: ಎಂ·ಎಂ·ಕಲಬುರ್ಗಿ ಅವರು ನನಗೆ ತೋರಿಸಿದರು·

ಸಹಗಮನವಾದವರು
ದೇವಅಮ್ಮನವರ ಜ 1
ದೇಪಅಮನವರ ಜ 1
ಉಭಯ ಜ 2
ಬಂಗಾರದ ಅವೆರಗಳು ಜ 8 (?) (ಪು·139)

ಶಕ 1540 ನೇ ಕಾಳಯುಕ್ತಿಸಂವತ್ಸರದಮಾಘ ಶು 1ಲ್ಲು
ಯಲೆಯೂರ ದೇವರಾಜವಡೇರೈಯ್ಯನವ
ರು ಸ್ವರ್ಗಸ್ಥರಾದರು
ಸಹಗಮನ ಅಂಮ್ಮನವರು ಜ 1
ಬಂಗಾರದ ಅವೆರಗಳ ಜ 9 (ಪು·141)

(ಇಲ್ಲಿ ಅರಸರು ಸ್ವರ್ಗಸ್ಥರಾಗಲು ಅವರೊಡನೆ ಅವರ ಪತ್ನಿಯರು ಮಾತ್ರವಲ್ಲದೆ ಅವರ ಪ್ರೇಯಸಿಯರೂ ( ಬಂಗಾರದ ಅವ್ವೆರು) ಸಹಗಮನಗೊಂಡುದನ್ನು ಕಾಣುತ್ತೇವೆ.)

ಹತ್ತನೆಯ ಶತಮಾನದ ಪೂರ್ವದಲ್ಲಿ ಸತಿ ಆಚರಣೆಯು ಕರ್ನಾಟಕದಲ್ಲಿ ಅಲ್ಪ ಸ್ವರೂಪದಲ್ಲಿ ಕಾಣಿಸಿಕೊಂಡು, ಆಮೇಲೆ ಅದು ಹೆಚ್ಚು ಹೆಚ್ಚು ಪ್ರಚಾರ — ಪ್ರಸರಣಗೊಳ್ಳುತ್ತ ಬಂದುದನ್ನು ಕಾಣುತ್ತೇವೆ. ಮಧ್ಯಯುಗದ ವಿಜಯನಗರ ಕಾಲದಲ್ಲಿ, ಅದರಲ್ಲಿಯೂ ಹದಿನೈದನೆಯ ಶತಮಾನದಲ್ಲಿ ಅದು ಇನ್ನು ಅಧಿಕಪ್ರಮಾಣದಲ್ಲಿ ಆಚರಿಸಲ್ಪಟ್ಟಿತು. ವಿಜಯನಗರವು ರಕ್ಕಸತಂಗಡಿಯುದ್ಧದಲ್ಲಿ ಕ್ರಿ. ಶ 1565 ರಲ್ಲಿ ಸೋಲನ್ನನುಭವಿಸಿತು, ಈ ನಿರ್ಣಾಯಕ ಯುದ್ಧದಲ್ಲಿ ಹಿಂದೂ ವೀರರು ಅಸಂಖ್ಯ ರೀತಿಯಲ್ಲಿ ಮರಣಗೊಂಡಿರುವುದರಿಂದ ಈಗ ಸತಿಘಟನೆಗಳು ಹೆಚ್ಚು ಜರುಗಿರಬೇಕು. ಆದರೆ ಅವುಗಳ ಉಲ್ಲೇಖಗಳು ಇಂದು ದೊರಕದಿರುವುದೇ ಆಶ್ಚರ್ಯವನ್ನುಂಟುಮಾಡುತ್ತದೆ. ಬಹುಶಃ ಈ ಯುದ್ಧದ ತಕ್ಷಣ ಸಮಯದಲ್ಲಿ ಹಿಂದೂ ಜೀವನವೇ ಅಸ್ತವ್ಯಸ್ತಗೊಂಡು ಸ್ಮಾರಕಗಳನ್ನು ನೆಡುವುದುಸಾಧ್ಯವಾಗಲಿಲ್ಲವೇ ? ಅಥವಾ ಆ ಕಾಲದಲ್ಲಿ ಅಸಂಖ್ಯ ಸತಿಘಟನೆಗಳಿಗಾಗಿ ಕೇವಲ ಬರವಣಿಗೆಯಿಲ್ಲದ ಶಿಲ್ಪಸ್ಮಾರಕಗಳನ್ನು ಮಾತ್ರ ನಿಲ್ಲಿಸಿದರೇ ? ಎಂಬ ಕುತೂಹಲಕರ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ರಕ್ಕಸತಂಗಡಿ ಯುದ್ಧದ ನಂತರ ಮುಂದಿನ ವರ್ಷಗಳಲ್ಲಿ ಸತಿ ಆಚರಣೆಯು ಅಲ್ಪ ಪ್ರಮಾಣದಲ್ಲಿ ಜರುಗುತ್ತ ನಡೆಯಿತು. 17ನೆಯ ಶತಮಾನದಲ್ಲಿ ಅದು ಇನ್ನೂ ಅಲ್ಪ ಸ್ವರೂಪದಲ್ಲಿ ಮುನ್ನಡೆಯಿತು. 18ನೆಯ ಶತಮಾನದ ಶಾಸನಗಳಲ್ಲಿ ಸತಿಘಟನೆಯ ಉಲ್ಲೇಖ ಒಂದೂ ಕಾಣಿಸಿಕೊಳ್ಳದಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

## ಕಾಲಸೂಚಿಸದ ಮಾಸ್ತಿಕಲ್ಲಿನ ಶಾಸನಗಳು:

ಕೆಲವು ಮಾಸ್ತಿಕಲ್ಲಿನ ಶಾಸನಗಳು ತ್ರುಟಿತಗೊಂಡಿರುವುದರಿಂದಲೂ ಇನ್ನೂ ಕೆಲವು ಕಾಲವನ್ನು ಸೂಚಿಸದಿರುವುದರಿಂದಲೂ ಅವು ಯಾವ ಶತಮಾನದವುಗಳೆಂಬುದನ್ನು ಗುರುತಿಸುವದು ಕಷ್ಟವಾಗುತ್ತದೆ. ಅಂಥ ಶಾಸನಗಳು ಮೂವತ್ತುನಾಲ್ಕು ದೊರಕುತ್ತವೆ. ಕೆಲವೊಂದು ಮಾಸ್ತಿಕಲ್ಲಿನ ಶಾಸನಗಳಲ್ಲಿ ಕೇವಲ ಮಡಿದ ಪುರುಷನ ಹೆಸರನ್ನು ಮಾತ್ರ ಸೂಚಿಸಲಾಗಿರುತ್ತದೆ. ಹರೂರ ಶಾಸನದಲ್ಲಿ ಭೈರನಾಯಕನು, ಚಿಕ್ಕಕಸವಿ ಶಾಸನದಲ್ಲಿ ರಮಗೌಡನು, ಕಲ್ಲಂಬಿ ಶಾಸನದಲ್ಲಿ ಬೊಂಮಗೌಡರು, ಹಿಂನಗೇರಿಶಾಸನದಲ್ಲಿ ಮರಿಯಗೌಡರು, ದೇವಸಾಧನದ ಹಕ್ಕಲು ಗ್ರಾಮದ ಶಾಸನದಲ್ಲಿ ನಾಗಬೋವನಮಗನು ಮರಣಹೊಂದಿದರೆಂದು ತಿಳಿಸಲಾಗಿದೆ.[126] ಈ ಶಾಸನಗಳು ಮಾಸ್ತಿಶಿಲ್ಪವುಳ್ಳ ಸ್ಮಾರಕಶಿಲೆಯ ಮೇಲೆ ಇರುವುದರಿಂದ ಇಲ್ಲಿ ಪತ್ನಿಯರು ಸತಿ ಹೋಗಿದ್ದರೆಂದು ಹೇಳಬಹುದಾಗಿದೆ. ಇನ್ನು ಕೆಲವು ಶಾಸನಗಳು ಮೃತರ ಪತ್ನಿಯರು ಸತಿ ಹೋದುದನ್ನು ಸೂಚಿಸುತ್ತವೆ. ಕಲ್ಲಂಬಿ ಶಾಸನವು ಉದ್ರೆಯಕ್ಕ, ಕುಂಸಿ ಶಾಸನವು ಬೊಂಮಾಯಿ, ದುಗೂರು ಶಾಸನವು ದುಪ್ಪನಾಯಕನ ಸತಿ, ಗುಂಜನೂರು ಶಾಸನವು ಮುಲಿಗನಾಯಕನ ಹೆಂಡತಿ, ಇದೇ ಊರಿನ ಇನ್ನೊಂದು ಶಾಸನವು ಚಿಕ್ಕಗೌಡಿ, ಬೆನ್ನೂರು ಶಾಸನವು ಬೊಂಮಗೌಡರ ಪತ್ನಿ, ಜಡ್ಡಿಹಳ್ಳಿ ಶಾಸನವು ದಮಥವೆ, ಉಂಡಿಗನಾಳು ಶಾಸನವು ರಾಮಜಜೀಯ ಮಗಳು, ಬಾಳೂರು ಶಾಸನವು ಮುದ್ದಗೌಡನ ಹೆಂಡತಿ, ಹುಣಸೂರು ಶಾಸನವು ರಾಮಾಯಿ, ಕೊಂಡಗಳಲೆ ಶಾಸನವು ಬೊಂಮಿಗೊಂಡಿ, ಕುಂಬತಿಗ್ರಾಮದ ಶಾಸನವು ಮುಸಣಗೌಡನ ಪತ್ನಿ, ನಿಟ್ಟಕ್ಕಿ ಶಾಸನವು ಕಲಿಗೌಡಿ, ಮಲದೇವನಹಳ್ಳಿ ಶಾಸನವು ವೀರಪದೇವರ ಪತ್ನಿ, ಕುಗ್ವೆಹಳ್ಳಿ ಶಾಸನವು ಚವುಡಂಬೆ, ಸಿಗ್ಗಗ್ರಾಮದ ಶಾಸನವು ಭೈರಮು, ಕಾತವಳಿ ಶಾಸನವು ಕಾಮಕ್ಕ ಸತಿಹೋದುದನ್ನು ತಿಳಿಸುತ್ತವೆ.[127] ಇದೇ ಸಂದರ್ಭದಲ್ಲಿ ಉದ್ರಿಗ್ರಾಮದ ಮಾಸ್ತಿಕಲ್ಲಿನಲ್ಲಿ ಕೇವಲ 'ಉರವನಾಕಿತಿ' ಎಂದು ಬರೆದಿರುವುದನ್ನು ಉಲ್ಲೇಖಿಸಬಹುದಾಗಿದೆ.[128] ಬಹುಶಃ ಇದು ಸತಿಹೋದವಳ ಹೆಸರಾಗಿರಬಹುದು, ಇನ್ನೊಂದು ಶಾಸನದಲ್ಲಿ ಸತಿಹೋದುದನ್ನು 'ಸಹಾನುಭೂತಿಯುಂಬೊಂದೆ' ಎಂದು ಹೇಳಿರುವುದನ್ನು ಸ್ಮರಿಸಬಹುದಾಗಿದೆ.[129] ಕೆಲವು ಶಾಸನಗಳು ತೀರ ತ್ರುಟಿತಗೊಂಡಿರುವುದರಿಂದಅರ್ಥಸ್ಪಷ್ಟ — ಗೊಳ್ಳುವುದಿಲ್ಲ. ಆದರೆ ಈ ಸ್ಮಾರಕಶಿಲೆಗಳು ಮಾಸ್ತಿಶಿಲ್ಪವನ್ನೊಳಗೊಂಡಿದ್ದರಿಂದ ಸತಿಹೋದ ಘಟನೆಯನ್ನು ಧ್ವನಿಸುತ್ತವೆ ಎಂದು ಹೇಳಬಹುದಾಗಿದೆ. ಬೆದಿರೆಗೆರೆ, ಹುವವಳ್ಳಿ ( ಈ ಊರಿನಲ್ಲಿ

ಇಂಥ ಎರಡು ಮಾಸ್ತಿಕಲ್ಲುಗಳಿವೆ ), ಮಳವಳ್ಳಿ, ಸೊರಟೂರು, ದೊಡ್ಡಮಾಗೋಡು, ದೇವಸ್ಥಾನಹಕ್ಕಲುಗ್ರಾಮ, ಚಿತ್ರಟಹಳ್ಳಿ, ಚಿಕ್ಕರೆಹಳ್ಳಿ, ಮಂಡಳಿಮಠ, ಈ ಊರುಗಳಲ್ಲಿ ಇಂಥ ಮಾಸ್ತಿಕಲ್ಲುಗಳಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.[130]

ಹತ್ತೊಂಬತ್ತನೆಯ ಶತಮಾನದಲ್ಲಿ ಸತಿಘಟನೆಗಳು:—

"ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಟಿ ನರಸೀಪುರ ತಾಲೂಕಿನ ಬ್ರಾಹ್ಮಣ ಹೆಂಗಸೊಬ್ಬಳು ಸತಿಯಾಗುವುದಾಗಿ ಹಠ ಹಿಡಿದಾಗ, ಅದು ಶಾಸ್ತ್ರ ವಿರುದ್ಧವಾದರೂ, ಅವಳು ತೀರಾ ಹಠ ಹಿಡಿದರೆ ಅದಕ್ಕೆ ಅವಕಾಶಕೊಡಬೇಕೆಂದು ಅಧಿಕಾರಿಗಳಿಗೆ ಸರ್ಕಾರದಿಂದ ಹೋದ ಪರಿಪತ್ರವೊಂದು ಅಚ್ಚಾಗಿದೆ".[131], ಅದರ ಪೂರ್ಣಪಾಠ ಹೀಗಿದೆ:

"ಶ್ರೀ ಮತ್ತು ಪೂರ್ಣೈಯ್ಯನವರು ಸೋಸಲೀ ಅಮಲದಾರ ವೆಂಕಟರಮಣಯ್ಯ ಯವರಿಗೆ ಆಶೀರ್ವಾದ. ಆದಾಗಿ ಕಳುಹಿಸ್ಸ ಅರ್ಜಿಯಿಂದಾ ವಿವರ ಯಾವತ್ತು ಶ್ರುತವಾಯಿತ್ತು. ತಲಕಾಡು ತಲಕಾಡಿನಲ್ಲಿ ವೆಂಕಟ್ರಾಮಶಾಸ್ತ್ರಿಗಳಿಗೆ ಯಿದದಕೆಂಯಿದ ಹಾಗೆ ನಾಲ್ಕು ತಡವೆ ಪ್ರವರ್ತಿ ಆಗಿ ತೀರಿಹೋದ್ದ್ರಿಂದ, ಅವರ ಕುಟುಂಬ ಸಹಗಮನ ಮಾಡಬೇಕೆಂಬದಾಗಿ ಯಾರು ಹೇಳಿದಾಗ್ಯೂ ಕೇಳದೆ ಮುಚ್ಚಕರ ಮಾಡಿಕೊಂಡು ಅಪ್ಪಣಿಕೊಡಿಸ್ಸಬೇಕೆಂಬದಾಗಿ ಯಿದಾರೆಂಬ ವಿವರಗಳಿಗಾಗಿ ಬರದು ಸರಿಯಷ್ಟೇ. ಆ ಬಗ್ಗ ಅವರು ದೊಡ್ಡ ಬ್ರಾಂಹರು ಅವರು ಯಿದದುಕ್ಕೆ ಯಿಲೇಕೆ ಈ ಮಟ್ಟಿಗೆ ಮಾಡಬಾರದು. ಬೇಡವೆಂಬದಾಗಿ ಹೇಳಿದರೆ ಕೇಳಿದೆ ಮೇಲೆ ಆಕೆ ಹೇಳಿದ ಮೇರೆಗೆ ನಡದುಕೊಳುವಂತೆ ಅಪ್ಪಣೆ ಕೊಟ್ಟು ಬಿಡುವದು, ರಕ್ತಾಕ್ಷಿ ಸಂವತ್ಸರದ ಪಾಲ್ಗುಣ ಬ 6 ಲು ರುಜು ಶ್ರೀ"

ಪೈವಸ್ತಾಗಿ ಪಾಲ್ಗುಣ 9 ಲು ಸಾಗಮನ ಮಾಡುವ ಹೆಂಗಸಿಗೆ ಅಪ್ಪಣಿ".[132]

ಈ ಸನ್ನದು ಕ್ರಿ.ಶ.1805 ರಲ್ಲಿಯದಾಗಿದೆ. ಅಂದರೆ 19ನೆಯ ಶತಮಾನದ ಪ್ರಾರಂಭದಲ್ಲಿ ಬ್ರಾಹ್ಮಣ ಸ್ತ್ರೀಯೊಬ್ಬಳು ಸಹಗಮನಮಾಡಿಕೊಂಡದು ಈ ಸನ್ನದಿನಿಂದ ತಿಳಿದುಬರುತ್ತದೆ. "ಪೂರ್ಣಯ್ಯನವರಿಂದ ಮೂರು ದಿನಗಳ ನಂತರ ಬಂದ ಪತ್ರವನ್ನು ಕಛೇರಿಯಲ್ಲಿ ದಾಖಲು ಮಾಡಿಕೊಂಡು "( ಪೈವಸ್ತು"), ಅದೇ ದಿನ ಹೆಂಗಸಿಗೆಸರ್ಕಾರದ ಅನುಮತಿಯನ್ನು ತಿಳಿಸಿದೆ".[133] ಈ ಸತಿಘಟನೆಯ ನಂತರ ಜೂನ್ 9, 1826 ರಂದು ಬೆಂಗಳೂರಿನಲ್ಲಿ ಸತಿಘಟನೆ ನಡೆದುದೊಂದು ಮಿಷನರಿ ಟಿಪ್ಪಣಿಗಳಲ್ಲಿಯ ಪತ್ರ

ವೊಂದರಿಂದ ತಿಳಿದುಬರುತ್ತದೆ. ಹುಲ್ಲು ಮತ್ತು ಸೆಗಣಿಯ ಬೆರಣಿಗಳಿಂದ ರಚಿಸಿದ ಚಿತೆಯ ಮಧ್ಯೆ ಗಂಡನ ಶವದೊಡನೆ ತಬ್ಬಿಕೊಂಡು ಕುಳಿತು ಸ್ತ್ರೀಯೊಬ್ಬಳು ಸತಿಹೋದಳೆಂದು ಆ ಪತ್ರ ತಿಳಿಸುತ್ತದೆ.[134] ಇವೆರಡು ಸತಿಘಟನೆಗಳು ಕ್ರಿ.ಶ. 1829 ರ ಸಹಗಮನ ನಿಷೇಧ ಕಾನೂನು ಪೂರ್ವದವುಗಳಾಗಿವೆ. ಆ ಕಾನೂನಿನ ಅನಂತರ ಕ್ರಿ.ಶ.ಸು. 1850 ರಲ್ಲಿ ಕೈದಾಳು ಗ್ರಾಮದಲ್ಲಿ ಸ್ಮಾರ್ತಬ್ರಾಹ್ಮಣರಾದ ಶಿವರಾಮಯ್ಯನವರ ಪತ್ನಿ ಲಕ್ಷ್ಮೀದೇವಮ್ಮ ಸಹಗಮನ ಮಾಡಿಕೊಂಡಿದ್ದರ ಕುರಿತಾಗಿ ಡಾ: ಎಂ ಚಿದಾನಂದಮೂರ್ತಿ ಅವರು ಉಲ್ಲೇಖಿಸುತ್ತಾರೆ. ಗಂಡ ಮಡಿದಾಗ, ''ಲಕ್ಷ್ಮೀದೇವಮ್ಮ ಅವರು ಸಹಗಮನ ಮಾಡಲು ನಿಶ್ಚಯಿಸಿದರಂತೆ. ಇದು ಬ್ರಿಟಿಷ್ ಸರ್ಕಾರದ ಅಧಿಕಾರಿಗಳಿಗೆ ತಿಳಿದು, ನಂದಿದುರ್ಗ ಡಿವಿಜನ್ನಿಗೆ ಸೇರಿದ ತುಮಕೂರಿಂದ ಅದನ್ನು ನಿಲ್ಲಿಸುವಂತೆ ಗ್ರಾಮದ ಪಟೇಲರಿಗೆ ಹುಕುಂ ಜಾರಿಯಾಯಿತು. ಆ ಹುಕುಂ ತೆಗೆದುಕೊಂಡು ಅಧಿಕಾರಿಗಳು ಊರಿಗೆ ಬರುವ ಮೊದಲೇ ಅದನ್ನು ಹೇಗೋ ತಿಳಿದುಕೊಂಡ ಲಕ್ಷ್ಮೀದೇವಮ್ಮ ಮಾಂಗಲ್ಯವನ್ನುಳಿದು ತನ್ನೆಲ್ಲ ಒಡವೆಗಳನ್ನು ಜನರಿಗೆ ಹಂಚಿ ಊರಿನ ಚನ್ನಕೇಶವ-ದೇವಾಲಯದ ಬಳಿ ಅಗ್ನಿಪ್ರವೇಶ ಮಾಡಿದರು''.[135] ಹೀಗೆ ಹತ್ತೊಂಬತ್ತನೆಯ ಶತಮಾನದ ಕರ್ನಾಟಕದಲ್ಲಿ ಮೂರು ಸತಿಘಟನೆಗಳು ಜರುಗಿರುವುದನ್ನು ಗುರುತಿಸಬಹುದಾಗಿದೆ.

ಸತಿಘಟನೆಯ ಪಾಠಗಳುಳ್ಳ ಸ್ಮಾರಕಶಿಲೆಗಳಿಗಿಂತಲೂ ಸತಿಶಿಲ್ಪವುಳ್ಳ ಸ್ಮಾರಕಶಿಲೆಗಳು ಕರ್ನಾಟಕದಲ್ಲಿ ಅಧಿಕಪ್ರಮಾಣದಲ್ಲಿ ದೊರಕುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದಾಗಿದೆ ಅಲ್ಲದೆ, ಸತಿಹೋದವಳ ಸ್ಮಾರಕವಾಗಿ ಅವಳ ಬಳೆ, ಕನ್ನಡಿ, ಕಳಸ, ಸೀರೆಗಳನ್ನು ಕರ್ನಾಟಕದ ಜನತೆ ರಕ್ಷಿಸಿಕೊಂಡು ಬಂದಿದ್ದಾರೆ. ಹಳ್ಳಿಹಳ್ಳಿಗಳಲ್ಲಿ ಸತಿಯ ನೆನಪಿನ ಗುಡಿಗಳಿವೆ. ಕೆರೆ — ಹಳ್ಳ — ಕಾಡು — ಗಿಡ — ಹೊಲಗಳಿವೆ. ಸತಿಹೋದವರ ಮನೆತನಗಳು ಹಲವು ಇಂದೂ ಕರ್ನಾಟಕದಲ್ಲಿವೆ. (ಇವುಗಳ ಕುರಿತು ಹಿಂದೆ ವಿವರಿಸಲಾಗಿದೆ ) ಇದರಿಂದಾಗಿ ಕೇವಲ ಶಾಸನಸ್ಥ ಮಾಸ್ತಿಕಲ್ಲುಗಳನ್ನು ಆದರಿಸಿ ಮಾತ್ರ ಕರ್ನಾಟಕದಲ್ಲಿಯ ಸತಿಘಟನೆಗಳನ್ನು ಐತಿಹಾಸಿಕವಾಗಿ ಗುರುತಿಸುವದು ಅಪೂರ್ಣವಾಗಿರುತ್ತದೆ ಎಂಬುದನ್ನು ಮರೆಯಬಾರದು.

ಪ್ರಾದೇಶಿಕ ಪ್ರಸಾರ :

ಕರ್ನಾಟಕದ ಎಲ್ಲ ಪ್ರದೇಶಗಳಲ್ಲಿ ಸತಿ ಆಚರಣೆ ಒಂದೇ ಪ್ರಮಾಣದಲ್ಲಿ ನಡೆದುಬರಲಿಲ್ಲವೆಂಬುದನ್ನು ಇಂದು ದೊರಕುವ ಸತಿಸ್ಮಾರಕಗಳ ಆಧಾರಗಳಿಂದ ಕಂಡುಕೊಳ್ಳಬಹುದಾಗಿದೆ ಉತ್ತರ

ಕರ್ನಾಟಕದ ಬಯಲುಭೂಮಿಯಲ್ಲಿ ಸತಿಘಟನೆಗಳು ವಿರಳವಾಗಿ ಘಟಿಸಿದರೆ, ದಕ್ಷಿಣ ಕರ್ನಾಟಕದ ಮಲೆನಾಡಿನಲ್ಲಿ ಅವು ಅಧಿಕ ಸಂಖ್ಯೆಯಲ್ಲಿ ಘಟಿಸಿವೆ. ಈಗಿನ ಶಿವಮೊಗ್ಗ, ಮಂಡ್ಯ, ಮೈಸೂರು, ಚಿತ್ರದುರ್ಗ, ಈ ಜಿಲ್ಲೆಗಳಲ್ಲಿ ಸತಿ ಆಚರಣೆ ತುಂಬ ಪ್ರಚಾರದಲ್ಲಿದ್ದಂತೆ ತೋರುತ್ತದೆ. ಅದರಲ್ಲಿಯೂ ಕರ್ನಾಟಕದ ಇನ್ನುಳಿದ ಎಲ್ಲ ಭಾಗಗಳಿಗಿಂತಲೂ ಶಿವಮೊಗ್ಗ ಪ್ರದೇಶದಲ್ಲಿ ಇದು ಹೆಚ್ಚು ಆಚರಣೆಯಲ್ಲಿದ್ದುದು ತಿಳಿದುಬರುತ್ತದೆ. ಶಿವಮೊಗ್ಗದ ಸೊರಬ ಮತ್ತು ಸಾಗರ ತಾಲೂಕುಗಳ ಭಾಗಗಳಲ್ಲಿ ಶಾಸನಸ್ಥ ಮಾಸ್ತಿಕಲ್ಲುಗಳು ಹೆಚ್ಚು ದೊರಕುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಮಂಡ್ಯ, ಮೈಸೂರು ಪ್ರದೇಶಗಳಲ್ಲಿ ಮಾಸ್ತಿಗುಡಿಗಳು ದೊರಕುವುದರ ಜೊತೆಗೆ ಮಾಸ್ತಿಕಾಡು ಮಾಸ್ತಿಹೊಲಗಳು ಕಾಣಸಿಗುತ್ತವೆ. ಜೊತೆಗೆ ಈ ಪ್ರದೇಶದಲ್ಲಿ ಕೆಲವು ಶಾಸನಸ್ಥ ಮಾಸ್ತಿಕಲ್ಲು ಮತ್ತು ಮಾಸ್ತಿ ಶಿಲ್ಪ ಸ್ಮಾರಕಗಳನ್ನು ಕಂಡು ಕೊಳ್ಳಬಹುದಾಗಿದೆ. ಅತ್ಯಂತ ದೀರ್ಘವಾದ ಮತ್ತು ಸುಂದರವಾದ ದೇಕಬ್ಬೆ ಶಾಸನವು ಮೈಸೂರಿನ ಬೆಳತೂರಿನಲ್ಲಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.[136] ಚಿತ್ರದುರ್ಗದ ಪ್ರದೇಶದಲ್ಲಿ ಸತಿಪ್ರಸಂಗಗಳನ್ನು ವಿವರಿಸುವ ಹಲವಾರು ಕಥನಗೀತೆಗಳು ದೊರಕುತ್ತವೆ. ಇವುಗಳಿಗೆ ಹೋಲಿಸಿದರೆ ತುಮಕೂರು, ಕೊಡಗು, ಬೆಂಗಳೂರು ಭಾಗಗಳಲ್ಲಿ ಸತಿ ಸಂಗತಿಗಳನ್ನು ತಿಳಿಸುವ ಸ್ಮಾರಕ ಗಳು ವಿರಳವೆಂದೇ ಹೇಳಬೇಕು.

ಕಡಲತೀರದ ಕಾರವಾರ, ಮಂಗಳೂರು ಪ್ರದೇಶಗಳಲ್ಲಿ ಸತಿಸ್ಮಾರಕಗಳು ಹೆಚ್ಚು ದೊರಕುವುದರಿಂದ ಈ ಭಾಗದಲ್ಲಿ ಸತಿಘಟನೆಗಳು ಅಧಿಕಸಂಖ್ಯೆಯಲ್ಲಿ ಘಟಿಸಿದವೆಂದು ಹೇಳಬಹುದಾಗಿದೆ ಈ ಭಾಗಗಳಲ್ಲಿ ಮಾಸ್ತಿಗುಡಿ, ಮಾಸ್ತಿಗೋಂಜಿ, ಮಾಸ್ತಿಕಾಡು, ಮಾಸ್ತಿಬ್ಯಾಣ, ಮಾಸ್ತಿಗಿಡ, ಮಾಸ್ತಿಗುತ್ತು, ಮಾಸ್ತಿದಿಬ್ಬ, ಮಾಸ್ತಿಹಳ್ಳ, ಇತ್ಯಾದಿ ಸ್ಮಾರಕಗಳು ವಿಶೇಷವಾಗಿ ದೊರಕುತ್ತವೆ. ಹಲವೆಡೆಗಳಲ್ಲಿ ಮಾಸ್ತಿ ಜಾತ್ರೆಗಳು ನಡೆಯುತ್ತಿವೆ. ಇನ್ನೂ ಅಪೂರ್ವವೆನ್ನುವಂತೆ ಕೆಲವು ಕಡೆ ಸತಿ ಕೊಂಡದಲ್ಲಿ ಹಾರಿಕೊಳ್ಳುವುದನ್ನು ಇನ್ನೂ ಆಡಿತೋರಿಸಲಾಗುತ್ತದೆ. (ಸತಿಪದ್ಧತಿ: ಆಕರ — ಸ್ಮಾರಕ — ಅವಶೇಷ ಈ ಅಧ್ಯಾಯದಲ್ಲಿ ಈ ವಿಷಯಗಳ ಕುರಿತು ವಿವರಿಸಲಾಗಿದೆ.) ಹೀಗೆ ಸತಿ ಆಚರಣೆಯ ಸಂಗತಿಗಳು ವೈವಿಧ್ಯರೂಪದಲ್ಲಿ ಈ ಭಾಗದಲ್ಲಿ ದೊರಕುತ್ತವೆ. ಇಲ್ಲಿಯ ಜನರಿಗೆ ಮೃತನ ಪತ್ನಿಯು ದೇವತೆಯಾಗಿ ಪರಿಣಮಿಸಿದ್ದಾಳೆ. ಮಾಸ್ತಿದೇವಿ ಎಂದರೆ ಇಲ್ಲಿಯ ಜನರಿಗೆ ತುಂಬ ಭಕ್ತಿ ಗೌರವಗಳಿವೆ. ಶಿವಮೊಗ್ಗ ಪ್ರದೇಶದಲ್ಲಿ ಮಾಸ್ತಿಕಲ್ಲುಗಳು ಹಲವು ದೊರಕುತ್ತಿದ್ದರೂ ಜನತೆಯಲ್ಲಿ ಇಂಥ ಯಾವುದೇ ಭಕ್ತಿ ಗೌರವದ ತಿಳುವಳಿಕೆಗಳು

ಸಾಮಾನ್ಯವಾಗಿ ಇಲ್ಲದಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಉತ್ತರ ಕರ್ನಾಟಕದ ಧಾರವಾಡ ಪ್ರದೇಶದಲ್ಲಿ ಶಾಸನಸ್ಥ ಮಾಸ್ತಿಕಲ್ಲುಗಳು, ಮಾಸ್ತಿ-ಶಿಲ್ಪಗಳು, ಮಾಸ್ತಿಗುಡಿಗಳು ಅಧಿಕ ಸಂಖ್ಯೆಯಲ್ಲಿ ದೊರಕುತ್ತವೆ. ಇದರಿಂದಾಗಿ ಈ ಭಾಗದಲ್ಲಿಯೂ ಸತಿಘಟನೆಗಳು ಹೆಚ್ಚು ಆಚರಿಸಲ್ಪಟ್ಟವು ಎಂದು ಹೇಳಬಹುದಾಗಿದೆ. ಕರ್ನಾಟಕದ ಬಯಲು ಭೂಮಿಗೆ ಬಂದರೆ, ಬೀದರ, ಗುಲ್ಬರ್ಗಾ, ವಿಜಾಪುರ, ರಾಯಚೂರ, ಬಳ್ಳಾರಿ, ಬೆಳಗಾವ ಈ ಪ್ರದೇಶಗಳಲ್ಲಿ ಸತಿ ಆಚರಣೆ ಅಲ್ಪಪ್ರಮಾಣದಲ್ಲಿ ಜರುಗಿರುವುದು ಗೋಚರಿಸುತ್ತದೆ. ಈ ಪ್ರದೇಶಗಳಲ್ಲಿ ತೀರ ಕೆಲವು ಮಾಸ್ತಿಕಲ್ಲುಗಳು, ಮಾಸ್ತಿಗುಡಿಗಳು ದೊರಕುತ್ತವೆ. ಬಹುಶಃ ಸತಿಪದ್ಧತಿಯನ್ನು ನಿರುತ್ತೇಜನಗೊಳಿಸಿದ ಶಿವಶರಣರ ಕ್ರಾಂತಿಯಿಂದಲೂ ಈ ಭಾಗದಲ್ಲಿ ಸತಿ ಆಚರಣೆ ಹೆಚ್ಚು ಪ್ರಚಾರದಲ್ಲಿರಲಿಲ್ಲವೆನಿಸುತ್ತದೆ. ಅಲ್ಲದೆ ಈ ಭಾಗಗಳಲ್ಲಿಯ ಶಾಸನಕಲ್ಲುಗಳನ್ನು ಸಂಗ್ರಹಿಸುವ ಉನ್ನತಮಟ್ಟದ ಕ್ಷೇತ್ರಕಾರ್ಯವೂ ನಡೆಯದಿರುವುದನ್ನು ಈ ಸಂದರ್ಭದಲ್ಲಿ ಮರೆಯಬಾರದು. ಮತ್ತು ಬಯಲುನಾಡಿನಲ್ಲಿಯ ಇಂಥ ಶಾಸನಗಳು, ಶಿಲ್ಪಗಳು, ಮಳೆ, ಗಾಳಿ, ಬಿಸಿಲುಗಳಿಗೆ ಸಿಕ್ಕು ಹೆಚ್ಚು ನಾಶಹೊಂದಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಈ ಹಲವು ಕಾರಣಗಳಿಂದ ಬಯಲುನಾಡಿನ ಕರ್ನಾಟಕದಲ್ಲಿ ಇಂದು ಸತಿಸ್ಮಾರಕಗಳು ಕಡಿಮೆ ಪ್ರಮಾಣದಲ್ಲಿ ಸಿಗುತ್ತಿರಬಹುದು. ಅದೇನೇ ಇದ್ದರೂ ಉತ್ತರ ಕರ್ನಾಟಕದಲ್ಲಿ ಈ ಪದ್ಧತಿ ಅಷ್ಟು ರಭಸವಾಗಿರಲಿಕ್ಕಿಲ್ಲ.

ಸಾಮಾಜಿಕ ಶ್ರೇಣಿ:

ಕರ್ನಾಟಕದ ಹಲವು ಜನಾಂಗಗಳಲ್ಲಿ ಸತಿ ಆಚರಣೆ ಆಚರಿಸಲ್ಪಟ್ಟಿದ್ದು ಕಂಡುಬರುತ್ತದೆ. ಮುಖ್ಯವಾಗಿ ಇದು ಹೋರಾಟವರ್ಗದವರಲ್ಲಿ ಪ್ರಚಲಿತದಲ್ಲಿದ್ದುದನ್ನು ಶಾಸನಗಳು, ಶಿಲ್ಪಗಳು, ತಿಳಿಸುತ್ತವೆ. ಕುಪ್ಪಟೂರು, ದೂಗೂರು, ಕಿಪಡಿ, ಕೊಂಡಗಳಿ, ಸಿರೂರ, ಹುಣಸೂರು, ಕೋಗಳಿ, ಹಿರೇಹಾರಕ, ಹರಿತಾಳು, ಈ ಮೊದಲಾದ ಶಾಸನಗಳಲ್ಲಿ ವೀರ ಹೋರಾಟದಲ್ಲಿ ಮಡಿಯಲಾಗಿ ಅವನ ಪತ್ನಿ ಸತಿಹೋದುದನ್ನು ತಿಳಿಸಲಾಗಿದೆ.[137] ಇದೇ ರೀತಿ ಹೆಬ್ಬಲಗುಪ್ಪೆ, ಬಳ್ಳಿಗಾವೆ, ಕುಣಗನಹಳ್ಳಿ, ಚಿಕ್ಕಹಾಲವಾಣ, ಹರೂರ, ಈ ಮೊದಲಾದ ಊರುಗಳಲ್ಲಿಯ ಸ್ಮಾರಕಶಿಲ್ಪಗಳು ಹೋರಾಟಮಾಡಿ ಮಡಿದವರ ಪತ್ನಿಯರು ಸತಿಹೋದುದನ್ನು ತಿಳಿಸುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.(ಚಿತ್ರ 52,4 ,55 , 56 ,57 , 58 ,8 )

ರಾಜಮನೆತನಗಳಲ್ಲಿ, ಗ್ರಾಮದಮುಖ್ಯಸ್ಥರ ಮನೆತನಗಳಲ್ಲಿ ಸತಿಘಟನೆಗಳು ಆಚರಿಸಲ್ಪಟ್ಟಿವೆ. ಬಿಜ್ಜಳನ ತಾಯಿ ಸಹಗಮನಮಾಡಿಕೊಂಡದ್ದನ್ನು ಸಿಂಗಿರಾಜ ಪುರಾಣ ತಿಳಿಸುತ್ತದೆ[138] ಎರಡನೆಯ ದೇವರಾಯನ ಕಾಲಕ್ಕೆ ವಿಜಯನಗರಕ್ಕೆ ಭೇಟಿಕೊಟ್ಟ ನಿಕೋಲೋ ಡಿ ಕೊಂತಿ ಎಂಬ ವಿದೇಶಿಪ್ರವಾಸಿ ರಾಜ ಮರಣಹೊಂದಿದರೆ ಅವನ ಹಲವರು ಪತ್ನಿಯರು ಸತಿಹೋಗುತ್ತಾರೆ ಎಂದು ಹೇಳುತ್ತಾನೆ.[139] ಮಾನುಯೆಲ್ ಬರ್ರಡಾಸ್ ಎಂಬ ವಿದೇಶಿಪ್ರವಾಸಿಯು ವಿಜಯನಗರದ ಅರಸು ವೆಂಕಟಪತಿ ಮರಣಹೊಂದಲಾಗಿ ಅವನ ಮೂವರು ರಾಣಿಯರು ಸತಿಹೋದುದನ್ನು ತಿಳಿಸುತ್ತಾನೆ.[140] ಕುಮಾರ ವೀರಣ್ಣ ಯುದ್ಧದಲ್ಲಿ ಮರಣಗೊಳ್ಳಲು ಅವನ ಪತ್ನಿಯರು ಅವನ ಶವದೊಡನೆ ಸಮಾಧಿಯಲ್ಲಿ ಕುಳಿತು ಸತಿ ಹೋದುದನ್ನು ಸಿರುಮಣನಾಯಕನ ಸಾಂಗತ್ಯ ಹೇಳುತ್ತದೆ.[141] ''ವಡೆರ ಪಟ್ಟ ಬಿ–4'' ದಲ್ಲಿ ಮೈಸೂರು ಅರಸು ಮನೆತನದಲ್ಲಿ ಜರುಗಿದ ಸತಿಘಟನೆಗಳ ವಿವರಗಳಿವೆ.[142] ಹೆಗ್ಗೋಡು - ಗ್ರಾಮದ ಮಹಾಪ್ರಭುವಾದ ಬೀರಗೌಡರ ಮಗ ''ಬಯಿರವಗೌಡರು ಸತಿಸಂಗಡ ವಯಿಕುಂಟ ಪ್ರಪಿತರಾದರು'' ಎಂದು ಹೆಗ್ಗೋಡು ಶಾಸನವು ಹೇಳುತ್ತದೆ.[143] ''ಶ್ರೀ ಮನಾವಿಯದ ಪ್ರಭುಮಂಗಲೂರನಾಗಗೌಡರಮಗನೆಟ್ಟಿ. ಗೌಡರು ಸ್ವರ್ಗಸ್ತರಾಗಲು ಆತನ ಮದವಳಿಗೆ.... ಯಂಗೌಡಿ ಅಗ್ನಿಪ್ರವೇಶವನು ಮಾಡಿದಳು'' ಎಂದು ಮಂಗಳೂರು ಶಾಸನವು ತಿಳಿಸುತ್ತದೆ.[144] ಮನಗುಂಡಿ ಶಾಸನದಲ್ಲಿ ನಾಡಪ್ರಭು ಹಳ್ಳಿಗೆರೆಯ ಮಲ್ಲಪ್ಪನು ಸ್ವರ್ಗಸ್ತನಾದ ವಿಷಯವಿದೆ.[145] ಈ ಸ್ಮಾರಕಶಿಲ್ಪದಲ್ಲಿ ಅವನ ಪತ್ನಿಯು ಸತಿಹೋದುದನ್ನು ಚಿತ್ರಿಸಲಾಗಿದೆ. ಈ ವಿವರಗಳಿಲ್ಲ ಕರ್ನಾಟಕದ ಆಡಳಿತವರ್ಗದ ಮನೆತನಗಳಲ್ಲಿ ಸತಿಘಟನೆಗಳು ಜರುಗಿರುವುದನ್ನು ತಿಳಿಸುವವುಗಳಾಗಿವೆ

ಮಾಸ್ತಿಶಿಲ್ಪಗಳ ಮೇಲಿನ ಹಂತದಲ್ಲಿ ಸಾಮಾನ್ಯವಾಗಿ ಲಿಂಗ,ನಂದಿ, ಅರ್ಚಕನನ್ನು ಕಂಡರಿಸಿರುವುದನ್ನು ಕಾಣುತ್ತೇವೆ. ಈ ಶಿಲ್ಪಗಳು ಶೈವಮತದ ಸ್ತ್ರೀಯರು ಸತಿಹೋದುದನ್ನು ಧ್ವನಿಸುತ್ತವೆ. ಇಂಥ ಶಿಲ್ಪಗಳು ಬಹುತರ ಹಳ್ಳಿಗಳಲ್ಲಿ ದೊರಕುತ್ತವೆ. ಕ್ರಿ.ಶ. 1422 ರ ಬೆಳಗಾವಿ ಶಾಸನದಲ್ಲಿ ಬುಳ್ಳಿದೇವನ ಮೂವರು ಪತ್ನಿಯರು, ಇಮ್ಮಡಿಚಿಕ್ಕಭೂಪಾಲನ ಸಾಂಗತ್ಯದಲ್ಲಿ ತೋಂಟದರಾಯನ ಮಡದಿ ಚೆನ್ನಬಸವಮ್ಮ, ಸಿರುಮಣನಾಯಕನ ಸಾಂಗತ್ಯದಲ್ಲಿ ವೀರಣ್ಣನ ಪತ್ನಿಯರು ಸತಿಹೋದುದನ್ನು ಚಿತ್ರಿಸಲಾಗಿದೆ.[146] ಈ ಉದಾಹರಣೆಗಳು ವೀರಶೈವರಲ್ಲಿದ್ದ ಸತಿ ಆಚರಣೆಯನ್ನು ತಿಳಿಸುತ್ತವೆ. ಬಿನ್ನೂರಿನ ಕುಂಬಾರ ಕುಲದ ಚಂಡವೆ ಸಹಗಮನ ಮಾಡಿಕೊಂಡದ್ದನ್ನು ಶಾಸನವೊಂದು ವಿವರಿಸುವುದನ್ನು ಇದೇ ಸಂದರ್ಭದಲ್ಲಿ

ಸ್ಮರಿಸಬಹುದಾಗಿದೆ.[147] ಜೈನಧರ್ಮೀಯರಾದ ಚೆನ್ನಕ್ಕ, ಮಾದಿಗೌಂಡಿ ಸತಿಹೋದುದನ್ನು ಹಿರೇಆವಲಿಯ ಎರಡು ಶಾಸನಗಳು ತಿಳಿಸುತ್ತವೆ.[148] ಬಾಳೂರಿನ ಶಿಲ್ಪದಲ್ಲಿ ಜೈನಸ್ತ್ರೀಯ ಸಹಗಮನ ಚಿತ್ರಿಸಲಾಗಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.(ಚಿತ್ರ — 59) ಅಲ್ಲದೆ ರನ್ನನ ಅಜಿತಪುರಾಣದಲ್ಲಿಯ ಜೈನಳಾದ ಗುಂಡಮಬ್ಬೆ ಗಂಡನಾಗದೇವನ ಶವದೊಡನೆ ಚಿತಾ ಪ್ರವೇಶಿಸಿದ ವಿಷಯದ ಚಿತ್ರಣ ಪ್ರಸಿದ್ಧವಾದುದಾಗಿದೆ.[149]

ಬ್ರಾಹ್ಮಣ ಸ್ತ್ರೀಯರು ಕೆಲವರು ಸಹಗಮನ ಮಾಡಿಕೊಂಡ ವಿವರಗಳು ದೊರಕುತ್ತವೆ. ಟಿ. ನರಸೀಪುರ ತಾಲೂಕಿನ ಬ್ರಾಹ್ಮಣ ಹೆಂಗಸೊಬ್ಬಳು ಸತಿಹೋದುದು ಸರ್ಕಾರದ ಪರಿಪತ್ರವೊಂದರಲ್ಲಿದೆ.[150] ತುಮಕೂರು ಜಿಲ್ಲೆ ಕೈದಾಳು ಗ್ರಾಮದ ಸ್ಮಾರ್ತ ಬ್ರಾಹ್ಮಣರಾಗಿದ್ದ ಶಿವರಾಮಯ್ಯನವರ ಪತ್ನಿ ಸತಿಹೋದುದನ್ನು ಡಾ: ಎಂ ಚಿದಾನಂದಮೂರ್ತಿ ಅವರು ತಿಳಿಸುತ್ತಾರೆ.[151] ಕ್ರಿ. ಶ. 1826, ಜೂನ 9 ರಂದು ಬ್ರಾಹ್ಮಣಸ್ತ್ರೀಯೊಬ್ಬಳು ಸಹಗಮನ ಹೋದುದನ್ನು ಮಿಷಿನರಿ ಟಿಪ್ಪಣಿಗಳ ಪತ್ರವೊಂದರಲ್ಲಿ ತಿಳಿಸಲಾಗಿದೆ.[152] ಹಂಪೆಯ ತುಲಾಭಾರ ಸ್ತಂಭದ ಬಳಿ ಇರುವ ವೀರಗಲ್ಲಿನ ಶಿಲ್ಪದಲ್ಲಿ ಇಬ್ಬರು ಸ್ತ್ರೀಯರು ಸತಿಹೋದುದನ್ನು ತೋರಿಸಲಾಗಿದೆ. ಈ ಸ್ಮಾರಕಶಿಲ್ಪದಲ್ಲಿ ಮೇಲಿನ ಸ್ತರದಲ್ಲಿ ವೈಷ್ಣವ ಲಾಂಛನಗಳಾದ ಶಂಖ, ಚಕ್ರ, ಪದ್ಮಗಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ

ಕರ್ನಾಟಕದ ಹಿಂದುಳಿದ ವರ್ಗದಲ್ಲಿ ಸತಿಆಚರಣೆ ನಡೆದುಕೊಂಡು ಬಂದಿರುವ ಕುರಿತಾಗಿ ವಿವರಗಳು ದೊರಕುತ್ತವೆ. ಬೇಡಜನಾಂಗದ ಇಬ್ಬರು ಸ್ತ್ರೀಯರು ಸತಿಹೋದುದನ್ನು ಮಲಂಡೂರು, ಮತ್ತು ಕುಂಸಿಗ್ರಾಮದ ಶಾಸನಗಳು ತಿಳಿಸುತ್ತವೆ. "ಮಲಿಯಂದೂರ ಬೇಡ ಬೇರ ಜೇಲಜೀಯರ ಬಿಸದಾಂತಿರದಲ್ಲಿ ಅಪಾತಾ ಅಮರರೊಳುಪೊಲ್ಗೆ ಬೊಮ್ಮಕ್ಕನು ಮಹಾಸತಿಯಾಗಿ ದೇವಲೋಕ ಪ್ರಾಪ್ತರಾದರು" ಎಂದು ಮಲಂದೂರು ಶಾಸನವು ತಿಳಿಸಿದರೆ, "ಕುಂಬಸಿಯಬೇಡರ ಮಾರಯನಾಯಕನು ಆತನ ಮದವಳಿಗೆ ಬೊಂಮಾಯಿ ಸ್ವರ್ಗಸ್ಥರಾದರು" ಎಂದು ಕುಂಸಿಗ್ರಾಮ ಶಾಸನವು ತಿಳಿಸುತ್ತದೆ.[153] ಕ್ರಿ.ಶ. 1057 ರ ಬೆಳತೂರು ಶಾಸನದಲ್ಲಿ ದೇಕಬ್ಬೆಯು ಸತಿಹೋದುದನ್ನು ಚಿತ್ರಿಸಲಾಗಿದೆ.[154] ಈ ದೇಕಬ್ಬೆ ಜಾತಿಯಿಂದ ಶೂದ್ರಳೆಂದು ಶೀ|| ಕಿಟೆಲ್ಲರು ಗುರುತಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[155]

ಕ್ರಿ.ಶ. ಸು. 1623 ರಲ್ಲಿ ಇಕ್ಕೇರಿಗೆ ಸಂದರ್ಶನಕೊಟ್ಟ ಪಿಯತ್ರೊ ದೆಲ್ಲಾವೆಲ್ಲಿ' ಎಂಬ ವಿದೇಶಿ ಪ್ರವಾಸಿಯು 'ತೆಲ್ಲಿಂಗಾ' ಜಾತಿಗೆ* ಸತಿ ಸೇರಿದ ಗಿಯಕ್ಕಮಳು ಸಹಗಮನ ಪೂರ್ವದಲ್ಲಿ ಅವಳು ಮೆರವಣಿಗೆ ತಗೆದುಕೊಂಡದ್ದನ್ನು ವರ್ಣಿಸಿದ್ದಾನೆ.[156] ಶ್ರೀರಂಗಪಟ್ಟಣದ ಶ್ರೀವೀರ-ಮಾಸ್ತ್ಯಯ್ಯನವರ ಮನೆತನದಲ್ಲಿ ಸ್ತ್ರೀಯೊಬ್ಬಳು ಸತಿಹೋಗಿರುವುದರ ಕುರುಹಾಗಿ ಕನ್ನಡಿ, ಕಳಸ, ಸೀರೆ, ಬಳೆಗಳಿವೆ. ಈ ಮನೆತನದವರು ಜಾತಿಯಿಂದ ಬೆಸ್ತರಾಗಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಹೀಗೆ ಕರ್ನಾಟಕದ ವಿವಿಧ ವರ್ಗದ ಜನರು ಸತಿ ಸಂಪ್ರದಾಯವನ್ನು ಒಪ್ಪಿಕೊಂಡು — ಆಚರಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.



**ಅಡಿಟಿಪ್ಪಣಿಗಳು:**

1. ಇ.ಸಿ. VIII — 523 ಕವಡಿಗ್ರಾಮ, ಸೊರಬ, ಕ್ರಿ.ಶ.ಸು.6ನೆಯ ಶತಮಾನ,
2. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ: ಎಂ. ಚಿದಾನಂದಮೂರ್ತಿ, ಪು. 315.
3. ಧಾ.ಜಿ.ಶಾ.ಸೂ., ಪು.27, ಕ್ರಿ. ಶ.ಸು.9ನೆಯ ಶತಮಾನ
4. ಅದೇ, ಪು. 65.
5. ಎಸ್.ಐ.ಐ.IX — I, 56, ಕೊಡಳಿ, ಹಡಗಲಿ, ಕ್ರಿ.ಶ.908—9.
6. ಪಂಪಕವಿ ವಿರಚಿತ ಪಂಪಭಾರತಂ, ಪು.138, ಇದೇ ರೀತಿ ಕುಮಾರವ್ಯಾಸಭಾರತದಲ್ಲಿಯೂ ಮಾದ್ರಿಯ ಸಹಗಮನದ ವಿಷಯ ಬರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. — ಕುಮಾರವ್ಯಾಸಮಹಾಕವಿಯ ಕರ್ಣಾಟಭಾರತ ಕಥಾಮಂಜರಿ, ಪು. 15.
7. ಅದೇ.ಪು.503.
8. ಇ.ಸಿ.VIII—II, 457, ಚೆನ್ನೂರು, ಸೊರಬ, ಕ್ರಿ.ಶ. 972.
9. ಮಹಾಕವಿ ಕವಿರನ್ನ ವಿರಚಿತಮಪ್ಪ ಅಜಿತತೀರ್ಥಂಕರ ಪುರಾಣತಿಲಕಂ. ಪು.9—10.
10. ಅದೇ. ಪು.168.
11. ಅದೇ.ಪು.10
12. "ಗರ್ಭಿಣಿಯರಿಗೆ, ಚಿಕ್ಕಮಕ್ಕಳಿರುವ ತಾಯಂದಿರಿಗೆ ಸಹಗಮನವನ್ನು ಸ್ಮೃತಿಗಳು ನಿಷೇಧಿಸಿವೆ" — ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ: ಎಂ. ಚಿದಾನಂದಮೂರ್ತಿ, ಪು.316.
13. ಇ.ಸಿ.VII—I, 72, ಉತ್ತರಾಣಿಹಳ್ಳಿ, ಶಿಕಾರಿಪುರ, ಕ್ರಿ.ಶ. 1051.
14. ಅದೇ III 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057,
15. ಅದೇ 61 ಹೆಬ್ಬಲಗುಪ್ಪೆ, ಕ್ರಿ.ಶ. 1088 — 89.
16. ಸಮಾಧಿ — ಬಲಿದಾನ — ವೀರಮರಣಸ್ಮಾರಕಗಳು: ಡಾ: ಎಂ.ಎಂ. ಕಲಬುರ್ಗಿ, ಪು.24.



17. ಏಚನಿಗೆ ಮಕ್ಕಳಿದ್ದ ಸೂಚನೆ ಶಾಸನದಲ್ಲಿ ಇಲ್ಲ, ಮತ್ತು ಶಾಸನದಲ್ಲಿ ದೇಕಬ್ಬೆಯನ್ನು 'ಲಲಿತಾಂಗಿ' ಎಂಬ ವಿಶೇಷಣದಿಂದ ಕರೆದಿರುವುದನ್ನು ನೋಡಿದರೆ ಅವಳು ಪ್ರೌಢೆಯಾಗಿದ್ದವಳು ಎಂದು ಅರ್ಥಹೊರಡುತ್ತದೆ.

18. ವಾಗರ್ಥ: ಡಾ: ಎಂ. ಚಿದಾನಂದಮೂರ್ತಿ. ಪು. 185.

19. ಇ. ಸಿ. VI, 66, ಕೋಟೆಪೂರು, ಚಿಕ್ಕಮಗಳೂರು, ಕ್ರಿ. ಶ. 1089.

20. ಅದೇ I, ಪು. 52, ಮುಳ್ಳೂರು, ಸೋಮವಾರಪೇಟೆ, ಕ್ರಿ. ಶ. 1077.

21. ಬಸವಣ್ಣನವರ ವಚನಗಳು, 678, ಸಕಲ ಪುರಾತನರ ವಚನಗಳು, 1761, ಶಿವಶರಣೆಯರ ವಚನಗಳು, ಪು. 153, ಸಮಯಪರೀಕ್ಷೆ, ಪು. 392, ಕವಿಚಕ್ರವರ್ತಿ ಜನ್ನವಿರಚಿತ ಅನಂತನಾಥ ಪುರಾಣಂ, ಪು. 279, 280.

22. ಎಮ್. ಎ. ಆರ 1934. 12 ಅಂಗಡಿ, ಮೂಡಿಗೆರೆ ಕ್ರಿ. ಶ. 1117.

23. ಇ. ಸಿ. IX, 12, ಎಚಲವಾಡಿ, ಕಾನಕಾನಹಳ್ಳಿ, ಕ್ರಿ. ಶ. 1118.

24. ಅದೇ VII, 32, ಹುತ್ತಗ್ರಾಮ, ಶಿವಮೊಗ್ಗ, ಕ್ರಿ. ಶ. 1134.

25. ಅದೇ IV 96, ಕಸಲಗೆರೆ, ನಾಗಮಂಗಲ, ಕ್ರಿ. ಶ. 1150.

26. ಇ. ಅಂಟಿ. XIV ಪು. 273, ಕ್ರಿ. ಶ. 1180

27. ಇ. ಸಿ. IV 87, ದೇವರಹಳ್ಳಿ, ನಾಗಮಂಗಲ, ಕ್ರಿ. ಶ. 1181

28. ಅದೇ VIII – I, 38, ಹಿರೇಹಾರಕ, ಶಿಕಾರಿಪುರ, ಕ್ರಿ. ಶ. 1191

29. ಅದೇ 396, ಹಿರೀಕಬ್ಬೂರು, ಸೊರಬ, ಕ್ರಿ. ಶ. 1200: ಎಂ. ಎ. ಆರ 1928, 82 ಕಮ್ಮನಹಳ್ಳಿ, ಸೊರಬ, ಕ್ರಿ. ಶ. 11–12 ನೆಯ ಶತಮಾನ.

30. ಕೆ. ಅಂತ್. V 116, ಚೇಡಕಣ, ಸಿದ್ದಾಪುರ, ಕ್ರಿ. ಶ. 12ನೆಯ ಶತಮಾನ.

31. ಸಿಂಗಿರಾಜಕವಿಕೃತ ಸಿಂಗಿರಾಜ ಪುರಾಣ, ಪು. 395.

32. ಸಮಾಧಿ — ಬಲಿದಾನ — ವೀರಮರಣಸ್ಮಾರಕಗಳು: ಡಾ: ಎಂ ಎಂ ಕಲಬುರ್ಗಿ ಪು. 40 (ಅಡಿಟಿಪ್ಪಣಿ)

33· ಎಂ·ಎ·ಆರ್ 1930, 61, ಸಾಡಕಳಸಿ, ಸಾಗರ, ಕ್ರಿ· ಶ· 1201·

34· ಅದೇ 1931, 60, ಕಳಲೂರಕಟ್ಟೆ, ನಗರ, ಕ್ರಿ· ಶ· 1218·

35· ಇ·ಸಿ·VIII—II, 397, ಹಿರೀಕಬ್ಬೂರು, ಸೊರಬ, ಕ್ರಿ· ಶ· 1223(?)

36· ಇ·ಸಿ·V—II, 81 ಕೋಳಿಗುಂದ, ಅರಸಿಕೆರೆ, ಕ್ರಿ·ಶ·ಸು· 1225(ಈ ಸ್ಮಾರಕ—ಶಿಲೆ ಇರುವ ಹೊಂಡಗಟ್ಟೆನಲ್ಲಿ ನೀರು — ಕೆಸರು ಸಂಗ್ರಹವಾಗಿದ್ದರಿಂದ ಇದರ ಶಿಲ್ಪ ನೋಡಲು ಸಾಧ್ಯವಾಗಲಿಲ್ಲ· ಬಹುಶ: ಈ ಶಿಲ್ಪದಿಂದ ಈ ಶಾಸನದ ವಿಷಯ ಸ್ಪಷ್ಟವಾಗಬಹುದಾಗಿದೆ·)

37· ಅದೇ, VIII —II, 29, ಹರಿತಾಳು, ನಗರ, ಕ್ರಿ·ಶ· 1228·

38· ಅದೇ 361 ಬೆನ್ನೂರು, ಸೊರಬ, ಕ್ರಿ·ಶ·1259·

39· ಅದೇ, 78, ಸೇಣೆಗೆ, ಸಾಗರ, ಕ್ರಿ· ಶ· 1265·

40· ಎಸ್·ಐ·ಐ· XVIII 262, ಬೆನಕನಕೊಂಡ, ರಾಣೆಬೆನ್ನೂರು, ಕ್ರಿ·ಶ· 1284·

41· ಇ·ಸಿ·VII—I, 141 ಬೆಳಗಾವಿ, ಶಿಕಾರಿಪುರ, ಕ್ರಿ·ಶ· 1286·

42· ಇ·ಸಿ·VII, 61 ಹಾರೋಬೆನವಳ್ಳಿ, ಶಿಕಾರಿಪುರ, ಕ್ರಿ· ಶ· 1286·

43· ಎಮ್·ಎ·ಆರ್· 1938, 8 ಶಂಕರನಹಳ್ಳಿ, ಅರಸಿಕೆರೆ, ಕ್ರಿ· ಶ· 1300·

44· ಅನುಕ್ರಮವಾಗಿ : ಎಸ್·ಐ·ಐ·XX 356, ಸಿಡೇನೂರು, ಹಿರೇಕೆರೂರು, 13—14 ನೆಯ ಶತಮಾನ : ಇ·ಸಿ·IV, 114 ಮುಡಿಗೊಂಡ, ಕೊಳ್ಳೇಗಾಲ, 13ನೆಯ ಶತಮಾನ : ಧಾ·ಜಿ· ಶಾ· ಸು· ಪು·99, ಹಾದ್ರಿಹಳ್ಳಿ ಹಿರೇಕೆರೂರು, 13ನೆಯ ಶತಮಾನ : ಅದೇ ಪು·60, ಕೇವರಕೊಪ್ಪ ಹಾನಗಲ್ಲು, 13ನೆಯ ಶತಮಾನ·

45· ಧಾ·ಜಿ·ಶಾ·ಸು·ಪು·66, ಮಲ್ಲಿಗಾರ, ಹಾನಗಲ್ಲು, ಸು· 13ನೆಯ ಶತಮಾನ,

46· ಅದೇ·ಪು·75, ನಿಡನೇಗಿಲ, ಹಿರೇಕೆರೂರು, 13ನೆಯ ಶತಮಾನ·

47· ಇ·ಸಿ·VI, 81, ಅಗ್ರಹಾರ ಬಾಚಹಳ್ಳಿ, ಕೃಷ್ಣರಾಜಪೇಟ, ಸು· 13ನೆಯ ಶತಮಾನ·

48. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ : ಡಾ: ಚೆನ್ನಕ್ಕ ಎಲಿಗಾರ, ಪು. 435.

49. ಸೋಸಿಯಲ ಆ್ಯಂಡ ಪೊಲಿಟಿಕಲ ಲೈಫ ಇನ ದಿ ವಿಜಯನಗರ ಎಂಪಾಯರ — II
ಡಾ: ಬಿ.ಎ. ಸಾಲೆತೊರೆ, ಪು. 88.

50. ಇ.ಸಿ. VIII — II, 104, ಹಿರೇಅವಲಿಗ್ರಾಮ, ಸೊರಬ, ಕ್ರಿ. ಶ; 1354.

51. ಅದೇ, 106 ಹಿರೇಅವಲಿ, ಕ್ರಿ. ಶ. 1376.

52. ಎಂ.ಎ.ಆರ್. 1947–56, 18 ಅರುಹನಹಳ್ಳಿ, ಮಳವಳ್ಳಿ, ಕ್ರಿ.ಶ. 1362

53. ಇ.ಸಿ. VIII — II, 16 ಆರಗ, ತೀರ್ಥಹಳ್ಳಿ, ಕ್ರಿ.ಶ. 1377.

54. ಅದೇ, 299 ತುಂಬರಹೊಸೂರು, ಶಿಕಾರಿಪುರ, ಕ್ರಿ.ಶ. 1378.

55. ಧಾ.ಜಿ.ಶಾ.ಸು.ಪು.76, ಭೈರವನಪಾದ, ಹಿರೇಕೆರೂರ, ಕ್ರಿ.ಶ. 1381.

56. ಕೆ.ಆಯ್. IV, ಮುತ್ತೂರು, ಹಿರೇಕೆರೂರು, ಕ್ರಿ. ಶ. 1382.

57. ಇ.ಸಿ. XI, 117, ದಾವಣಗೆರೆ, ಕ್ರಿ. ಶ. 1383.

58. ಧಾ.ತಾ. ಶಾ., ಪು.55, ಮುನಗುಂಡಿ, ಕ್ರಿ.ಶ. 1384.

59. ಎಮ್.ಎ.ಆರ್. — 1923, 89 ಮುಲಂದೂರು, ಸಾಗರ, ಕ್ರಿ. ಶ. 1386.

60. ಇ.ಸಿ. VIII-II, 512, ಜಿಟೂಬ್ಬಟು, ಸೊರಬ, ಕ್ರಿ.ಶ. 1387.

61. ಅದೇ, 483, ದುಗೂರು, ಕ್ರಿ. ಶ. 1388.

62. ಅದೇ, 134, ಹಿರೇಅವಲಿ, ಕ್ರಿ. ಶ. 1388. ಇ.ಸಿ. VII, 305, ಸಂಡದಗ್ರಾಮ,
ಶಿಕಾರಿಪುರ, ಕ್ರಿ.ಶ. 1388

63. ಇ.ಸಿ. VIII - II, 25 ಮುನೆಮುನೆಗ್ರಾಮ, ಸೊರಬ, ಕ್ರಿ.ಶ. 1391 : ಅದೇ 134,
ಹಿರೇಅವಲಿಗ್ರಾಮ, ಕ್ರಿ.ಶ. 1393.

64. ಇ.ಸಿ. XI 116, ಮಾಸನ, ದಾವಣಗೆರೆ, ಕ್ರಿ. ಶ. 1397.

65. ಎಮ್.ಎ.ಆರ್. 1928, 88 ಹಿರೇಚವುಟಿಗ್ರಾಮ, ಸೊರಬ, ಕ್ರಿ.ಶ. 1399.

66. ಅದೇ, 1942, 54 ತವನಂದಿಗ್ರಾಮ, ಕ್ರಿ.ಶ. 1388 : ಎಸ್.ಆಯ್.ಆಯ್. XVIII,
409 ಇಟಗಿ, ರಾಣಿಬೆನ್ನೂರು, ಕ್ರಿ. ಶ. 14ನೆಯ ಶತಮಾನ.

67· ಎಸ್·ಐ·ಐ· XX 378, ಕುಂದಗೋಳ, ಕುಂದಗೋಳ, ಕ್ರಿ·ಶ·ಸು· 14ನೆಯ ಶತಮಾನ·

68· ಇ·ಸಿ·VII – I, 302, ಸಂಡದ, ಶಿಕಾರಿಪುರ, ಕ್ರಿ· ಶ· 1401

69· ಅದೇ 303, ಸಂಡದ, ಕ್ರಿ· ಶ· 1401·

70· ಅದೇ 306 ಸಂಡದ, ಕ್ರಿ·ಶ·ಸು· 1402·

71· ಇ·ಸಿ·VIII – II, 257 ಕುಪ್ಪಟೂರು, ಸೊರಬ, ಕ್ರಿ·ಶ·ಸು· 1408·

72· ಅದೇ, 158 ಬದರಿಗೆರೆ, ಕ್ರಿ· ಶ· 1402, : ಇ·ಸಿ· VII – I, 92, ಚಿಕ್ಕಹಾಲಿವಾಣ, ಹೊನ್ನಾಳಿ, ಕ್ರಿ·ಶ· 1403, ಅದೇ 93, ಚಿಕ್ಕಹಾಲಿವಾಣ, ಕ್ರಿ· ಶ· 1403 (?)

73· ಎಸ್·ಐ·ಐ· XVIII 413, ಹಡಿಂಯಾಲ, ರಾಣೆಬೆನ್ನೂರು, ಕ್ರಿ·ಶ· 1404·

74· ಅದೇ 276 ಕಣವಿ, ಗದಗ, ಕ್ರಿ·ಶ· 1407·

75· ಧಾ·ಜಿ·ಶಾ·ಸು·ಪು·78, ವರಾಹ, ಹಿರೇಕೆರೂರ, ಕ್ರಿ·ಶ· 1408·

76· ಇ·ಸಿ·VIII – II, 484, ದುಗೂರು, ಸೊರಬ, ಕ್ರಿ·ಶ· 1440·

77· ಅದೇ, 8 ಮರೂರು ಸಾಗರ, ಕ್ರಿ·ಶ· 1410·

78· ಎಂ·ಎ·ಆರ್·, ಜಂಬಾನೆಗ್ರಾಮ, ಸಾಗರ, ಕ್ರಿ·ಶ· 1410, ಧಾ·ಜಿ·ಶಾ·ಸು·ಪು·75· ನಿಟ್ಟೂರು, ಹಿರೇಕೆರೂರ, ಕ್ರಿ· ಶ· 1410·

79· ಇ·ಸಿ·VIII – II, 26, ಮನೆಮನೆಗ್ರಾಮ, ಸೊರಬ, ಕ್ರಿ·ಶ· 1411·

80· ಅದೇ, 467 ಮಂಗಳೂರು, ಕ್ರಿ·ಶ· 1412·

81· ಇ·ಸಿ·VII – I, 252 ಸೀರೆಹಳ್ಳಿ, ಶಿಕಾರಿಪುರ, ಕ್ರಿ·ಶ· 1416·

82· ಅದೇ, 37 ಹಿರೇಹಾರಕ, ಕ್ರಿ·ಶ· 1417·

83· ಎಂ·ಎ·ಆರ್· 1934, ಮೇಗರವಳ್ಳಿ, ತೀರ್ಥಹಳ್ಳಿ, ಕ್ರಿ·ಶ· 1417·
ಇ·ಸಿ· III, 103, ಪುರ, ಮಂಡ್ಯ, ಕ್ರಿ·ಶ· 1417·

84· ಇ·ಸಿ·VIII – II, 35, ಕೆಳದಿ, ಸಾಗರ, ಕ್ರಿ· ಶ· 1419 : ಅದೇ, 74, ಕಿಪಡಿ, ಕ್ರಿ·ಶ· 1420·

85· ಇ·ಸಿ· VII -I, 93, ಬೆಳಗಾವಿ, ಶಿಕಾರಿಪುರ, ಕ್ರಿ·ಶ· 1422·

86· ಇ·ಸಿ· VIII -II, 461 ಚನ್ನೂರು, ಸೊರಬ, ಕ್ರಿ·ಶ·1423: ಅದೇ, 565, ಹೆಗ್ಗೋಡು, ಕ್ರಿ·ಶ· 1424, : ಅದೇ 25 ಕಳೂರು, ನಗರ, ಕ್ರಿ·ಶ· 1425·

87· ಅದೇ 24, ಮನಮನೆಗ್ರಾಮ, ಸೊರಬ, ಕ್ರಿ·ಶ· 1429·

88· ಇ·ಸಿ· III 173, ಎರಿರಮೂರು, ಗುಂಡಲ್ಪೇಟ, ಕ್ರಿ·ಶ· 1429 (ಮಾರ್ಚ 10)

89· ಎಮ್·ಎ·ಆರ್· 1920, ಪು·42, ಕ್ರಿ·ಶ· 1430·

90· ಇ·ಸಿ· VIII -II, 51 ಕಾನಲೆ, ಸಾಗರ, ಕ್ರಿ·ಶ· 1431·

91· ಅದೇ, 497 ಕುಂಬತಿಗ್ರಾಮ, ಸೊರಬ, ಕ್ರಿ·ಶ· 1432: ಎಂ·ಎ·ಆರ್· 1931, ನಿಡುಗೋಡುಗ್ರಾಮ, ನಗರ, ಕ್ರಿ·ಶ· 1434 : ಇ·ಸಿ· VIII - II, 533, ಹುನವಳ್ಳಿ, ಸೊರಬ, ಕ್ರಿ·ಶ· 1437·

92· ಇ·ಸಿ· VIII - II, 75, ಕಿಪಡಿ, ಸಾಗರ, ಕ್ರಿ·ಶ· 1435·

93· ಅದೇ 536, ಹುನವಳ್ಳಿ, ಸೊರಬ, ಕ್ರಿ·ಶ·1438, ಕೆ·ಅಂಶು· IV, ಹಿರೇಕೆರೂರು, ಹಿರೇಕೆರೂರು, ಕ್ರಿ·ಶ· 1438·

94· ಇ·ಸಿ· VIII - II, 338 ಕುಣತೆಪ್ಪ, ಸೊರಬ, ಕ್ರಿ· ಶ· 1439·
ಇ·ಸಿ· III 210 ಕುಣಗನಹಳ್ಳಿ, ಗುಂಡಲ್ಪೇಟೆ, ಕ್ರಿ·ಶ· 1439·

95· ಇ·ಸಿ· VIII -II, 163, ಹರೂರು, ಸೊರಬ, ಕ್ರಿ·ಶ· 1442(?) : ಅದೇ 535 ಹುನವಳ್ಳಿ, 1444·

96· ಅದೇ, 495 ಕವಪ್ಪಗ್ರಾಮ ಕ್ರಿ·ಶ· 1445·

97· ಇ·ಸಿ· VII -I, 36 ಹಿರೇಹಾರಕ, ಶಿಕಾರಿಪುರ, ಕ್ರಿ·ಶ· 1445(?)

98· ಅದೇ, 239 ಬಂದಳಿಕೆ, ಕ್ರಿ·ಶ· 1447·

99· ಧಾ·ಜಿ· ಶಾ·ಸು· ಪು·78, ವರಾಹ, ಹಿರೇಕೆರೂರ, ಕ್ರಿ· ಶ· 1447·

100· ಇ· ಸಿ· VIII -II, 559, ಕೊಂಡಗಳಲೆ, ಸೊರಬ, ಕ್ರಿ· ಶ· 1448·

101· ಅದೇ, 544 ಇಂಡುವಳ್ಳಿ, ಕ್ರಿ· ಶ· 1450·



102. ಅದೇ 566, ಹೆಗ್ಗೋಡು, ಸೊರಬ, ಕ್ರಿ. ಶ. 1451.

103. ಎಂ.ಎ.ಆರ್. 1923, 80, ಕುಗ್ವೆಹಳ್ಳಿ, ಸಾಗರ ಕ್ರಿ.ಶ. 1451.

104. ಇ.ಸಿ. VIII – II, 48 ಸಿರುವಾರ, ಸಾಗರ ಕ್ರಿ. ಶ. 1454: ಅದೇ 50 ಮರತೂರು ಕ್ರಿ. ಶ. 1455.

105. ಅದೇ, 496, ಕುಪ್ಪೇಗ್ರಾಮ, ಸೊರಬ, ಕ್ರಿ. ಶ. 1458.

106. ಅದೇ, 524 ಕವಡಿಗ್ರಾಮ, ಕ್ರಿ. ಶ. 1465.

107. ಎಮ್.ಎ.ಆರ್. 1942, 59 ಕ್ಯಾಸನೂರುಗ್ರಾಮ, ಸೊರಬ, 1478.

108. ಇ.ಸಿ. VIII–II, 259 ಕುಪ್ಪಟೂರು, ಸೊರಬ, ಕ್ರಿ. ಶ. 1495.

109. ಎಮ್.ಎ.ಆರ್. 1929, 82, ಕಬ್ಬೂರು, ಸೊರಬ, 15ನೆಯ ಶತಮಾನ.

110. ಇ.ಸಿ. VIII – II, 537 ಹುನವಳ್ಳಿ, ಸೊರಬ, ಕ್ರಿ.ಶ.ಸು. 1451, ಅದೇ 76 ಕಿಪಡಿ, ಸಾಗರ, ಕ್ರಿ. ಶ. ಸು. 1457, ಅದೇ 456 ಬೆನ್ನೂರು ಸೊರಬ, ಕ್ರಿ.ಶ. 1465.

111. ಇ.ಸಿ. VIII – II, 155, ಉದ್ರಿಗ್ರಾಮ, ಸೊರಬ, ಕ್ರಿ. ಶ. 1506 (?)

112. ಅದೇ, 165, ಹರೂರು, ಕ್ರಿ. ಶ. 1509.

113. ಧಾ.ಜಿ.ಶಾ. ಸು., ಪು. 72, ಚಿನ್ನಮುಳಗುಂದ, ಹಿರೇಕೆರೂರ, ಕ್ರಿ.ಶ. 1520.

114. ಎಮ್.ಎ.ಆರ್. 1930, 72, ಗೌಜಗ್ರಾಮ, ಸಾಗರ, ಕ್ರಿ. ಶ. 1582: ಎಮ್.ಎ.ಆರ್. 1931, ಅರಸಾಳುಗ್ರಾಮ, ನಗರ, ಕ್ರಿ. ಶ. 1586.

115. ಇ.ಸಿ. XV, 70, ಮಾದಕಹಳ್ಳಿ ಚಾಮರಾಜನಗರ, 16ನೆಯ ಶತಮಾನ : ಎಂ.ಎ.ಆರ್. 1936, ಸಂತೆಮಾವತ್ತೂರು, ಕುಣಿಗಲ್, 16ನೆಯ ಶತಮಾನ : ಎಂ.ಎ.ಆರ್ 1929, 83, ಕಬ್ಬೂರು, ಸೊರಬ, 16ನೆಯ ಶತಮಾನ.

116. ಧಾ.ಜಿ. ಶಾ. ಸು. ಪು.69, ಹೆರೂರು ಹಾನಗಲ್ಲ, 16ನೆಯ ಶತಮಾನ : ಅದೇ, ಪು.75 ದಾಸನಕೊಪ್ಪ, ಹಿರೇಕೆರೂರು 16ನೆಯ ಶತಮಾನ.

117. ಇ.ಸಿ. VIII, 35 ಕೆಳದಿ, ಸಾಗರ, ಕ್ರಿ. ಶ. 1699.

118. ಧಾ.ಜಿ.ಶಾ. ಸು. 51, ಚಿನ್ನದಕಟ್ಟಿ, ಬ್ಯಾಡಗಿ, ಪು.71 ಅಲದಕಟ್ಟಿ ಹಿರೇಕೆರೂರು.

119. ಪ್ರ.ಕಂ.ಇಂ., ಸಂ — 2: ಸಂ11 ಎಚ್.ಎಲ್. ನಾಗೇಗೌಡ.ಪು. 126.

119. ಪ್ರ.ಕಂ. ಇಂ., ಸಂ–2: ಸಂ11 ಎಚ್.ಎಲ್.ನಾಗೇಗೌಡ, ಪು.126.

120. ಅದೇ, ಪು. 296.

121. ಅದೇ, ಪು.415

122. ಅದೇ, ಸಂ–4, ಪು. 158–159.

123. ಅದೇ ಪು. 246 – 249.

124. ಕುಮಾರವ್ಯಾಸಮಹಾಕವಿಯ ಕರ್ಣಾಟಕ ಭಾರತ ಕಥಾಮಂಜರಿ, ಪು. 15, 89 : ಕನಕದಾಸರ ಮೋಹನತರಂಗಿಣೀಸಂಗ್ರಹ, ಪು.66, ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ, ಪು. 205, 638, ನಂಜುಂಡಕವಿ ವಿರಚಿತರಾಮನಾಥ ಚರಿತ, (ಉತ್ತರಾರ್ಧ ), ಪು. 336, 337,: ಶ್ರೀಸಿದ್ಧೇಶ್ವರ ಮಹಾಪುರಾಣ, 12 – 35,36 : ಖಂಡೇಶ್ವರ ವಚನ,( ಷಣ್ಮುಖಸ್ವಾಮಿ ), ಪು. 138.

125. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ XVI : 70–72, 75,83,85,86 : ನಿರುಪಮನಾಯಕನ ಸಾಂಗತ್ಯ, ಪು. 67,68.

126. ಅನುಕ್ರಮವಾಗಿ : ಇ.ಸಿ.VIII–II, 169, ಹೆರೂರು ಸೊರಬ ?: ಅದೇ 545, ಚಿಕ್ಕಕಸವಿ, ? : ಅದೇ 40 ಕಲ್ಲಂಬಗ್ರಾಮ, ? : ಅದೇ, 23, ಹೆಂನಗೇರಿ, ಸಾಗರ, ? : ಅದೇ 282, ದೇವಸ್ಥಾನಹಕ್ಕಲುಗ್ರಾಮ ಸೊರಬ ?

127. ಅನುಕ್ರಮವಾಗಿ: ಇ.ಸಿ.VIII–II, 41, ಕಲ್ಲಂಬಗ್ರಾಮ, ಸೊರಬ, ?: ಅದೇ, 92, ಕುಂಸಿಗ್ರಾಮ, ? : ಅದೇ 482 ದುಗೂರು, ? : ಅದೇ 37 ಗುಂಜನೂರು: ? ಅದೇ, 36, ಗುಂಜನೂರು, ?: ಅದೇ, 458 ಬೆನ್ನೂರು, ? : ಅದೇ 214 ಜಡ್ಡಿಹಳ್ಳಿ ? ಇ.ಸಿ.V, 21 ಉಂಡಿಗನಾಳು, ಅರಸೀಕೆರೆ, ? : ಧಾ.ಜಿ. ಶಾ.ಸು. ಪು.64, ಬೆಳೂರು, ಹಾನಗಲ್ಲು, ? : ಇ. ಸಿ. VIII – II, 47, ಹುಣಸೂರು ಸಾಗರ, ? : ಅದೇ, 558 ಕೊಂಡಗಳಲೆ, ಸೊರಬ, ? : ಅದೇ, 499 ಕುಂ[illegible]ತಿಗ್ರಾಮ? ಅದೇ 230 ನಿಟ್ಟಕ್ಕಿ, ? : ಇ.ಸಿ. IV, 225 ಮುಳದೇವನಹಳ್ಳಿ, ಚಾಮರಾಜನಗರ, ? . ಎಂ.ಎ.ಆರ್ 1923,79, ಕರ್ಗಲ್ಲೇಹಳ್ಳಿ, ಸಾಗರ, ?: ಇ.ಸಿ. VIII –II, 552, ಸಿಗ್ಗಗ್ರಾಮ, ಸೊರಬ, ? : ಅದೇ 15 ಕಾತವಳಿ ನಗರ, ?

128· ಇ·ಸಿ· VIII —II, 150 ಉದ್ರಿಗ್ರಾಮ, ಸೊರಬ, ?

129· ಎಂ·ಎ·ಆರ್, 1925, 83,

130· ಅನುಕ್ರಮವಾಗಿ: ಇ·ಸಿ· VIII —II, 159 ಬದರಿಗೆರೆ, ಸೊರಬ, ?: ಅದೇ 534 ಹುನವಳ್ಳಿ, ? : ಅದೇ 538 ಹುನವಳ್ಳಿ ? : ಇ·ಸಿ· VII — I, 265, ಮುಳವಳ್ಳಿ, ಶಿಕಾರಿಪುರ, ?: ಅದೇ 24 ಸೊರಟೂರು, ಹೊನ್ನಾಳಿ, ? : ಇ·ಸಿ· VIII —II, 7 ದೊಡ್ಡಮಾಗೋಡು, ನಗರ ? : ಅದೇ, 281 ದೇವಸ್ಥಾನಹಕ್ಕಲುಗ್ರಾಮ ಸೊರಬ, ? ಅದೇ, 81 ಚಿತ್ರಟಹಳ್ಳಿ ?: ಎಂ·ಎ·ಆರ್· 1925, 38 ಚಿಕ್ಕರೇಹಳ್ಳಿ, ಕಡೂರು, ?: ಇ·ಸಿ· VII, 9, ಮಂಡಳಿಮಠ, ಶಿವಮೊಗ್ಗ, ?

131· ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ: ಎಂ·ಚಿದಾನಂದಮೂರ್ತಿ, ಪು·42·

132· ಎಮ್·ಎ·ಆರ್· 1938, ಟಿ· ನರಸೀಪುರ (ತಾಲೂಕ ಕಛೇರಿಯಿಂದ ಸಿಂಗ ಸನ್ನದು), ಮೈಸೂರು, 24 ಮಾರ್ಚ, 1805·

133· ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ: ಎಂ ಚಿದಾನಂದಮೂರ್ತಿ, ಪು·42·

134· ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ: ಬಸವರಾಜ ಕಲ್ಲುಡಿ, ಪು·141 (Missionary Notices No. XVIII, ಜೂನ್ 1827. The letters prefaced 'Mr. England' – Letter dated June–12, 1826).

135· ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಲ್ಲುಗಳು: ಡಾ: ಎಂ·ಚಿದಾನಂದಮೂರ್ತಿ, ಪು·43·

136· ಇ·ಸಿ·III, 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ· ಶ·1057·

137· ಇ·ಸಿ·VIII —11, 259 ಕುಪ್ಪಟೂರು, ಸೊರಬ, ?: ಅದೇ, 484 ದುಗೂರು, ಕ್ರಿ·ಶ·1410 : ಅದೇ 74 ಕಿಡಿ, ಸಾಗರ, ಕ್ರಿ·ಶ·1420, ಅದೇ, 559 ಕೊಂಡಗಳಲೆ, ಸೊರಬ, ಕ್ರಿ·ಶ· 1448 : ಅದೇ 48 ಸಿರೂರ, ಸಾಗರ, ಕ್ರಿ·ಶ·1454, ಅದೇ, 47 ಹುಣಸೂರು ?: ಎಸ್·ಅಂಡ್·ಅಂಡ್, IX —I, 56, ಕೋಗಳಿ ಹಡಗಲಿ, ಕ್ರಿ·ಶ·908—9, ಇ·ಸಿ· VII—I, 38 ಹಿರೇಜಾಡಕ, ಶಿಕಾರಿಪುರ, ಕ್ರಿ·ಶ1191: ಇ·ಸಿ· VIII —II, 29 ಹರಿತಾಳು, ನಗರ, ಕ್ರಿ·ಶ·1228·

138· ಸಿಂಗಿರಾಜ ಕವಿಕೃತ ಸಿಂಗಿರಾಜಪುರಾಣ, ಸಂಧಿ — 39, ಪದ್ಯ, 40·

139· ಪ್ರ·ಕಂ·ಇಂ·ಸಂ — 2: ಎಚ್·ಎಲ್· ನಾಗೇಗೌಡ, ಪು·126·

140· ಅದೇ, ಸಂ — 4, ಪು·158—159·

141· ಸಿರುಮಣನಾಂಯಕನ ಸಾಂಗತ್ಯ, ಪು· 67, 68·

142· ' ಮಡೆಪಟ್ಟು — ಬಿ — 4, (ಇಂಡಿಯಾ ಆಫೀಸ್ ಲೈಬ್ರರಿ ಲಂಡನ್.)

143· ಇ·ಸಿ·VIII —II, 656 ಹೆಗ್ಗೋಡು, ಸೊರಬ, ಕ್ರಿ·ಶ· 1424·

144· ಅದೇ, 467 ಮಂಗಳೂರು, ಸೊರಬ, ?

145· ಧಾ·ತಾ·ಶಾ· 55 ಮನಗುಂಡಿ, ಕ್ರಿ·ಶ· 1384

146· ಇ·ಸಿ·VII—I, 93 ಬೆಳಗಾವಿ, ಶಿಕಾರಿಪುರ, ಕ್ರಿ·ಶ·1422, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, XVI, 70 — 72, 75, 83, 85, 86: ಸಿರುಮಣನಾಯಕನ ಸಾಂಗತ್ಯ, ಪು·67, 68·

147· ಇ·ಸಿ·VIII —II, 461 ಚೆನ್ನೂರು, ಸೊರಬ, ಕ್ರಿ·ಶ· 1423·

148· ಅದೇ, 104 ಹಿರೇಅವಲಗ್ರಾಮ, ಕ್ರಿ·ಶ· 1354 : ಅದೇ, 106, ಹಿರೇಅವಲ, ಕ್ರಿ·ಶ· 1376·

149· ಮಹಾಕವಿ ಕವಿರನ್ನ ವಿರಚಿತಮಪ್ಪ ಅಜಿತತೀರ್ಥಂಕರ ಪುರಾಣತಿಲಕಂ ಪು·9—10—·

150· ಎಮ್· ಎ·ಆರ್· 1938, ಟಿ· ನರಸೀಪುರ ( ತಾಲೂಕ ಕಛೇರಿಯಿಂದ ಬಂದ ಸನ್ನದು) ಮೈಸೂರು, 24 ಮಾರ್ಚ, 1805·

151· ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ: ಎಂ·ಚಿದಾನಂದಮೂರ್ತಿ, ಪು·43·

152· ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ|| ಬಸವರಾಜ ಕಲ್ಗುಡಿ, ಪು·141·



153. ಎಮ್. ಎ. ಆರ್. 1923, 89, ಮುಲಂದೂರು, ಸಾಗರ ಕ್ರಿ.ಶ. 1386 :
ಇ.ಸಿ. VIII -II 92, ಕುಂಸಿಗ್ರಾಮ, ಸೊರಬ.?

154. ಇ.ಸಿ. III 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057.

155. ಇ.ಆರ್ಕ್. VI ಪು.215.

156. ಪ್ರ.ಕಂ.ಇಂ — ಸಂ—4: ಎಚ್.ಎಲ್.ನಾಗೇಗೌಡ, ಪು.241—249.

— 0 —

Chapter-6

## ಅಧ್ಯಾಯ – 6

## ಸತಿ ಸಂದರ್ಭದ ವಿಧಿಗಳು

'ವಿಧಿ' ಅರ್ಥವ್ಯಾಪ್ತಿಯನ್ನು ''ವಿಧತಿ, ವಿದಧಾತಿ, ವಿಶ್ವಂ ಇತಿ ವಿಧಿಃ'' (ಯಾವುದು ವಿಶ್ವವನ್ನು ಎತ್ತಿಹಿಡಿಯುವುದೋ ಅಥವಾ ಪಾಲಿಸುವುದೋ ಅದು ವಿಧಿ ) ಎಂದು ಹೇಳಲಾಗುತ್ತದೆ. ಆದರೆ ಈ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಸಹಗಮನ ಅಥವಾ ಅನುಗಮನ ಕಾಲಕ್ಕೆ ಸತಿ ಅಥವಾ ಅವಳಿಗೆ ಸಂಬಂಧಪಟ್ಟ ವ್ಯಕ್ತಿಗಳು ಪಾಲಿಸುತ್ತಿದ್ದ ಕಾರ್ಯ–ವಿಧಾನಗಳನ್ನು ಮತ್ತು ಅವರ ನಡವಳಿಕೆಗಳನ್ನು ಸೂಚಿಸಲಿಕ್ಕೆ ಮಾತ್ರ ಈ 'ವಿಧಿ' ಶಬ್ದವನ್ನು ಬಳಸಿಕೊಳ್ಳಲಾಗಿದೆ. ಸತಿ ವಿಧಿಗಳಲ್ಲಿ ಮುಖ್ಯವಾಗಿ ಎರಡು ಹಂತಗಳನ್ನು ಗುರುತಿಸಬಹುದಾಗಿದೆ: ಒಂದು : ಸತಿ ಮರಣದ ವರೆಗೆ ಆಚರಿಸಲ್ಪಡುತ್ತಿದ್ದ ವಿಧಿಗಳು, ಎರಡು: ಸತಿ ಮರಣದ ನಂತರ ಆಚರಿಸಲ್ಪಡುತ್ತಿದ್ದ ವಿಧಿಗಳು. ಈ ಎರಡೂ ಹಂತದ ಸತಿ ವಿಧಿಗಳ ಅಧ್ಯಯನವನ್ನು ಈ ಅಧ್ಯಾಯದಲ್ಲಿ ಒಳಪಡಿಸಲಾಗಿದೆ. ( ಸತಿ ವಿಧಿಯ ಮುಖ್ಯಭಾಗವಾಗಿರುವ 'ಚಿತಾಪ್ರವೇಶ – ಸಮಾಧಿಪ್ರವೇಶ ಎಂಬ ಅಧ್ಯಯನವನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಿಸಲಾಗಿದೆ ).

### (1) ಸತಿ ಮರಣದ ವರೆಗೆ ಆಚರಿಸಲ್ಪಡುತ್ತಿದ್ದ ವಿಧಿಗಳು:–

ಸತಿಹೋಗುವಾಗ ಮರಣ ಹೊಂದಿದ ವ್ಯಕ್ತಿಯ ಪತ್ನಿಯಿಂದ ಹಾಗೂ ಅವಳ ಸಂಬಂಧಿಗಳಿಂದ ಜರುಗುತ್ತಿದ್ದ ವಿಧಿಗಳು ತುಂಬ ಮಹತ್ವದವುಗಳಾಗಿವೆ. ಸತಿಯ ಮಾನಸಿಕ ವ್ಯಾಪಾರ, ಅವಳ ಹಾವ–ಭಾವಗಳು, ಅವಳು ಸಿಂಗರಿಸಿಕೊಳ್ಳುವ ಶೈಲಿ, ಅವಳು ಜನರನ್ನು ಬಂಧುಗಳನ್ನು ಕಾಣುವ ದೃಷ್ಟಿ, ಅವಳು ಮಾತನಾಡುವ — ಹಾಡುವ ರೀತಿ, ಅವಳು ಚಿತೆ ಅಥವಾ ಸಮಾಧಿಗೊಳ್ಳುವ ಬಗೆ — ಈ ಮೊದಲಾದವುಗಳು ತುಂಬ ಸೊಗಸಾಗಿ ಸತಿ ವಿಧಿಗಳಲ್ಲಿ ವ್ಯಕ್ತಗೊಳ್ಳುತ್ತವೆ. ಅಲ್ಲದೆ, ಅದೇ ಸಮಯದಲ್ಲಿ ಬಂಧುಗಳು ( — ತಂದೆ, ತಾಯಿ, ಅಣ್ಣ, ತಮ್ಮ, ತಂಗಿ, ಅಕ್ಕ, ಮಾವ, ಅತ್ತೆ ಈ ಮೊದಲಾದವರು ) ಮತ್ತು ಜನತೆ ನಡೆದುಕೊಳ್ಳುವ ಬಗೆ, ಅವರ ಮನಸ್ಥಿತಿ — ಪ್ರತಿಕ್ರಿಯೆಗಳು ವ್ಯಕ್ತಗೊಳ್ಳುತ್ತವೆ.

<u>ಅಲಂಕರಣ</u> :- ಗಂಡ ಸತ್ತರೂ ಇನ್ನೊಂದೆಡೆಯಲ್ಲಿ ಅವನಿರುವನೆಂಬ ನಂಬಿಕೆ ಇರುವುದರಿಂದ ಅವನನ್ನು ಕೂಡಲು ಹೊರಟ ಪತ್ನಿ ವಿಧವೆಯಂತೆ ಹೋಗುವುದಿಲ್ಲ ; ಅವಳು ಮುತ್ತೈದೆಯಂತೆಯೇ ಹೋಗಬೇಕು ಎಂಬುದು ಅಂದಿನ ಸಮಾಜದ ತಿಳುವಳಿಕೆಯಾಗಿದ್ದಿತು. ಗಂಡನಿದ್ದ ಪತ್ನಿ ಎಲ್ಲ ವಿಧದ ಅಲಂಕಾರಗಳನ್ನು ಧರಿಸಲು ಯೋಗ್ಯಳು. ಅದರಲ್ಲಿಯೂ ತಾಳಿ, ಮೂಗುತಿ, ಕುಂಕುಮ, ಓಲೆ, ಬಳೆ ಇವುಗಳನ್ನು ಅವಳು ಯಾವತ್ತೂ ತ್ಯಜಿಸಬಾರದೆಂಬ ತಿಳುವಳಿಕೆ ಇಂದಿಗೂ ಇರುವುದು ಕಂಡುಬರುತ್ತದೆ. ಅಲ್ಲದೆ ಅರಸಿನ, ಕಾಲುಂಗರ, ಹೂವು, ಕಾಡಿಗೆ ಇತ್ಯಾದಿಗಳನ್ನು ಸಾಮಾನ್ಯವಾಗಿ ಪತ್ನಿಯರು ಸೌಭಾಗ್ಯದ ಸಂಕೇತಗಳೆಂದು ಉಪಯೋಗಿಸುವುದನ್ನು ಕಾಣುತ್ತೇವೆ. ಪ್ರಾಚೀನ ಕಾಲದಲ್ಲಿ '' ಮದುವೆಯಾದ ಹೆಣ್ಣು ಮಕ್ಕಳ ಸೌಭಾಗ್ಯ ಸೂಚಕವಾಗಿ ಅನೇಕ ಚಿಹ್ನೆಗಳನ್ನು ಧರಿಸುತ್ತಿದ್ದರು. ಈಗಲೂ ಧರಿಸುತ್ತಾರೆ. ಆ ಚಿಹ್ನೆಗಳು ಯಾವುವು ಎಂಬುದನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ '' ಎಂಬುದಾಗಿ ವಿದ್ವಾಂಸರೊಬ್ಬರು ಅಭಿಪ್ರಾಯಪಟ್ಟಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.[1]

ಪತ್ನಿ ಸತಿ ಹೋಗುವುದು ಮೃತ ಗಂಡನನ್ನು ಪಡೆಯುವ ಮುಖ್ಯ ಉದ್ದೇಶ ಹೊಂದಿರುವುದರಿಂದ ಆ ಸತಿ ಆಚರಣೆಯು ಒಂದು ಮುಖು ಹೆಚ್ಚಾರಿ ವಿವಾಹದಂತೆ ನಡೆಯುತ್ತಿತ್ತೆಂದು ಹೇಳಬಹುದಾಗಿದೆ. ಪತ್ನಿ ಸೌಭಾಗ್ಯವತಿಯಂತೆ ಅಲಂಕಾರಗೊಳ್ಳುವುದು) ಇದನ್ನೇ ಧ್ವನಿಸುತ್ತದೆ. ಹಲವು ಹಳ್ಳಿಗಳಲ್ಲಿ ಮಾಸ್ತಿಕಲ್ಲುಗಳನ್ನು ಇಂದಿಗೂ '' ಮದವಳಿಗೆ ಕಲ್ಲು '' ಎಂದು ಕರೆಯುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ. ಅಪರೂಪವೆಂಬಂತೆ ಮೋಚಿದೇವನು ವೀರಮರಣ ಹೊಂದಲಾಗಿ ಅವನ ಪತ್ನಿ ಮಹಾಸತಿಯಾಗಲು, '' ಬಮ್ಮಗೌಡನ ಮಗ ಮಾಗ — ಗವುಡ ಮಾಡಿಸಿದ ಮದವಳಿಗೆ ಕಲು ನೆಡಿಸಿದು ಮಂಗಳ ಮಹಾಶ್ರೀ '' ಎಂದು ಹೇಳುವ ಶಾಸನ ಪಾಠವೊಂದು ದೊರಕುತ್ತದೆ.[2] ' ಮದವಳಿಗೆ ' ಎಂದರೆ ಮದುವೆಯ ಹೆಣ್ಣು ಎಂದು ಸೂಚಿಸುವುದೇ ಆಗಿದೆ. ಮೋಚಿದೇವನ ಪತ್ನಿ ಸತಿಹೋದದ್ದು ಮದುವೆ ಎಂದೇ ಭಾಗಶಃ ತಿಳಿದಿದ್ದ ಜನತೆ ಅವಳ ಸ್ಮಾರಕ ಕಲ್ಲನ್ನು ' ಮದವಳಿಗೆ ಕಲು ' ಎಂದು ಕರೆದಿರುವುದನ್ನು ಇಲ್ಲಿ ಕಾಣುತ್ತೇವೆ.

ಸತಿಶಿಲ್ಪವು ಹೆಚ್ಚಾಗಿ ಸೌಭಾಗ್ಯದ ಸಂಕೇತಗಳಿಂದಲೇ ಕೂಡಿರುತ್ತದೆ. "ಮಾಸ್ತಿಕಲ್ಲುಗಳ ಮೇಲೆ ಸ್ತ್ರೀಯು ಮುತ್ತೈದೆಯಾಗಿ ಮರಣಹೊಂದಿದ ಸೂಚಕವಾಗಿ ಬಳೆ-ಕಂಕಣಗಳುಳ್ಳ ಒಂದು ಕೈಯ ಚಿತ್ರವು ಕೆತ್ತಲ್ಪಟ್ಟಿರುವುದು".[3] ಕಿವಿಯಲ್ಲಿ ಓಲೆಗಳು, ಕೈಯಲ್ಲಿ ಬಳೆ — ಕಡಗಗಳು, ಕೊರಳಲ್ಲಿ ತಾಳಿ — ಮುತ್ತಿನ ಸರಗಳು, ನಡುವಿನಲ್ಲಿ ನಡುಪಟ್ಟಿ, ತಲೆಯ ಮೇಲೆ ಮುತ್ತಿನ ಸರ — ಹೂವಿನ ದಂಡೆ, ಕಾಲಲ್ಲಿ ಅಂದುಗೆ — ಇತ್ಯಾದಿ ಅಲಂಕಾರಗಳುಳ್ಳ ಸತಿ ಶಿಲ್ಪಗಳು ದೊರಕುತ್ತವೆ. ಕೆಲವು ಸತಿಯರು ಕೈಯಲ್ಲಿ ಹೂ, ಕಳಸ, ಕನ್ನಡಿ ಹಿಡಿದು ನಿಂತಿದ್ದಾರೆ. ಇನ್ನು, ಹಲವು ಸತಿಯರು ಲಿಂಬೆ ಹಣ್ಣನ್ನು ಹಿಡಿದಿದ್ದಾರೆ. ಸಾಮಾನ್ಯವಾಗಿ ಮಾಸ್ತಿಶಿಲ್ಪಗಳಲ್ಲಿ ಈ ಸೌಭಾಗ್ಯದ ಚಿಹ್ನೆಗಳ ಮತ್ತು ಅಲಂಕಾರದ ಹಿನ್ನೆಲೆಯಲ್ಲಿಯೇ ರಚನೆಗೊಂಡಿರುವುದನ್ನು ಕಾಣುತ್ತೇವೆ.[4] ಆದರೆ ಕೆಲವು ಮಾಸ್ತಿಕಲ್ಲುಗಳಲ್ಲಿ ಈ ಸೌಭಾಗ್ಯದ ಚಿಹ್ನೆಗಳು ಮತ್ತು ಅಲಂಕಾರಗಳು ಕಡಿಮೆ ಇದ್ದಿರಬಹುದು. ಇನ್ನು ಕೆಲವು ಮಾಸ್ತಿಕಲ್ಲುಗಳಲ್ಲಿ ಇವು ಹೆಚ್ಚಾಗಿ ಇದ್ದಿರಬಹುದು. ಹೆಚ್ಚು ಅಲಂಕರಣಗೊಂಡ ಮತ್ತು ಸೌಭಾಗ್ಯ ಚಿಹ್ನೆಗಳನ್ನು ಹೊಂದಿದ ಮಾಸ್ತಿಕಲ್ಲುಗಳು ಕವಿಲೆದುರ್ಗ, ಚಿಕ್ಕಹಾಲಿವಾಣ, ಕುಣಗನಹಳ್ಳಿ, ಶಿವಮೊಗ್ಗ — ಈ ಮೊದಲಾದ ಸ್ಥಳಗಳಲ್ಲಿ ಇರುವುದನ್ನು ಇಲ್ಲಿ ಉದಾಹರಿಸಬಹುದಾಗಿದೆ.

ಕೆಲವು ಮಾಸ್ತಿ ಗುಡಿಗಳಲ್ಲಿ ಮಾಸ್ತಿಕಲ್ಲುಗಳ ಬದಲಾಗಿ ಮರದಿಂದ ಮಾಡಿದ ಮಾಸ್ತಿಬೊಂಬೆಗಳಿರುವುದನ್ನು ಕಾಣುತ್ತೇವೆ. ಅನಿಲಗೋಡಹಳ್ಳಿ, ಭಟ್ಕಳ, ಶಿರಾಲಿ, ಮುರ್ಡೇಶ್ವರ — ಈ ಮೊದಲಾದ ಊರುಗಳಲ್ಲಿ ಇಂಥ ಮಾಸ್ತಿಗೊಂಬೆಗಳಿವೆ.[5] ಅನಿಲಗೋಡದಲ್ಲಿ ಕುಮಾರರಾಮನ ಪತ್ನಿಯರೆಂದು ಹೇಳಲಾದ ನಾಗಮ್ಮ, ಮಾಳಮ್ಮ, ಹೊನ್ನಮ್ಮ, ಕೆಂಡದಮ್ಮ ಮಹಾಸತಿಯರ ಮರದ ಗೊಂಬೆಗಳಿವೆ. ಇವುಗಳನ್ನು ಸೌಭಾಗ್ಯವತಿಯರಂತೆ ಅಲಂಕರಿಸಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ನಾಗಮ್ಮ ಮಹಾಸತಿಯ ಮೂರ್ತಿ ಬಹು-ಸುಂದರವಾಗಿದೆ. ಆ ಮಹಾಸತಿಗೆ ಮುಂಗೈಯಲ್ಲಿ ಬಳೆಗಳು, ತೋಳಿನಲ್ಲಿ ಒಂಕಿಗಳು, ಹಣೆಯ ಮೇಲೆ ಕುಂಕುಮ, ಕೊರಳಲ್ಲಿ ಚಿನ್ನದ ತಾಳಿ, ಕಿವಿಯಲ್ಲಿ ಓಲೆ, ತಲೆಯ ಮೇಲೆ ಹೂವಿನ ದಂಡೆ — ಮೊದಲಾದವುಗಳಿಂದ ಸಿಂಗರಿಸಲಾಗಿದೆ. ಶಿರಾಲಿಯಲ್ಲಿರುವ ವೀರಮಾಸ್ತಿ, ಮಳ್ಳ[0] ಮಾಸ್ತಿಗಳ ಮೂಗಿನಲ್ಲಿ 'ಮೂಗಬಟ್ಟು' ನ್ನು ಸುಂದರವಾಗಿ ಬಿಡಿಸಿರುವುದು ವಿಶೇಷವಾಗಿದೆ.

---

0 'ಮಳ್ಳ' ಎಂಬುದು ಏನನ್ನು ಸೂಚಿಸುತ್ತದೆಯೋ ತಿಳಿಯದು

ಹೀಗೆ ಮಾಸ್ತಿಕಲ್ಲುಗಳಂತೆ ಮಾಸ್ತಿಗೊಂಬೆಗಳನ್ನು ಸೌಭಾಗ್ಯದ ಚಿಹ್ನೆಗಳಿಂದ ಚಿತ್ರಿಸಿರುವುದರ ಹಿನ್ನೆಲೆಯು ಮೃತಗಂಡನನ್ನು ಕೂಡಲು ಹೊರಟ ಪತ್ನಿಯು 'ಮದುಮಗಳಂದು ಕಂಡರಿಸುವುದೇ ಆಗಿದೆ. ಅಲ್ಲದೆ ಇದರಿಂದ ಸತಿಹೋಗುವವಳು ಗಂಡನನ್ನು ಪಡೆಯುತ್ತೇನೆ ಎಂಬ ಕಲ್ಪನೆ ಇಟ್ಟುಕೊಂಡು ಸತಿ ಆಚರಣೆಯನ್ನು ಒಳ್ಳೆಯ ಉತ್ಸಾಹ — ವಿಲಾಸಗಳಿಂದ ಪೂರೈಸುತ್ತಿದ್ದಳೆಂಬುದು ಸ್ಪಷ್ಟವಾಗುತ್ತದೆ.

ಅಂಕೋಲೆಯಲ್ಲಿ ಬಂಡಿಹಬ್ಬದ ಹತ್ತನೆಯ ದಿನದ ರಾತ್ರಿಯಲ್ಲಿ ಸಾಮಾನ್ಯವಾಗಿ ಹನ್ನೆರಡು ಗಂಟೆಯ ಸಮಯದಲ್ಲಿ ಮಾಸ್ತಿಕೊಂಡಕ್ಕೆ ಬೀಳುವುದನ್ನು ಆಡಿತೋರಿಸಲಾಗುತ್ತದೆ, ಮಾಸ್ತಿ ಗಂಡ ಯುದ್ಧದಲ್ಲಿ ಹೋರಾಟಮಾಡುತ್ತ ಮಡಿಯುತ್ತಾನೆ. ಈ ಸುದ್ದಿ ಮಾಸ್ತ್ಯೆಮ್ಮನಿಗೆ ಮುಟ್ಟುತ್ತದೆ. ಅವಳು ಕೊಂಡಕ್ಕೆ ಬೀಳಲು ಇಚ್ಛಿಸುತ್ತಾಳೆ. ಆಗ ಮಾಸ್ತಿಗುಡಿಯ ಮುಂದೆ ಮಾಸ್ತಿವೇಷ ಹಾಕಲಾಗುತ್ತದೆ. ಎರಡು ಕಾಲಿನ ಕಟ್ಟಿಗೆಗೆ ಬಿಳಿ ಬಣ್ಣದ ಲಂಗ ತೊಡಿಸಿ ಮಾಸ್ತಿ ಮುಖವಾಡ ಹಾಕಿ ಮುತ್ತೈದೆಯಂತೆ ಸಿಂಗರಿಸುತ್ತಾರೆ. ತಲೆಯನ್ನು ಬಾಚಿ ಹೂ ಮುಡಿಸುತ್ತಾರೆ. ಹಣೆಗೆ ಕುಂಕುಮ, ಕಣ್ಣಿಗೆ ಕಾಡಿಗೆ ಇಡುತ್ತಾರೆ. ಕಿವಿಯಲ್ಲಿ ಓಲೆ ಹಾಕುತ್ತಾರೆ. ಈ ಸಂದರ್ಭದಲ್ಲಿ ಊರಿನ ಮುತ್ತೈದೆಯರು ಅಕ್ಕಿ, ಹೂ, ಕಾಯಿ — ಕರ್ಪೂರಗಳನ್ನು ಅರ್ಪಿಸುತ್ತಾರೆ. ನಂತರದಲ್ಲಿ ಮಾಸ್ತಿ ಮೈಯಲ್ಲಿ ಬಂದ ಪೂಜಾರಿ ಅದನ್ನು ಹಿಡಿದುಕೊಂಡು ಕೊಂಡಕ್ಕೆ ಹಾರುತ್ತಾನೆ ( ಚಿತ್ರ —36 ) ಇದೇ ರೀತಿ ಚಂದಾವರದ ( ಹೊನ್ನಾವರ ) ಬಂಡಿಹಬ್ಬದಲ್ಲಿ ಗುಡಿಗಾರನೊಬ್ಬನು ಮಾಸ್ತಿವೇಷ ಹಾಕಿಕೊಂಡು ಕೊಂಡಕ್ಕೆ ಬೀಳಲು ಹೋಗುತ್ತಾನೆ. ಹನುಮಂತ ದೇವರ ಗುಡಿಯಲ್ಲಿ ಅವನು ಕುಳಿತುಕೊಂಡು ಸೌಭಾಗ್ಯವತಿಯಂತೆಯೇ ಸಿಂಗರಿಸಿಕೊಳ್ಳುತ್ತಾನೆ. ಸೀರೆ ತೊಟ್ಟು, ಹಣೆಗೆ ಕುಂಕುಮ, ಕಿವಿಗೆ ಓಲೆ, ಮೂಗಿಗೆ ನತ್ತು, ಕೈಯಲ್ಲಿ ಬಳೆ, ಕಾಲಲ್ಲಿ ಗೆಜ್ಜೆ ಇಟ್ಟುಕೊಳ್ಳುತ್ತಾನೆ. ತಲೆಗೆ ಉದ್ದವಾದ ಕೂದಲು ತೊಟ್ಟು, ತಲೆಯ ಹಿಂಭಾಗಕ್ಕೆ ಕೇದಗೆಯ ಗರಿಗಳನ್ನು ದೊಡ್ಡದಾಗಿ ದುಂಡಾಗಿ ಕಟ್ಟಿಕೊಳ್ಳುತ್ತಾನೆ, ನಂತರ ಗುಡಿಗಾರನಿಗೆ ಮಾಸ್ತಿ ಮೈಯಲ್ಲಿ ಪ್ರವೇಶಿಸಲು ಕೊಂಡ ಬೀಳಲು ನಡೆಯುತ್ತಾನೆ. ಹೊನ್ನಾವರ, ಅರಗಾ, ಸಂತಕಳಿ, ಅನಿಲಗೋಡಹಳ್ಳಿ, ಆಗಸನಹಳ್ಳಿ ಮೊದಲಾದ ಊರುಗಳಲ್ಲಿಯೂ ಮಾಸ್ತಿ ಕೊಂಡಕ್ಕೆ ಬೀಳುವ

ಪ್ರದರ್ಶನವನ್ನು ಇಂದಿಗೂ ನೋಡಬಹುದಾಗಿದೆ.[6] ಇವೆಲ್ಲ ಹಿಂದೆ ಒಂದು ಕಾಲಕ್ಕೆ ಸತಿ ಕೊಂಡಕ್ಕೆ ಬಿದ್ದುದ್ದನ್ನು ಸೂಚಿಸುವುಗಳೇ ಆಗಿವೆ. ಅಲ್ಲದೆ ಆ ಸಮಯದಲ್ಲಿ ಸತಿ ಮದುವಣ-ಗಿತ್ತಿಯಂತೆ ಸಿಂಗರಿಸಿಕೊಳ್ಳುವುದನ್ನು ಇವು ಧ್ವನಿಸುತ್ತವೆ. ಸೌಭಾಗ್ಯವತಿಯರು ಅಂದು ಈ ಆಚರಣೆಯಲ್ಲಿ ಪಾಲ್ಗೊಂಡು ಪತ್ನಿಯನ್ನು ಗಂಡನ ಮನೆಗೆ ಕಳುಹಿಸುವಂತೆ ಸತಿಯನ್ನು ಕೊಂಡಕ್ಕೆ ಬೀಳ್ಕೊಡುತ್ತಿದ್ದರು ಎಂಬುದು ಮನವರಿಕೆಯಾಗುತ್ತದೆ.

ಮಾದಾರ ಧೂಳಯ್ಯನ ವಚನವೊಂದರಲ್ಲಿ, ಸತಿಯು ಮುಡಿಗೆ ಹೂವು ತೊಟ್ಟು, ಕೈಯಲ್ಲಿ ಲಿಂಬೆ ಹಿಡಿದುಕೊಂಡಿದ್ದರ ವಿವರಣೆ ಸಿಗುತ್ತದೆ.[7] ಅನಂತನಾಥ ಪುರಾಣದಲ್ಲಿ ಚಂಡಶಾಸನನ ಪತ್ನಿಯರು ಸತಿಹೋಗುವ ಸಂದರ್ಭದಲ್ಲಿ "ತುಡುಗೆಯನಾಯ್ದು ಕೊಂಡುಳಿದವಂ ಸಖಿಯರ್ಗಿರವೇಳ್ದು" ಎಂದು ವರ್ಣಿಸಲಾಗಿದೆ.[8] ಅಂದರೆ ಆ ಸತಿಯರು ತಮಗೆ ಬೇಕಾದಷ್ಟು ವಸ್ತ್ರ — ಒಡವೆ ( ತುಡುಗೆ ) ಗಳನ್ನು 'ಕೊಂಡು' ಎಂದರೆ ತೆಗೆದು ಕೊಂಡು — ತೊಟ್ಟುಕೊಂಡು — ಉಳಿದವುಗಳನ್ನು ಅವರ ಸಖಿಯರಿಗಾಗಿ ಬಿಟ್ಟುಕೊಟ್ಟರು ಎಂದು ಹೇಳುವುದೇ ಆಗಿದೆ. 'ತುಡುಗೆಯನಾಯ್ದುಕೊಂಡು' ಎಂಬುದರಿಂದ ಸತಿ — ಹೋಗುವವರು ಬೆಲೆಯುಳ್ಳ ವಸ್ತ್ರಾಭರಣಗಳನ್ನು ಆರಿಸಿಕೊಂಡು ಸಿಂಗಾರಗೊಳ್ಳುತ್ತಿದ್ದ ರೆಂಬುದು ಸ್ಪಷ್ಟಗೊಳ್ಳುತ್ತದೆ. ಕವಿಜನ್ನನು ಶ್ರೀಮಂತವರ್ಗದವರಲ್ಲಿ — ಅರಸುಮನೆತನಗಳಲ್ಲಿ — ನಡೆಯುತ್ತಿದ್ದ ಸತಿ ಆಚರಣೆಯ ಚಿತ್ರವೊಂದನ್ನು ಇಲ್ಲಿ ಕೊಟ್ಟಿದ್ದಾನೆ, ಸತಿಹೋಗುವವರು ವಸ್ತ್ರಾಭರಣಗಳನ್ನು 'ಆಯ್ದು' ತೊಟ್ಟುಕೊಳ್ಳುವ ಚಿತ್ರ ಸಾಮಾನ್ಯ ವರ್ಗದವರಲ್ಲಿ ಸಾಧ್ಯವಲ್ಲದ ಮಾತಾಗಿದೆ. ಕುಮಾರರಾಮನ ಐದುಜನ ಪತ್ನಿಯರು ಸತಿ ಹೋಗುವ ಕಾಲಕ್ಕೆ ಸಿಂಗರಿಸಿಕೊಂಡ ಬಗೆಯನ್ನು ನಂಜುಂಡಕವಿಯು 'ರಾಮನಾಥ ಚರಿತ' ದಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ:[9]

ವೀರಮುದ್ರಿಕೆ ನೂಪುರ ಕಾಂಚಿಯದಾಮ
ಹಾರ ಪದಕ ಹತ್ತುಕಟ್ಟು
ತೋರ ಮುತ್ತಿನ ಬೊಟ್ಟು ತುರುಬಿನ ಬಲೆಮಣಿ
ಸೇರಿ ಕಣ್ಗೆಸೆದುವವರಿಗೆ

ಉಂಗುರ ಕಡಗ ಕಂಕಣ ಬಾಹುಪೂರ ಮ
ನಂಗೊಳಿಸುವ ಭುಜಕೀರ್ತಿ
ಸಂಗಡಿಸಿದ ವಜ್ರದೋಲೆ ಮೆರೆಯೆ ರಾಮ
ನಂಗನೆಯರು ಕಣ್ಗೆಸೆದರು

ಮುರುಡಿಯ ಸರಪಣಿ ಮುಂಗಯ್ಯ ಮುರಿಹಸ್ತ
ಸರ ಹೊನ್ನ ಬಳೆ ತೋಳಬಂದಿ
ಕರವೆಸೆಯಲು ಮಾಸತಿಯರಾದರು ರಾಮ
ನರಸಿಯರಂದು ರಾಗದೊಳು

ಪಿಡಿದ ನಿಂಬೆಯಹಣ್ಣ ಕನ್ನಡಿ ಕೆಯ್ಯೊಳು
ಬಿಡದೆ ಮೆರೆಯಲಂದವರು

.....................

ಇಲ್ಲಿ ಕುಮಾರರಾಮನ ಸತಿಯರು ವೀರಮುದ್ರಿಕೆ, ನೂಪುರ, ಕಾಂಚಿದಾಮ, ಹಾರ, ಪದಕ, ಹತ್ತುಕಟ್ಟು, ತೋರಮುತ್ತಿನಬೊಟ್ಟು, ತುರುಬಿನ ಬಲಿವಣೆ, ಉಂಗುರ, ಕಡಗ, ಕಂಕಣ, ಬಾಹುಪೂರ, ಭುಜಕೀರ್ತಿ, ವಜ್ರದೋಲೆ, ಮುರುಡಿಯ ಸರಪಣಿ, ಮುಂಗೈ ಮುರಿ, ಹಸ್ತಸರ, ಹೊನ್ನಬಳೆ, ತೋಳಬಂದಿ ಮೊದಲಾದ ಆಭರಣಗಳನ್ನು ಧರಿಸಿಕೊಂಡ ಬಗೆ, ಹಾಗೂ ಕೈಯಲ್ಲಿ ನಿಂಬೆಹಣ್ಣು, ಕನ್ನಡಿ ಹಿಡಿದ ಕುರಿತಾಗಿ ಅಪೂರ್ವ ವರ್ಣನೆ ಇದೆ. ರಾಣಿವರ್ಗವು ಸತಿಹೋಗುವ ಸಮಯದಲ್ಲಿ ಕೈ, ಕಾಲು, ಬೆರಳು, ಭುಜ, ಕೊರಳು, ಹಣೆ, ಮೂಗು, ಕಿವಿ, ತಲೆ —ಹೀಗೆ ಶರೀರದ ಮೊದಲಾದ ಭಾಗಗಳನ್ನು ಆಭರಣಗಳಿಂದ ಸಿಂಗರಿಸಿಕೊಳ್ಳುತ್ತಿದ್ದರೆಂಬುದು ಸ್ಪಷ್ಟಗೊಳ್ಳುತ್ತದೆ. ಅಲ್ಲದೆ ಕವಿಯು ಅವರು ಅಲಂಕರಿಸಿಕೊಂಡ ಉದ್ದೇಶವನ್ನು ' ನಳಿನಾಕ್ಷಿಯರೈವರು ರಾಮನೆಡೆಗೆ ಪೋಪಳವಿನಿಂ ಸಿಂಗರಿಸಿದರು ' ಎಂದು ಹೇಳಿದ್ದಾನೆ.[10] ' ಅಳವಿ ' ಎಂಬುದಕ್ಕೆ ಶಕ್ತಿ, ವಶ, ವಿಶ್ವಾಸ ಎಂದು ಅರ್ಥಗಳಿವೆ. ರಾಮನ ಪತ್ನಿಯರೈವರು ರಾಮನೆಡೆಗೆ ಹೋಗುವ ವಶದಿಂದ ಅಥವಾ ವಿಶ್ವಾಸದಿಂದ ಸಿಂಗರಿಸಿಕೊಂಡರು ಎಂದೇ ಇಲ್ಲಿ ಅರ್ಥವಾಗುತ್ತದೆ. ಪತಿಯನ್ನು ಕೂಡಲಿಕ್ಕೆ ಹೊರಟವರು ಮುತ್ತೈದೆಯರಂತೆ ಅಲಂಕರಿಸಿಕೊಂಡು ಹೋಗುವುದು ಸಹಜವೇ ಆಗಿದೆ. ವೀರಕ್ತತೋಂಟದಾರ್ಯನ ಸಿದ್ದೇಶ್ವರಪುರಾಣದಲ್ಲಿ, ಪತಿಮಡಿದನೆಂಬುದನ್ನು ಕೇಳಿ ಪತ್ನಿಯರೊರ್ವಳು '' ಸೂಸಕದಂಡೆಯುತ-ವಾದ ಮಂಡೆಯಿಂದರಿಸಿನದ ಸೀರೆಯುಟ್ಟಾಭರಣಗಳನು ತೊಟ್ಟು। ಪರಿಪರಿಯ ಪುಷ್ಪ

ಮಾಲಾನುಲೇಪನಗಳಿಂ ಪಿರಿದಲಂಕರಿಸಿ ಜಂಬೀರಫಲಮಂ ಪಿಡಿದು ತರದೆ ಮತ್ತೊಂದು ಕಂತ್ಯೊಳಗೆ ಕೈಪಿಡಿವಿಡಿದು" "ಸತಿಯಾಗಲು ಉತ್ಸುಕಗೊಳ್ಳುತ್ತಾಳೆ"[11] ಸತಿಹೋಗುವವಳು 'ಅರಿಸಿನ ಸೀರೆ' ತೊಟ್ಟಳು ಎಂಬ ಇಲ್ಲಿಯ ವಿವರಣೆ ಅಪೂರ್ವವಾದುದು. ಗಂಡನನ್ನು ಪಡೆಯಲುಹೊರಟವಳು ಮದುಮಗಳಂತೆ 'ಅರಿಸಿನ ಸೀರೆ' ತೊಟ್ಟಳೆಂದು ಹೇಳುವುದೇ ಇಲ್ಲಿ ಮುಖ್ಯವಾಗಿದೆ. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ತೋಂಟದಾರ್ಯನ ಮಡದಿ ಚೆನ್ನಬಸವಮ್ಮ ಸತಿಯಾಗುವಾಗ ಪದ್ಯವೊಂದು ಹೀಗೆ ಬರುತ್ತದೆ: [12]

ಎಡಗೈಯ ಮಣಿಗನ್ನಡಿ ಬಲಗೈಯೊಳು
ಪಿಡಿದಲಗುವ ಜಮದಾಡೆ ।
ಮುಡಿದ ಗರಿಯ ಬಾಸಿಗವಮರಿದ ರನ್ನ
ದೊಡವೊಪ್ಪಲೈತಂದಳಾಗ ॥

ಮಣಿಗನ್ನಡಿ, ಜಮದಾಡೆ, ತಲೆಗೆ ಗರಿಯ ಬಾಸಿಂಗ, ಅಪೂರ್ವ ರತ್ನದ ಒಡವೆಗಳನ್ನು ಧರಿಸಿದ ಸತಿ ಚಿತ್ರ ಇಲ್ಲಿದೆ. ವೀರಯ್ಯನ ಮರಣ ಪ್ರಸಂಗದಲ್ಲಿ ಸತಿಹೋಗಲಿರುವ ಅವನ ಪತ್ನಿಯರು ಸಿಂಗರಿಸಿಕೊಂಡಬಗೆಯನ್ನು ಸಿರುಮಣನಾಯಕನ ಸಾಂಗತ್ಯದಲ್ಲಿ ಹೀಗೆ ಚಿತ್ರಿಸಲಾಗಿದೆ : [13]

ಹೊನ್ನಪುತ್ಥಳಿಯ ಹೊಳುವ ಮುಖಕಾಂತಿಯ
ರನ್ನಗನ್ನಡಿಗದಪುಗ (ಳ) ।
ಚೆನ್ನ ಮುತ್ತಿನ ಬಯುತಲೆಬೊಟ್ಟನಿಟ್ಟ (ರು)
ರನ್ನ ಮಾಣಿಕದ ಹಾರಗ (ಳ) ।

ಉತ್ತಮ ನಾಣ್ಯದುಕೂಲ ಸೀರೆಗಳನು
ಎತ್ತಿ (ನಿ)ರಿಯ ತೆಗೆದುಟ್ಟು ।
ಕಸ್ತೂರಿ ಪುಣುಗು ಜವಾದಿಯ ಲೇಪಿಸಿ
ಹಸ್ತಕಿಟ್ಟರು ರನ್ನಬಳೆಯ ।

ಮುತ್ತಿನಿಂದ ಕೂಡಿದ ಬೈತಲೆಯುಳ್ಳವರಾಗಿಯೂ, ಹಣೆಗೆ ಬೊಟ್ಟನಿಟ್ಟವರಾಗಿಯೂ, ಕೊರಳಲ್ಲಿ ಮಾಣಿಕ್ಯದ ಹಾರಗಳನ್ನು ಪಡೆದವರಾಗಿಯೂ, ಕೈಯಲ್ಲಿ ರತ್ನದ ಬಳೆಗಳನ್ನು ತೊಟ್ಟವರಾಗಿಯೂ ಅದೇ ಆಗ ನಿರಿಗೆಗಳನ್ನು ತಗೆದ ರೇಷ್ಮೆ ಸೀರೆಗಳನ್ನು

ಉಟ್ಟವರಾಗಿಯೂ, ಕಸ್ತೂರಿ — ಪುನುಗು — ಜವಾದಿಗಳೆಂಬ ಸುಗಂಧದ್ರವ್ಯಗಳನ್ನು ಲೇಪಿಸಿಕೊಂಡವರಾಗಿಯೂ ವೀರಯ್ಯನ ಪತ್ನಿಯರು ಸತಿಹೋಗಲು 'ಕೋಲ್ಮಿಂಚು ಹೊಳೆವಂತೆ ಶೃಂಗಾರವ ಮಾಡಿಕೊಂಡರು. ಇಲ್ಲಿ ಕಸ್ತೂರಿ, ಪುನುಗು, ಜವಾದಿಗಳೆಂಬ ಸುಗಂಧದ್ರವ್ಯಗಳನ್ನು ಲೇಪಿಸಿಕೊಂಡ ವಿವರಣೆ ತುಂಬಹೊಸದಾಗಿದೆ. ಬಸವಣ್ಣನವರ ವಚನ ವೊಂದಕ್ಕೆ ಟೀಕೆ ಬರೆದ ವಿವರದಲ್ಲಿ ಹೀಗೆ ಬರುವುದು: '' ಪುರುಷನಿರ್ವಾಣಕ್ಕೆ ಉರಿವ ಅಗ್ನಿಯು ಹೊಕ್ಕುತೋರಲು ಬಾರದು = ಒಬ್ಬನೊಬ್ಬ ಪುರುಷನು ರಣಮಂಡಲಕ್ಕೆ ಹೋಗಿ ಕಡಿದಾಡಿ ಮಡಿದಲ್ಲಿ ಅವನ ಸ್ತ್ರೀಯಳು ಎಣ್ಣೆ ಅರಿಷಣವನ್ನು ಹಚ್ಚಿಕೊಂಡು ಹೂವನ್ನು ಮುಡಿದುಕೊಂಡು......... ಮಾಸ್ತಿಯಾಗಿ ಮೆರೆವ ಪರಿಯಂತರ ಪರಿಣಾಮ—ವಾಗಿರುವುದು ''[14]. ಇಲ್ಲಿ ಸತಿ ಎಣ್ಣೆ — ಅರಿಸಿನ ಲೇಪಿಸಿಕೊಳ್ಳುವ ವಿವರಗಳಿವೆ. ಷಣ್ಮುಖ ಶಿವಯೋಗಿಯ ವಚನವೊಂದರಲ್ಲಿ ಸತಿಹೋಗುವವಳು '' ದಂಡೆ ಕಟ್ಟಿಕೊಂಡು ಖಂಡೆಯವ ಪಿಡಿದು '' ಎಂದು ವರ್ಣನೆ ಬರುತ್ತದೆ,[15] ಹೀಗೆ ಗ್ರಂಥಸಾಹಿತ್ಯವು ಸತಿ ಸುಮಂಗಲ ಚಿಹ್ನೆ ಗಳಿಂದ, ವಿವಿಧ ಭೂಷಣಾವಳಿಗಳಿಂದ ಸಿಂಗರಿಸಿಕೊಳ್ಳುತ್ತಿದ್ದುದರ ಅಪೂರ್ವ ವಿವರಣೆಗಳನ್ನು ನೀಡುತ್ತದೆ.

ಜನಪದ ಗೀತಗಳಲ್ಲಿ ಸತಿ ಸಿಂಗರಿಸಿಕೊಳ್ಳುವ ಬಗೆಗೆ ತುಂಬ ಉಪಯುಕ್ತವಾದ ವಿವರಗಳು ದೊರಕುತ್ತವೆ. ಆದರೆ ಆಶ್ಚರ್ಯವೆಂದರೆ ಮಾಸ್ತಮ್ಮ, ಕೊಂಡದ ಚೆನ್ನಮ್ಮ, ಕಳಗುಚ್ಚಮ್ಮ — ಈ ಮೊದಲಾದ ಮಾಸ್ತಿಕಥೆಗಳಲ್ಲಿ ಸತಿ ಅಲಂಕರಿಸಿಕೊಳ್ಳುವ ಬಗೆಗೆ ವಿವರಗಳು ದೊರಕುವುದಿಲ್ಲ.[16] ಸತಿ ಪ್ರಸಂಗವನ್ನು ಕಣ್ಣಾರೆ ಕಂಡ ಜನತೆ ಅದನ್ನು ಗೀತ ರೂಪದಲ್ಲಿ ನೆನಪಿಟ್ಟುಕೊಂಡು ಬಂದಂತೆ ಗದ್ಯಾತ್ಮಕವಾದ ಕಥೆಯ ರೂಪದಲ್ಲಿಯೂ ನೆನಪಿಟ್ಟುಕೊಂಡು ಬಂದಿರುವುದನ್ನು ಕಾಣುತ್ತೇವೆ. ಆದರೆ ಕಾಲ ಉರುಳಿದಂತೆ ಗೀತದಷ್ಟು ಗದ್ಯ ನೆನಪಿನಲ್ಲಿ ಉಳಿಯಲಾರದ ಕಾರಣ ಸತಿ ಘಟನೆಯ ಕೇಂದ್ರಭಾಗ ಮಾತ್ರ ಸತಿಕಥೆಗಳಲ್ಲಿ ಉಳಿದುಕೊಂಡು ಬಂದಂತೆ ತೋರುತ್ತದೆ. 'ಮಹಾಸತಿ ವೀರತಿಮ್ಮವ್ವ' ಗೀತೆಯಲ್ಲಿ ಗಂಡ ಮರಣ ಹೊಂದಿದ್ದನ್ನು ಕೇಳಿದಾಗ 'ತಿಮ್ಮವ್ವ' '' ಮಡಿಯಾ ತಗುದುಟ್ಟಾಳು ಇಡದಾಳು ಕನ್ನಡಿಯ '' ಎಂಬ ವರ್ಣನೆ ಬರುತ್ತದೆ. ಅಲ್ಲದೆ ಬಳ್ಳಿಮಲ್ಲಿಗೆ, ಎಸಳುಮಲ್ಲಿಗೆ ಮುಡಿದು ಅವಳು ಸಿಂಗಾರಗೊಂಡ ವಿವರಣೆಯೂ ಬರುತ್ತದೆ.[17] ನಾಗವ್ವಳ ಅಗ್ನಿ ಪ್ರವೇಶವನ್ನು

“ಪಟ್ಟೇದ ಸೀರುಟ್ಟು ಮುತ್ತಿನ ಬಟ್ಟಿಟ್ಟು ಅಕ್ಕ ಈರಗೊಂಡಾಕ ಕೊಲೆಯಾದಳು” ಎಂದು ಜನಪದ ಕವಿ ಮಹಾಸತಿ ತಾಡಿನಾಗವ್ವ ಕಥನಗೀತೆಯಲ್ಲಿ ಚಿತ್ರಿಸುತ್ತಾನೆ.[18] ‘ಮಹಾಸತಿ ಕಾಟವ್ವ’ ಗೀತೆಯಲ್ಲಿ ತಲೆ ಹಿಕ್ಕಿ, ಬಂಗಾರದ ಆಭರಣ ಮತ್ತು ಹೂವನ್ನು ಸತಿಗೆ ತೊಡಿಸುವ ವರ್ಣನೆ ಬರುತ್ತದೆ.[19] ‘ಈರೋಬಿ’ ಖಂಡಕಾವ್ಯದಲ್ಲಿ ಈರೋಬಿ ‘ಬಣ್ಣ ಇಟ್ಟುಗೊಂಡು’ ‘ಬಂಗಾರ ತೊಟ್ಟುಗೊಂಡು’ ಬಳೆ — ಲಿಂಬೆಹಣ್ಣುಗಳನ್ನು ಕೈಯಲ್ಲಿ ಹಿಡಿದುಕೊಂಡು, ಕಳಸಹೊತ್ತುಕೊಂಡು ಸತಿಹೋಗುವ ವಿವರಗಳು ಇವೆ.[20] ವಡ್ಡಗೆರೆ ನಾಗವ್ವ’ ಗೀತೆಯಲ್ಲಿ ಕೊಂಡದಲ್ಲಿ ಕುಳಿತ ನಾಗವ್ವ ಹೇಳುವ ಮಾತುಗಳು ಹೀಗೆ ಬರುತ್ತವೆ:[21]

ಗಂಜಿ ಸೀರೆ ಮೇಲೆ ಗಂಧದ ಬಟ್ಟಿನ ಮೇಲೆ
ಅಂದವಾಗಿ ಪಟ್ಟಣ್ಣ ಎದಿಗೊಂಡು 1 ನಿನಮಗ
ಗಂಧ ಮಾಸಿದರಲ್ಲಿ ಬೈದಾನೆ 11

ಸ್ಯಾಲೆ ಸೀರಿನ ಮೇಲೆ ಸಾದಿನ ಬಟ್ಟಿನ ಮೇಲೆ
ಅಂದುವಾಗಿ ಒಟ್ಟಣ್ಣ ಎದೆಗೊಂಡು 1 ನಿನಮಗ
ಸಾದು ಮಾಸಿದರಲ್ಲಿ ಬೈದಾನೆ 11

ಪಟ್ಟೆ ಸೀರೆ ಮೇಲೆ ಮುತ್ತಿನ ಬಟ್ಟಿನ ಮೇಲೆ
ಒಪ್ಪವಾಗಿ ಒಟ್ಟಣ್ಣ ಎದೆಗೊಂಡು 1 ನಿನ ಮಗ
ಬಟ್ಟು ಮಾಸಿದರಲ್ಲಿ ಬೈದಾನೆ 11

ಸತಿ ಗಂಜಿ ಸೀರೆ, ಸ್ಯಾಲೆ ಸೀರೆ, ಪಟ್ಟೆ ಸೀರೆ ತೊಟ್ಟು, ಗಂಧದ — ಮುತ್ತಿನ ಬೊಟ್ಟು ಇಟ್ಟು ಅಗ್ನಿಪ್ರವೇಶ ಮಾಡುವ ವಿವರಗಳು ಇಲ್ಲಿವೆ. ಇಂಥ ಅಲಂಕಾರ ಮಾಸದಂತೆ ಕೊಂಡು ಕುಂಡಕ್ಕೆ ಹಾಕಬೇಕೆಂದೂ, ಇಲ್ಲದಿದ್ದರೆ ಇನ್ನೊಂದು ಲೋಕದಲ್ಲಿರುವ ಗಂಡ ತನ್ನನ್ನು ಕಂಡು ‘ಬೈದಾನು’ ಎಂದು ಹೇಳುವ ನಾಗವ್ವಳ ಮಾತು ಜನಪದರಲ್ಲಿ ಆಳವಾಗಿ ಬೇರೂರಿದ್ದ ನಂಬಿಕೆಯೊಂದನ್ನು ಅಭಿವ್ಯಕ್ತಿಗೊಳಿಸುತ್ತದೆ. ಮೃತ ಗಂಡ ನಿಜಕ್ಕೂ ಮೃತನಾಗಿಲ್ಲ; ಅವನು ಪತ್ನಿಯ ಆಗಮನದ ನಿರೀಕ್ಷೆಯಲ್ಲಿ ಇನ್ನೊಂದು ಲೋಕದಲ್ಲಿರುವವನು. ಪತ್ನಿ ಸತಿಯಾಗಿ ಗಂಡನನ್ನು ಕೂಡಲು ಹೊರಟ ಕಾರಣ ಅಲಂಕಾರಗೊಂಡು, ಅದರಲ್ಲಿಯೂ ಸೌಭಾಗ್ಯ ಚಿಹ್ನೆಗಳಿಂದ ಕೂಡಿಕೊಂಡು ಹೋಗಬೇಕು ಎಂಬುದೇ ಆ ನಂಬಿಕೆಯಾಗಿತ್ತು.

‘ ಕೊಂಡದ ಕಾಟವ್ವ ’ ಗೀತೆಯಲ್ಲಿ ಕಾಟವ್ವ ಸತಿಹೋಗಲು ನಡೆದಾಗ, ‘ ಮುತ್ತೈದೇಳಾಗಿ ಮೊರಡವ್ವ ’ ‘ ಮೊದಲಗಿತ್ತ್ಯಾಗಿ ಮೊರಡವ್ವ ’ ‘ ಮುತ್ತೈದೇಳಾಗಿ ಬರುತಾಳೆ ’ — ಎಂಬಂಥ ವಿವರಗಳನ್ನು ಜನಪದ ಕವಿಕೊಡುವುದನ್ನು ಇಲ್ಲಿ ಗಮನಿಸಬಹುದು.[22] ‘ ನಾಗವ್ವ ’ ಜನಪದ ಖಂಡಕಾವ್ಯದಲ್ಲಿ ಈ ವಿಷಯವಾಗಿ ಇನ್ನು ಹೆಚ್ಚಿನ ವಿವರಗಳು ದೊರಕುತ್ತವೆ. ಸತಿ ಆಚರಣೆ ಹೆಚ್ಚಾಗಿ ವಿವಾಹದಂತೆ ನಡೆಯುತ್ತಿತ್ತು ಎಂಬುದನ್ನು ‘ ನಾಗವ್ವ ’ ಳ ಕಾವ್ಯ ಹೀಗೆ ಅಭಿವ್ಯಕ್ತ ಮಾಡುತ್ತದೆ:[23]

ಅತ್ತೀಯರು ಕೊನೆಬಂದು ಹಟ್ಯಾಗೆ ನಿಂದಾವೆ
ಅತ್ತಿ ನಿನ್ನೊಡಲು ಉರಿಯುದೆ । ನೀನು ತಂದ
ಮುತ್ತೈದೆ ಕೊಂಡ ಹೋಗುವಾಗ

ಕಿಚ್ಚಿನ ಸುತ್ತ ನುಚ್ಚಕ್ಕಿ ಹಸೆಹುಯ್ಯರು
ಮುತ್ತಿನ ಕಳಸ ನಡುವಿರಿಸಿ । ನಾಗವ್ವನ
ಕಿಚ್ಚಿಗೆ ಧಾರೆ ಎರೆದರು

ಕೊಂಡದಸುತ್ತ ಕೆಂಡದ ಹಸೆಹುಯ್ಯರು
ಬಂಗಾರದ ಕಳಸ ನಡುವಿರಿಸಿ । ನಾಗವ್ವನ
ಕೊಂಡಕೆ ಧಾರೆ ಎರೆದಾರು

ಪತ್ನಿ ಮುತ್ತೈದೆಯಂತೆ ಸಿಂಗರಿಸಿಕೊಂಡು ಹೋಗುವದು, ಕೊಂಡದ ಸುತ್ತ ನುಚ್ಚಕ್ಕಿಯ ಹಸೆ ಹಾಕುವುದು, ಮುತ್ತಿನ ಬಂಗಾರದ ಕಳಸ ಇಡುವುದು — ಇವೆಲ್ಲ ಕ್ರಿಯೆಗಳು ಮಂಗಲದ ಹಿನ್ನೆಲೆಯಲ್ಲಿಯೇ ಜರುಗುವುವುಗಳಾಗಿವೆ. ವಿವಾಹದಂತೆ ಮಂಗಲ ಕಾರ್ಯಗಳಿದ್ದಲ್ಲೆಲ್ಲ ಇವುಗಳ ಪ್ರದರ್ಶನವಿದೆ. ಪತ್ನಿ ಮೃತ ಗಂಡನನ್ನು ಪಡೆಯಹೊರಟ ಕಾರಣ ಅವಳೊಂದಿಗೆ ಇಲ್ಲಿ ಮಂಗಳತ್ವವಿದೆ. ಅಷ್ಟೇ ಅಲ್ಲ, ವಿವಾಹಕಾಲಕ್ಕೆ ಕನ್ಯಾಪಿತೃಗಳು ವರನಿಗೆ ತನ್ನ ಮಗಳನ್ನು ಧಾರೆ ಎರೆದುಕೊಡುವುದು ಸಾಮಾನ್ಯ ಸಂಗತಿಯಾಗಿದೆ. ಇಲ್ಲಿ ನಾಗವ್ವಳನ್ನು ‘ ಕಿಚ್ಚಿಗೆ ಧಾರೆ ಎರೆದರು ’ ಎಂದು ಹೇಳುವ ಮಾತು ವಿವಾಹ ಕಾಲದಲ್ಲಿ ನಡೆಯುವ ಧಾರೆ ಎರೆಯುವ ಪ್ರಸಂಗದ ಪ್ರತಿಧ್ವನಿಯಾಗಿರುವುದು ಗೋಚರಿಸುತ್ತದೆ.

‘ ಮಹಾಸತಿ ವೀರತಿಮ್ಮವ್ವ ’ ಗೀತೆಯಲ್ಲಿ ಅವಳು ಸತಿಹೋಗುವ ಸಮಯದಲ್ಲಿ ಅವಳನ್ನು ಮದುವೆಮಾಡಿ ಗಂಡನ ಮನೆಗೆ ಪತ್ನಿಯನ್ನು ಕಳುಹಿಸುವ ರೀತಿಯಲ್ಲಿ ಕಳುಹಿಸಿ ಕೊಡಲಾಗುತ್ತದೆ.[24]

ಚಿಕ್ಕ ಸೀರ್ಯಾದ ಕಟ್ಟೀ ಕಲ್ಲಿನಮ್ಯಾಲೆ
ಪಟ್ಟೆ ಸೀರ್ಯೋರು ಸರಿಸಮುಕ
ಪಟ್ಟೇ ಸೀರ್ಯೋರು ಸರಿಸಮುಕ । ಶಿವಮ್ಮನ
ಅವರತ್ತೇರ ಮನೆಗೆ ಕಳಿಸ್ಯಾರೆ

ರಾಯ ಸೀರ್ಯಾದ ಏರಿಕಲ್ಲಿನ ಮ್ಯಾಲೆ
ಸಾಲ್ಯಾದ ಸೀರ್ಯೋರು ಸರಿಸಮುಕೆ
ಸಾಲ್ಯಾದ ಸೀರ್ಯೋರುದಸರಿಸಮುಕೆ । ಶಿವಮ್ಮನ
ಮಾವಾನ ಮನಿಗೇ ಕಳಿಸ್ಯಾರೆ

ಪಟ್ಟೆಸೀರೆ, ಸಾಲ್ಯಾದ ಸೀರೆ ತೊಟ್ಟ ಹೆಣ್ಣುಮಕ್ಕಳು ಸತಿಹೋಗುವ ಶಿವಮ್ಮವ್ವಳನ್ನು ( ಅತ್ತೇರು ) ಅತ್ತೆಯ ಮನೆಗೆ, ಮಾವನಮನೆಗೆ ಕಳುಹಿಸಿದರು ಎಂಬ ಮಾತುಗಳು ಇಲ್ಲಿವೆ. ಸತಿಹೋಗುವವಳು ಸಾಯುವುದಕ್ಕೆ ಹೊರಟಿಲ್ಲ, ಬೇರೆ ಪ್ರಪಂಚದಲ್ಲಿರುವ ಗಂಡನನ್ನು ಪಡೆಯಹೊರಟಿದ್ದಾಳೆ, ಅದು ಅವಳ ಅತ್ತೆ — ಮಾವ — ಗಂಡನ ಮನೆಯೇ ಸರಿ. ಹೀಗೆ ಹೊರಟ ಪತ್ನಿ ಸಹಜವಾಗಿಯೇ ಮುತ್ತೈದೆಯಂತೆ ಸಿಂಗರಿಸಿಕೊಂಡು, ಇನ್ನು ಹಲವು ವಿಧದ ಆಭರಣ — ವಸ್ತ್ರಗಳನ್ನು ತೊಟ್ಟು ಸತಿಯಾಗುತ್ತಿದ್ದುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

16ನೆಯ ಶತಮಾನದ ಉತ್ತರಾರ್ಧದಲ್ಲಿ ವಿಜಯನಗರಕ್ಕೆ ಬಂದಿದ್ದ ' ಸೀಜರ ಫ್ರೆಡೆರಿಕ್ ' ಎಂಬ ವಿದೇಶಿ ಪ್ರವಾಸಿ ಸತಿಹೋಗುವವಳು ಅಲಂಕಾರಗೊಳ್ಳುವುದನ್ನು ಹೀಗೆ ಗುರುತಿಸಿದ್ದಾನೆ :[25] " ಆಕೆ ವಧುವಿನಂತೆ ಅಲಂಕಾರಮಾಡಿಕೊಂಡಿರುತ್ತಾಳೆ, ತಲೆ ಕೂದಲನ್ನು ಇಳಿಯಬಿಟ್ಟಿರುತ್ತಾಳೆ, ತನ್ನ ಯೋಗ್ಯತೆಗನುಸಾರವಾಗಿ ಒಡವೆ—ವಸ್ತ್ರಗಳನ್ನು ಹಾಕಿಕೊಂಡಿರುತ್ತಾಳೆ, ವೆನೀಸನಲ್ಲಿ ಮದುವೆಗೆ ಹೊರಟ ಹೆಣ್ಣಿನ ಮೆರವಣಿಗೆಯಂತೆ". ಅದೇ ರೀತಿ 17ನೆಯ ಶತಮಾನದ ಪೂರ್ವಾರ್ಧದಲ್ಲಿ ಇಕ್ಕೇರಿಗೆ ಸಂದರ್ಶನಕೊಟ್ಟ 'ಪಿಯತ್ರೊ ದೆಲ್ಲಾವಲ್ಲೆ ' ಅಲ್ಲಿ ತಾನು ಕಂಡ ' ಗಿಯಕ್ಕಮ ' ( Giaccama ) ಳ ಸತಿ ಘಟನೆಯೊಂದನ್ನು ವರ್ಣಿಸುತ್ತ ಹೀಗೆ ಬರೆದಿದ್ದಾನೆ:[26] " ಆಕೆ ಅಂಗಳದಲ್ಲಿ ಕುಳಿತಿದ್ದಳು. ವಾದ್ಯಗಳನ್ನು ಬಾರಿಸುತ್ತಿದ್ದರು. ಅಪ್ಪಟ ಬಿಳಿಬಟ್ಟೆ ಧರಿಸಿದ್ದಳು. ತಲೆಯ ತುಂಬ ಹೂ ಮುಡಿದಿದ್ದಳು. ನೋಡಲು ಅವು ಕಿರಣಗಳಂತೆ ಕಾಣುತ್ತಿದ್ದವು. ಒಟ್ಟಿನಲ್ಲಿ ಆಕೆ ಮದುವೆಯ

ಹೆಣ್ಣಿನಂತೆ ಇದ್ದಳು. ಕೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಳು, ಮದುವೆಯ ಹೆಣ್ಣು ಎಷ್ಟು ಸಂತಸದಲ್ಲಿರಬಹುದೋ ಅಷ್ಟು ಸಂತಸವಾಗಿದ್ದಳು''. ಕರ್ನಾಟಕಕ್ಕೆ ಭೇಟಿಕೊಟ್ಟ ಈ ಪ್ರವಾಸಿಗರು ಸತಿಹೋಗಲಿರುವವಳು 'ಮದುವೆಯ ಹೆಣ್ಣಿನಂತೆ ಅಲಂಕರಿಸಿಕೊಂಡಿದ್ದನ್ನು ಸೂಚಿಸಿರುವುದು ಇಲ್ಲಿ ಮುಖ್ಯವಾಗಿದೆ. ಭಾರತಕ್ಕೆ ಭೇಟಿಕೊಟ್ಟ ಹಲವು ಪ್ರವಾಸಿಗರೂ ಸತಿ ಘಟನೆಗಳನ್ನು ವರ್ಣಿಸುತ್ತ, ಸತಿಹೋಗಲಿರುವವಳು ಮದುವೆಯ ಹೆಣ್ಣಿನಂತೆ ಸಿಂಗರಿಸಿಕೊಂಡಿದ್ದನ್ನು ಸೂಚಿಸಿದ್ದಾರೆ. ಕ್ರಿ.ಶ.ಪೂ.316 ರಲ್ಲಿ ಸೇನಾನಾಯಕ ಕೆಟಿಯೂಸನ ಕಿರಿಪತ್ನಿ ಸತಿ ಹೋಗುವಾಗ ಸಿಂಗರಿಸಿಕೊಂಡ ಬಗೆಯನ್ನು ಡಿಯೊಡೊರಸ್ ಸಿಕುಲ್ಯಾಲಸ್ ಹೀಗೆ ಚಿತ್ರಿಸಿದ್ದಾನೆ:[27] ಕಿರಿಯವಳು ಸಂತೋಷಭರಿತಳಾದಳು. ತಲೆಗೆ ಕಿರೀಟ ಧರಿಸಿ ಮೈಗೆಲ್ಲ ಆಭರಣಗಳನ್ನು ತೊಟ್ಟಳು. 'ಮದುವಣಗಿತ್ತಿಯಂತೆ ತನ್ನ ಬಂಧುಬಳಗದೊಡಗೂಡಿ ವಾದ್ಯಸಮೇತ ಚಿತಾಗ್ನಿಯಿರುವ ಕಡೆ ಹೊರಟಳು............ ಆಕೆ ತನ್ನ ಕೈಬೆರಳುಗಳಿಗೆ ವಜ್ರದ ಉಂಗುರಗಳನ್ನು ಧರಿಸಿದ್ದಳು. ತಲೆಗೆ ಚಿನ್ನದ ಅನೇಕ ತಾರೆಗಳನ್ನು ಸಿಕ್ಕಿಸಿದ್ದಳು. ಕೊರಳಿಗೆ ಮುತ್ತು ಮಾಣಿಕ್ಯದ ಸರಗಳ ಮಾಲೆಗಳನ್ನೇ ಹಾಕಿಕೊಂಡಿದ್ದಳು''. ಬಪತೀಸ್ಟ ಟಾವರ್ನೈಯರ್ ''ಸತಿಯಾಗುವವಳು ಮದುವೆಯ ಹೆಣ್ಣಿನಂತೆ ಅಲಂಕಾರಮಾಡಿಕೊಂಡು ದಹನವಾಗುವ ಸ್ಥಳಕ್ಕೆ ಮೆರವಣಿಗೆಯಲ್ಲಿ ಹೋಗುತ್ತಾಳೆ'' ಎಂದು ಹೇಳಿದ್ದಾನೆ.[28] ಅಂದರೆ ಸತಿಹೋಗುವ ಆಚರಣೆ ಮದುವೆಯ ರೀತಿಯಲ್ಲಿ ಜರುಗುತ್ತಿತ್ತು ಎಂಬುದು ಈ ಎಲ್ಲ ಪ್ರವಾಸಿಗರ ವರದಿಗಳ ಹಿನ್ನೆಲೆಯಲ್ಲಿ ವ್ಯಕ್ತವಾಗುತ್ತದೆ. ಅಂಥ ಆಚರಣೆಯ ಕಾಲಕ್ಕೆ ಸತಿ ಸೌಭಾಗ್ಯವತಿಯಂತೆ ಸಿಂಗರಿಸಿಕೊಳ್ಳುತ್ತಿದ್ದಳಲ್ಲದೆ, ಸೌಂದರ್ಯಕ್ಕಾಗಿ ಇನ್ನೂ ಹೆಚ್ಚಿನ ಬಗೆ ಬಗೆಯ ವಸ್ತ್ರ — ಒಡವೆಗಳನ್ನು ಧರಿಸಿಕೊಂಡಿರುತ್ತಿದ್ದಾಳೆಂಬುದು ಸಹಜವೆನಿಸುತ್ತದೆ.

**ಸತಿ ಮೆರವಣಿಗೆ :—** ಮೃತನ ಪತ್ನಿ ಸತಿಯಾಗಲು ನಿರ್ಧರಿಸಿದ ಮೇಲೆ ಅವಳು ಸತಿಹೋಗುವ ವರೆಗೆ ಉತ್ಸವದ ವಾತಾವರಣವೇ ನಿರ್ಮಾಣಗೊಳ್ಳುತ್ತಿತ್ತು. ಸತಿಯಾಗುವ ಸ್ಥಳಕ್ಕೆ ಪತ್ನಿ ಕಾಲ್ನಡಿಗೆಯಿಂದಲೋ, ಕುದುರೆಯ ಮೇಲೆ ಕುಳಿತುಕೊಂಡೋ, ಪಲ್ಲಕ್ಕಿಯಲ್ಲಿ ಕುಳಿತುಕೊಂಡೋ ಮೆರವಣಿಗೆಯಲ್ಲಿ ಹೋಗುತ್ತಿದ್ದುದರ ವಿವರಗಳನ್ನು ಶಿಲ್ಪ, ಸಾಹಿತ್ಯ ಮೊದಲಾದ ಆಕರಗಳು ನೀಡುತ್ತವೆ. ಶಾಸನಗಳಲ್ಲಿ ಮಾತ್ರ ಇಂಥ ವಿವರಣೆಗಳು ಕಂಡು ಬರುವುದಿಲ್ಲ.

ಪತ್ನಿ ಸತಿಯಾಗಲು ನಡೆದುಕೊಂಡು ಹೋಗುವಾಗ ಒಳ್ಳೆಯ ಉತ್ಸಾಹದಿಂದ, ನಗು ನಗುತ್ತ ಕುಣಿಯುತ್ತ ಹೋಗುವ ಶಿಲ್ಪಗಳುಳ್ಳ ಅಪರೂಪದ ಮಾಸ್ತಿಕಲ್ಲುಗಳು ಕೆಲವು ತೀರ್ಥಹಳ್ಳಿಯ ಕವಲೆದುರ್ಗ, ಶಿವಮೊಗ್ಗದ ವಸ್ತುಸಂಗ್ರಹಾಲಯ, ಭಟ್ಕಳದ ಶಿರಾಲಿ– ಈ ಮೊದಲಾದ ಸ್ಥಳಗಳಲ್ಲಿ ದೊರಕುತ್ತವೆ. ವೀರನೊಬ್ಬನ ಪತ್ನಿಯರಿಬ್ಬರು ಅವನ ಎಡಬಲಗಳಲ್ಲಿ ಎರಡೂ ಕೈ ಎತ್ತಿಕೊಂಡು ಕುಣಿಯುತ್ತಿರುವ ಶಿಲ್ಪ ಶಿವಮೊಗ್ಗದ ವಸ್ತು–ಸಂಗ್ರಹಾಲಯದಲ್ಲಿರುವ ಆರನೆಯ ಮಾಸ್ತಿಕಲ್ಲಿನಲ್ಲಿದೆ. ಅವರು ಕೈಯಲ್ಲಿ ಲಿಂಬೆ, ಕನ್ನಡಿ ಹಿಡಿದುಕೊಂಡು ಕುಣಿಯುತ್ತಿರುವ ಚಿತ್ರ ಅತ್ಯಂತ ಸುಂದರವಾಗಿದೆ. ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣದಲ್ಲಿಯೂ ಸಹಗಮನ ಪ್ರಸಂಗವೊಂದರಲ್ಲಿ ಸತಿಯೊಬ್ಬಳನ್ನು "ಬೀದಿಯೊಳು ಕುಣಿದಾಡುತ್ತೆ ಬರುತೆ ಪುರಜನದ ಸಂದಣಿಯಿಂದ ವಾದ್ಯಂಗಳುರು ಘೋಷದಿಂದೆ ಕಂಡಾನಂದದಿಂದೆ ಸಿದ್ಧೇಂದ್ರಂಗೆ ವಂದಿಸಿದಳು" ಎಂದು ವರ್ಣಿಸಲಾಗಿದೆ.[29] ವಾದ್ಯ ಸಮೇತ ಕುಣಿದಾಡುತ್ತ ಬರುವ ಸತಿ ಚಿತ್ರ ಇಲ್ಲಿದೆ. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ತೋಂಟದರಾಯನ ಮಡದಿ ಚೆನ್ನಬಸವಮ್ಮ ಸತಿಹೋಗುವಾಗ, "ನರ್ತಿಸಿದಳು ನಲಿದಳು ಮನದನ್ನನ ಮೂರ್ತಿಯ ವಿಮಲ ಸದ್ಗುಣವ ಕೀರ್ತಿಸುತಾ......." ಎಂದು ವಿವರಿಸಲಾಗಿದೆ.[30]

ಜನಪದ ಸಾಹಿತ್ಯದಲ್ಲಿ ಸತಿಯಾಗಲು ನಡೆಯುತ್ತ — ಕುಣಿಯುತ್ತ ಹೋಗುವ ಸತಿ ಚಿತ್ರಗಳ ವಿವರಗಳು ಹೆಚ್ಚು ಹೆಚ್ಚಾಗಿ ಕಂಡು ಬರುತ್ತವೆ, 'ಈರೋಬಿ' ಖಂಡಕಾವ್ಯದಲ್ಲಿ "ಬಣ್ಣ ಇಟ್ಟುಗೊಂಡು ಬಂಗಾರ ತೊಟ್ಟುಗೊಂಡು ಬೀದೀಲಿ ಹೊರಟವಳೆ ಈರೋಬಿ" ಎಂದು ಜನಪದ ಕವಿ ಈರೋಬಿ ನಡೆದು ಹೋಗುತ್ತಿರುವುದನ್ನು ತಿಳಿಸಿ ಮುಂದಿನ ವಿವರಗಳನ್ನು ಹೀಗೆ ನೀಡುತ್ತಾನೆ:[31]

ನಿಂಬೆಯ ಹಣ್ಣ ಅಂಬರಕೀಡಾಡುತ
ರಂಬೆ ತನ್ನ ತೋಳ ತಿರವುತ — ಈರೋಬಿ
ಬಂದೋರ ಮುಂದೆ ಮೆರದಾಳೊ

ಬಾಳೆಯ ಹಣ್ಣ ಬಾನಿಗೀಡಾಡುತ
ಬಾಲೆ ತನ್ನ ತೋಳ ತಿರವುತ — ಈರೋಬಿ
ಅವರ ಭಾವದೀರ ಮುಂದೆ ಮೆರೆದಾಳೊ

ಲಿಂಬೆಹಣ್ಣು, ಬಾಳೆಹಣ್ಣುಗಳನ್ನು ಆಕಾಶಕ್ಕೆ ಈಡಾಡುತ್ತ, ತೋಳುಗಳನ್ನು ತಿರುವುತ್ತ ಮೆರೆಯುವ ಇಲ್ಲಿಯ ಈರೋಬಿಯ ಚಿತ್ರ ನೂತನವಾಗಿದೆ. ಸತಿ ಕುಣಿಯುವಾಗ ವಿಶಿಷ್ಟ ಸೀರೆ ತೊಡುವ ವಿವರಣೆಯೊಂದು ' ಮಹಾಸತಿ ತಾಡಿನಾಗವ್ವ ' ಗೀತೆಯಲ್ಲಿ ಹೀಗೆ ದೊರಕುತ್ತದೆ : '' ಕುಣಿವಾಗ ಕುಚ್ಚಿನ ಸೀರೆ ಮೆರಿವಾಗಂಚಿನ ಸೀರೆ ಕೊಂಡಕೋಗಲು—ವಾಗ ಚಂದ್ರಗಾವಿನ ಸೀರೆ '' [32] ನಾಗವ್ವ ಕೊಂಡಕ್ಕೆ ಬೀಳುವ ಪೂರ್ವದಲ್ಲಿ ಕುಚ್ಚಿನ ಸೀರೆ ತೊಟ್ಟು ಕುಣಿದ ಉಲ್ಲೇಖ ಇಲ್ಲಿದೆ. ಬಹುಶಃ ಸತಿಹೋಗುವವರು ಕುಣಿಯುವಾಗ, ಮೆರೆಯುವಾಗ, ಕೊಂಡಕ್ಕೆ ಬೀಳುವಾಗ ವಿಶಿಷ್ಟವಾದ ಉಡುಗೆಗಳನ್ನು ತೊಡುತ್ತಿದ್ದುದರ ವಿವರಗಳನ್ನು ಜನಪದ ಕವಿ ಇಲ್ಲಿ ನೀಡಿದಂತಿದೆ. ಕೊಂಡಕ್ಕೆ ನಾಗವ್ವ ಬೀಳುವಾಗ ಅವಳು ತೊಟ್ಟ ಸೀರೆಯನ್ನು ಅವಳ ತವರುಮನೆಯಿಂದಲೇ ತಂದದ್ದನ್ನು ಜನಪದ ಕವಿ '' ಕೊಂಡ—ಕೋಗಲುವಾಗ ಚಂದ್ರಗಾವಿನ ಸೀರೆ ! ತಂದರು ನಾಗವ್ವನ ತವರೂರೋರು '' ಎಂದು ತಿಳಿಸಿಬಿಟ್ಟಿದ್ದಾನೆ. [33] ಈ ವಿವರಣೆ, ಇಂದು ಹಲವು ಜನಾಂಗಗಳಲ್ಲಿ ಸತ್ತ ಹೆಣ್ಣು ಮಗಳನ್ನು ಸುಡುವಾಗ ಇಲ್ಲವೆ ಹೂಳುವಾಗ ಅವಳಿಗೆ ತೊಡಿಸುವ ಸೀರೆಯನ್ನು ತವರುಮನೆಯಿಂದಲೇ ತರುವ ಅಂಶವನ್ನು ಜ್ಞಾಪಿಸುವಂತಿದೆ.

ಅಂಕೋಲೆಯಲ್ಲಿ ಬಂಡಿಹಬ್ಬದಂದು ಸತಿಕೊಂಡಕ್ಕೆ ಬೀಳುವ ಪ್ರಸಂಗವನ್ನು ಇಂದಿಗೂ ಆಡುಕಟ್ಟೆಯಲ್ಲಿ ಆಡಿತೋರಿಸಲಾಗುತ್ತದೆ. ಮಾಸ್ತಿ ದೇವತೆ ಮೈಯಲ್ಲಿ ಪ್ರವೇಶಿಸಿದ ಪೂಜಾರಿಯೊಬ್ಬ ' ಮಾಸ್ತಿಮುಖವಾಡವನ್ನು ಹಿಡಿದುಕೊಂಡು ವಾದ್ಯದ ಗತಿಗೆ ತಕ್ಕಂತೆ ಹೆಜ್ಜೆಗಳನ್ನು ಹಿಂದೆ — ಮುಂದೆ ಇಡುತ್ತ — ಕುಣಿಯುತ್ತ ಕೊಂಡ ಪ್ರವೇಶಿಸಲು ಹೋಗುತ್ತಾನೆ. [34] ಆ ಪೂಜಾರಿ ಪೂರ್ವದಲ್ಲಿ ಸತಿ ಹೋದವಳ ಪ್ರತೀಕವಾಗಿರುತ್ತಾನೆ. ಆ ಸತಿಯೊಡನೆ ಅವಳ ಸುತ್ತ ನೆರೆದವರು ಕುಣಿಯುತ್ತಿರುತ್ತಾರೆ. ಇಂದು ಶಾಸ್ತ್ರಕ್ಕಾಗಿ ಮಾತ್ರ ಆಚರಿಸಿಕೊಂಡು ಬಂದಿರುವ ಈ ಪ್ರಸಂಗದ ಹಿನ್ನೆಲೆಯು ಪೂರ್ವಕಾಲದಲ್ಲಿ ಸತಿಯೊಬ್ಬಳು ಹಾಡುತ್ತ — ಕುಣಿಯುತ್ತ ಸತಿ ಹೋದುದನ್ನು ಧ್ವನಿಸುವುದೇ ಆಗಿದೆ. ಹೊನ್ನಾವರದ ಚಂದಾವರದಲ್ಲಿಯೂ ಮಾಸ್ತಿವೇಷ ಹಾಕಿಕೊಂಡ ' ಗುಡಿಗಾರ ' ಕುಣಿಯುತ್ತ ಕೊಂಡದೆಡೆಗೆ ಹೋಗುವುದು ಇದನ್ನೇ ಸೂಚಿಸುವುದಾಗಿದೆ. ಈ ಪ್ರದೇಶದಲ್ಲೆಲ್ಲ ' ಮಾಸ್ತಿ ಕುಣಿದು ಕುಣಿದು ಕೊಂಡಕ್ಕೆ ಬೀಳುವಳು '' ಎಂಬ ಗಾದೆ ಮಾತು ಪ್ರಚಲಿತದಲ್ಲಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಕೆಲವು ಸತಿಯರು ಕುದುರೆಯ ಮೇಲೆ ಕುಳಿತುಕೊಂಡು ಮೆರವಣಿಗೆಯಲ್ಲಿ ಸತಿಸ್ಥಳಕ್ಕೆ ಹೋಗಿದ್ದ ಕುರಿತಾಗಿ ಉಲ್ಲೇಖಗಳು ಕಂಡು ಬರುತ್ತವೆ. ಅರಸಿಕೆರೆಯ ಚೌಡನಹಳ್ಳಿ, ಕೊಳ್ಳೆಗಾಲದ ಮುಡಿಗೊಂಡ ಹಳ್ಳಿಗಳಲ್ಲಿ ಸತಿ ಕುದುರೆಯ ಮೇಲೆ ಕುಳಿತು ಕೊಂಡ ಅಪರೂಪದ ಮಾಸ್ತಿಶಿಲ್ಪಗಳಿವೆ. ಚೌಡನಹಳ್ಳಿಯ ಮಾಸ್ತಿಕಲ್ಲಿನಲ್ಲಿ ಮೂರು ಭಾಗಗಳಿದ್ದು ಕೆಳಭಾಗದಲ್ಲಿ ಕುದುರೆಯ ಮೇಲೆ ಕುಳಿತ ಸತಿ ಚಿತ್ರವಿದೆ. ಅವಳು ಎಡಗೈಯಲ್ಲಿ ಲಿಂಬೆಹಣ್ಣು ಹಿಡಿದಿದ್ದು, ಎರಡು ಕೈಗಳನ್ನು ಎತ್ತಿದಂತೆ ಕಂಡರಿಸಲಾಗಿದೆ ( ಚಿತ್ರ — 60) ಮುಡಿಗೊಂಡದ ಮಾಸ್ತಿಕಲ್ಲಿನಲ್ಲಿ ಸತಿ ಎರಡೂ ಕೈಎತ್ತಿ ಬಲಗೈಯಲ್ಲಿ ಕನ್ನಡಿ ಹಿಡಿದು ಕೊಂಡು ಕುದುರೆಯ ಮೇಲೆ ಕುಳಿತುಕೊಂಡಿರುವಂತೆ ಚಿತ್ರಿಸಲಾಗಿದೆ. ಕುದುರೆ ಸೌಮ್ಯ ವಾಗಿ ನಿಂತಿರುವ ಭಂಗಿ ಮನಸೆಳೆಯುವಂತಿದೆ ಈ ಕೆತ್ತನೆಯ ವಿವರಗಳು ಮೃತನ ಪತ್ನಿ ಸತಿಸ್ಥಳಕ್ಕೆ ಕುದುರೆಯ ಮೇಲೆ ಮೆರವಣಿಗೆಯಲ್ಲಿ ಹೋಗುತ್ತಿದ್ದಳೆಂಬುದನ್ನು ಸ್ಪಷ್ಟ ಪಡಿಸುತ್ತವೆ, ಸಿರುಮಣನಾಯಕನ ಸಾಂಗತ್ಯವು ಕುಮಾರ ವೀರಯ್ಯನು ಯುದ್ಧದಲ್ಲಿ ಮರಣಹೊಂದಲಾಗಿ ಅವನ ಪತ್ನಿಯರು ಅವನೊಡನೆ ಸಮಾಧಿಗೊಳ್ಳಲು ಕುದುರೆಯ ಮೇಲೆ ಬಂದುದನ್ನು ಹೀಗೆ ತಿಳಿಸುತ್ತದೆ:[35]

ಪನ್ನಂಗ (ತೊ)ಳಗೆ ಕುಮಾರ ವೀರಯ್ಯನ
ಕನ್ನೆಮಡಿರು ತುರಗದಲಿ ।
ಚೆನ್ನ ಸ್ವರ್ಗವ ಸೂರೆಗೊಂಬಂತೆ ನಡೆದರು
ಉನ್ನಂತವರಸಮುಗ್ರಹಕೆ ।

ಕ್ರಿ.ಶ. ಸು. 1567 ರಲ್ಲಿ ವಿಜಯನಗರಕ್ಕೆ ಭೇಟಿಕೊಟ್ಟ 'ಸೀಜರ ಫ್ರೆಡರಿಕ' ಮೃತನ ಪತ್ನಿ ಸತಿಹೋಗಲು ನಿರ್ಧರಿಸಿ ಮೆರವಣಿಗೆಯಲ್ಲಿ ಭಾಗವಹಿಸುತ್ತಿದ್ದುದನ್ನು ಹೀಗೆ ವಿವರಿಸುತ್ತಾನೆ :[36] "ಗಂಡ ಸತ್ತ ಮೇಲೆ ಹೆಂಡತಿ ಒಂದು ಅಥವಾ ಮೂರು ತಿಂಗಳ ನಂತರ ಚಿತೆಯಲ್ಲಿ ಬೀಳುವುದಕ್ಕೆ ಸಿದ್ಧಳಾಗುತ್ತಾಳೆ, ನಿರ್ದಿಷ್ಟವಾದ ದಿನ ಬಂದಾಗ ಬಹಳ ಹೊತ್ತಿಗೆ ಮುಂಚೆ ಎದ್ದು ಕುದುರೆಯ ಮೇಲೋ, ಆನೆಯ ಮೇಲೋ, ಅಥವಾ ಎಂಟು ಜನ ಹೊತ್ತ ಪಲ್ಲಕ್ಕಿಯ ಮೇಲೋ ಕುಳಿತು ಚಿತೆಯ ಸ್ಥಳಕ್ಕೆ ಹೊರಡುತ್ತಾಳೆ, ಆಕೆ ವಧುವಿನಂತೆ ಅಲಂಕಾರ ಮಾಡಿಕೊಂಡಿರುತ್ತಾಳೆ, .......... ಆಕೆಯ ಎಡಗೈಯಲ್ಲಿ ಕನ್ನಡಿ, ಬಲಗೈಯಲ್ಲಿ ಒಂದು ಬಾಣ ಇರುತ್ತದೆ, ಮೆರವಣಿಗೆಯಾಗುವಾಗ ಆಕೆ ಹಾಡುತ್ತಾ

ಇರುತ್ತಾಳೆ — ತಾನು ತನ್ನ ನಲ್ಲನೊಡನೆ ಚಿರನಿದ್ರೆ ಮಾಡಲು ಹೋಗುತ್ತಿರುವೆನೆಂದು. ಆಕೆಯ ನೆಂಟರಿಷ್ಟರು ಮೆರವಣಿಗೆಯಲ್ಲಿ ಭಾಗವಹಿಸುತ್ತಾರೆ''. ಈ ವಿವರಣೆಯು ಗಂಡ ಮರಣಹೊಂದಿದ ಒಂದು ಅಥವಾ ಮೂರು ತಿಂಗಳ ನಂತರ ನಿರ್ದಿಷ್ಟಪಡಿಸಿದ ದಿನದಂದು ಮೆರವಣಿಗೆಯಲ್ಲಿ ಹೋಗುವ ಸತಿಯನ್ನು ಕುರಿತದ್ದಾಗಿದೆ. ಅವಳು ಕುದುರೆಯ ಮೇಲೆ ಮೆರವಣಿಗೆಯಲ್ಲಿ ಸತಿಸ್ಥಳಕ್ಕೆ ಹೋಗುತ್ತಿದ್ದಳು ಎಂಬುದನ್ನು ಈ ವಿದೇಶಿ ಪ್ರವಾಸಿ ತಿಳಿಸುವನಲ್ಲದೆ ಆನೆಯ ಮೇಲೆಯೋ, ಪಲ್ಲಕ್ಕಿಯಲ್ಲಿಯೋ ಕುಳಿತುಕೊಂಡು ಅವಳು ಸತಿಸ್ಥಳಕ್ಕೆ ಹೋಗುತ್ತಿದ್ದುದರ ಹೆಚ್ಚಿನ ವಿವರಗಳನ್ನು ನೀಡುತ್ತಾನೆ. ಹಾಗೆ ಮೆರವಣಿಗೆಯಲ್ಲಿ ಹೋಗುವ ಸತಿ ಹಾಡನ್ನು ಜೊತೆಗೆ ಹಾಡುತ್ತಿದ್ದುದರ ಉಲ್ಲೇಖ ಮಾಡುತ್ತಾನೆ. ಇಕ್ಕೇರಿಯಲ್ಲಿ ಗಿಯುಕ್ಕಮನ ಸತಿ ಮೆರವಣಿಗೆಯನ್ನು ಕಂಡ ಪಿಯತ್ರೊದೆಲ್ಲಾವಲ್ಲೆ ಅದನ್ನು ಹೀಗೆ ವಿವರಿಸುತ್ತಾನೆ:[37] ''ಇಕ್ಕೇರಿಯ ನಗರದ ಗಂಡಸತ್ತ ಹೆಂಗಸೊಬ್ಬಳು ಬೆಂಕಿಯಲ್ಲಿ ಬೀಳಲು ಸಿದ್ಧತೆ ಮಾಡಿಕೊಳ್ಳುತ್ತಿರುವುದನ್ನು ಕಂಡೆವು. ಇಂಡಿಯಾದ ಅನೇಕ ಹೆಂಗಸರು ಈ ಪದ್ಧತಿ ಆಚರಿಸುತ್ತಾರೆ. ಆಕೆ ಕುದುರೆಯ ಮೇಲೆ ಕುಳಿತಿದ್ದಳು. ಮುಖ ಮುಚ್ಚಿಕೊಂಡಿರಲಿಲ್ಲ. ಆಕೆಯ ಒಂದು ಕೈಯಲ್ಲಿ ಲಿಂಬೆಹಣ್ಣು, ಇನ್ನೊಂದು ಕೈಯಲ್ಲಿ ಕನ್ನಡಿ. ಅವು ಏತಕ್ಕೆ ಎಂದು ನನಗೆ ಗೊತ್ತಾಗಲಿಲ್ಲ. ಆಕೆ ಗೋಳೋ ಎಂದು ಅಳುತ್ತಾ ಕನ್ನಡಿಯಲ್ಲಿ ನೋಡುತ್ತಿದ್ದಳು. ಇನ್ನು ಏನೇನೋ ಹಾಡು ಮತ್ತು ಮಾತುಗೀತು ಸಾಗುತ್ತಿತ್ತು. ಆದರೆ ಅವು ನನಗೆ ಗೊತ್ತಾಗಲಿಲ್ಲ. ಪ್ರಪಂಚವನ್ನು ಬೀಳ್ಕೊಡುವ ಒಂದು ವಿಧದ ಮಾತುಗಳೆಂದು ಜನರು ಹೇಳಿದರು. ಅಂತೂ ಅವಳ ದುಃಖ ಹೇಳತೀರದು. ಭಾಷೆ ಗೊತ್ತಾಗದ ನಮಗೂ ಅವಳ ದುಃಖದ ಮಾತು ಕೇಳಿ ಕನಿಕರವಾಗುತ್ತಿತ್ತು. ಆಕೆಯನ್ನು ಹಿಂಬಾಲಿಸಿ ಅನೇಕ ಜನ ಹೆಂಗಸರು, ಗಂಡಸರೂ ನಡೆದುಕೊಂಡು ಹೋಗುತ್ತಿದ್ದರು. ಬಹುಶಃ ಅವರು ಆಕೆಯ ಸಂಬಂಧಿಗಳಿರಬೇಕು. ಆಕೆಯ ಮೇಲೆ ದೊಡ್ಡದೊಂದು ಛತ್ರಿ ಹಿಡಿದಿದ್ದರು. ಛತ್ರಿ ಹಿಡಿಸಿಕೊಳ್ಳುವುದು ಇಂಡಿಯಾದಲ್ಲಿ ದೊಡ್ಡ ಮನುಷ್ಯರ ಲಕ್ಷಣ. ಆಕೆಯ ಮುಂದೆ ವಾದ್ಯಗಳನ್ನು ಬಾರಿಸುತ್ತಿದ್ದರು. ಆ ವಾದ್ಯಗಳ ಗತ್ತಿಗೆ ತಕ್ಕಂತೆ ಹೆಂಗಸು ದನಿಕೊಟ್ಟು ದುಃಖದ ಹಾಡು ಹಾಡುತ್ತಿದ್ದಳು. ಆದರೆ ಆಕೆಯ ದನಿಯಲ್ಲಿ ಉದ್ವೇಗವಿರಲಿಲ್ಲ. ಶಾಂತಚಿತ್ತಳಾಗಿ ಕಣ್ಣಲ್ಲಿ ನೀರಿಲ್ಲದ ತನ್ನ ಗತಿಗಿಂತ

ಹೆಚ್ಚಾಗಿ ತನ್ನ ಸತ್ತ ಗಂಡನ ಬಗ್ಗೆ ಆಕೆ ಯೋಚಿಸುತ್ತಿರುವಂತೆ ಕಂಡಿತು...... ಆದರೆ ಈ ರೀತಿ ನಗರದೊಳಗೆ ಎಷ್ಟು ದಿನಗಳು ಮೆರವಣಿಗೆ ಮಾಡುತ್ತಾರೆ ಎಂದು ನನಗೆ ಗೊತ್ತಾಗಲಿಲ್ಲ... ಈ ವಿವರಣೆಯಲ್ಲಿ ಗಿಯಕ್ಕಮ ಕುದುರೆಯ ಮೇಲೆ ಕುಳಿತು ಕೊಂಡು ಕೈಯಲ್ಲಿ ಲಂಬೆಹಣ್ಣು, ಕನ್ನಡಿ ಹಿಡಿದುಕೊಂಡು ವಾದ್ಯಗಳ ಜೊತೆಗೆ ಹಾಡುತ್ತ — ಮಾತನಾಡುತ್ತ ಸತ್ತ ಗಂಡನ ಬಗ್ಗೆ ಯೋಚಿಸುತ್ತ ಶಾಂತಚಿತ್ತದಿಂದ ಮೆರವಣಿಗೆಯಲ್ಲಿದ್ದಳೆಂಬುದನ್ನು ಚಿತ್ರಿಸಲಾಗಿದೆ. ಅಲ್ಲದೆ ಅವಳಿಗೆ ಮರ್ಯಾದೆಯ ಸೂಚಕವಾಗಿ 'ಛತ್ರಿ' ಹಿಡಿಯಲಾಗಿತ್ತು. ಅವಳೊಡನೆ ಅನೇಕ ಜನರು — ಸಂಬಂಧಿಕರು — ಮೆರವಣಿಗೆಯಲ್ಲಿ ಭಾಗವಹಿಸಿದ್ದರು ಎಂದು ಹೇಳಲಾಗಿದೆ. ಇದೆಲ್ಲಕ್ಕಿಂತಲೂ ಹೆಚ್ಚಾಗಿ ಪಿಯೆತ್ರೊ ದೆಲ್ಲಾವಲ್ಲೆಯ ವರದಿಯಿಂದ ಒಂದು ಮುಖ್ಯ ವಿಷಯ ತಿಳಿದು ಬರುತ್ತದೆ. ಗಿಯಕ್ಕಮನ ಈ ಮೆರವಣಿಗೆ ಸತಿಸ್ಥಳಕ್ಕೆ ಹೊರಟ ಮೆರವಣಿಗೆ ರೂಪದ್ದಲ್ಲ, ಮೃತನ ಪತ್ನಿ ಸತಿಹೋಗುವ ಪೂರ್ವದಲ್ಲಿ ಹಲವು ದಿನಗಳವರೆಗೆ ಊರಿನಲ್ಲಿ ತೆಗೆದುಕೊಳ್ಳುವ ಮೆರವಣಿಗೆ ರೂಪದ್ದಾಗಿದೆ. ಹೀಗೆ ಅಂದು ಸತಿಹೋಗುವ ಮೊದಲು ಕೆಲವು ದಿನಗಳವರೆಗೆ ಸತಿ ಮೆರವಣಿಗೆ ನಡೆಯುತ್ತಿರಬೇಕು. ಅನಂತರ ಬಹುಶಃ ನಿರ್ದಿಷ್ಟಪಡಿಸಿದ ದಿನದಂದು ಅವರು ಸತಿಹೋಗುತ್ತಿರಬೇಕು.

ನಗರದ ಹರಿತಾಳು ಗ್ರಾಮದಲ್ಲಿರುವ ಮಾಸ್ತಿಕಲ್ಲು ಬಲಗೈ ಎತ್ತಿದ ಶಿಲ್ಪವನ್ನೊಳಗೊಂಡಿದೆ. ಪತಿಯೊಡನೆ ಮೂರುಜನ ಪತ್ನಿಯರು ಸತಿಹೋದುದನ್ನು ಇದು ತಿಳಿಸುತ್ತದೆ. ಪತಿ — ಸತಿಯರು ಕುಳಿತ ಸ್ಥಾನದ ಕೆಳಭಾಗದಲ್ಲಿ ಇಬ್ಬರು ಪಲ್ಲಕ್ಕಿ ಹೊತ್ತು ಕೊಂಡು ಹೋಗುತ್ತಿರುವ ಚಿತ್ರವನ್ನು ಇಲ್ಲಿ ಬಿಡಿಸಲಾಗಿದೆ. ಪಲ್ಲಕ್ಕಿ ಬರಿದಾಗಿದೆ, ಈ ಕಲ್ಲಿನ ಶಿಲ್ಪ ಸತಿಪ್ರಸಂಗವನ್ನು ತಿಳಿಸುವೆಡೆಗೇ ಹೆಚ್ಚು ಒತ್ತುಕೊಟ್ಟಿದ್ದರಿಂದ, ಪಲ್ಲಕ್ಕಿ ಯಲ್ಲಿ ಸತಿ ಅಥವಾ ಸತಿಯಂದಿರು ಕುಳಿತುಕೊಂಡು ಸತಿಸ್ಥಾನಕ್ಕೆ ಹೋದುದನ್ನು ತಿಳಿಸಲೆಂದೇ ಈ ಮಾಸ್ತಿಕಲ್ಲಿನಲ್ಲಿ ಪಲ್ಲಕ್ಕಿಯ ಚಿತ್ರವನ್ನು ಬಿಡಿಸಲಾಗಿದೆ ಎನಿಸುತ್ತದೆ. (ಚಿತ್ರ — 61) ಕುಮಾರರಾಮನ ಸಾಂಗತ್ಯದಲ್ಲಿಯೂ ಕುಮಾರರಾಮನ ಪತ್ನಿಯರು ಪಲ್ಲಕ್ಕಿಯಲ್ಲಿಯೇ ಕೊಂಡದ ಸ್ಥಾನಕ್ಕೆ ಹೋದುದನ್ನು ನಂಜುಂಡಕವಿ ಹೀಗೆ ಒಂದು[38] ಪದ್ಯದಲ್ಲಿ ಚಿತ್ರಿಸುತ್ತಾನೆ:

ಪಲ್ಲಕ್ಕಿಗಳ ಮೇಲೆ ಚೆನ್ನಿಗರಾಮನ
ಮಲ್ಲಭೆಯರ ಕುಳ್ಳಿರಿಸಿ
ನಿಲ್ಲದೆ ಕೊಂಡೊಯ್ದು ಕೊಂಡದ ಕೆಲ
ದಲ್ಲಿ ನಿಲ್ಲಿಸಿ ತೆರೆಹಿಡಿದು

ಹೀಗೆ ಕೆಲವು ಸತಿಯರು ಪಲ್ಲಕ್ಕಿಗಳಲ್ಲಿ ಕುಳಿತುಕೊಂಡು ಸತಿಸ್ಥಾನಕ್ಕೆ ಹೋಗಿರುವ ಕುರಿತಾಗಿ ಅಪರೂಪದ ವಿವರಣೆಗಳು ಸಿಗುತ್ತವೆ. ಹೆಚ್ಚು ಜನ ಸ್ತ್ರೀಯರು ಕಾಲ್ನಡಿಗೆಯಲ್ಲಿಯೇ ಸಾಮಾನ್ಯವಾಗಿ ಸತಿಹೋಗುವ ಸ್ಥಾನಕ್ಕೆ ಹೋಗಿರಬೇಕೆನಿಸುತ್ತದೆ. ಶ್ರೀಮಂತವರ್ಗದ ಜನ ಮಾತ್ರ ಕುದುರೆ, ಪಲ್ಲಕ್ಕಿಗಳಲ್ಲಿ ಸತಿ ಮೆರವಣಿಗೆ ತೆಗೆಯುತ್ತಿದ್ದಿರಬೇಕು. ಉಳಿದ ಬಡವರ್ಗದ ಸ್ತ್ರೀಯರು ವಾದ್ಯಗಳ ಜೊತೆ ಕುಣಿಯುತ್ತ ನೇರವಾಗಿ ಸತಿಸ್ಥಾನಕ್ಕೆ ಹೋಗುತ್ತಿರಬೇಕು ಎನಿಸುತ್ತದೆ. ವಿದೇಶಿ ಪ್ರವಾಸಿ 'ದು ಆರ್ತೆ ಬಾರ್ಬೋಸಾ' ಇದನ್ನು ಉಲ್ಲೇಖಿಸಿಯೂ ಇದ್ದಾನೆ:[39] "ಗಂಡ ಸತ್ತಾಗ ಹೆಂಡತಿಗಂಡನೊಡನೆ ಸಹಗಮನ ಮಾಡಲೇಬೇಕು. ಇದನ್ನು ಪತಿಭಕ್ತಿ ಎಂದು ಭಾವಿಸುತ್ತಾರೆ. ಬಡವಳಾದವಳು ಆತ್ಮ ಸಂತೋಷದಿಂದ ಸೀದಾಹೋಗಿ ಗಂಡನ ಚಿತೆಯಲ್ಲಿ ಬಿದ್ದು ಸಾಯುತ್ತಾಳೆ. ಅನುಕೂಲಸ್ಥಳಾದವಳು ಚಿತೆಗೆ ಬೀಳುವ ಮುನ್ನ ನೆಂಟರಿಷ್ಟರನ್ನೆಲ್ಲಾ ಸೇರಿಸಿ ಊಟೋಪಚಾರ ಮಾಡಿ ಕುದುರೆಯ ಮೇಲೆ ಮೆರವಣಿಗೆ ಹೊರಡುತ್ತಾಳೆ. ಕುದುರೆ ಬೂದು ಬಣ್ಣದ್ದಿರಬೇಕು. ಅಥವಾ ಬಿಳಿ ಬಣ್ಣದ್ದಿರಬೇಕು. ಕುದುರೆಯ ಮೇಲೆ ಮೆರವಣಿಗೆ ಹೊರಟು ಗಂಡನ ಚಿತೆ ಇರುವ ಬಳಿಗೆ ಹೋಗುತ್ತಾಳೆ". ಬಡವರೂ ಹಾಗೂ ಅನುಕೂಲಸ್ಥರು ಆಚರಿಸುತ್ತಿದ್ದ ಸತಿ ಮೆರವಣಿಗೆಯ ಅಂತರವನ್ನು ಈ ವಿದೇಶಿಪ್ರವಾಸಿಯ ವರದಿಯಿಂದ ಕಂಡುಕೊಳ್ಳಬಹುದಾಗಿದೆ.

ಸತಿಯ ದಾನಕಾರ್ಯ: ಮೃತನ ಪತ್ನಿ ಸತಿಸ್ಥಳಕ್ಕೆ ಮೆರವಣಿಗೆಯಲ್ಲಿಹೋಗುತ್ತಿರುವಾಗ ಹಾಗೂ ಸತಿಸ್ಥಳಕ್ಕೆ ಮುಟ್ಟಿದ ಮೇಲೆ ತನ್ನ ಸುತ್ತಮುತ್ತಲಿನ ಜನರಿಗೆ ತನಗೆ ಶಕ್ಯವಾದಷ್ಟು ದಾನ ಕೊಡುತ್ತಿದ್ದುದನ್ನು ಗುರುತಿಸಬಹುದಾಗಿದೆ. ಹಣ, ಭೂಮಿ, ವಸ್ತ್ರ, ಮೊದಲಾದವುಗಳು ದಾನದ ವಿಷಯಗಳಾಗಿದ್ದವು. ಅಷ್ಟೇ ಅಲ್ಲ, ಸತಿ ತಾನು ಹಿಡಿದಿರುವ ಲಿಂಬೆಹಣ್ಣು ಮೊದಲ್ಗೊಂಡು, ತಾನು ತೊಟ್ಟ ಆಭರಣಗಳನ್ನು ಹಂಚುವ ವರೆಗೆ ಅವಳ ದಾನದ ವಸ್ತುಗಳ ವೈವಿಧ್ಯತೆ ಇದ್ದಿರುವುದು ಕಂಡುಬರುತ್ತದೆ, ದಾನ ಕೊಡುವವಳು ಸತಿಯಾಗಿದ್ದಳು. ಆದರೆ

ಅದನ್ನು ಸ್ವೀಕರಿಸಲು ಇಂಥವರೇ ಬೇಕೆಂದೇನೂ ಇಲ್ಲ. ಸಂಬಂಧಿಗಳು, ಸಂಬಂಧಿಗಳಲ್ಲದವರು, ತನ್ನ ಊರಿನವರು, ತನ್ನ ಊರಿನವರಲ್ಲದವರು, ತನ್ನ ಜಾತಿಯವರಲ್ಲದವರು, ಪುರುಷರು, ಸ್ತ್ರೀಯರು, ಮಕ್ಕಳು, ದೊಡ್ಡವರು — ಹೀಗೆ ಯಾರು ಬೇಕಾದವರೂ ಸತಿಕೊಡುವ ದಾನವನ್ನು ಸ್ವೀಕರಿಸಬಹುದಾಗಿತ್ತು.

ದೇಕಬ್ಬೆ ಸತಿಹೋಗುವ ಪೂರ್ವದಲ್ಲಿ ದೇವರ ನಂದಾದೀವಿಗೆಗೆ, ನಿವೇದ್ಯಕ್ಕೆಂದು, ಭೂಮಿ — ಗದ್ದೆಗಳನ್ನು ದಾನ ಕೊಟ್ಟಿದ್ದನ್ನು ಬೆಳತೂರ ಶಾಸನ ಹೀಗೆ ಹೇಳುತ್ತದೆ : [40] '' ನಂಯುದಿನದಿಂ ದೇವಂಗೆ ತೋಂಟ ಖಣ್ಡದ ಮಣ್ಣುಂ ನಂದಾದೀವಿಗೆಗಿತ್ತವಿನಾಂನನೆ ಸತಿ ನಿವೇದ್ಯಕೆನ್ದನುನಂತರದಿಂ ಮುಡದಿ ಸಲಗೇಳಿಗಳ್ದೆಯ ಪಡುವಣ ಕಡೆಯಲ್ಲಿ ತೆಂಕಲಯ್ದೊಗಳ ಬೆದೆಯಂ ಕುಡುಗುತರ್ಪ್ಪಕೊಟ್ಟನುಗುನಾಡೊಡೆಯುನ ಕುಲಪುತ್ರ ಪೇಶ್ಟಿ ಮುತ್ತಂ ಮುತ್ತಂ'' ಅಲ್ಲದೆ, ಅವಳು ಸುತ್ತಲಿನ ಜನರಿಗೆ '' ಆದರದಿನ್ದಂ ಭೂಮಿಯ ಪೋಂಪುಟ್ಟಿಗೆ ಪಸುಧನವುಂ ಧನವುಂ ನೀಡುತುಂ '' ಎಂದು ಅವಳ ಕಾರ್ಯ್ಯಚರಣೆಯನ್ನು ಶಾಸನಕವಿ ಎತ್ತಿ ತೋರಿಸಿದ್ದಾನೆ. ಸತಿ ಸಖಿಯರಿಗೆ ಬಾಗಿನ ಕೊಟ್ಟುದನ್ನು ಬಳ್ಳಿಗಾವೆಯ ವೀರಕಲ್ಲಿನ ಶಿಲ್ಪವೊಂದರಲ್ಲಿ ಅಪರೂಪವಾಗಿ ಚಿತ್ರಿಸಲಾಗಿದೆ, ವೀರಕಲ್ಲಿನ ಕೆಳಹಂತದಲ್ಲಿ, ಅಗ್ನಿ ನಾಲಗೆ ಚಾಚಿದ ಚಿತ್ರವಿದೆ. ಅದರ ಎರಡು ಪಕ್ಕಗಳಲ್ಲಿ ಸುಮಂಗಲೆಯರು ನಿಂತಿದ್ದಾರೆ. ಆ ಸುಮಂಗಲೆಯರ ಸಮೀಪದಲ್ಲಿಯೇ ಬಾಗಿನದ ಮೊರಗಳನ್ನು ಚಿತ್ರಿಸಿದ್ದನ್ನು ನೋಡಿದರೆ ಅವರು ಅವುಗಳನ್ನು ಸತಿಯಿಂದ ಪಡೆದುದನ್ನು ಸೂಚಿಸಲಿಕ್ಕಾಗಿಯೇ ಶಿಲ್ಪ ಹಾಗೆ ಬಿಡಿಸಿತೋರಿಸಿದ್ದಾನೆಂದು ಹೇಳಬಹುದಾಗಿದೆ. ( ಚಿತ್ರ — 4 )

ಮಾದಾರ ಧೂಳಯ್ಯಗಳ ವಚನದಲ್ಲಿ '' ಧೀರೆಯಾದ ಮಾಸ್ತಿಯು, ವೀರರಾಗಿದ್ದವರು ಮುಡಿಯಲ ಹಿಡಿದ ಲಿಂಬೆಯ ಹಣ್ಣುಬೇಡಿದಡೆ ಕೊಡುವಳು, ದೃಢವುಳ್ಳ ವೀರರು ತರುವರು'' ಎಂಬ ಮಾತು ಬರುತ್ತದೆ. [41] ಇಲ್ಲಿ ಮಹಾಸತಿಯು ವೀರರಾಗಿದ್ದವರಿಗೆ ಹೂವು ಮತ್ತು ಲಿಂಬೆಹಣ್ಣುಗಳನ್ನು ಕೊಡುವವಳಾಗಿ ಚಿತ್ರಿತವಾಗಿದ್ದಾಳೆ. ಬಹುಶಃ ತುಂಬ ಸಿಂಗಾರಗೊಂಡು ವಾದ್ಯಗಳೊಡನೆ ಜನಜಂಗುಳಿಯಲ್ಲಿ ನಗುನಗುತ್ತಲೋ, ಗಂಭೀರವಾಗಿಯೋ, ಮೌನವಾಗಿಯೋ, ದುಃಖದಿಂದಲೋ, ವಿಕಾರವಾಗಿಯೋ ಸತಿಯಾಗಲು ಹೋಗುತ್ತಿರುವವಳನ್ನು ಮಾತನಾಡಿಸಿ ಅವಳ ಕೈಯಿಂದ ಲಿಂಬೆಹಣ್ಣು, ಅಲರ ಮೊದಲಾದ ವಸ್ತುಗಳನ್ನು

ಬೇಡಿ ಪಡೆದುಕೊಳ್ಳುವಲ್ಲಿ ಬೇಡುವವರಲ್ಲಿ ತಕ್ಕಮಟ್ಟಿಗೆ ಧೈರ್ಯ ಇರಲೇಬೇಕಾಗಿತ್ತು ಎನಿಸುತ್ತದೆ. ಮತ್ತು ಇನ್ನು ಒಂದು ಅರ್ಥದಲ್ಲಿ ಅವಳು ಆಗಲೇ ಸತ್ತು ಇನ್ನೊಂದು ಲೋಕದಲ್ಲಿದ್ದಾಳೆಂಬ ಜನರಲ್ಲಿಯ ಭಾವನೆಯೂ ಅವಳೊಡನೆ ಸರಳವಾಗಿ ವ್ಯವಹರಿಸಲು ಅಡ್ಡಿಯನ್ನುಂಟು ಮಾಡುತ್ತಿರಬೇಕು, ಇದನ್ನು ಕಂಡ ಮಾದಾರ ಧೂಳಯ್ಯಗಳು ತಮ್ಮ ವಚನದಲ್ಲಿ "ದೃಢವುಳ್ಳ ವೀರರು ತರುವರು" ಎಂಬ ಮಾತನ್ನು ತೇಲಿಸಬೇಕಾಯಿತು. ಕವಿಜನ್ನನು ಚಂಡಶಾಸನನ ರಾಣಿಯರು ಸತಿಹೋಗುವ ಪ್ರಸಂಗದಲ್ಲಿ, "ಪೊನ್ನ ಮಾಣಿಕದ ಬಾಯಿನಮಂ ಸಮಕಟ್ಟುವಳ್ತಿ ಬಂದೊಡೆ ಹಿಡಿಹಾರವೀವಳವಿಯುಚ್ಚರಿಯಾದುದು ಪೆಂಡವಾಸದೊಳ್" ಎಂದು ಚಿತ್ರಿಸಿದ್ದಾನೆ,[42] ಇಲ್ಲಿ ರಾಣಿವರ್ಗ ಬಂಗಾರ ಮತ್ತು ಮಾಣಿಕ್ಯದಿಂದೊಡಗೂಡಿದ ಬಾಗಿನ ('ಪೊನ್ನ' ಎಂಬುದು ಅಂದಿನ ಕಾಲದ ನಾಣ್ಯ ಎಂದು ಆಗಬಹುದು), ಸಮಕಟ್ಟು, ಹಾರಗಳನ್ನು ದಾನ ಮಾಡುತ್ತಿದ್ದುದು ವಿದಿತವಾಗುತ್ತದೆ. ಹನ್ನೆರಡು — ಹದಿಮೂರನೆಯ ಶತಮಾನಗಳ ಕರ್ನಾಟಕದಲ್ಲಿ ಶ್ರೀಮಂತವರ್ಗದವರು — ಅದರಲ್ಲಿಯೂ ಅರಸುಮನೆತನದವರು — ಆಚರಿಸಿಕೊಂಡು ಬರುತ್ತಿದ್ದ ಸತಿ ಸಂಪ್ರದಾಯದ ಚಿತ್ರಣವನ್ನು ಜನ್ನನು ಇಲ್ಲಿ ಅತ್ಯಂತ ಶ್ರೀಮಂತವಾಗಿ ಕೊಟ್ಟಿದ್ದಾನೆ. ಇದೇ ರೀತಿ ರಾಜಕುಮಾರ ವೀರಯ್ಯನ ಪತ್ನಿಯರು ಬಾಗಿನವನ್ನು ಕೊಡುವ ವಿಷಯ ಸಿರುಮಣ — ನಾಯಕನ ಸಾಂಗತ್ಯದಲ್ಲಿದೆ.[43] ಕುಮಾರರಾಮನ ಮರಣ ಖಚಿತವಾದಾಗ ಅವನ ಪತ್ನಿಯರು ರಾಜಾಂಗಣದಲ್ಲಿ ಗೆಳತಿಯರಿಗೆ "ಕನ್ನಡಿ ನಿಂಬೆಹಣ್ಣಳನು ಮನ್ನಿಸುತಲಿರ್ದ" ರೆಂದು ನಂಜುಂಡ ಕವಿ ಚಿತ್ರಿಸಿದ್ದಾನೆ.[44] ಜನಪದ ಹಾಡುಗಳಲ್ಲಿ, ಮಾಸ್ತಿಕಲ್ಲಿನ ಶಿಲ್ಪಗಳಲ್ಲಿ ಲಿಂಬೆಹಣ್ಣು, ಕನ್ನಡಿ ಹಾಗೂ ವಿಧ ವಿಧ ಆಭರಣಗಳು ಈ ಮೊದಲಾದವುಗಳನ್ನು ಹೊಂದಿದ ಸತಿ ಚಿತ್ರಗಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಭಾರತದಲ್ಲಿ ಪ್ರವಾಸ ಮಾಡಿದ ಅನೇಕ ವಿದೇಶಿ ಪ್ರವಾಸಿಗರು ಸತಿ ದಾನಮಾಡುವ ವಿಷಯವನ್ನು ಉಲ್ಲೇಖಿಸಿದ್ದಾರೆ. ಕ್ರಿ.ಶ.ಪೂ. 316 ರಲ್ಲಿ ನಡೆಯಿತೆನ್ನಲಾದ ಕೇಟಿಯಾಸನ ಕಿರಿಯ ಪತ್ನಿಯ ಸಹಗಮನ ಕಾಲದಲ್ಲಿ ಅವಳು ತನ್ನ ವಸ್ತ್ರಾಭರಣಗಳನ್ನು ನೆಂಟರಿಷ್ಟರಿಗೆ, ಸೇವಕ — ಸೇವಕಿಯರಿಗೆ ಹಂಚಿದ ವಿಷಯವನ್ನು ಡಿಯೊಡೊರಸ್ ಸಿಕ್ಯುಲಸ್ ತಿಳಿಸಿದ್ದಾನೆ.[45] ಇಬ್ನ್-ಬತೂತಾ ಯುದ್ಧದಲ್ಲಿ ಮಡಿದವನ ಮೂವರು ಪತ್ನಿಯರು ಸಹಗಮನ ಕಾಲಕ್ಕೆ ತಮ್ಮ ಮೈಮೇಲೆ ಇದ್ದ ಬಟ್ಟೆಬರೆಗಳನ್ನು, ಒಡವೆಗಳನ್ನು ಹಂಚಿದ ವಿಷಯವನ್ನು ಹೇಳಿದ್ದಾನೆ.[46]

ಅನುಕೂಲಸ್ಥಳಾದವಳು ತನ್ನ ಗಂಡ ಸತ್ತಾಗ ತನ್ನ ಆಭರಣಗಳನ್ನೆಲ್ಲ ನೆಂಟರಿಷ್ಟರಿಗೆ ಹಂಚಿ ಸತಿಹೋಗುತ್ತಾಳೆ ಎಂದು ಜಾಜ್/ಆರ್ಕೆಬಾಬೋರ್ನಾಸಾ ಉಲ್ಲೇಖಿಸಿದ್ದಾನೆ.[47] ಬೆಂಗಳೂರಿನಲ್ಲಿ ಜೂನ್ 9, 1826 ರಲ್ಲಿ ನಡೆದ ಸತಿಘಟನೆಯೊಂದು ಮಿಷಿನರಿ ಟಿಪ್ಪಣಿಗಳ ಪತ್ರವೊಂದರಲ್ಲಿ ದಾಖಲಾಗಿದೆ. ಅದರಲ್ಲಿ ''ಸಹಗಮನ ಸಮಯ ಹತ್ತಿರ ಬಂದ ಹಾಗೆ ಬ್ರಾಹ್ಮಣರು ಅವಳಿಗೆ ( ಸತಿಗೆ ) ಎಲೆ ಅಡಿಕೆ ಬಾಳೆಹಣ್ಣು ತೆಂಗಿನಕಾಯಿ ಮುಂತಾದವುಗಳನ್ನು ಕೊಟ್ಟು ಗೆಳತಿಯರಿಗೆ ಹಂಚಲು ಹೇಳಿದರು'' ಎಂದು ಹೇಳಲಾಗಿದೆ.[48]

ಹೀಗೆ ಮೃತನ ಪತ್ನಿ ತನಗೆ ಸಾಧ್ಯವಾದ ಮಟ್ಟಿಗೆ ಸತಿಹೋಗುವಾಗ ದಾನ ಕಾರ್ಯವನ್ನು ಪಾಲಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಸತಿಯರು ಕೊಟ್ಟ ವಸ್ತುಗಳು ಇಂದಿಗೂ ಹಲವರ ಮನೆಗಳಲ್ಲಿ ಅವಳ ಸ್ಮರಣಾರ್ಥ ರಕ್ಷಿಸಿಕೊಂಡು ಬರಲಾಗುತ್ತಿದ್ದುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದಾಗಿದೆ, ಅಲ್ಲದೆ ಹಲವು ಜನಾಂಗಗಳಲ್ಲಿ ಇಂದು ಮರಣ ಸಂಭವಿಸಿದರೆ ಅವರನ್ನು ಸುಡುವಾಗಲೋ, ಹೂಳುವಾಗಲೋ ಹಣ ಹಂಚುವ ಪದ್ಧತಿಯನ್ನು ಕಾಣಬಹುದಾಗಿದೆ. ಸಾಮಾನ್ಯವಾಗಿ ಇಂದಿನ ಈ ದಾನಕಾರ್ಯ, ಮರಣ ಹೊಂದಿದವನ ಪಾಪ ಪರಿಹಾರಕ್ಕಾಗಿ, ಪುಣ್ಯಸ್ವರ್ಗ ಪ್ರಾಪ್ತಿಗಾಗಿ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ನಡೆಯುತ್ತಿದೆ. ಸತಿಯು ಕೂಡ ದಾನ ಕಾರ್ಯಾದಿಗಳಿಂದ ಮಡಿದ ಗಂಡನೊಡನೆ ಸ್ವರ್ಗಪಡೆಯಬೇಕೆಂಬ ಹಂಬಲದಿಂದ ಈ ಕಾರ್ಯಾಚರಣೆಯನ್ನು ಪಾಲಿಸಿಕೊಂಡು ಬಂದಿರಬೇಕು ಎಂದೆನಿಸುತ್ತದೆ.

ಹರಕೆ ಮತ್ತು ಶಾಪ : ಸತಿ, ತಾನು ಸಹಗಮನ ಮಾಡುವಾಗ ತನ್ನ ಬಂಧು ಜನರಿಗೆ ಹರಕೆ ( ಆಶೀರ್ವಾದ ) ಮತ್ತು ಶಾಪಗಳನ್ನು ಕೊಡುವುದನ್ನು ಕಾಣುತ್ತೇವೆ. ಒಮ್ಮೊಮ್ಮೆ ತಾನು ಹುಟ್ಟಿ ಬೆಳೆದ ಊರಿಗೋ, ತನ್ನೊಡನೆ ಅವಹೇಳನಕರವಾಗಿ ವರ್ತಿಸಿದವರಿಗೋ ಸತಿ ಶಾಪ ಹಾಕಿರುವುದು ಉಂಟು. ಜನತೆಯಲ್ಲಿ ಅವಳ ಆಶೀರ್ವಾದ ಮತ್ತು ಶಾಪಗಳ ಕುರಿತಾಗಿ ತುಂಬ ಭಯಭಕ್ತಿ ಇದ್ದಿತು. ಮತ್ತು ಅವರು ಸತಿಯ ಹರಕೆ ಮತ್ತು ಶಾಪಗಳ ಫಲಗಳು ಸತ್ಯವಾಗಿ ಫಂಭವಿಸುತ್ತವೆ ಎಂದು ಬಲವಾಗಿ ನಂಬಿಕೊಂಡಿದ್ದರು.

ಕುಮಾರರಾಮನ ಪತ್ನಿಯರು ಸತಿಹೋಗುವಾಗ ''ಪುರಜನಗಳ ಪರಸುತ'' ಎಂಬ ಮಾತು ರಾಮನಾಥ ಚರಿತ' ದಲ್ಲಿ ಬರುತ್ತದೆ.[49] ಆ ಸತಿಯರು ತಮ್ಮ ಸಹಗಮನ

ಕಾಲಕ್ಕೆ ನೆರೆದ ಪುರಜನರನ್ನೆಲ್ಲ ಹರಿಸುವ ಚಿತ್ರ ಇಲ್ಲದೆ, 'ವಡ್ಡಗೆರೆ ನಾಗಮ್ಮ' ಗೀತೆಯಲ್ಲಿ ನಾಗಮ್ಮ ತನ್ನ ಮಾವನ ಮನೆ ಸುಖ ಸಮೃದ್ಧಿಯಿಂದ ಬೆಳೆಯಲೆಂದೂ, ಅತ್ತೆ ಸಂತೋಷವಾಗಿ ಬದುಕಲೆಂದು ಆಶೀರ್ವಾದ ಕೊಟ್ಟು ಸತಿಹೋಗುತ್ತಾಳೆ,[50] ಇದೇ ಸಂದರ್ಭದಲ್ಲಿ ಮಾಸ್ತಿ ಶಿಲ್ಪವನ್ನು ಕುರಿತು ಹೇಳುತ್ತ ಡಾ|| ಎಂ.ಚಿದಾನಂದಮೂರ್ತಿಯವರು "ಎತ್ತಿದ ಬಲಗೈ ಜನತೆಗೆ ಆಶೀರ್ವಾದವನ್ನು ಮಾಡುವುದನ್ನು ಸೂಚಿಸುತ್ತದೆ" ಎಂದು ಹೇಳುವ ಮಾತನ್ನು ಸ್ಮರಿಸಬಹುದಾಗಿದೆ.[51] 'ಮಹಾಸತಿ ತಂಗ್ಯಮ್ಮ' ಜನಪದ ಹಾಡಿನಲ್ಲಿ 'ತಂಗ್ಯೆಮ್ಮ' ತವರ ಮನೆಯವರನ್ನು ಶಪಿಸುವ, ಮಾವನ ಮನೆಯವರನ್ನು ಆಶೀರ್ವದಿಸುವ ಪದ್ಯವೊಂದು ಹೀಗೆ ಬರುತ್ತದೆ:[52]

ಅಪ್ಪನೊಲದಾಗೆ-ಉತ್ರಾಣಿ ಬೆಳೆಯಾಲಿ
ಚಿಕ್ಕಮಾವಾನ ಕಡೇನ
ಚಿಕ್ಕಮಾವಾನ ಕಡೇನ । ಮಾನ್ಯದಾಗೆ
ಬಟ್ಟ ರಾಜುಣವೇ ಬೆಳೆಯಾಲಿ

ಇಲ್ಲಿ ಅಪ್ಪನ ಹೊಲದಲ್ಲಿ ಬೆಳೆಯುಲ್ಲದ 'ಉತ್ರಾಣಿ' ಬೆಳೆಯಲಿ ಎಂದು ಹೇಳುವ 'ತಂಗ್ಯೆಮ್ಮ' ಮಾವನ ಹೊಲದಲ್ಲಿ ರಾಜುಣ ( ರಾಜಾನ್ನ ) ಬೆಳೆಯಲಿ ಎಂದು ಹಾರೈಸುತ್ತಾಳೆ. ಇದೇ ರೀತಿ ಮಹಾಸತಿ ವೀರತಿಮ್ಮವ್ವನ ಗೀತೆಯಲ್ಲಿಯೂ ಬರುತ್ತದೆ.[53] 'ವಡ್ಡಗೆರೆ ನಾಗಮ್ಮ' ಹಾಡಿನಲ್ಲಿ ನಾಗಮ್ಮ ತಾನು ಸತಿ ಹೋಗುವಾಗ ಅತೀ ತಿರಸ್ಕಾರ ರೀತಿಯಲ್ಲಿ "ನನ್ನ ಕೊಟ್ಟೋರ ಮನೆಯ ಉರಿಯಾಲಿ", "ನನ್ನ ತವರೋರು ಹಾಳಾಗ್ಹೋಗಲಿ" ಎಂದು ತನ್ನ ತವರವರನ್ನು ಶಪಿಸುತ್ತಾಳೆ.[54]

'ನಾಗವ್ವ' ಜನಪದ ಖಂಡಕಾವ್ಯದಲ್ಲಿ 'ನಾಗವ್ವ' ಕೊಂಡವೇರದೆ ಉಳಿದರೆ ತಾನು "ಕೊಡಾವಳಿ" ಯನ್ನು ಮಾಡಿಕೊಳ್ಳುವ ಪ್ರಲೋಭನೆಯನ್ನು ತೋರಿಸಿದ 'ನಿಂಗೇಗೌಡ'ನನ್ನು ಅವಳು ಹೀಗೆ ಶಪಿಸುತ್ತಾಳೆ.[55]

ಹಟ್ಟಿಕಲ್ಲಡಗಲಿ ಕೊಟ್ಟಿಗೆ ಬರದಾಗಲಿ,
ಹಿಂಡೆಮ್ಮೆ ಸಾಲ ಅಡಗಲಿ — ನಿಂಗನಗೌಡ
ನನಗೋಳು ನಿಮ್ಮಣ್ಣಗೆ-ಮಡಗಿರಲಿ.

ಇದೇ ರೀತಿ 'ಮಾಸ್ತಮ್ಮ' ಗೀತೆಯಲ್ಲಿಯೂ ಶಾಪದ ಪ್ರಸಂಗ ಬರುತ್ತದೆ. ಅಮಲ್ದಾರರು ಸತಿಹೋಗಲಿರುವ 'ಮಾಸ್ತಮ್ಮ'ಳನ್ನು "ನಮ್ಮ ಪಟ್ಟ ಮಂಚದ ಮೇಲಿರೆ" ಎನ್ನಲಾಗಿ ಅವಳು "ಓದಕೆ ಹೋದ ಮಗ ಮನೆಗೆ ಬರಬೇಡ, ನಿನಗೆ ವಾಂತಿ ಭೇದಿಯೂ ತಗಲಾಲಿ" ಎಂದು ಶಾಪಹಾಕುತ್ತಾಳೆ.[56] ಇಲ್ಲೆಲ್ಲ ಸತಿಯನ್ನು ಅವಮಾನಕರ ರೀತಿಯಲ್ಲಿ ಕಂಡದ್ದರಿಂದ ಸತಿ ಶಾಪ ಹಾಕುವ ಸ್ಥಿತಿ ಒದಗಿರುವುದನ್ನು ಕಾಣುತ್ತೇವೆ. ಆದರೆ ಕೆಲವು ಸತಿಯರು ತವರುಮನೆಯವರನ್ನು ಶಪಿಸುವ ವಿಷಯ ಆಶ್ಚರ್ಯವನ್ನುಂಟುಮಾಡುತ್ತದೆ. ಬಹುಶಃ ತನಗೆ ಬಂದೊದಗಿದ ಕಷ್ಟಕ್ಕೆ ತವರು ಮನೆಯವರೇ ಕಾರಣ ಎಂಬ ಕಲ್ಪನೆ, ಇದಕ್ಕೆ ಕಾರಣವಾಗಿರಬೇಕು. ಈ ಅಭಿಪ್ರಾಯವನ್ನು 'ವಡ್ಡಗೆರೆ ನಾಗಮ್ಮ' ಹಾಡಿನಲ್ಲಿ "ಬಡವರ ಮನೆಗೆ ತನ್ನ ಕೊಟ್ಟಿದ್ದಾರೆ ಕೂಲಿ ಮಾಡಿನ್ನ ಉಣುವೆನು ನನ ತವರೋರು ಕೊಂಡಕೆ ಧಾರೆ ಎರೆದಾರು", "ತಿರಿದುಂಬ ಜೋಗಿಗೆ ನನ್ನ ಕೊಟ್ಟಿದ್ದಾರೆ ತಿರಿದುಂಡು ನಾನು ಇರುತಿದ್ದೆ ವಡ್ಡಗೆರೆಂಬುದು ದೊಡ್ಡ ಪಟ್ಟಣವೆಂದು ಹೆತ್ತ ಹುಣಸೇಯ ನೆರಳೀಗೆ ನನ್ನೀಗ ಕೊಂಡಾಕೆ ಧಾರೆ ಎರೆದವರೇ ! ನನ್ನ ತವರೋರು ನನ್ನ ಕೊಟ್ಟೋರ ಮನೆಯು ಉರಿಯಾಲಿ" ಎಂದು ನಾಗಮ್ಮ ಹೇಳುವ ಮಾತುಗಳು ಬೆಂಬಲಿಸುತ್ತವೆ.[57]

ಸತಿಯ ಮಾತುಕತೆ ಮತ್ತು ಮಾನಸಿಕ ವ್ಯಾಪಾರ : ಮೃತನ ಪತ್ನಿ ಸತಿಹೋಗುವುದು ನಿರ್ಧಾರವಾದ ಮೇಲೆ ಅವಳು ಒಂದರ್ಥದಲ್ಲಿ ಜನತೆಯಲ್ಲಿ ಭಿನ್ನವಾಗಿ ಕಾಣಲಾರಂಭಿಸುತ್ತಿದ್ದಳು. ಆಗ ಅವಳು ತನ್ನ ಬಂಧುವರ್ಗದೊಡನೆ ವ್ಯವಹರಿಸುವುದು, ಮಾತುಕತೆಮಾಡುವುದೆಲ್ಲ ವಿಶಿಷ್ಟವಾಗಿರುತ್ತಿದ್ದಿತು. ಅಲ್ಲದೆ ಇದೇ ಸಂದರ್ಭದಲ್ಲಿ ಅವಳ ಮಾನಸಿಕ ವ್ಯಾಪಾರವೂ ಅಭಿವ್ಯಕ್ತಗೊಳ್ಳುವುದನ್ನು ಗಮನಿಸಬಹುದಾಗಿದೆ.

ನವಿಲೆನಾಡಧಿಪತಿ ಏಚನ ಪತ್ನಿ 'ದೇಕಬ್ಬೆ' ಸತಿಹೋಗುವಾಗ, ಅವಳ ತಂದೆ-ತಾಯಿ — ಬಂಧುಗಳು ಬೇಡವೆಂದು 'ಕಾಲ್ವಿಡಿದು' ಕೇಳಿದಾಗ "'ದೇಕಬ್ಬೆ' ಮುನಿದು ಬಗ್ಗಿಸಿ" ಹೀಗೆ ನುಡಿಯುತ್ತಾಳೆ.[58] "ನುಗುನಾಡಧಿಪತಿ ರವಿಗನ ಮಗಳಾಗಿಯುಮನ್ತನವಿಲೆನಾಡಧಿಪತಿಗಾಂನೆಗಳೆ ಸತಿಯಾಗಿ ಬಾಳ್ವುದು ಬಗೆದಪ್ಪೆನೆ ಕೊಟ್ಟ ಕೊಣ್ಡಮನೆಯೆಸಮಳ್ಳಿಯಲ" ಇಲ್ಲಿ, ಸತಿಹೋಗಲು ಬೇಡವೆನ್ನಲಾಗಿ ತಂದೆ-ತಾಯಿ-ಬಂಧುಗಳ ಮೇಲೆಯೇ ಸಿಟ್ಟುಗೊಳ್ಳುವ

ಸತಿ ದೇಕಬ್ಬೆಯನ್ನು ಕಾಣುತ್ತೇವೆ. ಅಲ್ಲದೆ ಅವಳು ಮನೆಯ ಯಶಕ್ಕಾಗಿ ಹೆಮ್ಮೆಯಿಂದ ಸತಿಹೋಗುವ ಮನಸ್ಥಿತಿಯುಳ್ಳವಳೆಂಬುದು ಅರ್ಥವಾಗುತ್ತದೆ. ''ನಯದಿನ್ದ'' ''ಭೂಮಿಸೀಮೆಗಳನ್ನು ದೇವರಿಗೆ ಬಿಟ್ಟ'' ''ಆದರದಿನ್ದ'' ''ಪಸುಧನಮಂ'' ''ಧನಮಂ'' ಜನರಿಗೆ ನೀಡುತ್ತ ''ದೇವರದೇವಂಗಳ್ಗೆಯುಂ ಕಯ್ಮುಗಿದುರಿವುರಿಯಂ ಪೊಕ್ಕು ದೇಕಬ್ಬೆ'' ಸತಿಯಾದಳೆಂದು ಚಿತ್ರಿಸುವ ಈ ಶಾಸನ, ಅವಳ ಪ್ರಸನ್ನ, ಗಂಭೀರ, ವಿನಯ, ಭಕ್ತಿ — ಈ ಮೊದಲಾದ ಭಾವಗಳನ್ನು ಪ್ರಕಟಪಡಿಸುತ್ತದೆ.

ಪಂಪಭಾರತದ ಯುದ್ಧಪ್ರಸಂಗವೊಂದರಲ್ಲಿ ಯೋಧನೊಬ್ಬ ತನ್ನ ಪತ್ನಿಗೆ, ನಾಳೆ ನಾನು ( ವೀರಮರಣಹೊಂದಿ ) ದಿವಿಜಾಂಗನೆಯರೊಡನೆ ಇರುತ್ತೇನೆ ಎನ್ನಲಾಗಿ, ಅವಳು ''ಮುನ್ನಮೆ ಪೋಗಿ ನಲ್ಲ ಗೆಲ್ಲಂಗೊಳೆ ದೇವಲೋಕದೊಳಧೀಶನನಿಧಿಗೊರ್ಳ್ವೆನು'' ಎನ್ನುತ್ತಾಳೆ.[59] ಅಲ್ಲದೆ, ಓವೊ ಸಗ್ಗಂಗಳೊಳಿರ್ಪ ದೇವಡಿತಿ ತೋಳ್ಗಳ್ತೊಳ್ಗೆಯನಾಗಲೀವೆನೇ ಎಂದು ಹೇಳುತ್ತಾಳೆ. ಇಲ್ಲಿ ವೀರನ ಪತ್ನಿಯು ದೇವಲೋಕದ ಸ್ತ್ರೀಯರಿಗಿಂತಲೂ ಮೊದಲುಹೋಗಿ ಗಂಡನನ್ನು ಎದುರುಗೊಳ್ಳುತ್ತೇನೆ ಎನ್ನುವ ಹಾಗು ದೇವಸ್ತ್ರೀಯರೆಂಬ ದಾಸಿಯರಲ್ಲಿ ಪ್ರೀತಿಸುವುದಕ್ಕೆ ( ಗಂಡನಿಗೆ ) ಅವಕಾಶ ಕೊಡುತ್ತೇನೆಯೇ ಎನ್ನುವ ಮಾತುಗಳು ಸಹಗಮನದಲ್ಲಿರುವ ಅವಳ ಉತ್ಸಾಹ — ಪೈಪೋಟಿ — ಸಾಹಸದ ಪ್ರವೃತ್ತಿಯನ್ನು ಸೂಚಿಸುತ್ತವೆ, ಮಾದ್ರಿ ಸತಿಹೋಗುವಾಗ ಕುಂತಿಯೊಡನೆ, ಗುಂಡಮಬ್ಬೆ ಸತಿಹೋಗುವಾಗ ಅತ್ತಿಮಬ್ಬೆಯೊಡನೆ, ಸತಿಗೊಳ್ಳಲು ತಮ್ಮದೇ ಸರತಿ — ಯಾಗಿರಬೇಕು ಎಂದು ವಾದಿಸುವ ಮಾತುಗಳನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.[60] ಅದೇ ರೀತಿ ಜಂಡಶಾಸನನ ರಾಣಿವರ್ಗದವರು ಸತಿಹೋಗುವಾಗ ಬರುವ ಪದ್ಯವೊಂದು ಇದೇ ಭಾವವನ್ನು ಹೀಗೆ ಹಿಡಿದಿಟ್ಟುಕೊಂಡಿದೆ.[61]

ಪ್ರಾಣೇಶ್ವರನೊಳ್ಮುನ್ನಣಿ
ಯಾಣೆಗೆ ಗೋಸನೆಗೆ ಸೂಳ್ಪಿಪಾಳಿಗೆ ನಮ್ಮೊಳ್
ಮಾಣದೆ ಮುಚ್ಚರಿಪಂತಿರೆ
ಹೂಣಿಸಿ ಮುಂಚಲ್ಕೆ ವೇಳ್ಕುಮೋರ್ವರಿನೋರ್ವರ್

ಅಲ್ಲದೆ, ಕವಿ ಜನ್ನನು ಈ ಸಂದರ್ಭದಲ್ಲಿ ರಾಣಿವರ್ಗದವರಲ್ಲಿದ್ದ ಉತ್ಸಾಹ — ರಸಿಕತೆಗಳನ್ನು ತುಂಬ ಸುಂದರವಾಗಿ ಚಿತ್ರಿಸಲು ಮರೆತಿಲ್ಲ. ಮಾದಾರ ಧೂಳಯ್ಯಗಳ ವಚನದಲ್ಲಿ

"ಧೀರರಾದ ಮಾಸ್ತಿಗೆ ವೀರತ್ವವಲ್ಲದೆ ಧಾರುಣಿಯ ಜನರೆಲ್ಲರೂ ಹೇಡಿಮಾಸ್ತಿ ಎಂಬ ಬಳಿಕ ವೀರತ್ವವೆಲ್ಲಿಯದೋ ?" ಎಂದು ಕೇಳಲಾಗುತ್ತದೆ.[62] ಇಲ್ಲಿ ಧೈರ್ಯ — ಸಾಹಸಗಳನ್ನುಳ್ಳ ಹಾಗೂ ಭಯ ಆಳುಕಗಳುಳ್ಳ ಮಹಾಸತಿಯರ ಎರಡು ಚಿತ್ರಗಳನ್ನು ಕಾಣುತ್ತೇವೆ. ಒಬ್ಬಳು "ಧೀರರಾದ ಮಾಸ್ತಿ" ಎನಿಸಿಕೊಂಡರೆ, ಇನ್ನೊಬ್ಬಳು "ಹೇಡಿಮಾಸ್ತಿ" ಎನಿಸಿಕೊಳ್ಳುತ್ತಾಳೆ.

ಕುಮಾರರಾಮನ ಪತ್ನಿಯರು ಸಹಗಮನಗೊಳ್ಳಲು ಸಿಂಗರಿಸಿಕೊಂಡು, "ಸಡಗರದಿಂ ಬಂದು ಹರಿಹರದೇವರಡಿಗೆಳಗಿದರು ಮೋಹರಿಸಿ" ಎಂಬ ಮಾತು ರಾಮನಾಥ ಚರಿತದಲ್ಲಿ ಬರುತ್ತದೆ.[63] ವೀರಯ್ಯ ವೀರಮರಣ ಹೊಂದಲಾಗಿ ಅವನ ಪತ್ನಿಯರು "ಬೊಬ್ಬೆಗುಡುತಲಿ ನಡೆದುಬಂದರು ಪತಿಯೆಡೆಗೆ" ಎಂಬ ಚಿತ್ರವನ್ನು ಸಿದ್ಧಕವಿ ಸಿರುಮಣನಾಯಕ ಸಾಂಗತ್ಯದಲ್ಲಿ ಕೊಡುತ್ತಾನೆ.[64] ಇಲ್ಲಿ ವೀರಪತಿಯೊಡನೆ ಓಡನೆ ಒಕ್ಕಲ ಹೋಗಬೇಕು' ಎಂದು ರಾಣಿಯರಿಗೆ ಹೇಳಿಮುಗಿಸುವಷ್ಟರಲ್ಲಿಯೇ ಅವರು 'ಬೊಬ್ಬೆ' ಹಾಕುತ್ತ ಸಹಗಮನಕ್ಕೆ ನಿರ್ಧರಿಸಿ ಬರುತ್ತಾರೆ. ಇಲ್ಲಿ 'ಬೊಬ್ಬೆ' ಎಂಬ ಪದ ಸತಿಯರಲ್ಲಿಯ ಉದ್ವೇಗ ವೇದನೆಗಳನ್ನು ತಿಳಿಸುವುದೇ ಆಗಿದೆ. ಆದರೂ ಅವರು "ಕಾರ್ಗಿಂಚು ಹೊಳೆವಂತೆ ಶೃಂಗಾರವ ಮಾಡಿ"ಕೊಂಡು "ಚೆನ್ನಸ್ವರ್ಗವ ಸುರೆಗೊಂಬಂತೆ" ಸಮಾಧಿ ಸ್ಥಳಕ್ಕೆ ಉತ್ಸಾಹದಿಂದ ಬರುವ ವರ್ಣನೆ ಮುಂದೆ ಬರುತ್ತದೆ.

ಜನಪದ ಹಾಡುಗಳಲ್ಲಿ, ಸತಿ ಕೊಂಡಕ್ಕೆ ಹೋಗುವಾಗ ಅವಳು ಆಡುವ ಮಾತುಗಳ ವಿವರಗಳಾಗಲಿ, ಅವಳ ಮನಸ್ಸಿನ ಒಳತೋಟಿಯ ವಿವರಗಳಾಗಲಿ ತುಂಬ ಉನ್ನತ ಮಟ್ಟದಲ್ಲಿ ದೊರಕುತ್ತವೆ. 'ಈರೋಬಿ' ತಾನು ಸತಿಹೋಗಲಿರುವ ಕೊಂಡಕ್ಕೆ ಅತ್ತಿಯ ಮರ, ಆಲದಮರಗಳನ್ನು ಹೆಚ್ಚು ಹೆಚ್ಚಾಗಿ ಕಡಿದುಹಾಕುವಂತೆ ಮತ್ತು ತನಗೆ ಬೇಗನೆ 'ಒಡೆಗೆಚ್ಚು' ಕೊಡುವಂತೆ ತನ್ನವರನ್ನು ಕೇಳಿಕೊಳ್ಳುವುದನ್ನು ಗಮನಿಸಿದರೆ, ಈರೋಬಿಯ ಸತಿಹೋಗಲು ಮಾಡಿದ ನಿರ್ಧಾರದ ಗಟ್ಟಿತನ ಅರಿವಾಗುತ್ತದೆ.[65] ಆದರೂ ಅವಳ ಬಾಳು ಹಾಳಾದ ಕುರಿತಾಗಿ ಅವಳಿಗೆ ತಿರಸ್ಕಾರ — ನೋವುಗಳು ಇದ್ದುದನ್ನು ಈ ಕೆಳಗಿನ ಪದ್ಯಗಳು ಅಭಿವ್ಯಕ್ತಿಮಾಡುತ್ತವೆ. ಅವಳನ್ನು ತಾಯಿ, ಅಪ್ಪ, ಅಣ್ಣ ಬಂದಿದ್ದಾರೆ,

‘ ಮುಕತೋರೆ’ ಎಂದು ಕೇಳಲಾಗಿ ಅವಳು ಹೀಗೆ ಉತ್ತರಿಸುತ್ತಾಳೆ :[66]

ತಾಯಿ ಬಂದರೆ ಬರಲಿ ಹಾಲು ತಂದರೆ ತರಲಿ
ನನ್ನ ಹಾಲಿನಂಥ ಬದುಕು ಅಡವೀಲಿ — ಈಡಾಡುವಾಗ
ತಾಯಿಯಮ್ಮಗೊಡವೆ ನಮಗೇನು

ಅಪ್ಪಬಂದರೆ ಬರಲಿ ತುಪ್ಪ ತಂದರೆ ತರಲಿ
ತುಪ್ಪದಂತ ಬದುಕು ಅಡವೀಲಿ — ಈಡಾಡುವಾಗ
ನಮ್ಮಪ್ಪನಗೊಡವೆ ನಮಗೇನು

ಅಣ್ಣ ಬಂದರೆ ಬರಲಿ ಎಣ್ಣೆ ತಂದರೆ ತರಲಿ
ಎಣ್ಣೆಯಂಥ ಬದುಕು ಅಡವೀಲಿ — ಈಡಾಡುವಾಗ
ನಮ್ಮಣ್ಣನಗೊಡವೆ ನಮಗೇನು

ಇಲ್ಲಿ, ನನ್ನ ‘ ಬದುಕು ಅಡವೀಲಿ — ಈಡಾಡುವಾಗ ತಾಯಿಯಮ್ಮಗೊಡವೆ ನಮಗೇನು’, ‘ ನಮ್ಮಪ್ಪನಗೊಡವೆ ನಮಗೇನು’, ‘ ನಮ್ಮಣ್ಣನಗೊಡವೆ ನಮಗೇನು’ ಎನ್ನುವಂಥ ಈರೋಷಯ ಮಾತುಗಳು ಗಂಡ ಸತ್ತ ಕುರಿತಾಗಿ, ತಾನು ಸಾಯಲಿರುವ ವಸ್ತುಸ್ಥಿತಿಯ ಕುರಿತಾಗಿ ಅವಳಿಗಿದ್ದ ವೇದನೆ—ಸಂಕಟ — ತಳಮಳಗಳನ್ನು ಅಭಿವ್ಯಕ್ತಿ — ಗೊಳಿಸುತ್ತವೆ.

‘ ಮಹಾಸತಿ ತಾಡಿನಾಗಮ್ಮ’ ಗೀತೆಯಲ್ಲಿ ನಾಗಮ್ಮ ತನ್ನ ಕೊಂಡಕ್ಕೆ ಕಲ್ಲು ಒಡೆಸಲು ವಡ್ಡರನ್ನು ಕರೆಸಲು ಹೇಳುತ್ತಾಳೆ. ಅಲ್ಲದೆ ಕೊಂಡಕ್ಕೆ ತೆಳ್ಳನೆಯ ಕಲ್ಲು ಬರಬೇಕೆಂದು, ಕೊಂಡವನ್ನು ಬೇವಿನಮರದಡಿಯಲ್ಲಿ ತಗೆಯಬೇಕೆಂದೂ ಕೇಳಿಕೊಳ್ಳುತ್ತಾಳೆ.[67] ಇಲ್ಲಿ ತನ್ನ ಕೊಂಡಕ್ಕೆ ತಾನೇ ವ್ಯವಸ್ಥೆ ಮಾಡಿಕೊಳ್ಳುವ ‘ ನಾಗಮ್ಮ’ ಯಜಮಾನಿಕೆಯ ಭಾವವುಳ್ಳವಳಾಗಿ ಕಂಡುಬರುತ್ತಾಳೆ. ಇದೇ ನಾಗಮ್ಮಳನ್ನು ಅಗ್ನಿಪ್ರವೇಶಕ್ಕೆ ತಡೆಯಲು — ಯತ್ನಿಸಿದಾಗ, ಅವಳು ‘‘ ಕಿಚ್ಚು ಕೊಡದಿದ್ದರೆ ಕಿತ್ತುಕಂಬನು ಸಾಲಿಗೆ’ ಎಂದು, ‘ ಬಸಳೇನೂರ ತೊಟ್ಟಿಲಾಗಾಡೋ ಮಗನಾಣೆ’ ಎಂದು ಹೇಳುತ್ತಾಳೆ.[68] ಇಲ್ಲೆಲ್ಲ ಕಿಚ್ಚಿನಲ್ಲಿ ಬಿದ್ದು ಸತಿಯಾಗಬೇಕೆಂಬ ನಾಗಮ್ಮಳ ಛಲ ಪ್ರಕಟಗೊಳ್ಳುತ್ತದೆ. ಆದರೆ ಅಗ್ನಿಯ ಭಯಂಕರತೆಯನ್ನು ಕಂಡ ನಾಗಮ್ಮ ಕ್ಷಣ ತನ್ನಲ್ಲಿಯೇ ಹೀಗೆ ಅಂದುಕೊಳ್ಳುತ್ತಾಳೆ :[69]

ಆಕಾಸದುದ್ದಕ ಉರಿಯೆದ್ದೋಳುತಾವೆ
ನಾನೆಂಗೋಗಾಲೋ ಸಿವಸಿವನೆ
ನಾನೆಂಗೋಗಾಲೋ ಸಿವಸಿವನೇ 1 ಏ ಸಿವನೆ
ಗಂಡಾನ ಪ್ರಾಣ ತಿರುವಯ್ಯ

ಭಯಂಕರ ಸಾಲಿಗೆ ಜಾಡಿ ಉರಿಯುತ್ತಿರುವ ಕೊಂಡದಲ್ಲಿ ಹೇಗೆ ಬೀಳಲಿ ಎಂಬ ಆತಂಕಭಾವ ನಾಗಮ್ಮಳಲ್ಲಿ ಉಂಟಾಗಿದೆ. ಇಂಥ ಸ್ಥಿತಿಗೆ ಮೂಲಕಾರಣ ಗಂಡನ ಮರಣ ಮೊದಲು ಆಲೋಚಿಸಿದ ಆಕೆ, ಗಂಡನ ಪ್ರಾಣ ಮರಳಿಸುವಂತೆ ಶಿವನಲ್ಲಿ ಮೊರೆ ಇಡುವ ಅವಳ ಮಾನಸಿಕ ತಳಮಳ ಮನಕರಗಿಸುವಂತಿದೆ. 'ಏ ಸಿವನೆ' ಎಂದು ದೇವನನ್ನು ಅಂತಃಕರಣದಿಂದ ಕೂಗಿ ಕರೆಯುವ ಅವಳ ತೀವ್ರ ಸಂಕಟ ಪರಿಸ್ಥಿತಿಯು ಒತ್ತಡದ ಮೂರ್ತರೂಪವಾಗಿದೆ.

'ಮಹಾಸತಿ ಕಾಟವ್ವ' ಹಾಡಿನಲ್ಲಿ, ಕಾಟವ್ವ ತನ್ನ ನಾದಿನಿ ಮತ್ತು ಸುತ್ತ – ಮುತ್ತಲಿನವರನ್ನು ಬೀಳ್ಕೊಡುವಾಗ "ನಾದುನಿಕೇಳೇ ಸಿರಿಯಮ್ಮ ನಮ್ಮಿಬ್ಬರ ಕಾದಾಟವಿಲ್ಲೇಗೆ ಅರುದಾವೆ" ಎಂದು "ಸಂದಿಮನೆಯೋಳು ಕೇಳೆ ಗೊಂದಿಮನೆಯೋಳು ಕೇಳೆ ಸಂಗಾತಿ ಕೇಳೆ ಕರಿಯಮ್ಮ.......... ನಮ್ಮಿಬ್ಬರ ಗುಂಜಾಟವಿಲ್ಲೇಗೆ ಅರುದಾವೆ" ಎಂದು ಹೇಳಿ ತನ್ನ ಮನದ ನಿರ್ಮಲತೆಯನ್ನು ಪ್ರಕಟಪಡಿಸುತ್ತಾಳೆ,[70] 'ಈರೋಬಿ' ಖಂಡಕಾವ್ಯದಲ್ಲಿಯೂ ಇದೇ ರೀತಿಯ ಪದ್ಯಗಳು ಹೀಗೆ ಬರುತ್ತವೆ:[71]

ರಾಗಿ ಮಾಡಿದಕಲ್ಲ ಬೀದಿಗೆ ಚೆಲ್ಲೋಳೆ
ನಾದನಿ ನಿನ್ನ ವಿಷವ ಬಿಡಲಿಲ್ಲ – ನಮ್ಮಿಬ್ಬರ
ಗುದ್ದಾಟವಿಲ್ಲೇಗೆ ಸವೆದ್ಹೋದೊ

ಅಕ್ಕಿ ಮಾಡಿದ ಕಲ್ಲ ಹಟ್ಟೀಗೆ ಚೆಲ್ಲೋಳೆ
ಅತ್ತಿಗೆ ನಿನ್ನ ವಿಷವ ಬಿಡಲಿಲ್ಲ – ನಮ್ಮಿಬ್ಬರ
ಕಿತ್ತಾಟ ಇಲ್ಲಿಗೆ ಸರಿಯಾದೊ

ಬತ್ತ ಮಾಡಿದ ಕಲ್ಲ ಬಚ್ಚಲಿಗೆ ಚೆಲ್ಲೋಳೆ
ಅತ್ಯಮ್ಮ ನಿನ್ನ ವಿಷವ ಬಿಡಲಿಲ್ಲ – ನಮ್ಮಿಬ್ಬರ
ಗುದ್ದಾಟ ಇಲ್ಲಿಗೆ ಸರಿಯಾದೊ

'ಈರೋಬಿ' ತನ್ನೊಡನೆ ನಾದನಿ, ಅತ್ತಿಗೆ, ಅತ್ತೆ ಇವರದೆಲ್ಲ ಇದ್ದ ಒಳಜಗಳ

ಇಲ್ಲಿಗೆ ಮುಗಿಯಿತು ಎಂದು ಹೇಳಿ, ಅವರಿಂದ ಬೀಳ್ಕೊಡುವ ದೃಶ್ಯ ಇಲ್ಲಿದೆ. ಬೇರೊಂದು ಲೋಕಕ್ಕೆ ಹೋಗಲಿರುವ 'ಈರೋಬಿ' ಇಲ್ಲಿಯ ಬಳಗದೊಂದಿಗಿನ ತನ್ನ ಕಹಿ — ಸಿಹಿ ನಂಟನ್ನು ಮೊದಲು ಇಲ್ಲದಾಗಿಸಿಕೊಳ್ಳುತ್ತಿದ್ದಾಳೆ. ಮೃತ್ಯುವಿನ ಸಮೀಪದಲ್ಲಿದ್ದವರಿಗೆ ಎಲ್ಲರೂ ಸಮೀಪದವರೆನಿಸಿಬೇಕೆನಿಸುತ್ತಾರೆ ಎಂಬ ಸತ್ಯಕ್ಕೆ ಕಾಟವ್ವ, ಈರೋಬಿ ಇವರ ಇಲ್ಲಿಯ ಮಾತುಗಳು ಸಾಕ್ಷಿಯನ್ನೀಯುತ್ತಿವೆ.

ಗಂಡ ಮರಣಹೊಂದಿದಾಗ ಪತ್ನಿ ತನ್ನ ಚಿಕ್ಕಮಗುವನ್ನು ಮುದ್ದಾಡಿ ಸತಿಹೋಗುವುದು ಅತೀ ಉತ್ಕಟವಾದುದು 'ಶಿವಮ್ಮವ್ವ' ತಾನು ಸತಿಹೋಗುವಾಗ ತನ್ನ ಮಗುವಿನೊಡನೆ ಹೀಗೆ ವ್ಯವಹರಿಸುತ್ತಾಳೆ :[72]

ಬಾಳೆಯ ಮರಕ ಬಾಲಗ ತೊಟ್ಟಿಲು ಕಟ್ಟಿ
ಬಾಲಮ್ಮ ಬಾಲ ಅಳದಿರೋ
ಬಾಲಮ್ಮ ಬಾಲ ಅಳದಿರೋ 1 ಬೈಗಿನ ಕಡೆಯಾಗಿ
ಬಾಯಾರಿದರೆ ಇನ್ನು ಮೊಲೆಯಿಲ್ಲ.

ಇಲ್ಲಿಯ ಮಗುವಿಗೆ ತಾಯಿ ಶಿವಮ್ಮವ್ವನೇ ಆಸರೆ. ಈಗ ಅವಳೇ ಇಲ್ಲ — ದಾಗುತ್ತಿದ್ದಾಳೆ. ಅದಕ್ಕಾಗಿ ಶಿವಮ್ಮವ್ವ ಮಗುವನ್ನು ಕುರಿತು "ಬಾಲಮ್ಮ ಬಾಲ ಅಳದಿರೋ 1 ಬೈಗಿನ ಕಡೆಯಾಗಿ ಬಾಯಾಗಿದರೆ ಇನ್ನು ಮೊಲೆಯಿಲ್ಲ" ಎಂದು ಹೇಳುವ ಮಾತು ಹೃದಯ ಬಡಿತದ ಕ್ರಿಯೆಯನ್ನು ನಿಲ್ಲಿಸುವಂಥದ್ದು. ಮಗು ಕಣ್ಣು ತುಂಬ ನಿದ್ರೆ ಮಾಡಿ ಸಂಜೆಯಲ್ಲಿ ಹಸಿವೆಗೊಂಡಾಗ ತಾಯಿಯ ಹಾಲಿಗಾಗಿ ಹಂಬಲಿಸುವದು ಸಹಜವಾದುದು. ಆದರೆ ಶಿವಮ್ಮವ್ವಳ ಮಗುವಿಗೆ ಅದು ಇನ್ನು ದೊರಕದು. ಏನು ಅರಿಯದ ಕಂದನ ಮುಂದೆ ಗಂಟಲು ತುಂಬಿ ಬಂದು ಎಲ್ಲವನ್ನು ತಿಳಿಸಿ ಹಗುರುಗೊಳ್ಳುತ್ತಿರುವ ಶಿವಮ್ಮವ್ವಳ ಇಲ್ಲಿಯ ಸ್ಥಿತಿ ದಾರುಣವಾದುದು. ಇದೇ ರೀತಿಯ ಚಿತ್ರಣವೊಂದು ಮಹಾಸತಿ ಕಾಟವ್ವ ಗೀತೆಯಲ್ಲಿಯೂ ಬರುತ್ತದೆ:[73]

ಸಂದಿವೊಕ್ಕಾಳೆ ಕಂದಾನ ಮುದ್ದಾಡ್ಯಾಳೆ
ಇಂದೆ ನನಕಂದ ಅಗಲೀದೆ
ಇಂದೆ ನನಕಂದ ಅಗಲೀದೆ1 ಮುಲಕುಂಟೆ.
ಮಾರಾದೀಗೆ ಕೈಯ್ಯಮುಗುದಾಳೆ

ಸತಿಹೋಗಲಿರುವ ಕಾಟವ್ವ ತನ್ನ ಕಂದನನ್ನು ಮುದ್ದಾಡಿ 'ಮೂರಾರಾದೀಗೆ ಕೈ ಮುಗಿದು' ಉಸಿರುಸಂತೈಸಿಕೊಳ್ಳುವ ಚಿತ್ರ ಇಲ್ಲಿದೆ. 'ಮಹಾಸತಿ ತಂಗ್ಯವ್ವ' ಹಾಡಿನಲ್ಲಿ[74] ತಂಗ್ಯವ್ವ' ಅಂಗಿಹೊಲಿಸಿ ತನ್ನ ಕಂದನಿಗೆ ತೊಡಿಸಿ ಸತಿಯಾಗಲು ಹೊರಡುತ್ತಾಳೆ, ಹೊರಡುವಾಗ ಅವಳ ಹೆಜ್ಜೆ ಕಿತ್ತದೆ ತಿರುತಿರುಗಿ ಕಂದನನ್ನು ನೋಡಿ, 'ಕಂದಾಗ ನನಗ ರುಣವಿಲ್ಲ' ಎನ್ನುವ ಅವಳ ಮಾತು ಚಿತ್ತಭೇದಕವಾದುದು. ಅಲ್ಲದೇ ಅವಳು ತನ್ನವರನ್ನು ಕುರಿತು ''ಇಟ್ಟಿಕ್ಕೀರವ್ವ ಬಟ್ಟೀಯ ಕೊಡಿರವ್ವ ತೊತ್ತಿನ ಮಗನೆಂದು ಬೈದೀರೆ'' ಎಂದು ಕೇಳಲಾಗಿ, ಅವರು ''ತೊತ್ತಿನಮಗನೆಂದು ಬೈದೇವು''[0] ಎಂದು ಸ್ಪಷ್ಟವಾಗಿ ಅವಳಿಗೆ ಉತ್ತರಕೊಟ್ಟು ಬಿಡುತ್ತಾರೆ. 'ತಂಗ್ಯವ್ವ' ತನ್ನ ಮಗುವಿನ ಭವಿಷ್ಯ ಕರಾಳ ಎಂದು ತಿಳಿದು ಕೊನೆಗೆ ಸತಿಹೋಗಿ ಬಿಡುತ್ತಾಳೆ.

ಭಾರತಕ್ಕೆ ಭೇಟಿಕೊಟ್ಟ ವಿದೇಶಿ ಪ್ರವಾಸಿಗರು ಮೃತನ ಪತ್ನಿ ಸತಿಹೋಗುವಾಗ ಮಾತನಾಡುತ್ತಿದ್ದ ರೀತಿ, ಅವರ ಮನಸ್ಸಿನ ಸ್ಥಿತಿ — ಗತಿ ಇತ್ಯಾದಿಗಳನ್ನು ಕುರಿತು ವರ್ಣಿಸಿದ್ದಾರೆ. ವಿಜಯನಗರಕ್ಕೆ ಸಂದರ್ಶನಕೊಟ್ಟ ಸೀಜರ ಫ್ರೆಡರಿಕ್, ಸತಿಯು ''ಚಿತೆಯ ಬಳಿ ಇರುವ ವೇದಿಕೆಯ ಮೇಲೆ ನಿಂತು ಮಕ್ಕಳಿಗೂ ನೆಂಟರಿಷ್ಟರಿಗೂ ಬುದ್ಧಿಮಾತು ಹೇಳುತ್ತಾಳೆ' — ಎಂದು ಬರೆದಿದ್ದಾನೆ.[75] ಇಕ್ಕೇರಿಯಲ್ಲಿ ಗಿಯಕ್ಕಮನ ಸತಿಪ್ರಸಂಗದಲ್ಲಿ, ಅವಳೊಡನೆ ''ಏನೇನೋ ಹಾಡು ಮತ್ತು ಮಾತುಗೀತು ಸಾಗುತ್ತಿತ್ತು. ಆದರೆ ಅವು ನನಗೆ ಗೊತ್ತಾಗಲಿಲ್ಲ. ಪ್ರಪಂಚವನ್ನು ಬೀಳ್ಕೊಡುವ ಒಂದು ವಿಧದ ಮಾತುಗಳೆಂದು ಜನರು ಹೇಳಿದರು'' ಎಂದು ಪಿಯೆತ್ರೊ ದೆಲ್ಲಾವಲ್ಲೆ' ಹೇಳಿದ್ದಾನೆ.[76] ಈ ಪ್ರವಾಸಿಗರ ವರದಿಗಳ ಹಿನ್ನೆಲೆಯಲ್ಲಿ ಸತಿಯು ಮಕ್ಕಳೊಡನೆ, ನೆಂಟರೊಡನೆ ಮಾತುಕತೆಗಳನ್ನಾಡುತ್ತ ಹೋಗುತ್ತಿದ್ದಳೆಂಬುದು ತಿಳಿದುಬರುತ್ತದೆ, ಮತ್ತು ಆ ಮಾತುಗಳು ಪ್ರಪಂಚವನ್ನು ಬೀಳ್ಕೊಡುವ ಕುರಿತಾಗಿ ಇರುತ್ತಿದ್ದವೆಂದೂ ಸ್ಪಷ್ಟಗೊಳ್ಳುತ್ತದೆ. 'ಪಿಯೆತ್ರೊ ದೆಲ್ಲಾವಲ್ಲೆ' ಇನ್ನೂ ಮುಂದುವರೆದು, 'ಗಿಯಕ್ಕಮ' ''ಮದುವೆಯ ಹೆಣ್ಣು ಎಷ್ಟು ಸಂತಸದಲ್ಲಿರಬಹುದೋ ಅಷ್ಟು ಸಂತಸವಾಗಿದ್ದಳು'' ಎಂದು ಬರೆದಿದ್ದಾನೆ. ಅಂದರೆ, ಗಿಯಕ್ಕಮಳು ನಗುನಗುತ್ತ ಸಂತೋಷದಿಂದಲೇ ಸತಿಹೋದಳೆಂಬುದೇ ಇಲ್ಲಿಯ ಮುಖ್ಯ ಅಂಶವಾಗಿದೆ.

---

0 ಬಹುಶ: : ಬೈಯೇವು ಎಂಬುದು ಬೈದೇವು ಎಂದಾಗಿರಬೇಕು.

ಆದರೆ ಎಲ್ಲ ಸತಿಘಟನೆಗಳು ಹೀಗೆ ಜರುಗಿದವೆಂದೆನೂ ಭಾವಿಸಿಕೊಳ್ಳಲು ಆಸ್ಪದವಿಲ್ಲ. ಬೆಂಗಳೂರಿನಲ್ಲಿ ನಡೆದ ಸತಿಪ್ರಸಂಗವೊಂದನ್ನು ಮಿಷಿನರಿ ಟಿಪ್ಪಣಿಗಳಲ್ಲಿಯ ಪತ್ರವೊಂದು ವರ್ಣಿಸುತ್ತ, ಸತಿಯಲ್ಲಿ '' ಒಂದು ರೀತಿಯ ಕೃತಕ ನಗೆ ಇದ್ದರೂ ಕಣ್ಣುಗಳಲ್ಲಿ ಒಂಟಿತನ, ದುಃಖ, ಭೀತಿಯು ಕಾಣುತ್ತಿತ್ತು '' ಎಂದು ಹೇಳುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[77]

ಕೊಂಡದ ಸುದ್ದಿ ಮುಟ್ಟಿಸುವುದು : ಗಂಡ ಮರಣಹೊಂದಲಾಗಿ ಪತ್ನಿ ಸತಿಹೋಗಲು ನಿರ್ಧರಿಸಿದ ಮೇಲೆ ಅವಳ 'ಕೊಂಡ' ದ ಸಿದ್ಧತೆ ನಡೆಯುತ್ತಿತ್ತು. ಅದಕ್ಕೂ ಪೂರ್ವದಲ್ಲಿ ಅವಳು '' ಕೊಂಡದಲ್ಲಿ ಬೀಳುವ '' ವಿಷಯ ಊರಲ್ಲಿ, ಸುತ್ತಲಿನ ಗ್ರಾಮಗಳಲ್ಲಿ ಕಾಡ್ಗಿಚ್ಚಿನಂತೆ ಹಬ್ಬುತ್ತಿತ್ತು. ಅಲ್ಲದೆ, ಅವಳ ತವರುಮನೆಯವರು ಆ ಸಂದರ್ಭದಲ್ಲಿ ಇರಬೇಕಾಗಿರುವುದು ಸಾಮಾನ್ಯವಾದ ರೂಢಿಯಾಗಿತ್ತು. ಅದಕ್ಕಾಗಿ ಅವಳ ತವರಮನೆ — ಯವರಿಗೆ ಅವಳು ಕೊಂಡಕ್ಕೆ ಬೀಳುವ ವಿಷಯವನ್ನು ಹೇಳಿ ಕಳುಹಿಸಲಾಗುತ್ತಿತ್ತು. ಹೀಗೆ ಸತಿ ಕೊಂಡ ಪ್ರವೇಶಿಸುವ ವಿಷಯ ಸಹಜವಾಗಿ ಪ್ರಚಾರಗೊಂಡು, ಹತ್ತಾರು ಭಾಗಗಳಿಂದ ಜನತೆ ನೆರೆದು ಆ ಸತಿಘಟನೆಯೊಂದು ಅಪೂರ್ವ ರೀತಿಯಲ್ಲಿ ನಡೆದು ಹೋಗುತ್ತಿತ್ತು.

' ಮಹಾಸತಿ ವೀರತಿಮ್ಮವ್ವ ' ನ ಗೀತೆಯಲ್ಲಿ,[78] ' ತಿಮ್ಮವ್ವನ 'ಕೊಂಡ' ದ ವಿಷಯವನ್ನು ಅವಳ ತವರುಮನೆಗೆ ಹೇಳಿ ಕಳುಹಿಸುವ ವಿಷಯದ ಪದ್ಯವೊಂದು ಹೀಗೆ ಬರುತ್ತದೆ.

ಕಟ್ಟಿಯ ಇಂಬಿದಚೊಬ್ಬೀಲೆ ಗರಿಗಾಳಲ
ಮ್ಯಾದರೊಣ್ಣೀಗಿ ಕೊಯ್ತನ್ನಿ
ಮ್ಯಾದರೊಣ್ಣೀಗಿ ಕೊಯ್ತನ್ನಿ । ತಿಮ್ಮವ್ವನ
ಅವರಿರಿಯಣ್ಣಾಗೆ ಓಲೆ ಬರೆಯೂನು

ಇಲ್ಲಿ ಗರಿಗಳಲ್ಲಿ ತಿಮ್ಮವ್ವನ ಕೊಂಡದ ಸುದ್ದಿ ಬರೆದು, ಅವಳ ಅಣ್ಣನಿಗೆ ಅದನ್ನು ಮುಟ್ಟಿಸುವ ವಿಷಯ ಇದೆ, ಅದನ್ನು ತವರೂರಿಗೆ ತಗೆದುಕೊಂಡು ಬಂದವನು ' ಕಾಲಲ್ಲಿ ಕೆಂದೂಳು ಮ್ಯಾಕರಲ್ಲಿ ಕಿರುಬೆವರು ' ವುಳ್ಳವನಾಗಿ ತಿಮ್ಮವ್ವನ ತವರಮನೆಯ ಮುಂದೆ ನಿಲ್ಲುತ್ತಾನೆ. ಅವನಿಗೆ ಮನೆಯವರು ಮೊದಲು ಮಜ್ಜಿಗ ( ಮಜ್ಜಿಗೆ ) ಕುಡಿಯಲು ಕೊಟ್ಟು ವಿಷಯ ಏನೆಂದು ಕೇಳುತ್ತಾರೆ. ಆಗ ಅವನು ಹೇಳುವುದು ಹೀಗೆ.



ಬಾಳೀನ ಸುದ್ಯಲ್ಲ ಬದುಕೀನ ಸುದ್ಯಲ್ಲ
ಏನ ಏಳಾಲಿ ಒಡಲುರಿಯು
ಏನ ಏಳಾಲಿ ಒಡಲುರಿಯು 1 ತಿಮ್ಮವ್ವ
ಸನ್ನಾರದ ಕಾತಿಯಾಗುತಾಳೆ.

‘ತಿಮ್ಮವ್ವ’ ಅಗ್ನಿಪ್ರವೇಶ ಮಾಡುವ ಒಡಲುರಿಯ ಸುದ್ದಿ ತಾನು ತಂದಿರುವುದಾಗಿ ಆಳು ( ಬಸುಮಗ ) ಹೇಳಿಬಿಡುತ್ತಾನೆ. ‘ಅದು ಬಾಳೀನ ಸುದ್ಯಲ್ಲ ಬದುಕೀನ ಸುದ್ಯಲ್ಲ’ ಎಂದು ಅವನು ಸುದ್ದಿಯ ಕ್ರೂರತೆಯನ್ನು, ತನ್ನ ಅಳುಕನ್ನು ಸೂಚಿಸುತ್ತಾನೆ. ‘ಮಾಸ್ತಮ್ಮ’ ಗೀತೆಯಲ್ಲಿ ಇನ್ನು ವಿಶೇಷವಾದ ವಿಷಯವಿದೆ.[79] ಮಾಸ್ತಮ್ಮ ಸತಿ — ಯಾಗುವುದನ್ನು ಗಂಡನ ಮತ್ತು ತವರುಮನೆಯವರು ಒಪ್ಪುವುದಿಲ್ಲ. ಅವಳೇ ಸ್ವತ: ನಾಗಮಂಗಲಕ್ಕೆ ಹೋಗಿ ಅಮಲ್ದಾರರಿಗೆ ಅನಿವಾರ್ಯತೆಯನ್ನುಂಟು ಮಾಡಿ, ಕೊಂಡದ ವ್ಯವಸ್ಥೆ ಮಾಡಿಸಿಕೊಂಡು, ಗಂಡನೂರಾದ ‘ಹಳೆಯಭೂವನಹಳ್ಳಿ’ಗೆ ಕೊಂಡದ ಸುದ್ದಿ ಮುಟ್ಟಿಸಿ ಗಂಡನ ಮನೆಯವರನ್ನು ಕರೆದುಕೊಂಡುಬರಲು ಆಳನ್ನು ಹೇಳಿ ಕಳುಹಿಸುವ ಪ್ರಸಂಗ ಅಲ್ಲಿ ಬರುತ್ತದೆ.

‘ಮಹಾಸತಿ ತಾಡಿನಾಗಮ್ಮ’ ಗೀತೆಯಲ್ಲಿ, ಸತಿಕೊಂಡ ಪ್ರವೇಶಿಸುವ ವಿಷಯ ಊರಿನೆಲ್ಲೆಲ್ಲ ಹರಡುವ ಪ್ರಸಂಗವೊಂದು ಚಿತ್ರಣಗೊಂಡಿದೆ.[80] ಅಗಸಳೊಬ್ಬಳು ಕಟ್ಟೆಯ ಹಿಂದೆ ಬಟ್ಟೆ ತೊಳೆಯುತ್ತಿದ್ದಾಳೆ, ಅವಳನ್ನು ಇನ್ನೊಬ್ಬಳು ( ಬಹುಶ: ಅವಳು ತನ್ನ ಮನೆಯ ಬಟ್ಟೆಗಳನ್ನು ತೊಳೆಯುತ್ತಿದ್ದವಳಾಗಿರಬೇಕು ) ‘‘ಬಟ್ಟಗಂಗಣದ ಅಗಸೋತಿ 1 ವಡ್ಡಗೆರೆ ಪಟ್ಟಣದಾಗೇನ ವಸ ಸುದ್ದಿ’’ ಎಂದು ಕೇಳುತ್ತಾಳೆ, ಆಗ ಅಗಸಗಿತ್ತಿ ನಾಗಮ್ಮ ಸತಿ ಹೋಗುವುದನ್ನು ಹೀಗೆ ಹೇಳುತ್ತಾಳೆ :

ನಾನೇನು ಏಳೇನು ನೀನೇನು ಕೇಳೀಯೆ
ಓರುಗಲ್ಲಂಬ ವಳಿತಂಕ
ಓರುಗಲ್ಲಂಬ ವಳಿತಂಕ 1 ನಾಗಣ್ಣನ
ನಾದ್ಯೋಗುತಾಳೆ ಕೈ ಸೆರೆ

ಇದೇ ರೀತಿ ಅವಳು ಇನ್ನೊಬ್ಬನಿಗೆ ಈ ವಿಷಯ ತಿಳಿಸುವ ಪದ್ಯವೊಂದು ಇಲ್ಲಿಯೇ ಬರುತ್ತದೆ. ಊರಿನಲ್ಲಿ ನಡೆದ-ನಡೆಯುತ್ತಿರುವ — ನಡೆಯಬೇಕಾಗಿರುವ ಘಟನೆಗಳ

ವರ್ತಮಾನಗಳು ಸಾಮಾನ್ಯವಾಗಿ ಒಬ್ಬರಿಂದ ಇನ್ನೊಬ್ಬರಿಗೆ ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿರುತ್ತವೆ. ಅದರಲ್ಲಿಯೂ ಎಲ್ಲೆಡೆಯೂ ಸಾಮಾನ್ಯವಾಗಿ ಹೋಗಿ ಬರುವ ಆಗಸರಂಥವರಿಗೆ ಈ ವಿಷಯಗಳು ಮೊದಲೇ ತಿಳಿದುಬಿಟ್ಟು, ಅವು ಇನ್ನುಳಿದವರಿಗೆ ಸಹಜವಾಗಿ ಮುಟ್ಟುತ್ತವೆ. ಇಂಥ ಸಂಪರ್ಕ ಕ್ರಿಯೆ ಗ್ರಾಮ್ಯ ಜೀವನದಲ್ಲಿ ಸರಳ ಮತ್ತು ಬಹುಸುಲಭ ವಾದುದು. ಸತಿ ಕೊಂಡದಲ್ಲಿ ಪ್ರವೇಶಿಸುವ ವಿಷಯು ಈ ಒಂದು ಮಾಧ್ಯಮದಲ್ಲಿಯೂ ನಡೆಯುತ್ತಿತ್ತು ಎಂಬುದು ' ಮಹಾಸತಿ ತಾಡಿನಾಗಮ್ಮ ' ಗೀತೆಯ ಈ ಮೇಲಿನ ಪ್ರಸಂಗ ದಿಂದ ತಿಳಿದುಬರುತ್ತದೆ.

ಸತಿಯ ಬಂಧುವರ್ಗದವರು ಹಾಗೂ ಅವರು ನಿರ್ವಹಿಸುತ್ತಿದ್ದ ಕಾರ್ಯಗಳು: ಮೃತನ ಪತ್ನಿ ಸತಿಹೋಗುವ ಕಾಲಕ್ಕೆ ಅವಳ ಸಂಬಂಧಿಗಳು, ಊರಜನತೆ ಮೊದಲಾದ ಬಂಧು — ಬಳಗ ಭಾಗವಹಿಸುತ್ತಿದ್ದುದು ಕಂಡುಬರುತ್ತದೆ. ಸತಿಸಂಬಂಧಿಗಳಲ್ಲಿ ತಂದೆ, ತಾಯಿ, ಅಣ್ಣತಮ್ಮ, ಅತ್ತೆ, ಮಾವ, ನಾದನಿ, ಅತ್ತಿಗೆ, ಭಾವ ಮೊದಲಾದವರು ಒಳಗೊಳ್ಳುತ್ತಾರೆ. ಅವಳ ಊರಿನ ಬಳಗವರ್ಗದಲ್ಲಿ ಅವಳ ಗೆಳತಿಯರು, ವಾರಗಿತ್ತಿಯರು, ದೊಡ್ಡವರು, ಮಾನ್ಯರು, ಗೌಡರು ಈ ಮೊದಲಾದವರು ಒಳಗೊಳ್ಳುತ್ತಾರೆ. ಇಷ್ಟೇ ಅಲ್ಲದೆ, ಕೆಲವೊಮ್ಮೆ ಸತಿ ಘಟನೆಗಳ ಕಾಲಕ್ಕೆ ಸುತ್ತಲಿನ ಊರಿನ ಜನರೂ ಬಂದು ಪಾಲ್ಗೊಳ್ಳುವುದು ಅಪರೂಪವೇನೂ ಆಗಿರಲಿಲ್ಲ. ಹೀಗೆ ಬಹುಸಂಖ್ಯೆಯಲ್ಲಿ ಬಂಧುವರ್ಗದೊಡಗೂಡಿ ಮೃತನ ಪತ್ನಿ ಮೆರವಣಿಗೆ ಯಲ್ಲಿ ಹೋಗಿ ಸತಿಯಾಗುತ್ತಿದ್ದುದು ಹೃದಯಸ್ಪರ್ಶಿಯಾದ ಘಟನೆಯೊಂದರಂತೆ ನಡೆದುಹೋಗುತ್ತಿತ್ತು.

' ದೇಕಬ್ಬೆ ' ಸತಿಹೋಗುವಾಗ ತಂದೆ—ತಾಯಿ—ಬಂಧುಗಳು ಬಂದು ಅವಳನ್ನು ಸತಿಹೋಗದಂತೆ ಕಾಲ್ವಿಡಿದು ಕೇಳಿಕೊಂಡರೆಂದು ಕ್ರಿ.ಶ. 1057 ರ ಬೆಳತೂರ ಶಾಸನ ತಿಳಿಸುತ್ತದೆ. 81 ಹಾಗೂ ಅವಳು ಸತಿಹೋಗುವುದನ್ನು '' ನೆರೆದೆಲ್ಲಂ ಬೇಡ ಮಾಣ್ '' ಎಂದು ಕೇಳಿಕೊಂಡರೆಂದು ಆ ಶಾಸನ ತಿಳಿಸುವುದರಿಂದ ಅವಳು ಸತಿಯಾಗುವಾಗ ಬಹು ಜನರು ನೆರೆದುಕೊಂಡಿದ್ದು ಸತಿ—ಯಾಗದಂತೆ ಪ್ರಯತ್ನಿಸಿದ್ದರೆಂದು ಅರ್ಥವಾಗುತ್ತದೆ. ಮಾದ್ರಿಯ ಸಹಗಮನ ಪ್ರಸಂಗವನ್ನು ಚಿತ್ರಿಸುತ್ತ ಪಂಪ '' ತಪೋವನದ ಮುನಿಜನಮುಂ ವನದೇವತಾಜನಮುಂ ತನ್ನಣ್ಮಂ ಪೊಗಳೆ ಮಾದ್ರಿ ಪಾಂಡುರಾಜನೊಡನೆ ದಾಹೋತ್ತರದಂತೆ — (?) ಕಿರ್ಚಿಂಗೆ ಕುಲದೊಳಂ ಚಲದೊಳ. —

ಮಾವ ಕಂದುಂ ಕುಂದುಮಿಲ್ಲದೆ ತನ್ನೊರ್ಗಂ ದೊರೆಗಮಾರುಮಿಲ್ಲೆನಿಸಿದಾಗಳ್ ''
ಎಂದು ವರ್ಣಿಸಿದ್ದಾನೆ.[82] ಮುನಿಜನರ, ವನದೇವತೆಗಳ ಸಮ್ಮುಖದಲ್ಲಿ ಸತಿಹೋದ
ಮಾದ್ರಿಯನ್ನು ಇಲ್ಲಿ ಕಾಣುತ್ತೇವೆ. ಜೊತೆಗೆ ಮಾದ್ರಿಯ ಸವತಿ ಕುಂತಿ ಹಾಗೂ
ಮಕ್ಕಳಾದ ಪಾಂಡವರೈವರು ಆ ಸಂದರ್ಭದಲ್ಲಿದ್ದುದನ್ನು ಕವಿ ತಿಳಿಸಿದ್ದಾನೆ, 'ಅನಂತನಾಥ
ಪುರಾಣ' ದಲ್ಲಿ ಚಂಡಶಾಸನನ ರಾಣಿಯರೆಲ್ಲರೂ ನೆರೆದುಕೊಂಡು ಅವನೊಡನೆ ಸತಿ
ಹೋಗಲು ಪುರದಿಂದ ಹೊರಟದ್ದನ್ನು ಕವಿ ಜನ್ನನು ತುಂಬ ಸುಂದರವಾಗಿ ಚಿತ್ರಿಸಿದ್ದಾನೆ.[83]
ಅಂದು ರಾಣಿಯರು '' ಬಂಧುಗಳ್ತೊಡರ್ದಿರೆ ಮೋಹಮಂ ಬಿಡಿಸುವಾಶ್ರಿತರ್ಗಾದೆಡರಂ
ಕಳಲ್ಚಿ ಬೀಳ್ಕೊಡಿಸುವ '' ರಾಗಿದ್ದರು. ಅಂದರೆ ಈ ಪ್ರಸಂಗದಲ್ಲಿ ರಾಣಿವರ್ಗದವರ ಬಂಧವಿ
ಗಳು, ಆಶ್ರಿತರು ಭಾಗವಹಿಸಿದ್ದರೆಂಬುದು ಸ್ಪಷ್ಟಗೊಳ್ಳುತ್ತದೆ; ಅಲ್ಲದೆ ಬಂಧುಗಳು
ತೊಡರ್ದಿರೆ ಮೋಹಮಂ ಬಿಡಿಸುವ ಎಂಬಲ್ಲಿ ಬಂಧುಜನರು ಸತಿಹೋಗಲಿರುವ ರಾಣಿಯರನ್ನು
ಕಂಡು ಮೋಹಪರವಶರಾಗಿ ( ಬಹುಶಃ ದುಃಖದಿಂದ ) ಅವರೊಡನೆ ವ್ಯವಹರಿಸುತ್ತಿದ್ದರೆಂದು
ಅರ್ಥವಾಗುತ್ತದೆ. ಅದೇ ರೀತಿ 'ಆಶ್ರಿತರ್ಗಾದೆಡರಂ' ಎಂಬಲ್ಲಿಯೂ ಹೆಚ್ಚು ಕಡಿಮೆ
ಇದೇ ಅರ್ಥವಿದೆ. ಇಂಥ ಭಾವನಾತ್ಮಕ ಪರಿಸ್ಥಿತಿಯಲ್ಲಿ ಸಮಾಧಾನ ಹೇಳಿ ರಾಣಿಯರು
ಬಂಧುಗಳಿಂದ — ಆಶ್ರಿತರಿಂದ ಬೀಳ್ಕೊಂಡು ಹೋಗಲು ಸಿದ್ಧತಮಾಡಿಕೊಳ್ಳುತ್ತಿದ್ದ ಈ
ಪ್ರಸಂಗ ಬೆರಗುಗೊಳಿಸುವಂಥದ್ದಾಗಿದೆ. 'ರಾಮನಾಥ ಚರಿತ' ದಲ್ಲಿ ನಂಜುಂಡಕವಿಯು
ಕುಮಾರರಾಮನ ಪತ್ನಿಯರು ಸತಿಹೋಗುವಾಗ 'ಪುರಜನರು' ಇದ್ದುದ್ದನ್ನು ತಿಳಿಸುತ್ತಾನೆ.[84]
ಅಲ್ಲದೆ ಅದೇ ಸಂದರ್ಭದಲ್ಲಿ ಕುಮಾರರಾಮನ ತಾಯಿ ಹರಿಹರದೇವಿ ತನ್ನ ಸತಿಹೋಗಲಿರುವ
ಸೊಸೆಯಂದಿರರಿಗೆ '' ಪುರುಡು ಬೇಡಕ್ಕ ತಂಗಿಯರೊಳು ಪುರುಷನೊಳೆರವುಗಾಣಸಬೇಡವೆಂದು
ಒರೆದು ಬುದ್ಧಿಯ '' ಅವರನ್ನು ಬೀಳ್ಕೊಡುವ ಪ್ರಸಂಗ ಬರುತ್ತದೆ, 'ಅನಂತನಾಥ
ಪುರಾಣ' ದಲ್ಲಿ ಸತಿಹೋಗುವವರೇ ಬಂಧು — ಆಶ್ರಿತ ಜನಕ್ಕೆ ಸಮಾಧಾನ ಪಡಿಸಿ ಬೀಳ್ಕೊಂಡು
ಹೋಗುತ್ತಿದ್ದರೆ, ಇಲ್ಲಿ ಸತಿಹೋಗುವವರು ಅತ್ತೆ ಹರಿಹರದೇವಿಯಿಂದ ಬುದ್ಧಿಮಾತು
ಹೇಳಿಸಿಕೊಂಡು ಅವಳಿಂದ ಬೀಳ್ಕೊಂಡು ಹೋಗುವುದನ್ನು ಕಾಣುತ್ತೇವೆ.

ವಿರಕ್ತ ತೋಂಟದಾರ್ಯನ 'ಸಿದ್ಧೇಶ್ವರ ಪುರಾಣ' ದ ಸತಿಪ್ರಸಂಗವೊಂದರಲ್ಲಿ,
ವೀರಮರಣ ಹೊಂದಿದವನ ಪತ್ನಿಯೊಬ್ಬಳನ್ನು '' ಬೀದಿಯೊಳು ಕುಣಿದಾಡುತ್ತ ಬರುತೆ

ಪುರಜನದ ಸಂದಣಿಯಿಂದ '' ಎಂದು ವರ್ಣಿಸಲಾಗಿದೆ.[85] ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ರಾಣಿ ಚನ್ನಬಸವಮ್ಮ ಅತ್ತೆಮಾವಂದಿರ ಪಾದಕ್ಕೆ ನಮಸ್ಕರಿಸಿ ಶಿವಭಕ್ತರ ತಂಡ ಉಘೇ ಉಘೇ ಎನ್ನುತ್ತಿರಲಾಗಿ ಸತಿಹೋಗುತ್ತಾಳೆ,[86] ವೀರಯ್ಯನ ಪತ್ನಿಯರು ಮಾವ ಸಿರುಮ, ಅತ್ತೆ ಚಿಕ್ಕಾಯಿ, ಗುರುಹಿರಿಯರು, ಹರಶರಣರು ಇವರೆಲ್ಲರ ಸಮ್ಮುಖದಲ್ಲಿ ಮೃತವೀರ–ಗಂಡನೊಡನೆ ಸಮಾಧಿಗೆ ಕಳಿತ ವರ್ಣನೆ ಸಿರುವಮಣನಾಯಕ ಸಾಂಗತ್ಯದಲ್ಲಿದೆ.[87] ಷಣ್ಮುಖ ಶಿವಯೋಗಿಯ ವಚನವೊಂದರಲ್ಲಿ '' ತಂಡ ತಂಡದ ಜನರ ಮುಂದೆ ಮೆರೆದುಕೊಂಡು '' ಬರುವ ಸತಿ ಚಿತ್ರಣವೊಂದು ದೊರಕುತ್ತದೆ.[88]

ಈರೋಬಿಯು ಸತಿಘಟನೆಯ ಕಾಲಕ್ಕೆ ಅವಳ ತಂದೆ, ತಾಯಿ, ಅಣ್ಣ, ನಾದನಿ, ಅತ್ತಿಗೆ, ಭಾವಂದಿರರು — ಇವರೆಲ್ಲರು ಇದ್ದ ಕುರಿತಾಗಿ 'ಈರೋಬಿ — ಖಂಡಕಾವ್ಯದಲ್ಲಿ ವಿವರಣೆ ಇದೆ.[89] ಅಪ್ಪ, ಅಣ್ಣ ಈರೋಬಿಯನ್ನು ಸತಿಹೋಗದಂತೆ ಕೇಳಿಕೊಳ್ಳುತ್ತಾರೆ. ಆದರೆ ಅವಳು ತನ್ನ ನಿರ್ಧಾರವನ್ನು ಬದಲಿಸುವುದಿಲ್ಲ. ಅಷ್ಟೇ ಅಲ್ಲದೆ ಅವಳು ತಂದೆ ಹಾಗೂ ಅಣ್ಣನಿಗೆ 'ಒಡಗಿಚ್ಚು' ಕೊಡಬೇಕೆಂದೂ ಕೇಳಿಕೊಳ್ಳುತ್ತಾಳೆ. ಇದನ್ನು ಡಾ: ದೇವೇಂದ್ರ — ಕುಮಾರ ಹಕಾರಿ ಅವರು, ಈರೋಬಿಯು '' ಕೊಂಡಕ್ಕೆ ಬೇಕಾಗುವ ಒಡಗಿಚ್ಚು ಅದನ್ನು ತಂದೆಯ ಮನೆಯಿಂದಲೇ ತರಬೇಕು '' ಎಂದು ಅರ್ಥೈಸುತ್ತಾರೆ.[90] 'ಚಿಕ್ಕೋಳು ಹಿರಿದಿಮ್ಮವ್ವ' ಗೀತೆಯಲ್ಲಿ ಏಳುಜನ ಅಣ್ಣಂದಿರರು ತಮ್ಮ ತಂಗಿ 'ತಿಮ್ಮವ್ವ'ಳನ್ನು ಸತಿಯಾಗದಂತೆ ತಡೆದರಾದರೂ ಅವಳು ಕೇಳದೆ ಗಂಡನ ತಲೆಯೊಡನೆ '' ಕೆಂಡ ಕೊಂಡ '' ವಾಗುತ್ತಾಳೆ.[91] 'ಮಹಾಸತಿ ವೀರತಿಮ್ಮವ್ವ' ಗೀತೆಯಲ್ಲಿ 'ತಿಮ್ಮವ್ವ' ಅಪ್ಪ, ಅಣ್ಣ, ಮಾವ, ಭಾವ, ಕಾಟಯ್ಯ, ಅಳಿಗೆಳತಿಯರು; ತನ್ನ ಕುಲದವರಾದ 'ಸಂದನೋರು' ತನ್ನ ಊರಾದ ಹಿರಿಯುಟ್ಟಿಯ ಜನರು ಇವರೆಲ್ಲರ ಮುಂದೆ ಮೆರೆದು ಸತಿಹೋದಳೆಂದು ವಿವರಿಸಲಾಗಿದೆ.[92] ತಿಮ್ಮವ್ವ ಅಣ್ಣ ಮತ್ತು ಅಪ್ಪನನ್ನು ಕ್ರಮವಾಗಿ 'ಬಣ್ಣತಂದು ಕೊಡು' 'ಪಟ್ಟೆ ತಂದು ಕೊಡೊ' ಎಂದು ಕೇಳಿಕೊಂಡದ್ದಕ್ಕೆ, ಅವಳು ಸತಿ ಹೋಗುವಾಗ ತವರು ಮನೆಯವರು ಸೀರೆ ತಂದುಕೊಟ್ಟದ್ದನ್ನು ಜನಪದಕವಿ '' ಬಣ್ಣತಂದರು ತಿಮ್ಮವ್ವನ ತೌರವರು '' ಎಂದು ತಿಳಿಸುತ್ತಾನೆ. ಸತಿಹೋಗುವಾಗ ಸ್ತ್ರೀಯರು ತಮ್ಮ ತವರು ಮನೆಯಿಂದ

ತಂದ ಸೀರೆಯನ್ನೇ ತೊಟ್ಟು ಸತಿಹೋಗುತ್ತಿರುವುದನ್ನು ಇದು ಸೂಚಿಸುತ್ತದೆ. “ಅಳಿಗೆಳತೇರು ಕೊಳ್ಳೀರಿ ನಿಮ್ಮಕ್ಕಾವ ಒಳ್ಳೊಳ್ಳೆ ಸಾದೆ ಬರಬೇಕಲ” ಎಂದು ಶಿವಮ್ಮವ್ವ ತನ್ನ ಗೆಳತಿಯರನ್ನು ಕೇಳಿಕೊಳ್ಳುವುದನ್ನು ನೋಡಿದರೆ, ಬಹುಶಃ ಸತಿಗೆ ಸಂಬಂಧಿಸಿದವರು ‘ಕೊಂಡ’ ಕ್ಕಾಗಿ ಹಲವು ವಿಧದ ಸೇವೆ (ಕರ್ತವ್ಯ) ಸಲ್ಲಿಸುತ್ತಿದ್ದರೆಂದೂ, ಅದಕ್ಕೂ ಮೊದಲು ‘ವೀಳ್ಯದೆಲೆ’ ಕೊಟ್ಟು ಅದನ್ನು ಒಪ್ಪಿಸಿಕೊಡಲಾಗುತ್ತಿತ್ತೆಂದೂ ಹೇಳಬಹುದಾಗಿದೆ. ಇಲ್ಲಿ ಸತಿಹೋಗುವ ಪೂರ್ವದಲ್ಲಿ, ಶಿವಮ್ಮವ್ವ ಗೆಳತಿಯರಿಗೆ ವೀಳ್ಯ ಕೊಟ್ಟು ಕೊಂಡಕ್ಕೆ ಸಾದೆ ತಗೆದುಕೊಂಡು ಬರಲು ತಿಳಿಸುತ್ತಾಳೆ. “ಮಹಾಸತಿ ತಾಡಿ ನಾಗಮ್ಮ” ಗೀತೆಯಲ್ಲಿ,[93] ನಾಗಮ್ಮ ತಂದೆ, ಮಾವ, ಮೈದುನ, ಊರ ದೊಡ್ಡವರು, ಮಾನ್ಯೇರು, ತವರು ಮನೆಯವರು ಇವರೆಲ್ಲರ ಎದುರಿನಲ್ಲಿ ಮೆರೆದು ಸತಿಹೋಗುತ್ತಾಳೆ. ನಾಗಮ್ಮ ಮೆರೆಯುವಾಗ ದೊಡ್ಡವರು — ಮಾನ್ಯೇರು ಅವಳಿಗೆ ಕೈ ಎತ್ತಿ ಮುಗಿಯುತ್ತಾರೆ. ಅವಳು ತನ್ನ ಮೈದುನನನ್ನು ಕುರಿತು ಹೇಳುವ ಮಾತುಗಳು ಸತಿಪ್ರಸಂಗದಲ್ಲಿ ಅವನು ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸುತ್ತಿದ್ದುದನ್ನು ಹೀಗೆ ತಿಳಿಸಿಕೊಡುತ್ತವೆ :

ಅತ್ತಿಮರ ಸುತ್ತಿಸುತ್ತಿ ಕಡಿವೋನೆ
ತೆಕ್ಕೆ ತುರುಬಿನ ಮೈದುನ
ತೆಕ್ಕೆ ತುರುಬಿನ ಮೈದುನ 1 ಉದ್ದಿಗರಾಯ
ಅತ್ತೀಯ ಸೆಕ್ಕೆ ಮಗಬಾಳ

ನಾಗಮ್ಮಳ ಮೈದುನ ‘ಉದ್ದಿಗರಾಯ’ ಕೊಂಡಕ್ಕಾಗಿ ‘ಅತ್ತಿಮರದ ಕೊರಡುಗಳನ್ನು ಕಡಿಯುತ್ತಿರುವುದು ಇಲ್ಲಿ ಚಿತ್ರಣಗೊಂಡಿದೆ. ಅವಳು ಆ ಕೊರಡುಗಳು ಕೊಂಡದಲ್ಲಿ ಉರಿಯುವಾಗ ‘ಹೊಗೆ’ ಹೆಚ್ಚಾಗುವುದನ್ನು ಅವನಿಗೆ ಜ್ಞಾಪಿಸಿಕೊಡುವ ನಾಗಮ್ಮಳ ಮಾತುಗಳು ಮನಸೆಳೆಯುತ್ತವೆ. ಅದೇ ರೀತಿ ‘ಉದ್ದಿಗರಾಯ’ ಆಲದ ಮರ ಕಡಿಯುವಾಗಲೂ ಅವಳು ಮತ್ತೆ ಹಾಗೇ ಹೇಳುತ್ತಾಳೆ. ಮುಂದೆ ನಾಗಮ್ಮ ಕೊಂಡದಲ್ಲಿ ಬೀಯುವಾಗ ‘ಮಾವ’ ಬಹುಶಃ ಬೆಂಕಿ ಹೆಚ್ಚಾಗಲು ಕೊರಡುಗಳನ್ನು ಹಾಕುವುದನ್ನು ಅವಳು ‘ಚಾಚೀದ ಮುಂಡೆ ಮ್ಯಾಲೆ ಬರಿಮುಲ್ಲಿಗೆ ಮಾವು ನೂಕದಿರೋ ಮಾವಯ್ಯ, ನೂಕದಿರೋ ಮಾವಯ್ಯ ಎರಗೊರಡು” ಎಂದು ಕೇಳಿಕೊಳ್ಳುತ್ತಾಳೆ. ಇಲ್ಲಿ, ಸತಿ ಬೆಂಕಿಯಲ್ಲಿ ಇಲ್ಲದಾಗುವ

ವರೆಗೂ ಮಾವನಂಥ ಬಂಧುಗಳು ಇದ್ದು 'ಚಿತೆವ್ಯವಸ್ಥೆ' ನೋಡಿಕೊಳ್ಳುತ್ತಿದ್ದರೆಂಬುದು ಸ್ಪಷ್ಟಗೊಳ್ಳುತ್ತದೆ. "ಮಹಾಸತಿ ಕಾಟವ್ವ" ಗೀತೆಯಲ್ಲಿ ಕಾಟವ್ವ ಸತಿಹೋಗುವಾಗ ತಂದೆ, ತಾಯಿ ಅಣ್ಣ, ಮಾವ, ನಾದನಿ, ಸಂಗಾತಿ, ಅದಿಮನೆ — ಬೀದಿಮನೆ, ಸಂದಿಮನೆ — ಗೊಂದಿಮನೆ ಇವರೆಲ್ಲರು ನೆರೆದಿರುತ್ತಾರೆ.[94] ಈ ಕಥನಗೀತೆಯಲ್ಲಿ 'ಕಾಟವ್ವ' ಮೆರೆಯುತ್ತ ಸತಿಹೋಗುತ್ತಿರುವಾಗ ವಾರಗಿತ್ತಿಯರು 'ಓಗರಕ್ಕೆ' ಕರೆಯುವ ಪ್ರಸಂಗದ ಎರಡು ಪದ್ಯಗಳು ತುಂಬ ವಿಶೇಷವಾಗಿವೆ.[95]

ಉಪ್ಪ್ಯಾಕೇದ ಸೊಪ್ಪು ಮತ್ತೀಟು ಅಕ್ಕ್ಯಾರು
ಉಪ್ಪರಿಗೆ ಮುಂದೆ ಮೆರಿವಾಗ
ಉಪ್ಪರಿಗೆ ಮುಂದೆ ಮೆರಿವಾಗ । ವಾರಗಿತ್ತ್ಯೇರು
ತುಪ್ಪವೋಗರಕೆ ಕರೆದಾರು

ಆಲೊಂಯ್ದು ಸೊಪ್ಪು ಮ್ಯಾಲೀಟು ಅಕ್ಕೋರು
ವಾವುರಿಗೆ ಮುಂದೆ ಮೆರಿವಾಗ
ವಾವುರಿಗೆ ಮುಂದೆ ಮೆರಿವಾಗ । ವಾರಗಿತ್ತ್ಯೇರು
ಅಲುವೋಗರಕೆಂದು ಕರೆದಾರು

ಮೃತನ ಪತ್ನಿ ಸತಿಹೋಗುವ ಪೂರ್ವದಲ್ಲಿ ಮೆರವಣಿಗೆಯಲ್ಲಿ ಹೋಗುತ್ತಿದ್ದುದು, ಕೆಲವೊಮ್ಮೆ ಸಂಗಾತಿಗಳ ಮನೆಗಳಲ್ಲಿ ಊಟ ಮಾಡುತ್ತಿದ್ದುದು ಇಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಬಹುಶ: ಸತಿ ಮೆರೆಯುತ್ತ ಬೀದಿ ಬೀದಿಗಳಲ್ಲಿ ಹೋಗುತ್ತಿರುವಾಗ ಅವಳಿಗೆ ಹತ್ತಿರದವರಿದ್ದವರು ಮನೆಯ ಮುಂದೆ ಮೆರವಣಿಗೆ ಬಂದಾಗ ಆ ಮನೆಯವರು ಅವಳಿಗೆ ಊಟಕ್ಕೆ ಕರೆಯುತ್ತಿದ್ದರು ಎನಿಸುತ್ತದೆ. ಆಗ ಸತಿ ಅವರ ಮನೆಯಲ್ಲಿ ಊಟವನ್ನು ಮಾಡುತ್ತಿರಬೇಕು. ಇದನ್ನು ಸಮರ್ಥಿಸುವಂತೆ ಬಸವಣ್ಣನವರ ಟೀಕಿನ ವಚನವೊಂದರಲ್ಲಿ "ಒಬ್ಬನೊಬ್ಬ ಪುರುಷನು ರಣ — ಮಂಡಲಕ್ಕೆ ಹೋಗಿ ಕಡಿದಾಡಿ ಮಡಿದಲ್ಲಿ ಅವನ ಸ್ತ್ರೀಯಳು ಎಣ್ಣೆ ಅರಿಷಣವನ್ನು ಹಚ್ಚಿಕೊಂಡು ಹೂವನ್ನು ಮುಡಿದುಕೊಂಡು ಮನೆಮನೆಗೆ ಕೋರೂಟವನ್ನು ಉಂಬುತ್ತ ಇಪ್ಪತ್ತೇಳು ದಿವಸ ಮಾಸ್ತಿಯಾಗಿ ಮೆರೆವ ಪರಿಯಂತರ ಪರಿಣಾಮವಾಗಿರುವುದು........" ಎಂದು ಬರುತ್ತದೆ.[96] ಇಲ್ಲಿ ಸತಿಯಾಗುವವಳು ಇಪ್ಪತ್ತೇಳು ದಿನಗಳವರೆಗೆ ಮೆರೆಯುತ್ತಿದ್ದು, ಮನೆಮನೆಗೆ 'ಕೋರೂಟ' ಮಾಡುತ್ತಿರುವ ವಿಷಯವಿದೆ. 'ಮಹಾಸತಿ ತಾಡಿನಾಗಮ್ಮ' ಗೀತೆಯಲ್ಲಿ

ಸತಿ ಸ್ವತಃ ಜನರಿಗೆ ಊಟ ಬಡಿಸುವ ವಿಷಯವು ತುಂಬ ದೀರ್ಘವಾಗಿ ಬರುತ್ತದೆ.[97] ನಾಗಮ್ಮ ಅಡಿಗೆ ಮಾಡಿ ಬಳಗಕ್ಕೆ ಊಟ ಮಾಡಲು ಎಬ್ಬಿಸುವಳಲ್ಲದೆ, ಅವಳೇ ಅವರಿಗೆಲ್ಲ ಊಟ ನೀಡಲು ಹೊರಡುವ ಚಿತ್ರ ಇಲ್ಲಿದೆ. ಅದನ್ನು ಜನಪದ ಕವಿ ಹೀಗೆ ಚಿತ್ರಿಸುತ್ತಾನೆ:

ಕೆಂಚನಾಗಮ್ಮ ಅಂಚೀನ ಸೀರೆಯುಟ್ಟು
ಗಾಜಿನ ತಟ್ಟೆ ಕೈಲಿಡಿದು
ಗಾಜಿನ ತಟ್ಟೆ ಕೈಲಿಡಿದು । ನಾಗಮ್ಮ
ಜನಕೆಯುನ ನೀಡಲೊರಟಾಳೆ

ಅಂಚಿನ ಸೀರೆಯುಟ್ಟು ಗಾಜಿನತಟ್ಟೆ ಹಿಡಿದುಕೊಂಡು ಜನತೆಗೆ ಊಟ ನೀಡಲು ಹೊರಟ ಸತಿ ನಾಗಮ್ಮಳ ಚಿತ್ರವನ್ನು ಈ ಪದ್ಯ ಹಿಡಿದಿಟ್ಟುಕೊಂಡಿದೆ. ವಿಜಯನಗರಕ್ಕೆ ಭೇಟ್ಟಿಕೊಟ್ಟ ಸೀಜರ ಫ್ರೆಡರಿಕನು ಸತಿಹೋಗುವವಳು ಚಿತೆಯ ಸ್ಥಾನ ಮುಟ್ಟಿದ ಮೇಲೆ ಸತಿ ಮೊದಲ್ಗೊಂಡು ಅವಳೊಡನೆ ಬಂದವರೆಲ್ಲರೂ ಊಟ ಮಾಡಿ ಸ್ವಲ್ಪ ಕಾಲ ಹಾಡುತ್ತ ಕುಣಿಯುತ್ತ ಸಂತೋಷವಾಗಿರುತ್ತಾರೆಂದು ತಿಳಿಸುವುದನ್ನು ಇಲ್ಲಿ ಸ್ಮರಿಸಬಹುದು.[98]

ಕೊಂಡದಲ್ಲಿ ಬೀಳಲಿರುವ ಸತಿಯನ್ನು 'ತೆರ' ಕ್ಕಾಗಿ ತಡೆಯುತ್ತಿರುವ ಚಿತ್ರ ವಡ್ಡಗೆರೆ ನಾಗಮ್ಮ, ಮಹಾಸತಿ ಕಾಟವ್ವ ಹಾಡುಗಳಲ್ಲಿ ಸಿಗುತ್ತದೆ.[99] ನಾಗಮ್ಮನ ಕೊಂಡದ ಸುತ್ತ ಅವಳ ತವರವರು ತೆರಕ್ಕಾಗಿ ನಿಂತಿರುವ ವಿಷಯವನ್ನು ತಿಳಿಸುವ ಪದ್ಯ ವೊಂದು ಹೀಗಿದೆ :

ಕೊಂಡ ಸುತ್ತಮುತ್ತ ಂಯಾಕೆ ನಿಂತಾರಿರಿಯಾರು
ಗಂಡುಳ್ಳದೇವನಿಲ್ಲಾಳೆ । ನಾಗಮ್ಮನ
ಕೊಂಡ ತಡವರೆ ಎಲಿಯಾರು 0

ಅಷ್ಟೇ ಅಲ್ಲ, ನಾಗಮ್ಮಳ ತೆರವಿಗಾಗಿ ಅವರು 'ಉದ್ದಿನಹೊಲ' ದಾಗ ಗುದ್ದಾಡುವುದನ್ನು ಜನಪದ ಕವಿ ಮುಂದೆ ತಿಳಿಸುತ್ತಾನೆ. ಆಗ ನಾಗಮ್ಮ "ಗುದ್ದಾಡಬ್ಯಾಡ್ರಿ, ಮುಡದಿ ಬೀಳಲಿಬೇಡಿ ನೆರಗೊಡ್ಡಿ ಬನ್ನಿ ಎಲಿಯಾರು । ಮರಿಗ್ಯಾತ@ ಪಡಿವನ್ನು ಸೂರು ಬಿಡುತಾನೆ" ಎಂದು ಹೇಳುವ ಮಾತುಗಳು ಅಭಿಮಾನವನ್ನುಂಟು ಮಾಡುತ್ತವೆ. ಗುದ್ದಾಡಿ

---

0 'ಎಲಿಯಾರ' ಎಂಬುದು ನಾಗಮ್ಮನ ತವರು ಮನೆಯ ಅಡ್ಡಹೆಸರು.

@ 'ಮರಿಗ್ಯಾತ' ಬಹುಶಃ ನಾಗಮ್ಮನ ಮಾವನಾಗಿರಬೇಕು.

ಸತ್ತುಹೋಗುವುದಕ್ಕಿಂತ 'ಸೆರೆಗೊಡ್ಡಿ' ಮಾವನ ಮನೆಯವರಿಂದ ಪಡಿಹೊನ್ನು ತಗೆದು ಕೊಂಡು ಹೋಗಿರಿ ಎಂದು ತನ್ನ ತವರವರಿಗೆ ಅವಳು ವಿವೇಕದ ದಾರಿಯನ್ನು ಸೂಚಿಸುತ್ತಾಳೆ. 'ಮಹಾಸತಿ ಕಾಟವ್ವ' ಗೀತೆಯಲ್ಲಿಯೂ ಅವಳ ಕೊಂಡದ ಸುತ್ತ ಮುರುಬಿನಲ್ಲಿ ಆಯುಧ ವನ್ನು ಇಟ್ಟುಕೊಂಡು ಅವಳ ಅಣ್ಣಂದಿರು 'ತೆರವಿ'ಗಾಗಿ ಅವಳ ಕೊಂಡ ಪ್ರವೇಶವನ್ನು ತಡೆಯಲೆತ್ನಿಸಿದಾಗ, ಅವಳು ''ಸೆರೆಗೊಡ್ಡಿಬೇಡೋ ಇರಿಯಣ್ಣ ನಮ್ಮಾವ್ರುಗಳು ಪಡಿವ್ಹೊನ್ನು ಸೂರೆ ಬಿಡುತಾರೆ'' ಎಂದು ಹೇಳುವುದನ್ನು ಕಾಣುತ್ತೇವೆ. ಬಹುಶ: ಸತಿಕೊಂಡ ಬೀಳಲಿರುವ ಪೂರ್ವದಲ್ಲಿ 'ಕನ್ಯಾಶುಲ್ಕ'ದ ರೀತಿಯಲ್ಲಿ ತವರುಮನೆಯವರು ಗಂಡನ ಮನೆಯವರಿಂದ 'ತೆರ' ತಗೆದುಕೊಳ್ಳುವುದನ್ನು ಈ ಮೇಲಿನ ಗೀತೆಗಳು ಸೂಚಿಸುವಂತೆತೋರುತ್ತವೆ.

ಸತಿಯ ಮೆರವಣಿಗೆಯಲ್ಲಿ ಬಂಧು — ಬಳಗದೊಂದಿಗೆ ಮೆರೆಯುವ ವಿಷಯ ವನ್ನು ಹಲವು ವಿದೇಶಿ ಪ್ರವಾಸಿಗರು ಬಣ್ಣಿಸಿದ್ದಾರೆ. ಕರ್ನಾಟಕಕ್ಕೆ ಭೇಟಿಕೊಟ್ಟ 'ಸೀಜರ ಫ್ರೆಡರಿಕ' 'ಮಾನುಯೆಲ ಬರ್ರಾಡಾಸ' ಪಿಯತ್ರೊ ದೆಲ್ಲಾವಲ್ಲೆ — ಈ ಪ್ರವಾಸಿಗರು ತಾವು ಕಂಡ ಸತಿಪ್ರಸಂಗಗಳನ್ನು, ಅವುಗಳಲ್ಲಿ ಭಾಗವಹಿಸುತ್ತಿದ್ದ ಬಂಧು ವರ್ಗದವರನ್ನು ವರ್ಣಿಸುತ್ತಾರೆ.[100] ಬ್ರಾಹ್ಮಣರು ಸತಿಘಟನೆಗಳ ಕಾಲಕ್ಕೆ ಮುಖ್ಯಪಾತ್ರ ವಹಿಸುತ್ತಿದ್ದುದನ್ನು 'ಮಾನುಯೆಲ ಬರ್ರಾಡಾಸ' ತಿಳಿಸುತ್ತಾನೆ. ಗಿಂಯಕ್ಕವು ಸತಿಹೋಗಲು ಕನ್ನಡಿ, ಲಿಂಬೆ — ಹಣ್ಣುಗಳನ್ನು ಕೈಯಲ್ಲಿ ಹಿಡಿದುಕೊಂಡು, ಕುದುರೆಯ ಮೇಲೆ ಕುಳಿತು ಮಾವ, ವಾರಗಿತ್ತಿಯರು, ತನ್ನ ಇಬ್ಬರು ಚಿಕ್ಕಮಕ್ಕಳು ಹಾಗೂ ಊರಜನರು — ಹೆಂಗಸರು, ಗಂಡಸರು — ಇವರೊಡನೆ ಮೆರವಣಿಗೆಯಲ್ಲಿ ಹೋಗುವ ಚಿತ್ರವನ್ನು ಪಿಯತ್ರೋ ದೆಲ್ಲಾವಲ್ಲೆ ಒದಗಿಸುತ್ತಾನೆ.

ಆನಂದಕಂದರು ''ಕಂಕಣದ ಕೈ' ಎಂಬ ಐತಿಹಾಸಿಕ ಕಥೆಯೊಂದರಲ್ಲಿ ನಾಗಲಬ್ಬೆಯ ಸತಿಪ್ರಸಂಗವನ್ನು ತುಂಬ ಸುಂದರವಾಗಿ ಚಿತ್ರಿಸಿದ್ದಾರೆ. ''ಹಳ್ಳಿಯ ತೆಂಕಣ ಭಾಗದ ರುದ್ರ — ಭೂಮಿಯಲ್ಲಿ, ಸತಿಗಾಗಿ ಚಿತೆಯ ಸಿದ್ಧತೆ ನಡೆದಿದೆ. ಸುದ್ದಿ ತಿಳಿದ ಆ ಭಾಗದ ಜನರೆಲ್ಲ — ಹುಡುಗರು, ಮುದುಕರು ಎನ್ನದೆ — ಬಂಧು, ನೆರವಿ — ನೆರವಿಯಾಗಿ ಸುತ್ತುಗಟ್ಟಿ ನಿಂತಿದ್ದಾರೆ. ಎಲ್ಲೆಲ್ಲಿಯೂ ಗುಣುಗುಣು ಗಜಿಬಿಜಿ......... ಚಿತೆಗೆ ಸಮೀಪವಾಗಿ ನೂರಾರು ಜನ

ಸುಮಂಗಲೆಯರು ಸತಿಯ ಕೊನೆಯ ದರ್ಶನಕ್ಕಾಗಿ ಕುತೂಹಲಿಗಳಾಗಿ ನಿಂತಿದ್ದಾರೆ.[101] ಈ ರೀತಿ ಐತಿಹಾಸಿಕ ಘಟನೆಯೊಂದನ್ನು ಕಥೆಯ ರೂಪದಲ್ಲಿ ಚಿತ್ರಿಸುವಲ್ಲಿ ಆನಂದಕಂದರು ತುಂಬ ಯಶಸ್ವಿಯಾಗಿದ್ದಾರೆ. ಸತಿಯ ದರ್ಶನಕ್ಕಾಗಿ ಸುಮಂಗಲೆಯರು ನೆರೆದುಕೊಂಡಿದ್ದನ್ನು ಕಥೆಗಾರರು ಇಲ್ಲಿ ತೋರಿಸಿದ್ದಾರೆ. ಶಿಕಾರಿಪುರದ ಬಳ್ಳಿಗಾವೆಯಲ್ಲಿಯ ವೀರಗಲ್ಲೊಂದರ ಶಿಲ್ಪದಲ್ಲಿ ಸುಮಂಗಲೆಯರು ಸತಿಕೊಂಡದ ಪಕ್ಕದಲ್ಲಿ ನಿಂತಿರುವಂತೆ ಶಿಲ್ಪ ಕಂಡರಿಸಿರುವುದನ್ನು ಇಲ್ಲಿ ಸ್ಮರಿಸಬಹುದು ( ಚಿತ್ರ 4 ) ಆದರೆ ಇವೆಲ್ಲವುಗಳಿಂದ ಭಿನ್ನವಾದ ಸಂಗತಿಯೊಂದನ್ನು ಅಂಕೋಲೆಯ ಬಂಡಿಹಬ್ಬದಂದು ಕಾಣುತ್ತೇವೆ. ಅಂದು ಅಡುಕಟ್ಟೆಯಲ್ಲಿ ಸತಿ ಅಗ್ನಿಪ್ರವೇಶ ಮಾಡುವುದನ್ನು ಅಡಿ ತೋರಿಸುತವಾಗ, ಸುಮಂಗಲೆಯರು ಅದನ್ನು ನೋಡಬಾರದು ಎಂದು ಅಲ್ಲಿಯ ಜನ ನಂಬಿಕೊಂಡು ಆಚರಿಸುತ್ತ ಬಂದಿರುವುದು ವಿಶೇಷವಾಗಿದೆ. ಆ ಹಬ್ಬದ ರಾತ್ರಿಯಲ್ಲಿ ಮಾಸ್ತಿಮುಖವಾಡ ಹಿಡಿದ ಪೂಜಾರಿ ತನ್ನ ಸಂಗಡಿಗರೊಂದಿಗೆ ಕುಣಿಯುತ್ತ ಕೊಂಡದಲ್ಲಿ ಪ್ರವೇಶಿಸುವುದು, ಹಿಂದೆ ಮೃತನ ಪತ್ನಿ ತನ್ನವರೊಡನೆ ಮೆರವಣಿಗೆಯಲ್ಲಿ ಕುಣಿಯುತ್ತ ಅಗ್ನಿಪ್ರವೇಶ ಮಾಡಿದ್ದನ್ನು ಜ್ಞಾಪಿಸುತ್ತದೆ.

(2) <u>ಸತಿ ಮರಣದ ನಂತರ ಆಚರಿಸಲ್ಪಡುತ್ತಿದ್ದ ವಿಧಿಗಳು:</u>

ಮೃತನ ಪತ್ನಿ ಸತಿಹೋದ ಮೇಲೆ ಅವಳ ಬಂಧುವರ್ಗದವರು ಕೆಲವು ಕಾರ್ಯಾಚರಣೆಗಳನ್ನು ನೆರವೇರಿಸುತ್ತಿದ್ದರು. ಅವರು ಸತಿಕಲ್ಲುಗಳನ್ನು ನೆಡುತ್ತಿದ್ದರು, ಗುಡಿಗಳನ್ನು ಕಟ್ಟಿಸುತ್ತಿದ್ದರು. ಗದ್ದುಗೆಗಳನ್ನು ನಿರ್ಮಿಸುತ್ತಿದ್ದರು. ಭೂಮಿ — ಸೀಮೆಗಳನ್ನು ಬಿಟ್ಟು — ಕೊಡುತ್ತಿದ್ದರು. ಅಷ್ಟೇ ಅಲ್ಲದೆ, ಅವಳ ಸ್ಮಾರಕಗಳನ್ನು ಪೂಜಿಸಿ ಸತಿ ಆರಾಧನಾ ಪರಂಪರೆಗೆ ದಾರಿ ಮಾಡಿಕೊಡುತ್ತಿದ್ದರು. ದುರ್ದೈವದಿಂದ ಸತಿ ಮರಣದ ತ್ವರಿತದಲ್ಲಿಯೇ ಅವಳಿಗಾಗಿ ನಿರ್ವಹಿಸುತ್ತಿರಬಹುದಾದ ಧಾರ್ಮಿಕ ಕಾರ್ಯಾಚರಣೆಗಳ ವಿವರಣೆಗಳು ಕರ್ನಾಟಕದಲ್ಲಿ ಈಗಿರುವ ಸತಿ ಆಕರಗಳಲ್ಲಿ ಹೆಚ್ಚು ನಿರೂಪಣೆಗೊಂಡಿಲ್ಲ. ರಾಜಸ್ಥಾನದಲ್ಲಿ, ಇಂದಿಗೂ ಆಗಾಗ ಸತಿಘಟನೆಗಳು ಜರುಗುವುದನ್ನು ಕಾಣುತ್ತೇವೆ. ಅಲ್ಲಿ ಸತಿಹೋದ ಹನ್ನೆರಡನೆಯ ದಿನಗಳಿಗೆ '' ಚುನರಿ '' ಎಂಬಂಥ ಧಾರ್ಮಿಕ ಮಹೋತ್ಸವವನ್ನು ಒಳ್ಳೆಯ ಉತ್ಸಾಹ — ಸಡಗರದಿಂದ ಆಚರಿಸುತ್ತಾರೆ.[102] ಇಂಥ ಸ್ವರೂಪದ ಧಾರ್ಮಿಕ ವಿಧಿ ವಿಧಾನಗಳು ಕರ್ನಾಟಕದಲ್ಲಿಯೂ

ಸತಿಹೋದ ನಂತರದಲ್ಲಿ ಜರುಗುತ್ತಿದ್ದಿರಬೇಕು. ಆದರೆ ಅವಾವೂ ಈಗ ದೊರಕುವ ಸ್ಥಿತಿ ಇಲ್ಲ. ಸತಿ ಮರಣದ ನಂತರ ಸತಿ ಆರಾಧನೆ ಕರ್ನಾಟಕದಲ್ಲಿ ತುಂಬ ಉನ್ನತಮಟ್ಟದಲ್ಲಿ ಬೆಳೆದುಬಂದದ್ದನ್ನು ಮಾತ್ರ ಗುರುತಿಸಬಹುದಾಗಿದೆ. ಈ ಕಾರಣದಿಂದಾಗಿಯೇ ಸತಿ ಮರಣದ ನಂತರ ಆಚರಿಸಲ್ಪಡುತ್ತಿದ್ದ ವಿಧಿಗಳಲ್ಲಿ, ಮೊದಲು ''ಸತಿಮರಣ ನಂತರದ ತ್ವರಿತ ವಿಧಿ'' ಗಳನ್ನು ವಿವರಿಸಿ, ಆಮೇಲೆ ಸತಿ ಆರಾಧನೆಯನ್ನು ದೀರ್ಘವಾಗಿ ನಿರೂಪಿಸಲಾಗುವುದು.[103]

(ಅ) ಸತಿ ಮರಣ ನಂತರದ ತ್ವರಿತ ವಿಧಿಗಳು: ಮೃತನ ಪತ್ನಿ ಸತಿಯಾಗುವವರೆಗೆ ಅವಳು ಮತ್ತು ಅವಳ ಬಂಧುಗಳು ಪೂರೈಸುತ್ತಿದ್ದ ಕಾರ್ಯಗಳನ್ನು ಕವಿಗಳು, ವಿದೇಶಿ ಪ್ರವಾಸಿಗರು ಸಾಧ್ಯವಾದ ಮಟ್ಟಿಗೆ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಆದರೆ ಅವಳ ಸತಿಮರಣದ ನಂತರ ನಡೆಯುತ್ತಿರಬಹುದಾದ ಕಾರ್ಯಾಚರಣೆಗಳ ಬಗ್ಗೆ ಇವರೆಲ್ಲರೂ ಮೌನವಾಗಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಸಾಮಾನ್ಯವಾಗಿ ಅವು ಶಾಸ್ತ್ರರೀತ್ಯ ಜರುಗುತ್ತಿದ್ದ ವಿಧಿ ವಿಧಾನಗಳಾಗಿದ್ದರಿಂದ ಸಹಜವಾಗಿ ಅವರ ಗಮನವನ್ನು ಅವು ಸೆಳೆದಂತಿಲ್ಲ.

ಕುಮಾರವ್ಯಾಸನು ಮಾತ್ರ ಕರ್ನಾಟಕದ ಅಂದಿನ ಜನತೆ ಸಹಗಮನದ ಅನಂತರ ಜರುಗಿಸುತ್ತಿದ್ದಿರಬಹುದಾಗಿದ್ದ ವಿಧಿನಿಯಮಗಳಲ್ಲಿಯ ಒಂದು ಎಳೆಯನ್ನು ತನ್ನ ಭಾರತ ಕಥೆಯಲ್ಲಿ ಒದಗಿಸಿದ್ದಾನೆ. ಅವನು ಮಾದ್ರಿ ಪಾಂಡುವಿನೊಡನೆ ಸಹಗಮನ ಮಾಡಿ — ದೊಡನೆಯೇ ''ಐವರು ಸುತರು ಸಹಿತ ಕುಂತಿ ಮಿಂದು ಪರೇತ ಕೃತ್ಯವನು ಶ್ರುತಿ ವಿಧಾನದೊಳಖಿಳ ಮುನಿ ಸಂತತಿಗಳನು ಮುಂದಿಟ್ಟು ಮಾಡಿಸಿ''ದಳು ಎಂದು ವರ್ಣಿಸಿದ್ದಾನೆ.[104] ಕುಂತಿ ಐವರು ಮಕ್ಕಳು ಸಮೇತ ಸ್ನಾನ ಮಾಡಿ, ಮುನಿಕುಲದವರ ಸಮುಖ್ಖದಲ್ಲಿಯೇ ಶ್ರುತಿಗಳು ಹೇಳಿದಂತೆ ''ಪರೇತ ಕೃತ್ಯ'' ( ಶವಸಂಸ್ಕಾರ ಕಾರ್ಯ ) ವನ್ನು ಮಾಡಿಸಿದಳು, ಎಂಬ ಚಿತ್ರ ಇಲ್ಲಿದೆ. ಬಹುಶಃ ಅಂದಿನ ಕಾಲದಲ್ಲಿ ಸಹಗಮನದ ನಂತರದಲ್ಲಿ ಶ್ರುತಿ ನಿಯಮಗಳಿಗನುಸಾರವಾಗಿ ಕೆಲವು ವಿಧಿಗಳನ್ನು ಮಾಡುತ್ತಿದ್ದಿರಬೇಕು. ಅದನ್ನು ಮಹಾಕವಿ ಇಲ್ಲಿ ಸಂಕ್ಷಿಪ್ತವಾಗಿ ಹೇಳಿಬಿಟ್ಟಿದ್ದಾನೆ.

'ಮಹಾಸತಿ ವೀರತಿಮ್ಮವ್ವ' ಗೀತೆಯಲ್ಲಿ ತಿಮ್ಮವ್ವ ಸತಿಹೋಗುವಾಗ ಹೀಗೆ ಹೇಳುತ್ತಾಳೆ:[105]

ಅಳ್ಳಿ ಗೆಳತೇರು ಕೊಳ್ಳೇರಿ ನಿಮ್ಮಾಳ್ಯಾವ
ಒಳೊಳ್ಳೆ ಸಾದೆ ಬರಬೇಕು
ಒಳೊಳ್ಳೆ ಸಾದೆ ಬರಬೇಕು 1 ಬೈಗಿನಕಡೆಯ
ಉಳ್ಳಿಗುಗ್ಗಿಯ ತಿನಬೇಕು

ಅಟ್ಟೇಯ ಗೆಳತೇರು ಕೊಟ್ಟೇನು ನಿಮಗೇಳ್ಯಾವ
ಗಟ್ಟಿಕನ್ನ ಸಾದೆ ಬರಬೇಕು
ಗಟ್ಟಿಕನ್ನ ಸಾದೆ ಬರಬೇಕು1 ಬೈಗಿನ ಕಡೆಯ
ರೊಟ್ಟಿ ಗುಗ್ಗಿಯ ತಿನಬೇಕು

ಇಲ್ಲಿ ತಿಮ್ಮವ್ವ ಹಳ್ಳಿಯ ಮತ್ತು ಹಟ್ಟಿಯ ಗೆಳತಿಯರಿಗೆ ವೀಳ್ಯದೆಲೆ ಕೊಟ್ಟು ಕೊಂಡಕ್ಕೆ ಸಾದೆ ತರಲು ಹೇಳುತ್ತಾಳಲ್ಲದೆ, '' ಬೈಗಿನ ಕಡೆಯ ಉಳ್ಳಿಗುಗ್ಗಿಯ ತಿನಬೇಕು '', ''....... ರೊಟ್ಟಿಗುಗ್ಗಿಯ ತಿನಬೇಕು '' ಎಂದೂ ಹೇಳುತ್ತಾಳೆ. ಈ ಮಾತುಗಳಲ್ಲಿ ಸತಿಮರಣದ ನಂತರದಲ್ಲಿ ವಿಧಿಪೂರ್ವಕ ನಡೆಯುತ್ತಿದ್ದ ಯಾವುದೋ ಪ್ರಸಂಗದ ಚಿತ್ರಣವಿದೆ. ಬಹುಶಃ ಸತಿ ಕೊಂಡ ಬಿದ್ದ ನಂತರದಲ್ಲಿ, ವಿಧಿಬದ್ಧವಾಗಿ ಉಳ್ಳಿಗುಗ್ಗಿಯನ್ನೂ, ರೊಟ್ಟಿಗುಗ್ಗಿಯನ್ನೂ ಸಂಜೆಯಲ್ಲಿ ತಿನ್ನುತ್ತಿರಬೇಕು. ಅದನ್ನು ' ತಿಮ್ಮವ್ವ ' ತನ್ನ ಗೆಳತಿಯರಿಗೆ ಇಲ್ಲಿ ನೆನಪಿಸಿದಂತಿದೆ.

' ದೇಕಬ್ಬೆ ' ಸತಿಹೋಗುವಾಗ ಬಿಟ್ಟುಕೊಟ್ಟ ಭೂಮಿ — ಸೀಮೆಗಳನ್ನು ಮುಂದಿನ ವಂಶಸ್ಥರು ಪಾಲಿಸಿಕೊಂಡು ಬರುವಂತೆಯೂ, ಇಲ್ಲದಿದ್ದರೆ ಅವರು ನರಕಕ್ಕೆ ಹೋಗುವವೆಂದೂ ಬೆಳತೂರ ಶಾಸನ ವರ್ಣಿಸುತ್ತದೆ.[106] ಇದರಿಂದ ಸತಿಕೊಟ್ಟ ದಾನಧರ್ಮಗಳು ಅವಳ ಮರಣಾನಂತರವೂ ಪಾಲಿಸಿಕೊಂಡು ಬರಲಾಗುತ್ತಿತ್ತು ಎಂಬುದು ಸ್ಪಷ್ಟಗೊಳ್ಳುತ್ತದೆ. ನವಲಾಕ್ಷಿರಾಜನ ಪತ್ನಿ ಸತಿಹೋಗಲಾಗಿ ಅಳಿಗಿಯ ಹೋಳದೇವನು '' ಅವರ್ಗೆ ಬಿಟ್ಟಂ ಪೊಂಬೊಲ ಕಾಡಮ್ಮ ನೆರೆಯುಲು ನೂರ್ಗೞ್ಟದ ಮಣ್ಣು ಕೊಳ್ಗಿಣಗೆರೆಯುಲು ಪತ್ತು ಕೊಳಗ ಬೆದ್ದ ನಿಮ್ರ್ಗಣ್ಣಂ ಬಿಟ್ಟಂ '' ಎಂದು ಹೆಬ್ಬಲಗುಪ್ಪೆ ಶಾಸನ ವರ್ಣಿಸುತ್ತದೆ.[107] ಬಹುಶಃ ಮೃತರಾದ ನವಲಾಕ್ಷಿರಾಜ ಮತ್ತು ಅವನ ಪತ್ನಿ ಇವರಿಬ್ಬರಿಗೆ ಕೂಡಿಯೇ ದಾನ ಕೊಟ್ಟ ವಿಷಯ ಇದಾಗಿದೆ. ಪತಿ — ಸತಿಯರ ನೆನಪಿಗಾಗಿಯೋ, ಆ ವೀರಕಲ್ಲಿನ ರಕ್ಷಣೆಗಾಗಿಯೋ, ದೇವರಿಗೋ, ಇನ್ನಾರಿಗೋ ದಾನ ಬಿಟ್ಟ ಉಲ್ಲೇಖ ಇದಾಗಿರಬೇಕು. ಶಾಸನದಲ್ಲಿ ಈ ಕುರಿತು ಸ್ಪಷ್ಟತೆ ಇಲ್ಲ.

(ಅ) ಸತಿ ಆರಾಧನೆ : ‘ ಆರಾಧನೆ ’ ಎಂದರೆ ಪೂಜೆ, ಉಪಾಸನೆ ಎಂದರ್ಥ. ಪ್ರಪಂಚದಾದ್ಯಂತ ದೇವ — ದೇವತೆಗಳ ಆರಾಧನೆ ಸಹಜವಾಗಿ ಆಚರಣೆಯಲ್ಲಿದೆ. ಸ್ತ್ರೀದೇವತಾ ಪೂಜೆಯಂತೂ ಪ್ರಾಚೀನ ನಾಗರಿಕತೆಗಳಿಂದಲೂ ಬೆಳೆದುಬಂದಿರುವುದನ್ನು ಗುರುತಿಸಬಹುದಾಗಿದೆ. ಭಾರತವು ಈ ಮಾತುಗಳಿಗೆ ಹೊರತಾಗಿಲ್ಲ. ಶಕ್ತಿ ಉಪಾಸನೆಯ ಮೂಲವನ್ನು ದ್ರಾವಿಡ ಜನಾಂಗಗಳಲ್ಲಿಯೇ ಕಾಣುತ್ತೇವೆ. ಅಂದಿನಿಂದ ಇಂದಿನವರೆಗೂ ಶಕ್ತಿ ಉಪಾಸನೆ ನಾನಾ ವಿಧಗಳಲ್ಲಿ ಸಾಗಿಕೊಂಡು ಬಂದಿದೆ. ‘‘ಋಗ್ವೇದದಲ್ಲಿ ಸುಮಾರು 40 ಕ್ಕೂ ಹೆಚ್ಚು ಹೆಣ್ಣು ದೇವತೆಗಳ ವಿಚಾರ ಬರುತ್ತದೆ. ಅದಿತಿ, ಪೃಥ್ವಿ, ಉಷಸ್, ಸರಸ್ವತಿ, ಕಾಳಿ, ಲಕ್ಷ್ಮಿ, ಮೊದಲಾದವರು ಆ ಗುಂಪಿನಲ್ಲಿ ಮುಖ್ಯರು’’ [108] ರಾಮಾಯಣ — ಮಹಾಭಾರತಗಳಲ್ಲಿ ಲಕ್ಷ್ಮಿ, ಸರಸ್ವತಿ, ಪಾರ್ವತಿ, ವೇದಶ್ರುತಾ, ಸುರಸಾ, ಕೃಷ್ಣೆ, ಈ ಮೊದಲಾದ ಆರ್ಯ ಸ್ತ್ರೀ ದೇವತೆಗಳು, ಶಬರಿ, ಪುಳಿಂದೆ, ಬರ್ಬರಿ, ನಷ್ಟ ಶಬರಿ, ಅಪರ್ಣಾ ಈ ಮೊದಲಾದ ಅನಾರ್ಯ ಸ್ತ್ರೀ ದೇವತೆಗಳು ಉಲ್ಲೇಖಗೊಂಡಿದ್ದಾರೆ, ಪುರಾಣಗಳ ಕಾಲಕ್ಕೆ ಬಂದರೆ ಶಕ್ತಿ ಉಪಾಸನೆ ಇನ್ನೂ ವ್ಯಾಪಕ ಸ್ವರೂಪ ಪಡೆಯಿತು. ಹೀಗೆ ಸ್ತ್ರೀಯನ್ನು ದೇವಿ, ಶಕ್ತಿ ಎಂದು ಪೂಜಿಸುತ್ತ ಬಂದ ಭಾವನೆ ಬಹು ಪುರಾತನವಾದದ್ದು.

ದಕ್ಷಿಣ ಭಾರತದಲ್ಲಿ ಇಂದು ಹಲವು ಸ್ತ್ರೀ ದೇವತೆಗಳ ಉಪಾಸನೆಯನ್ನು ಕಾಣಬಹುದಾಗಿದೆ. ಮಹಾರಾಷ್ಟ್ರದಲ್ಲಿ ಕೊಲ್ಲಾಪುರ ಲಕ್ಷ್ಮಿ, ಕಾಲಿ ಮುಮ್ಮಾಯಿ, ಅಂಬಾಭವಾನಿ, ಜೋಗೇಶ್ವರಿ, ಅಂಬೆಜೋಗಾಯಿಯಂಥವರೂ, ಆಂಧ್ರದಲ್ಲಿ ಸಂಕಲಮ್ಮ, ಸಮಾರಮ್ಮ, ಮಾವಲಮ್ಮ, ಮುತ್ಯಾಲಮ್ಮ, ನಕುಲಮ್ಮ, ಚಾವಲಮ್ಮ, ಪೆದ್ದಮಾರಮ್ಮ, ರಾಮುಚಂದ್ರ — ಮ್ಮನವರು, ತಮಿಳುನಾಡಿನಲ್ಲಿ ಎಲ್ಲಮ್ಮ, ಮಾರಿಯಮ್ಮ, ಅಂಕಲಮ್ಮ, ಭದ್ರಕಾಳಿ, ದುರ್ಗಾ, ಪುರವೈ, ಪುದುಕುಲೈ, ನೀಡಾರಮ್ಮನವರು ಪೂಜೆಗೊಳ್ಳುತ್ತಿದ್ದಾರೆ. ಅದೇ ರೀತಿ ಕರ್ನಾಟಕದಲ್ಲಿ ಮೈಸೂರಿನ ಚಾಮುಂಡಿ, ಸವದತ್ತಿಯ ಎಲ್ಲಮ್ಮ, ಅಯ್ಯಾಹೊಳೆಯ ದುರ್ಗಿ, ಶಿರಸಿಯ ಮಾರಿಕಾಂಬೆ, ಕಾಳಿ, ಲಕ್ಷ್ಮಿ, ಕನ್ಯಕಾ ಪರಮೇಶ್ವರಿ, ಲಕ್ಕವ್ವ, ಹುಲಗೆಮ್ಮ, ಕೋಟೆಮ್ಮ, ಮರಗಮ್ಮ, ಚಿಟಗೆಮ್ಮ, ಪೋತಮ್ಮ, ಮಾಳವ್ವ, ಸಟಿಗವ್ವ, ಮುಸಣಿ, ಬನದಮ್ಮ, ಮಾಸ್ತಿ — ಈ ಮೊದಲಾದ ಸ್ತ್ರೀದೇವತೆಗಳ ಉಪಾಸನೆ ಇದೆ. ಹೀಗೆ

ದಕ್ಷಿಣ ಭಾರತದಲ್ಲಿ ಸ್ತ್ರೀದೇವತಾ ಉಪಾಸನೆ ಸಮೃದ್ಧವಾಗಿ ಬೆಳೆದು ಉಳಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಅದಕ್ಕಾಗಿಯೇ ವೈಟಹೆಡ್ ಅವರು " ಪುರುಷದೇವತೆಗಳ ಆರಾಧನೆಯನ್ನು ಇಲ್ಲಿಯವರೆಗೆ ದಕ್ಷಿಣಭಾರತದಲ್ಲಿ ನಾನು ಗಮನಿಸಿಲ್ಲ. ಆ ದೇವರಗಳು ಗ್ರಾಮದೇವತೆಯ ಆಳುಗಳಾಗಿಯೋ, ಅವಳ ಸೋದರ ವರ್ಗದವರಾಗಿಯೋ ಪರಿಗಣಿಸಲ್ಪಡು-ತ್ತಾರೆ. ಆದರೆ ಅವರಿಗೆ ಸ್ವತಂತ್ರ ವ್ಯಕ್ತಿತ್ವದ ಪೂಜೆ ಇಲ್ಲ "[109] — ಎಂದು ಬರೆಯುವಂತಾಯಿತು. ಈ ಸ್ತ್ರೀ ದೇವತೆಗಳಲ್ಲಿ ಧಾರ್ಮಿಕ, ಪೌರಾಣಿಕ, ಐತಿಹಾಸಿಕ ವ್ಯಕ್ತಿಗಳು ಇರುವುದು ಕಂಡುಬರುತ್ತದೆ. ಈ ದೃಷ್ಟಿಯಿಂದ ಮಾಸ್ತಿ ( ಸತಿ ) ದೇವತೆ ಐತಿಹಾಸಿಕ ವ್ಯಕ್ತಿಗಳ ಗುಂಪಿಗೆ ಸೇರಿದವಳಾಗುತ್ತಾಳೆ. ರಾಜಸ್ತಾನದ ಝುಂಝುನುವಿನ ( Jhunjhunu ) ದಲ್ಲಿಯ ' ಸತಿದೇವಿ ' ಭಾರತದಲ್ಲಿಯೇ ತುಂಬ ಪ್ರಸಿದ್ಧಿ ಪಡೆದ ಐತಿಹಾಸಿಕ ಸ್ತ್ರೀ ದೇವತೆಯಾಗಿದ್ದಾಳೆ.[110]

ಕರ್ನಾಟಕದಲ್ಲಿ ಸತಿಹೋದ ಸ್ತ್ರೀಯರ ಸ್ಮಾರಕಗಳು ಸಾಮಾನ್ಯವಾಗಿ ಎಲ್ಲ ಭಾಗಗಳಲ್ಲಿದ್ದು ಅವುಗಳ ಆರಾಧನೆ ಜನತೆಯಲ್ಲಿ ಉಳಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಸತಿಯು ಇಂದು ಗ್ರಾಮದೇವತೆಯಾಗಿ, ಕುಲದೇವತೆಯಾಗಿ, ಮನೆ—ದೇವತೆಯಾಗಿ ಪೂಜೆಗೊಳ್ಳುತ್ತಿದ್ದಾಳೆ. ಸತಿ ಆರಾಧನಾ ವಿಧಾನಗಳು, ಅವಳ ಕುರಿತಾಗಿರುವ ನಂಬಿಕೆ — ಪವಾಡ — ನಿರ್ಬಂಧನೆಗಳು, ಅವಳಿಗಾಗಿ ನಡೆಯುವ ಜಾತ್ರೆ — ಹಬ್ಬ — ಉತ್ಸವಗಳು ಇವೆಲ್ಲವುಗಳ ಅಧ್ಯಯನ ತುಂಬ ರೋಮಾಂಚನಕಾರಿಯಾಗಿದೆ. ಈ ಅಧ್ಯಯನದಿಂದ ಜನರ ಶ್ರದ್ಧೆ — ವಿಶ್ವಾಸಗಳು, ಪ್ರೀತಿ — ಆದರಗಳು, ಭಯ — ಭಕ್ತಿಗಳು, ಊಹೆ — ಕಲ್ಪನೆಗಳು, ಮೌಢ್ಯ — ಅಂಧತೆಗಳು ಗೋಚರಿಸುತ್ತವೆ. ಅಲ್ಲದೆ ಇವೇ ಸತಿ ಆರಾಧನೆಯ ಹುಟ್ಟು ಬೆಳವಣಿಗೆ — ಉಳಿಕೆಗೆ ಕಾರಣಗಳೆಂಬುದೂ ಮನವರಿಕೆಯಾಗುತ್ತದೆ.

(1) <u>ಸತಿ-ಗ್ರಾಮದೇವತೆ :</u> ಮಾಸ್ತಿಯು ಗ್ರಾಮವೊಂದರಲ್ಲಿ ಪ್ರಧಾನವಾಗಿದ್ದು, ಇನ್ನುಳಿದ ದೇವಿ — ದೇವತೆಗಳು ಅಪ್ರಧಾನವಾಗಿದ್ದರೆ ಆಗ ಅವಳು ' ಗ್ರಾಮದೇವತೆ ' ಎನಿಸಿಕೊಳ್ಳುತ್ತಾಳೆ. ಜನಪದರು ಕೂಡ ಅವಳನ್ನೇ ಕೇಂದ್ರವಾಗಿರಿಸಿಕೊಂಡು ಬದುಕುತ್ತಿರುತ್ತಾರೆ. ಅವಳೇ ಗ್ರಾಮದ ದೈವ, ಜನಜೀವನದ ಹೃದಯವಾಗಿರುತ್ತಾಳೆ. ಕೊರಟಗೆರೆಯ ವಡ್ಡಗೆರೆ, ಸಿರಸಿಯ ದೇವಿಮನೆ, ಅಂಕೋಲಾದ ಮಾಸ್ತಿಕಟ್ಟೆ, ಹೊಸನಗರದ ಮಾಸ್ತಿಕಟ್ಟೆ,

ಹೊನ್ನಾವರದ ಅನಿಲಗೋಡ, ಬಟ್ಕಳದ ಶಿರಾಲಿ, ಕಾರವಾರದ ಉಳ್ಗಾ , ಕುಷ್ಟಗಿಯ ಕಬ್ಬರಗಿ, ಹೊಸನಗರದ ಹುಲ್ಲುಕಲ್ಲು ಮತ್ತು ಕಾರವಾರದ ಸಿರಸಿ — ಈ ಮೊದಲಾದ ಊರುಗಳಲ್ಲಿ ಮಾಸ್ತಿದೇವತೆಯೇ ಮುಖ್ಯವಾಗಿರುವುದನ್ನು ಕಾಣಬಹುದಾಗಿದೆ.

ಸಿರಸಿಯಲ್ಲಿ ಮಾರಿಕಾಂಬೆಯ ಸ್ಥಾನ ಬಹುದೊಡ್ಡದಾಗಿದೆ. ಅವಳನ್ನು ಮಾರಿಯಮ್ಮ, ಶಿವಮ್ಮ, ಅಮ್ಮ, ಮಾದೇವಿ, ದುರ್ಗೆ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿದೆ. ''ಸಿರಸಿ ಸೀಮಮ್ಮ ಊರೀಗೇ ದೊಡ್ಡೋಳು ಎಂದು ಕೆಲವರು ಇವಳನ್ನು ದೊಡ್ಡಮ್ಮನೆಂದೇ ಕರೆಯುವರು''.[111] ಸುಂದರ ಹೊಲೆಯ ಯುವಕನೊಬ್ಬ ಬ್ರಾಹ್ಮಣ ಕನ್ಯೆಯನ್ನು ಮೋಸದಿಂದ ಮದುವೆಯಾಗಿ ಸಂತಾನ ಪಡೆದ ಮೇಲೆ, ಆ ಕನ್ಯೆಗೆ ತನ್ನ ಗಂಡ ಮೋಸ ಮಾಡಿದ್ದು ತಿಳಿದು ಅವನನ್ನು ಕೊಂದು ದೇಹವನ್ನು ಚಿತೆಯಲ್ಲಿ ಒಗೆದು ತಾನೂ ಚಿತೆ ಏರಿ ಮಹಾಸತಿಯಾದವಳೇ ಈಗ ಮಾರಿಕಾಂಬೆಯ ರೂಪದಲ್ಲಿ ಆರಾಧಿಸಲ್ಪಡುತ್ತಿದ್ದಾಳೆ. ಮಾರಿಯ ಗುಡಿಗಳು ಸಾಮಾನ್ಯವಾಗಿ ನಾವು ಬಹುತರ ಹಳ್ಳಿಗಳಲ್ಲಿ ಕಾಣುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಮಾರಿಕಾಂಬೆ ಪ್ರಾಂತೀಯ ದೇವತೆ ಎನ್ನುವಷ್ಟರಮಟ್ಟಿಗೆ ಬೆಳೆದುನಿಂತವಳು. ಸಿರಸಿಯಲ್ಲಂತೂ ಅವಳು ದೊಡ್ಡ ಗುಡಿ ಹೊಂದಿದ್ದು ಹಬ್ಬ — ಉತ್ಸವಗಳಿಂದ ಸುತ್ತಲಿನ ಗ್ರಾಮಗಳಲ್ಲೆಲ್ಲಾ ಪ್ರಸಿದ್ಧಿ ಹೊಂದಿದ್ದಾಳೆ. ಇದೇ ರೀತಿ ಅಂಕೋಲೆಯ ಮಾಸ್ತಿಕಟ್ಟದಲ್ಲಿಯ ಮಹಾಸತಿಯೂ ಹಳ್ಳಿಗಷ್ಟೇ ಅಲ್ಲ, ಸುತ್ತಮುತ್ತಲೆಲ್ಲಾ ಪ್ರಚಾರವುಳ್ಳವಳಾಗಿದ್ದಾಳೆ. ಅಲ್ಲಿ ವೀರನ ಪತ್ನಿ ಸತಿಹೋಗಿ ಮಹಾಸತಿಯಾಗಿ ಪೂಜೆಗೊಳ್ಳುತ್ತಿದ್ದಾಳೆ. ಅವಳ ಪ್ರಭಾವ — ಮಹತ್ತಿನಿಂದ ಅಲ್ಲಿ ಗ್ರಾಮವೊಂದರ ನಿರ್ಮಾಣವಾಗಿದೆ. ಅಲ್ಲದೇ ಅದೇ ಗ್ರಾಮಕ್ಕೆ ಅವಳೇ ಪ್ರಮುಖ ದೇವತೆಯಾಗಿ ಆರಾಧಿಸಲ್ಪಡುತ್ತಿದ್ದಾಳೆ. ಇದೇ ರೀತಿಯ ಇತಿಹಾಸ ಹೊಸನಗರದ ಮಾಸ್ತಿಕಟ್ಟದ ಮಹಾಸತಿಗೂ ಇದೆ. ವಡ್ಡಗೆರೆ ಮಹಾಸತಿ ನಾಗಮ್ಮಳ ಕಥೆಯಂತೂ ತುಮಕೂರ, ಚಿತ್ರದುರ್ಗದ ಭಾಗಕ್ಕೆ ಪರಿಚಿತವಾಗಿದೆ. ಅವಳ ಕುರಿತು ಹಾಡುಗಳಿವೆ. ವಡ್ಡಗೆರೆಯಲ್ಲಿ ಅವಳಿಗೆ ಸುಂದರವಾದ ದೇವಾಲಯವಿದೆ. ''ತಾಡಿ'' ಯಲ್ಲಿ ಅವಳ ಚಿತ್ರವನ್ನು ಬಣ್ಣದಲ್ಲಿ ಬರೆದು ಪೂಜಿಸುವುದಂತೂ ಇನ್ನೂ ಅಪೂರ್ವವಾದುದು. ಅನಿಲಗೋಡದಲ್ಲಿ ಸತಿಹೋದ

ಕುಮಾರರಾಮನ ಪತ್ನಿಯರು ಮಹಾಸತಿಯರೆಂದು ಆರಾಧಿಸಿಕೊಳ್ಳುತ್ತಿದ್ದಾರೆ. ಆ ಗ್ರಾಮಕ್ಕೆ ಅವರು ಪೂಜ್ಯ ದೇವತೆಗಳು. 'ಉಳ್ಳಾಗ' ದ ಮಹಾಸತಿಯ ಪ್ರಭಾವ ಅಷ್ಟಿಷ್ಟಲ್ಲ. ಅವಳ ಕಾರಣದಿಂದಾಗಿಯೇ ಆ ಗ್ರಾಮ ತುಂಬ ಬೆಳೆದಿದೆ ಎಂಬ ಕಲ್ಪನೆ ಅವರಲ್ಲಿದೆ. ಅವಳ ಹೆಸರಿನಲ್ಲಿಯೇ ಕಾಲೇಜು ಕೂಡ ಇರುವುದನ್ನು ಇಲ್ಲಿ ಸ್ಮರಿಸಬಹುದು. ಕಬ್ಬರಗಿಯಲ್ಲಿ ಮಾಸ್ತ್ಯಮ್ಮನ ದೊಡ್ಡ ಗುಡಿ ಇದ್ದು, ಅವಳೇ ಊರಿಗೆ ಪ್ರಮುಖ ದೈವವಾಗಿದ್ದಾಳೆ. ದೇವಿಮನೆ, ಹುಲ್ಲುಕಲ್ಲು, ಶಿರಾಲಿ — ಈ ಊರುಗಳಲ್ಲಿಯೂ ಮಹಾಸತಿಯರದೇ ಪ್ರಮುಖಸ್ಥಾನವಿದೆ. ಹೀಗೆ ಮೃತನ ಪತ್ನಿ ಸತಿಹೋಗಿ ದೇವತಾರೂಪಪಡೆದು ಗ್ರಾಮವೊಂದರಲ್ಲಿ ಅಧಿದೈವವಾಗಿ ಆರಾಧಿಸಲ್ಪಡುವುದನ್ನು ಕಾಣಬಹುದಾಗಿದೆ.

2. <u>ಸತಿ-ಕುಲದೇವತೆ:</u> ಕರ್ನಾಟಕದಲ್ಲಿ ಹಲವು ಜಾತಿ — ಕುಲಗಳಿರುವುದು ಸಾಮಾನ್ಯ ಸಂಗತಿಯಾಗಿದೆ. ಆ ಜಾತಿ—ಕುಲಗಳಿಗೆ ಬೇರೆ ಬೇರೆ ದೇವತೆಗಳು ಉಂಟು. ಮಾಸ್ತಿದೇವತೆಯು ಹಲವು ಕುಲಗಳ ಮುಖ್ಯ ದೇವತೆಯಾಗಿ ಪೂಜಿಸಲ್ಪಡುವುದನ್ನು ಕರ್ನಾಟಕದಲ್ಲಿ ಕಾಣುತ್ತೇವೆ. ತಮ್ಮ ಕುಲದಲ್ಲಿ ಹುಟ್ಟಿ ಮಹಾಸತಿಯಾದವಳೆಂದು ಸಾಮಾನ್ಯವಾಗಿ ಅವರು ಗ್ರಹಿಸಿದ್ದಾರೆ. ಸೊರಟೂರಿನಲ್ಲಿ ( ಹೊನ್ನಾಳಿ ) ಮಾದಿಗರು, ಕಾನಮಡಗಿನಲ್ಲಿ ( ಕೂಡ್ಲಿಗೆ ) ಗೌಡರು, ಯರಬಳ್ಳಿಯಲ್ಲಿ ( ಹಿರಿಯೂರ ) ಗೊಲ್ಲರು, ಅರಿಕೇರಿಯಲ್ಲಿ ( ಶ್ರೀರಂಗ ಪಟ್ಟಣ ) ಗಂಗಮತಸ್ಥರು, ಗುತ್ತಲಿನಲ್ಲಿ ( ಮಂಡ್ಯ ) ತಮ್ಮಡಪ್ಪನವರು, ಬಟ್ಕಳದಲ್ಲಿ (ಕಾರವಾರ ) ಗೊಂಡರು, ಅಗಸನಹಳ್ಳಿಯಲ್ಲಿ ( ಬ್ಯಾಡಗಿ ) ಅಗಸರು, ಕುಪ್ಪೆಗ್ರಾಮದಲ್ಲಿ ( ಸೊರಬ ) ಮಡಿವಾಳರು, ಅಣೂರಿನಲ್ಲಿ ( ಬ್ಯಾಡಗಿ ) ಹರಿಜನರು, ಕುದುರೆಗೊಣಿ — ಗ್ರಾಮದಲ್ಲಿ ( ಸೊರಬ ) ಹರಿಜನರು, ಮಾಜಾಳಿಯಲ್ಲಿ ( ಕಾರವಾರ ) ಕುಮಾರಪಂಥದವರು — ಹೀಗೆ ಇವರೆಲ್ಲ ತಮ್ಮ ಕುಲದೇವತೆಯಾಗಿ 'ಮಾಸ್ತಮ್ಮ'ಳನ್ನು ಗುರುತಿಸುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಇಲ್ಲಿಯ ಜನಾಂಗದವರೆಲ್ಲ ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದಾರೆಂದು ಬೇರೆ ಹೇಳಬೇಕಾಗಿಲ್ಲ. ಕಾನಮಡಗಿನಲ್ಲಿಯ ಮಾಸ್ತಮ್ಮ ಗೊಲ್ಲರ ಹೆಣ್ಣುಮಗಳಾದರೂ ಗೌಡಜನರು ಅವಳನ್ನು ತಮ್ಮ ಕುಲದೇವತೆಯಾಗಿ ಸ್ವೀಕರಿಸಿದ್ದಾರೆ. ಅವಳು ತಮ್ಮ ಜನರಲ್ಲಿ '' ಬಂದು ಬಿದ್ದವಳು '' ಎಂದು ಅವರು ವಿವರಣೆ ಕೊಡುತ್ತಾರೆ. ಯರಬಳ್ಳಿಯಲ್ಲಿ ತಿಪ್ಪಮ್ಮನ [illegible] ಭಕ್ತರು ಗೊಲ್ಲರಿದ್ದು, ಅವರು ಬೆಳೆದದ್ದು — ಲಗ್ನವಾದುದು — ಸತಿಹೋದುದು ಈ

ಮೊದಲಾದ ವಿವರಣೆಯುಳ್ಳ ಹಾಡನ್ನು ಅವಳ ಕುರಿತಾಗಿ ಅವರು ಹಾಡುತ್ತಾರೆ. ಅರಕೇರಿಯ ಗಂಗಮತಸ್ಥರು ಮಾಸ್ತಿದೇವತೆಯನ್ನು ತಮ್ಮ ಕುಲದೈವವಾಗಿ ಸ್ವೀಕರಿಸಿ — ದ್ದಾರಲ್ಲದೆ ಅವಳ ಮೇಲಿನ ಭಕ್ತಿ — ಪ್ರೀತಿಗಳಿಗಾಗಿ ಅವಳ ಹೆಸರನ್ನು ತಮ್ಮ ಸಂತತಿಯವರಿಗೆ ಗಂಡು — ಹೆಣ್ಣು ಎನ್ನದೇ ಮಾಸ್ತಪ್ಪ, ಮಾಸ್ತವ್ವ, ಎಂದು ಇಡುತ್ತ ಬಂದಿದ್ದಾರೆ. ಬಟ್ಕಳದ ಕೋಕ್ತಿಕಟ್ಟೆಯ ಮಾಸ್ತಿದೇವತೆ ಗೊಂಡ ಜನಾಂಗದಲ್ಲಿ ತುಂಬ ಪ್ರಭಾವ ಬೀರಿದವಳು. ಈ ಜನಾಂಗದವರು ಅವಳ ಕುರಿತು ಹಲವು ಹಾಡುಗಳನ್ನು ಹೇಳುತ್ತಾರೆ. ಜಾತ್ರೆ — ಉತ್ಸವಗಳನ್ನು ನೆರವೇರಿಸುತ್ತಾರೆ. ಆಗಸನಹಳ್ಳಿಯಲ್ಲಿಯ ಮಾಸ್ತಮ್ಮಳನ್ನು ಸುಮಾರು ಎಂಭತ್ತು ಆಗಸರ ಮನೆಗಳು ತಮ್ಮ ಕುಲದೇವತೆಯಾಗಿ ಸ್ವೀಕರಿಸಿವೆ. ಆನವಟ್ಟಿ, ಸಮನಹಳ್ಳಿ, ವಡೆಯದೂರ ಮೊದಲಾದ ಊರುಗಳಲ್ಲಿಯ ಆಗಸರಿಗೂ ಇವಳೇ ಕುಲದೈವವಾಗಿದ್ದಾಳೆ. ಈ ಆಗಸನಹಳ್ಳಿಯ ಆಗಸರು ಮೂಲಬಳ್ಳಾರಿ ಕಡೆಯವರೆಂದು, ಇವರಿಗೆ ಇಲ್ಲಿದೆ ಮಾಸ್ತಮ್ಮಳೇ ಕರೆಯುಸಿಕೊಂಡಳೆಂದೂ ಹೇಳಲಾಗುತ್ತಿದೆ.

ಮಾಸ್ತಿದೇವತೆಯನ್ನು ಕುಲದೇವತೆಯಾಗಿ ಸ್ವೀಕರಿಸಿದ ಜನಾಂಗದವರು ಯಾವುದೇ ಶುಭಕಾರ್ಯ ಪ್ರಾರಂಭಿಸುವ ಮೊದಲು ಮಾಸ್ತಿದೇವಿಗೆ ತೃಪ್ತಿ ಪಡಿಸುವುದುಂಟು. ಅವರು ವರ್ಷಕ್ಕೊಮ್ಮೆಯಾದರೂ ಮಾಸ್ತಮ್ಮನಲ್ಲಿಗೆ ಹೋಗಿ ತಮ್ಮ ಭಕ್ತಿ ಅರ್ಪಿಸಿ ಬರಬೇಕು. ಅವರಲ್ಲಿ ತಮ್ಮ 'ಮಾಸ್ತಿಕುಲದೇವತೆ' ಎಲ್ಲರಿಂದಲೂ ಶ್ರೇಷ್ಠಳು ಎಂಬ ಭಾವ ಸಹಜವಾಗಿ ಮನೆಮಾಡಿಕೊಂಡಿದೆ.

3. <u>ಸತಿ — ಮನೆದೇವತೆ</u> : ಪ್ರತಿಯೊಂದು ಮನೆಗೆ ಮನೆದೈವವೊಂದು ಇರುವುದು ಸಾಮಾನ್ಯ ಸಂಗತಿಯಾಗಿದೆ. ಕರ್ನಾಟಕದಲ್ಲಿ ಸತಿ ಕೆಲವು ಮನೆಗಳಲ್ಲಿ ಮನೆದೇವತೆಯಾಗಿರುವುದನ್ನು ಗುರುತಿಸಬಹುದಾಗಿದೆ. ಶ್ರೀರಂಗಪಟ್ಟಣದಲ್ಲಿರುವ ವೀರಮಾಸ್ತಯ್ಯ ಮನೆಯವರು, ಗುತ್ತಲಿನಲ್ಲಿರುವ (ಮಂಡ್ಯ ) ಗಾಣಿಗ ಶೆಟ್ಟರ ಮನೆಯವರು, ಚಂದಾವರದಲ್ಲಿರುವ (ಹೊನ್ನಾವರ ) ಗುಡಿಗಾರ ಮನೆಯವರು, ಕೈದಾಳುಗ್ರಾಮದಲ್ಲಿರುವ ( ತುಮಕೂರು ) ಕೆ. ಆರ್. ಗಣೇಶ ಮನೆಯವರು, ಅಂಕೋಲೆಯಲ್ಲಿರುವ ಜಿ. ವಿ. ಬಗಳ ಮನೆಯವರು ಮಾಚನಹಳ್ಳಿಯಲ್ಲಿರುವ ( ತುಮಕೂರು ) ಕಟ್ಟಿಮನೆತನದವರು, ಶಿರಾಲಿಯಲ್ಲಿರುವ

(ಬಟ್ಕಳ) ಆರ್.ಎನ್.ಶೆಟ್ಟಿಯವರ ಮನೆಯವರು, ಅಗಸನಹಳ್ಳಿಯಲ್ಲಿರುವ (ಬ್ಯಾಡಗಿ) ಮಲ್ಲನಗೌಡರ ಮನೆಯವರು, ಕುಂಚನೂರಿನಲ್ಲಿರುವ (ಬೆಳಗಾವ) ಗೌಡರ ಮನೆಯವರು— ಇವರೆಲ್ಲರೂ ಸತಿ ದೇವತೆಯನ್ನು ತಮ್ಮ ಮನೆದೇವತೆಯಾಗಿ ತಿಳಿದು ಆರಾಧಿಸುತ್ತ ಬಂದಿದ್ದಾರೆ. ಶ್ರೀರಂಗಪಟ್ಟಣದ ವೀರಮಾಸ್ತಿಯಮ್ಮನವರ ಮನೆಯಲ್ಲಿ ಸತಿ ಸ್ಮಾರಕಗಳಾದ ಬಳೆ, ಸೀರೆ, ಕನ್ನಡಿ, ಕಳಸಗಳನ್ನು ಇಟ್ಟು ಪೂಜಿಸಿಕೊಂಡು ಬರಲಾಗುತ್ತಿದೆ. ಅವಳ ಹೆಸರಿನಲ್ಲಿ ಶ್ರೀರಂಗ— ಪಟ್ಟಣ, ಥಲ್ಲೀನಹಳ್ಳಿ ಮೊದಲಾದೆಡೆಗಳಲ್ಲಿ ಗುಡಿಗಳು ಇರುವುದನ್ನು ಕಾಣಬಹುದಾಗಿದೆ. ಗುತ್ತಲಿನ ಗಾಣಿಗಶೆಟ್ಟರು ಹಾಗೂ ಶಿರಾಲಿಯ ಆರ್.ಎನ್.ಶೆಟ್ಟಿಯವರು ತಮ್ಮ ಮನೆದೇವತೆ ಮಾಸ್ತಿಗೆ ಗುಡಿಗಳನ್ನು ಕಟ್ಟಿ ಪೂಜಿಸಿಕೊಂಡು ಬರುತ್ತಿದ್ದಾರೆ. ಚಂದಾವರದಲ್ಲಿ ಗುಡಿಗಾರರು ಪ್ರತಿವರ್ಷ ಉತ್ಸವದಲ್ಲಿ ಮಾಸ್ತಿವೇಷವನ್ನು ಹಾಕಿ ತಮ್ಮ ಮನೆದೇವತೆಯ ಸೇವೆ ಸಲ್ಲಿಸುತ್ತಾರೆ. ಕೈದಾಳು ಗ್ರಾಮದಲ್ಲಿ ತೋಪು — ಬೃಂದಾವನಗಳು ಸತಿಹೋದ ಲಕ್ಷ್ಮಿಯ ನೆನಪಿನಲ್ಲಿವೆ. ಇಂದಿಗೂ ಆ ವಂಶದಲ್ಲಿ ಹುಟ್ಟುವ ಹಿರಿಯ ಹೆಣ್ಣುಮಕ್ಕಳಿಗೆ ಲಕ್ಷ್ಮಿ ಎಂಬ ಭಾಗವಿರುವ ಹೆಸರನ್ನು ಇಡುವ ಪರಿಪಾಟಿ ಇದೆ. ಮತ್ತು ಯಾವುದೇ ಶುಭಕಾರ್ಯಕ್ಕೂ ಮೊದಲು ಬೃಂದಾವನಕ್ಕೆ ಪೂಜೆ ಅರ್ಪಿಸುವ ಪದ್ಧತಿ ಮುಂದುವರಿದುಕೊಂಡು ಬಂದಿದೆ.[112] ಅಂಕೋಲೆಯಲ್ಲಿ ಬಿಗಳರ ಮೂರು ಮನೆತನಗಳಿದ್ದು (ಜಿ.ವಿ. ಬಿಗಳ ಮನೆತನ ಮುಖ್ಯವಾದುದು) ಅವರಿಗೆಲ್ಲ ತಮ್ಮ ವಂಶದಲ್ಲಿ ಮೊದಲು ಸತಿಹೋಗಿದ್ದ 'ನೀಲಮ್ಮ'ಳನ್ನು ಮನೆದೇವತೆಯಾಗಿ ಸ್ವೀಕರಿಸಿಕೊಂಡು ಬರುತ್ತಿದ್ದಾರೆ. ಅಗಸನಹಳ್ಳಿಯಲ್ಲಿ ಮಲ್ಲನಗೌಡರು ತಮ್ಮ ವಂಶಸ್ಥಳೇ ಮಾಸ್ತ್ಯಮ್ಮಳೆಂದೂ, ಅವಳೇ ತಮ್ಮ ಮನೆದೇವತೆ ಎಂದು ಹೇಳುತ್ತಾರೆ. ಅದೇ ರೀತಿ ಕುಂಚನೂರಿನ ಗೌಡರ ಮನೆಯವರು ತಮ್ಮ ಮನೆದೇವತೆ ಸತಿದೇವತೆ ಎಂದು ಹೆಮ್ಮೆಪಟ್ಟು ಕೊಳ್ಳುವುದನ್ನು ಕಾಣಬಹುದು.[113] ಅವರು ಸತಿ ಕುರುಹಾಗಿ ಬೆಳ್ಳಿಯ ಕೈಗೆ ಕಂಕಣಗಳನ್ನು ಕಟ್ಟಿ ಜಗುಲಿಯ ಮೇಲಿಟ್ಟು ಆರಾಧಿಸುತ್ತಬರುತ್ತಿದ್ದಾರೆ.

ಸಾಮಾನ್ಯವಾಗಿ ತಮ್ಮ ಮನೆತನಗಳಲ್ಲಿ ಹೆಣ್ಣುಮಗಳೊಬ್ಬಳು ಸತಿಹೋದ ಮೇಲೆ ಅವಳನ್ನೇ ದೈವೀರೂಪವಾಗಿ ಕಂಡು ''ಮನೆದೇವತೆ'' ಯನ್ನಾಗಿ ಆರಾಧಿಸುವ ಸಂಪ್ರದಾಯವನ್ನು ಮೇಲೆ ಹೇಳಿದ ಕೆಲವು ಮನೆತನಗಳು ಪಾಲಿಸಿಕೊಂಡು ಬಂದಿವೆ. ಸತಿ ಹೋದವಳು ಒಮ್ಮೊಮ್ಮೆ ಅತೀ ಪ್ರಚಾರ ಪಡೆದು ಕುಲದೇವತೆಯಾಗಿಯೋ, ಗ್ರಾಮದೇವತೆಯಾಗಿಯೋ ಪೂಜೆಗೊಳ್ಳುವ ಸ್ಥಿತಿಗೆ ಏರುತ್ತಿದ್ದಳು. ಇವಾವ ಮಾನ್ಯತೆಗಳನ್ನು

ಪಡೆಯದ ಸತಿ ಶಿರೋಮಣಿಗಳ ಸ್ಮಾರಕಗಳು ಇಂದು ಹಳ್ಳಿಗಳಲ್ಲಿ ಪೂಜೆಗೊಳ್ಳುತ್ತಿರುವುದನ್ನು ಮರೆಯಬಾರದು. ಅವು ತಮ್ಮಷ್ಟಕ್ಕೆ ತಾವೇ ಜನಮನದಲ್ಲಿ ವಿಶೇಷ ರೀತಿಯ ಸ್ಥಾನ ಪಡೆದುಗತಕಾಲದ ಕತೆಗಳನ್ನು ತಮ್ಮೊಡನಿರಿಸಿಕೊಂಡು ಬರುತ್ತವೆ.

4. <u>ಸತಿ ದೇವತೆಯ ಸ್ವರೂಪ ಮತ್ತು ಆರಾಧನಾ ವೈಶಿಷ್ಟ್ಯಗಳು:</u> ಸತಿದೇವಿಯು ಶಿಲೆ, ಶಿಲ್ಪ, ಗೊಂಬೆ, ಕಟ್ಟೆ, ಗುತ್ತ, ಗದ್ದುಗೆ, ಹಕ್ಕಲು, ಹೊಲ, ಕಾಡು, ಗಿಡ, ಬಳೆ, ಸೀರೆ/ಕನ್ನಡಿ, ಕಳಸ, ಕತ್ತಿ, ಮೊದಲಾದ ರೂಪಗಳಲ್ಲಿ ಕರ್ನಾಟಕದಲ್ಲಿ ಪೂಜೆಗೊಳ್ಳುತ್ತಿದ್ದಾಳೆ. ಸಾಮಾನ್ಯವಾಗಿ ಕೈಎತ್ತಿ ನಿಂತಿರುವ ಸತಿಶಿಲ್ಪವುಳ್ಳ ಮಾಸ್ತಿಕಲ್ಲುಗಳೇ ಎಲ್ಲೆಡೆಯಲ್ಲಿಯೂ ಹೆಚ್ಚು ಪೂಜೆಗೊಳ್ಳುವುದನ್ನು ಕಾಣುತ್ತೇವೆ. ವಿಶೇಷವೆನ್ನುವಂತೆ, ಪುರುಷ — ವಿಗ್ರಹಗಳನ್ನು ಮಹಾಸತಿ ಎಂದು ಆರಾಧಿಸುವ ಸಂಪ್ರದಾಯವು ಬಿಣಗಾ ( ಕಾರವಾರ ), ಅವುಲಗೋಡು ( ಸೊರಬ ), ಲಕಮಾಜಿಕೊಪ್ಪ ( ಬ್ಯಾಡಗಿ ) ಹಂದಾವರ ( ಹೊನ್ನಾವರ ) ಈ ಊರುಗಳಲ್ಲಿದೆ. ಚಿತ್ರಟಹಳ್ಳಿಯಲ್ಲಿ ( ಸೊರಬ ) ವೀರಗಲ್ಲೊಂದನ್ನು ಮಾಸ್ತಮ್ಮ ಎಂದು ಪೂಜಿಸುತ್ತಾರೆ . ಅರಗಾದಲ್ಲಂತೂ ( ಕಾರವಾರ ) ಶಿವಲಿಂಗವನ್ನೇ 'ಸತಿದೇವಿ' ಎಂದು ತಿಳಿದಿದ್ದಾರೆ. ತಡಸ ( ಬ್ಯಾಡಗಿ ) ದಲ್ಲಿ ಮಾಸ್ತಿಕಲ್ಲನ್ನು 'ಮೈಲಾರಲಿಂಗಪ್ಪ' ಎಂದು ಭಾವಿಸಿ ಪೂಜಿಸುವುದು ಇನ್ನೂ ವಿಶೇಷವಾಗಿದೆ. ಹೀಗೆ ಸತಿದೇವತೆ ನಾನಾ ರೂಪಗಳಲ್ಲಿ ಕಂಡುಕೊಂಡು ಕರ್ನಾಟಕದ ಜನಮನದಲ್ಲಿ ನೆಲೆಗೊಂಡಿದ್ದಾಳೆ.

ಸತಿದೇವಿಗಾಗಿ ಕರ್ನಾಟಕದ ಹಲವು ಭಾಗಗಳಲ್ಲಿ ಗುಡಿಗಳನ್ನು ನಿರ್ಮಿಸಲಾಗಿದೆ. 'ಮಾಸ್ತಿಕಟ್ಟೆ'ಯ ( ಅಂಕೋಲಾ ) ಮಹಾಸತಿ, 'ವಡ್ಡಗೆರೆಯ' ( ಕೊರಟಗೆರೆ ) ನಾಗಮ್ಮದೇವಿ, 'ಮಾಸ್ತಿಕಟ್ಟ'ದ ( ಹೊಸನಗರ ) ಮಾಸ್ತಮ್ಮ, ಅನಿಲಗೋಡಹಳ್ಳಿಯ (ಹೊನ್ನಾವರ ) ಕುಮಾರರಾಮನ ಮಹಾಸತಿಯರು, ಶಿರಾಲಿಯ ( ಬಟ್ಕಳ ) ಮಾಸ್ತೆವ್ವ, ಅಂಕೋಲಾದ ಮಾಸ್ತಿ, ಕಬ್ಬರಗಿಯ (ಕುಷ್ಟಗಿ ) ಮಾಸ್ತೆಮ್ಮ — ಈ ಸತಿದೇವತೆಯರು ತಮ್ಮ ತಮ್ಮ ಪ್ರದೇಶಗಳಲ್ಲಿ ತುಂಬ ಪ್ರಭಾವ ಬೀರಿದವರಾಗಿದ್ದಾರೆ.

ಹುಲ್ಲುಕಲ್ಲು ( ಹೊಸನಗರ ), ಮೈಸೂರು, ಬಟ್ಕಳ, ದೇವಿಕಾನ ( ಬಟ್ಕಳ) ಲಕಮಾಜಿಕೊಪ್ಪ ( ಬ್ಯಾಡಗಿ ) ಹವಳಧಾರ ( ಚಿಕ್ಕೆರೆ ) ಹತ್ತಳ್ಳಿ ( ಇಂಡಿ ), ಉಮರಾಣಿ

(ಇಂಡಿ) ಈ ಮೊದಲಾದ ಊರುಗಳಲ್ಲಿರುವ ಮಾಸ್ತಿದೇವತೆಗಳಿಗೆ ದಿನಾಲು ಪೂಜೆ ಎಂಬುದೇ ಇಲ್ಲ. ಯಾವಾಗಾದರೂ ಭಕ್ತರು ಹೋಗಿ ಪೂಜೆ ಸಲ್ಲಿಸಿ ಬರುತ್ತಾರೆ. ಮಾಸ್ತಿಕಟ್ಟೆ (ಅಂಕೋಲಾ ), ವಡ್ಡಗೆರೆ (ಕೊರಟಗೆರೆ ) ತಡಸ ( ಬ್ಯಾಡಗಿ ) ಮನಗುಂಡಿ(ಧಾರವಾಡ) ಆಗಸನಹಳ್ಳಿ ( ಬ್ಯಾಡಗಿ), ಚಿತ್ರಟಹಳ್ಳಿ ( ಸೊರಬ), ಮಾಸಣಗಿ ( ಬ್ಯಾಡಗಿ) ಈ ಮೊದಲಾದ ಊರುಗಳಲ್ಲಿ ದಿನಾಲು ಪೂಜೆ ತಪ್ಪದೇ ನಡೆಯುತ್ತದೆ. ಕುಮಟಾದ ನೆಲ್ಲಿಕೇರಿಯ ಮಾಸ್ತಿದೇವಸ್ಥಾನದಲ್ಲಿ ದಿನಾಲು ಮೂರು ಪೂಜೆಗಳನ್ನು ಸಲ್ಲಿಸಲಾಗುವುದು. ಸಂಡದ (ಶಿಕಾರಿಪುರ), ಮಲ್ಲಂದೂರ ( ಸಾಗರ ) ಈ ಊರುಗಳಲ್ಲಿ ಮಾಸ್ತೆಮ್ಮನಿಗೆ ಸೋಮವಾರ ಮಾತ್ರ ಪೂಜೆ ಇದ್ದರೆ, ಹೊಸನಗರದ ಮಾಸ್ತೆಮ್ಮನಿಗೆ ಶುಕ್ರವಾರ ಮಾತ್ರ ಪೂಜೆ ಇದೆ. ಕೆಲವು ಸತಿದೇವತೆಗಳಿಗೆ ವಿಶೇಷದಿನಗಳಲ್ಲಿ ವಿಶೇಷ ಆರಾಧನೆ ಇದೆ. ಗುಂಡ್ಲುಪೇಟೆಯ ಶೆಟ್ಟಿ-ಹಳ್ಳಿಯಲ್ಲಿಯ ಮಾಸ್ತೆಮ್ಮನಿಗೆ ಗೌರಿಹಬ್ಬದಂದು, ಕಾರವಾರದ ಅರಗಾದಲ್ಲಿಯ ಮಾಸ್ತಿಗೆ ಸಂಕ್ರಾಂತಿಯಂದು, ಹೊನ್ನಾವರದ ಚಂದಾವರದಲ್ಲಿಯ ಮಾಸ್ತಮ್ಮನಿಗೆ ನವರಾತ್ರಿಯಂದು, ಸಿಗ್ಗಾಂವದ ಕುಂದೂರ ಮಾಸ್ತೆಮ್ಮನಿಗೆ ಹಟ್ಟಿಹಬ್ಬದಂದು ವಿಶೇಷ ಪೂಜೆ ಸಲ್ಲಿಸಲಾಗುವುದು, ಶ್ರೀರಂಗಪಟ್ಟಣದ ಮಾಸ್ತೆಮ್ಮನಿಗೆ ಆರು ತಿಂಗಳಿಗೊಮ್ಮೆ ವಿಶೇಷ ಪೂಜೆ ಸಲ್ಲಿಸಲಾಗುತ್ತಿದ್ದರೆ, ಮುರ್ಡೇಶ್ವರ ( ಬಟ್ಕಳ ) ಮಾಸ್ತಿಗೆ ವರ್ಷಕ್ಕೊಮ್ಮೆ ದೊಡ್ಡ ಪೂಜೆ ಜರುಗಿಸಲಾಗುವುದು. ೬ ' ವಡ್ಡಗೆರೆ ನಾಗಮ್ಮ ' ಗೀತೆಯಲ್ಲಿ ನಾಗಮ್ಮ ತವರುಮನೆಯವರಿಗೆ '' ವರಷಾಕೆ ಪೂಜೆ ತರಲೆಂದು '' ಹೇಳಿ ಹೋಗುವುದನ್ನು ಇಲ್ಲಿ ನೆನಸಬಹುದು[114]. ಅಲ್ಲದೆ ಕಾನಮಡಗು ( ಕೂಡ್ಲಿಗಿ), ಅರಗಾ ( ಕಾರವಾರ ) ಚಂದಾವರ ( ಹೊನ್ನಾವರ ) ಮುರ್ಡೇಶ್ವರ ( ಬಟ್ಕಳ ) ಮಾಸ್ತಿಕಟ್ಟಾದಂಥ (ಅಂಕೋಲಾ) ಊರುಗಳಲ್ಲಿರುವ ಮಹಾಸತಿಯರಿಗೆ ವರ್ಷಕ್ಕೊಮ್ಮೆ ಜಾತ್ರೆ — ಹಬ್ಬ — ಉತ್ಸವಗಳು ಜರುಗುತ್ತವೆ.

ಸಾಮಾನ್ಯವಾಗಿ ಸತಿ ಆರಾಧನೆಯ ಸಾಮಗ್ರಿಗಳೆಂದರೆ, ಹೂವು, ಕುಂಕುಮ, ತೆಂಗು, ಕರ್ಪೂರ, ಊದಿನಕಡ್ಡಿಗಳೆಂದೇ ಹೇಳಬೇಕು. ಹಬ್ಬದ ದಿನಗಳಲ್ಲಿ ಹೋಳಿಗೆ — ಅನ್ನ ಮೊದಲಾದವುಗಳ ಎಡೆಯನ್ನು ಹಿಡಿಯಲಾಗುವುದು. ಈ ಪೂಜಾವಿಧಾನವೇ ಎಲ್ಲೆಡೆಯೂ ಹೆಚ್ಚು ಪ್ರಚಲಿತದಲ್ಲಿದ್ದುದಾಗಿದೆ. ಮಾಸ್ತಿಕಟ್ಟೆ ( ಹೊಸನಗರ ), ಹುಲ್ಲುಕಲ್ಲು ( ಹೊಸನಗರ) ಚಂದಾವರ ( ಹೊನ್ನಾವರ ), ಕಲಕಕ್ಕಿ ( ಹೊನ್ನಾವರ ), ಅಲನಿಗೋಡಹಳ್ಳಿ (ಹೊನ್ನಾವರ)

ಮುರ್ಡೇಶ್ವರ ( ಬಟ್ಕಳ), ಅಂಕೋಲಾ, ಹೊದಿಗೆರೆ (- ಚನ್ನಗಿರಿ ) ಆಗಸನಹಳ್ಳಿ (ಬ್ಯಾಡಗಿ), ಉಪ್ಪಿನಗೋಳಿ ( ಹೊನ್ನಾವರ ), ಚನ್ನಪಟ್ಟಣ ಈ ಮೊದಲಾದ ಊರುಗಳಲ್ಲಿಯ ಮಾಸ್ತಿದೇವತೆಗೆ ಕುರಿ — ಕೋಳಿಗಳ ರಕ್ತಬಲಿ ಅರ್ಪಿಸಲಾಗುವುದು. ಹುಲ್ಲುಕಲ್ಲಿನ ಜಾತ್ರೆಯಲ್ಲಿ ಕುರಿಗಳನ್ನು ಕಡಿದು ಅಡಿಗೆ ಮಾಡಿ ಭಕ್ತರಿಗೆ ಪ್ರಸಾದರೂಪದಲ್ಲಿ ಹಂಚಲಾಗುವುದು. ಮುರ್ಡೇಶ್ವರ, ಜಾತ್ರೆಯ ಸಮಯದಲ್ಲಿ ಸುಮಾರು ಒಂದುನೂರಾ ಅರವತ್ತು ಕುರಿಗಳನ್ನು ಕಡಿದು ಪ್ರಸಾದರೂಪವಾಗಿ ವಿತರಣೆ ಮಾಡಲಾಗುವುದು. ಮಾಸ್ತಿಕಟ್ಟೆಯ ಮಾಸ್ತಿಗೆ ಹರಕೆ ಹೊತ್ತವರು ಕುರಿ — ಕೋಳಿಗಳನ್ನು ತಂದು ಒಪ್ಪಿಸುತ್ತಾರೆ. ಹೀಗೆ ' ರಕ್ತಬಲಿ 'ಯಿಂದ ಮಾಸ್ತಿಯು ತೃಪ್ತಿಗೊಳ್ಳುವಳೆಂದು ಇಲ್ಲಿಯ ಜನರ ತಿಳುವಳಿಕೆಯಾಗಿದೆ.

ಸತಿದೇವಿಯನ್ನು ಕೆಲವೊಮ್ಮೆ ಹಾಡಿ ತೃಪ್ತಿಗೊಳಿಸಲಾಗುತ್ತಿತ್ತು. ಅವಳ ಚರಿತ್ರೆಯನ್ನು ಹಾಡಿಯೋ, ಅವಳನ್ನು ಸ್ತುತಿಸುವ ಪದ್ಯಗಳನ್ನು ಹೇಳಿಯೋ ಅವಳಿಗೆ ಸೇವೆಯನ್ನು ಸಲ್ಲಿಸಲಾಗುತ್ತಿತ್ತು. ಮಹಾಸತಿ ವೀರದಿಮ್ಮವ್ವ, ವಡ್ಡಗೆರೆ ನಾಗಮ್ಮ, ಮಹಾಸತಿ ಕಾಟವ್ವನಂಥ ಚರಿತ್ರೆ ಗೀತೆಗಳನ್ನು ಹಾಗೂ ಚನ್ನಪಟ್ಟಣದ ಮಾಸ್ತಿಗೀತೆ, ಆರಕೆರೆ ಮಾಸ್ತಿಗೀತೆಯಂಥ ಸ್ತುತಿಗೀತೆಗಳನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ' ಮಹಾಸತಿ ತಾಡಿನಾಗಮ್ಮ ' ಗೀತೆಯಲ್ಲಿ ಪ್ರಾರ್ಥಿಸುವ ಪದ್ಯ ಮೊದಲಿಗೆ ಹೀಗೆ ಬರುತ್ತದೆ: [115]

ಎದ್ದು ನೈನದೇವ ಮುದ್ದು ಚಿಂತಾಮಣಿಯ
ಗೆಜ್ಜೇಲಿ ಮಸರ-ಕಡೆವೋಳ
ಗೆಜ್ಜೇಲಿ ಮಸರ ಕಡೆವೋಳ 1 ನಾಗಮ್ಮನ
ಮಡಿಲ ಸೊಲ್ಲಲೀ ನೈನದೇವ

ಇಲ್ಲಿ ಗೆಜ್ಜೆಕಟ್ಟಿ ಮಸರ ಕಡೆಯುವ ನಾಗಮ್ಮಳನ್ನು ಮೊದಲು ಸೊಲ್ಲಿನಲ್ಲಿಯೇ ನೆನೆಯೋಣ ಎಂಬ ಮಾತು ಬರುತ್ತದೆ. ಅದೇ ರೀತಿ ಪುತ್ರನನ್ನು ಕೊಡು, ಹಟ್ಟಿಗೆ ಏಳ್ಗೆ ಕೊಡು ಎಂದು ಪ್ರಾರ್ಥಿಸುವ ಪದ್ಯಗಳು ಮಹಾಸತಿ ವೀರತಿಮ್ಮವ್ವನ ಗೀತೆಯಲ್ಲಿ ಬರುವುದನ್ನು ಕಾಣಬಹುದು. [116]

ಮಲ್ಲಂದೂರು ( ಸಾಗರ ) ಮತ್ತುದಿವಾಜಾಳಿ ( ಕಾರವಾರ ) ಊರುಗಳಲ್ಲಿ ಮದುವೆಯ ಸಮಯದಲ್ಲಿ ಮಾಸ್ತಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಮಲ್ಲಂದೂರಿನಲ್ಲಿ

ಮದುವೆಯ ಪೂರ್ವದಲ್ಲಿ ಮಾಸ್ತಿಮ್ಮನಿಗೆ ಬೆಂಡಿನಿಂದ ಮಾಡಿದ ಸುಂದರವಾದ ' ಬಾಸಿಂಗ ' ತಂದು ಕಟ್ಟಿ ಹಣ್ಣು — ಕಾಯಿಗಳಿಂದ ಪೂಜಿಸುತ್ತಾರೆ. ಪೂಜಾಳಿಯಲ್ಲಿ ಮದುವೆಯಾಗುವ ಗಂಡು–ಹೆಣ್ಣುಗಳಿಬ್ಬರೂ ಮನೆಮನೆಗೆ ಹೋಗಿ, ಅವರು ಕೊಡುವ 'ಸೀರೆ, ಹಣ್ಣು, ಕಾಯಿಗಳನ್ನು ಸ್ವೀಕರಿಸಿಕೊಂಡು ಮಾಸ್ತಿಮ್ಮನಲ್ಲಿಗೆ ಬರಬೇಕು. ಅಲ್ಲಿ ಅವಳಿಗೆ ಸೀರೆ ತೊಡಿಸಿ ಪೂಜಿಸಬೇಕು. ಇದನ್ನು '' ಮಾಸ್ತಿಮಾಡು '' ಎಂದು ಕರೆಯುತ್ತಾರೆ. ಚಿಕ್ಕಡೇವಿನ '' ನಲವತ್ತು ಬೇಡರ ಸಂಸಾರಗಳಲ್ಲಿ ಮದುವೆ ನಡೆಯುವ ಮುನ್ನ ಗಂಡು ಹೆಣ್ಣು ಗುಡಿಗೆ ಬಂದು ಮಾಸ್ತ್ಯಮ್ಮನ ಆಶೀರ್ವಾದ ಪಡೆಯಬೇಕು '' ಎಂದು ಡಾ. ಎಂ. ಚಿದಾನಂದಮೂರ್ತಿಯವರು ಚಿಕ್ಕಡೇವಿನ ಮಾಸ್ತಿ ಅಧ್ಯಯನವೊಂದರಲ್ಲಿ ಹೇಳುವುದನ್ನು ಇಲ್ಲಿ ಸ್ಮರಿಸಬಹುದು.[117]

ಮಾಸ್ತಿ ಆರಾಧನೆಗೆ ಮುಖ್ಯವಾದ ಪ್ರೇರಣೆಗಳು ಎರಡು ಕಾಣಿಸಿಕೊಳ್ಳುತ್ತವೆ. ಒಂದು; ಅವಳ ಆಶೀರ್ವಾದ ಪಡೆದು ನೆಮ್ಮದಿಯಾಗಿ ಇರಬೇಕೆಂಬ ಹಂಬಲ. ಎರಡು; ಅವಳು ಕಷ್ಟ ಕೊಡದೆ ಇರಲೆಂಬ ಭಯದ ಮನಸ್ಥಿತಿ. ಸಾಮಾನ್ಯವಾಗಿ ಸತಿದೇವತೆ ಪ್ರಸನ್ನ ದೇವತೆಯಾಗಿ ಎಲ್ಲೆಡೆಯೂ ಕಂಡು ಬರುತ್ತಾಳೆ. ಅವಳನ್ನು ಆರಾಧಿಸಿದರೆ ಬೇಡಿದ್ದನ್ನು ಕೊಡಬಲ್ಲಳು, ಆರಾಧಿಸಿದವರ ಬದುಕಿಗೆ ಭದ್ರತೆಯನ್ನು ಒದಗಿಸಬಲ್ಲಳು. ಇಂಥ ಮಹಾಸತಿಯ ಆಶೀರ್ವಾದ ಪಡೆಯಲು ಸಾಮಾನ್ಯವಾಗಿ ಭಕ್ತಕೋಟಿಯೆಲ್ಲ ಅವಳನ್ನು ಪೂಜಿಸುತ್ತ ಬಂದಿದೆ. ಇನ್ನು ಕೆಲವು ಸಂದರ್ಭಗಳಲ್ಲಿ ಸತಿಯು ' ಕಾಡುವ ದೇವಿ ' ಯಾಗಿ ಜನರಿಂದ ಪೂಜಿಸಲ್ಪಡುತ್ತಾಳೆ. ಇಂಥ ಸತಿದೇವತೆಯರು ಸೊರಟೂರು (ಹೊನ್ನಾಳಿ), ಸಂಡದ (ಶಿಕಾರಿಪುರ), ಹೊಸಕುಳಿ(ಹೊನ್ನಾವರ), ಮೂರುಕಟ್ಟೆ (ಹೊನ್ನಾವರ), ಮನಗುಂಡಿ(ಧಾರವಾಡ)—ಈ ಮೊದಲಾದ ಊರುಗಳಲ್ಲಿ ಕಂಡು ಬರುತ್ತಾರೆ. ಸೊರಟೂರಿನಲ್ಲಿ ಮಾಸ್ತಿ ದೇವತೆಗಳಿದ್ದಲ್ಲೆಲ್ಲ ಕಾಡಾಟ, ಇದ್ದೇ ಇರುತ್ತದೆ ಎಂಬ ತಿಳುವಳಿಕೆ ಇದೆ. ಅವಳಿಗೆ ಪೂಜೆ ತಪ್ಪಿಸುವಂತಿಲ್ಲ. ಹೊಸಕುಳಿಯಲ್ಲಿ ' ರಣಮಾಸ್ತಿ ' ಇರುವ ಸ್ಥಾನದಲ್ಲಿ ಮಧ್ಯಾಹ್ನ ಮತ್ತು ರಾತ್ರಿ ಯಾರೂ ತಿರುಗಾಡುವಂತಿಲ್ಲ. ಆ ಸಮಯದಲ್ಲಿ ಭಯಂಕರ ಸಪ್ಪಳಗಳು ಕೇಳಿ ಬರುತ್ತವೆ, ಕಲ್ಲುಗಳು ಬೀಳುತ್ತವೆ. ಹೊಸಕುಳಿಯಲ್ಲಿ ಅವಳಿಗೆ ಯಾರಾದರೂ ಪೂಜೆ ತಪ್ಪಿಸಿದರೆ ಅವರ ಕನಸಿನಲ್ಲಿ ಬಂದು ಎಚ್ಚರಿಸುತ್ತಾಳೆ. ಅದನ್ನೂ ಅವರು ಲಕ್ಷಿಸದಿದ್ದರೆ, ಅವಳು ಉಗ್ರವಾಗಿ ಕಾಡಲು ಪ್ರಾರಂಭಿಸುತ್ತಾಳೆ. ಅವಳನ್ನು ಪೂಜೆ ಮಾಡಿ ಸಂತೈಸಿದ ಮೇಲೆಯೇ ಕಾಡಾಟ ದೂರವಾಗುತ್ತದೆ. ಇದೇ ರೀತಿಯ ನಂಬಿಕೆ ಮೂರುಕಟ್ಟೆಯ ಮಾಸ್ತಿ ಕುರಿತಾಗಿಯೂ ಇದೆ.

ಕೊಂಡದಹಳ್ಳಿಯ ಮಾಸ್ತಿಯಮ್ಮನ ಕುರಿತಾಗಿ ಡಾ: ಎಂ.ಚಿದಾನಂದಮೂರ್ತಿಯವರು ಹೇಳುವ ಮಾತುಗಳನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. "ಕೊಂಡದ ಹಳ್ಳಿಯ ಜನ ಊರಿನ ಇನ್ನು ದೊಡ್ಡ ದೇವರನ್ನು ಅಲಕ್ಷಿಸಿಯಾರು. ಮಾಸ್ತಮ್ಮನನ್ನು ಅಲಕ್ಷಿಸಲಾರರು. ಅವಳು ಅದೇ ಪ್ರದೇಶದ ಹೆಣ್ಣು ಮಗಳು. ಇದರಿಂದ ಆ ಜನಕ್ಕೆ ಅವ್ವಳ ಬಗ್ಗೆ ಪ್ರೀತಿ ವಾತ್ಸಲ್ಯಗಳಿವೆ. ಅವ್ವಳ ಹಿನ್ನೆಲೆಯಲ್ಲಿ ಭಯವೂ ಇದೆ."[118]

5. <u>ಸತಿ — ಹರಕೆಗಳು:—</u> ಮಹಾಸತಿಯನ್ನು ದೈವೀಸ್ವರೂಪವೆಂದು ತಿಳಿದ ಜನತೆ ಅವಳನ್ನು ಅನುಗ್ರಹಿಸುವಂತೆ, ಆಶೀರ್ವದಿಸುವಂತೆ, ಕಷ್ಟ ದೂರ ಮಾಡುವಂತೆ ಹರಕೆ ಹೊತ್ತುಕೊಳ್ಳುತ್ತಾರೆ. ಹರಕೆಯ ಸ್ವರೂಪ ಜನರ ಇಷ್ಟಾರ್ಥಗಳ ಹಿನ್ನೆಲೆಯಲ್ಲಿ ಬೇರೆ ಬೇರೆಯಾಗಿರುತ್ತದೆ. ಅದು ಹಣ್ಣು ಕಾಯಿಗಳ ರೂಪದ್ದಾಗಿರಬಹುದು. ಕುರಿ—ಕೋಳಿಗಳನ್ನು ಬಲಿಕೊಡುವ ರೂಪದ್ದಾಗಿರಬಹುದು, ನಿರ್ದಿಷ್ಟಪಡಿಸಿದ ಸ್ಥಾನದಿಂದ ಮಾಸ್ತಿಯಮ್ಮನವರೆಗೆ ನಮಸ್ಕಾರ ( ದೀಡ ನಮಸ್ಕಾರ ) ಹಾಕುವ ಸ್ವರೂಪದ್ದಾಗಿರಬಹುದು, ಅವಳಿಗೆ ಸೀರೆ, ಕಣ್ಣುಬಟ್ಟಲು, ಬಳೆ, ಮಾಗಬಟ್ಟು, ಕಿವಿಯೋಲೆ ತೊಡಿಸುವ ರೂಪದ್ದಾಗಿರಬಹುದು, ಅಥವಾ ತೊಟ್ಟಿಲು ಅರ್ಪಿಸುವ ರೂಪದ್ದಾಗಿರಬಹುದು — ಹೀಗೆ ಯಾವುದಾದರೂ ಬಗೆಯಲ್ಲಿ ಹರಕೆಯನ್ನು ಪೂರೈಸಲಾಗುತ್ತದೆ. ಅದನ್ನು ಹರಕೆ ಹೊತ್ತುಕೊಳ್ಳುವಾಗಲೋ, ಹರಕೆ ಹೊತ್ತುಕೊಂಡ ನಂತರ ಇಚ್ಛೆ ಫಲಿಸಿದ ಮೇಲೆಯೋ ಈಡೇರಿಸಲಾಗುತ್ತದೆ.

ಹೊಸಕುಳಿ ( ಹೊನ್ನಾವರ ) ಯಲ್ಲಿ ರಣಮಾಸ್ತಿಗೆ ಜನರು ತಮ್ಮ ಕಾಡಾಟ ಪರಿಹಾರಕ್ಕಾಗಿ ಹರಕೆಯ ಮಾಸ್ತಿಗೊಂಬೆಗಳನ್ನು ಅರ್ಪಿಸುತ್ತಾರೆ. ಇದೇ ರೀತಿ ಕವಲಕ್ಕಿ (ಹೊನ್ನಾವರ), ಮೂರುಕಟ್ಟೆ( ಹೊನ್ನಾವರ ) ದೇವಿಕಾನ ( ಬಟ್ಕಳ), ಶಿರಾಲಿ ( ಬಟ್ಕಳ ), ಮುರ್ಡೇಶ್ವರ ( ಬಟ್ಕಳ) — ಮೊದಲಾದ ಊರುಗಳಲ್ಲಿ ಹರಕೆಯ ಮಾಸ್ತಿಗೊಂಬೆಗಳನ್ನು ಮಾಸ್ತಿಯಮ್ಮಳಿಗೆ ಕೊಡುತ್ತಾರೆ. ಕೆಲವೊಮ್ಮೆ ಇವರು ತಮಗೆ ಒಳ್ಳೆಯದಾದುದಕ್ಕಾ ಹೀಗೆ ಮಾಡುವುದುಂಟು ಹೀಗೆ ಮರದಗೊಂಬೆಗಳನ್ನು ಅರ್ಪಿಸುವುದು ದಕ್ಷಿಣ ಮತ್ತು ಉತ್ತರ ಕನ್ನಡಗಳ ಭಾಗಗಳಲ್ಲಿ ಹೆಚ್ಚು ಪ್ರಚಲಿತವಿರುವುದನ್ನು ಕಾಣುತ್ತೇವೆ. ಹುಲ್ಲುಕಲ್ಲನಲ್ಲಿಯ (ಹೊಸನಗರ) ಮಾಸ್ತಿಯಮ್ಮನಿಗೆ ಜಾತ್ರೆಯ ಸಮಯದಲ್ಲಿ ತಾವು ಹೊತ್ತ ಹರಕೆಗಳನ್ನು ಕೋಳಿ,

ಕುರಿಗಳ ರೂಪದಲ್ಲಿ ಅರ್ಪಿಸುತ್ತಾರೆ. ಉಪ್ಪಿನಗೋಳಿನಲ್ಲಿಯ (ಹೊನ್ನಾವರ) ಮಾಸ್ತಿಗೆ ತಮ್ಮ ಕಾಡಾಟ ದೂರವಾದದ್ದಕ್ಕೆ, ದನಗಳರೋಗ ನಿವಾರಣೆಯಾದದ್ದಕ್ಕೆ ಹರಕೆ ಹೊತ್ತು ಕೋಳಿಗಳ ಬಲಿಯನ್ನು ಕೊಡುತ್ತಾರೆ. ಸೀಡೆನೂರಿನ (ಬ್ಯಾಡಗಿ) ಮಾಸ್ತಿಗೆ ಹರಕೆಯ ಸೀರೆ, ಚಿತ್ರಟಹಳ್ಳಿಯ (ಸೊರಬ) ಮಾಸ್ತಿಗೆ ಬಳೆ, ಕವಲಕ್ಕಿಯ (ಹೊನ್ನಾವರ) ಮಾಸ್ತಿಮ್ಮನಿಗೆ ಮೂಗುಬಟ್ಟು, ಕಿವಿಯೋಲೆ, ಕಣ್ಣುಬಟ್ಟು ಹರಕೆಯ ರೂಪದಲ್ಲಿ ಜನರು ಕೊಡುವುದನ್ನು ಕಾಣಬಹುದಾಗಿದೆ, ಅಗಸನಹಳ್ಳಿಯ (ಬ್ಯಾಡಗಿ) ಮಾಸ್ತಿಮ್ಮನಿಗೆ ಬೇಡಿ ಕೊಂಡವರು ನಮಸ್ಕಾರ ಹಾಕುವ ಪರಿಪಾಠ ಇದೆ. ಅಲ್ಲದೆ ರಕ್ತಬಲಿ ಅರ್ಪಣೆಯ ರೂಪದ ಹರಕೆಯೂ ಅಲ್ಲಿ ನಡೆದುಕೊಂಡು ಬಂದಿದೆ. 'ಕುಪ್ಪೇಗ್ರಾಮ'ದಲ್ಲಿ (ಸೊರಬ) ಮಕ್ಕಳಾಗದವರು ಬೆಂಡಿನ ತೊಟ್ಟಿಲನ್ನು ಹರಕೆಯ ರೂಪದಲ್ಲಿ ಮಾಸ್ತಮ್ಮನಿಗೆ ಅರ್ಪಿಸುವುದು ವಿಶೇಷವಾಗಿದೆ. ಅನಿಲಗೋಡಹಳ್ಳಿಯಲ್ಲಿಯೂ (ಹೊನ್ನಾವರ) ಮಹಾಸತಿಯರಿಗೆ ಮಕ್ಕಳಾಗ ದವರು ಬೆಳ್ಳಿಯ ತೊಟ್ಟಿಲುಗಳನ್ನು ಅರ್ಪಿಸುತ್ತಾರೆ. ಅಲ್ಲಿ ಭಕ್ತರೊಬ್ಬರು, ತಮಗೆ ಹರಕೆ ಹೊತ್ತು ಮಗು ಜನಿಸಲಾಗಿ, ಚಿನ್ನದ ಶಿಶುವನ್ನು ಮಾಡಿಸಿ ಮಹಾಸತಿಗೆ ಅರ್ಪಿಸಿದ ಅಪರೂಪದ ಉದಾಹರಣೆಯೂ ಒಂದು ಉಂಟು. ಹೀಗೆ ಸತಿದೈವಕ್ಕೆ ಹರಕೆ ಹೊತ್ತು ಅದನ್ನು ಕಾರ್ಯಾಚರಣೆಯಲ್ಲಿ ನಡೆಸಿಕೊಂಡು ಬರುತ್ತಿರುವುದನ್ನು ಕರ್ನಾಟಕದ ಹಲವು ಹಳ್ಳಿಗಳಲ್ಲಿ ಕಾಣುತ್ತೇವೆ.

6. <u>ಸತಿ — ನಂಬಿಕೆಗಳು ಮತ್ತು ನಿಷಿದ್ಧಗಳು :</u> ಮಹಾಸತಿಯ ಕುರಿತಾಗಿ ಹಲವು ನಂಬಿಕೆಗಳು ಮತ್ತು ಅವಳ ಸುತ್ತ ಕೆಲವು ನಿಷಿದ್ಧಗಳು ಬೆಳೆದುಕೊಂಡು ಬಂದಿರುವುದನ್ನು ಕಾಣುತ್ತೇವೆ. ನಂಬಿಕೆಗಳು ಸತಿಯ ದೈವತ್ವವನ್ನು ಜನಪದರಲ್ಲಿ ಜೀವಂತವಾಗಿಟ್ಟುಕೊಂಡು ಬರುವಲ್ಲಿ ಸಹಾಯಕ ಗಳಾಗಿರುವುದನ್ನು ಗುರುತಿಸಬಹುದಾಗಿದೆ. ಮುಲ್ಲಂದೂರಿನ (ಸಾಗರ) ಮಾಸ್ತಿಮ್ಮ ಊರನ್ನು ರಕ್ಷಿಸುವಳೆಂದು ಆ ಊರಿನಲ್ಲಿ ಕಳವು ಮೊದಲಾದವುಗಳಾವೂ ಇಲ್ಲವೆಂದೂ ಅಲ್ಲಿಯ ಜನ ನಂಬಿಕೊಂಡಿದ್ದಾರೆ. ಹುಲ್ಲಕಲ್ಲಿನಲ್ಲಿ (ಹೊಸನಗರ) ಮಾಸ್ತಿಮ್ಮನ ಎರಡು ಸರ್ಪಗಳಿವೆ ಎಂದು ಹೇಳಲಾಗುತ್ತಿದೆ. ಪುರಗ್ರಾಮದಲ್ಲಿ (ಮಂಡ್ಯ) ಮಕ್ಕಳಿಗೆ ಬಟ್ಟೆ ತಂದರೆ ಮಾಸ್ತಮ್ಮನಿಗೆ ತೊಡಿಸಿ, ಅನಂತರ ಮಕ್ಕಳಿಗೆ ಉಡಿಸುತ್ತಾರೆ. ಇಲ್ಲದಿದ್ದರೆ ಮಕ್ಕಳಿಗೆ ಮೈತುಂಬ ಗಾಯ —

ಗಳಾಗುತ್ತವೆ ಎಂದು ಉದಾಹರಣೆಗಳನ್ನು ಕೊಟ್ಟು ಅಲ್ಲಿಯ ಜನ ಹೇಳುತ್ತಾರೆ. ಮಂಗಳೂರಿನ ( ಸೊರಬ ) ಮಾಸ್ತಮ್ಮಳನ್ನು ಮುಟ್ಟಬಾರದು, ಮುಟ್ಟಿದರೆ ಕೆಟ್ಟದಾಗುತ್ತದೆ ಎಂದು ತಿಳಿದಿದ್ದಾರೆ. ಹತ್ತಳ್ಳಿಯ ( ಇಂಡಿ ) ಮಾಸ್ತಿಗೆ ಬೆನ್ನಿನಲ್ಲಿ ಉಸಿರು ಸಿಕ್ಕವರು ( ಸಿಲ್ಕ ಸಿಕ್ಕವರು ) ಹೋಗಿ ಬೆನ್ನು ತಿಕ್ಕಿದರೆ ಸಂಪೂರ್ಣ ಆರಾಮವಾಗುತ್ತದೆ ಎಂದು ನಂಬಿಕೊಂಡಿದ್ದಾರೆ. ಯರಬಳ್ಳಿಯ ( ಹಿರಿಯೂರು ) ಮಾಸ್ತೆಮ್ಮನ ಹೊಲದಲ್ಲಿ ಹೆಸರು, ಸಜ್ಜೆ ಮಾತ್ರ ಬರುತ್ತವೆ, ಉಳಿದ ಯಾವ ಬೆಳೆಯೂ ಬರುವುದಿಲ್ಲವೆಂದು ಹೇಳುತ್ತಾರೆ. ಕುದುರೆಗಣಿಗ್ರಾಮದ ( ಸೊರಬ) ಮಾಸ್ತೆಮ್ಮನಿಗೆ ಕೈಮುಗಿದರೆ " ಖಜ್ಜಿ " ಆಗುತ್ತವೆ ಎಂದು ಅಲ್ಲಿಯ ಜನ ತಮ್ಮ ಭಯವನ್ನು ತೋಡಿಕೊಳ್ಳುತ್ತಾರೆ. ಚಿಕ್ಕಹುಡೇವಿನ ( ಚನ್ನಗಿರಿ ) ಮಾಸ್ತೆಮ್ಮನಿಂದ ಪೂಜಾರಿಣಿಯು ಹಾಗೂ ಅವಳ ಮನೆಯಲ್ಲಿ ಇನ್ನು ಆರು ಜನ ಹೆಣ್ಣುಮಕ್ಕಳು ವಿಧವೆಯರಾಗಿದ್ದಾರೆಂದು ಪೂಜಾರಿಗೆ ನಂಬಿಕೊಂಡಿದ್ದನ್ನು ಡಾ: ಎಂ. ಚಿದಾನಂದಮೂರ್ತಿಯವರು ಹೇಳುತ್ತಾರೆ.[119] ಮಾಸಡಿಯಲ್ಲಿರುವ ( ಹೊನ್ನಾಳಿ ) ಮಾಸ್ತಮ್ಮಳು " ಸಹಗಮನ ಮಾಡುವಾಗ ಮಕ್ಕಳಿರಲಿಲ್ಲ — ವಾದ್ದರಿಂದ ಅವಳು ಸಹಗಮನ ಮಾಡಿದ ಜಾಗದಲ್ಲಿ ಬೆಳೆದಿರುವ ಬೇವಿನಮರ ಹೂವು ಮಾತ್ರ ಬಿಡುತ್ತದೆ, ಕಾಯಿ ಬಿಡುವುದಿಲ್ಲವೆಂದು ಇವರ ನಂಬಿಕೆ " ಎಂದು ಅಲ್ಲಿಯ ಜನರ ನಂಬಿಕೆಯೊಂದನ್ನು ಡಾ: ಬಸವರಾಜ ಕಲ್ಗುಡಿಯವರು ತಿಳಿಸುತ್ತಾರೆ.[120] ಹೀಗೆ ಹಲವು ನಂಬಿಕೆಗಳು ' ಸತಿದೇವತೆ ' ಯೊಡನೆ ಬೆಳೆದು ಬಂದು, ಆ ನಂಬಿಕೆಗಳಂತೆ ಜನ ತಪ್ಪದೇ ಬದುಕುವುದನ್ನು ಕಾಣುತ್ತೇವೆ.

ಕೆಲವು ಕಟ್ಟುನಿಟ್ಟಾದ ನಿಷಿದ್ಧಗಳು ಸತಿದೇವತೆ ಕುರಿತು ಇವೆ. ಶ್ರೀರಂಗಪಟ್ಟಣದ ಮಾಸ್ತಿಗುಡಿಯಲ್ಲಿ ಬೆಸ್ತರನ್ನು ಬಿಟ್ಟು ಇನ್ನುಳಿದವರಾರೂ ಪ್ರವೇಶಿಸುವಂತಿಲ್ಲ. ಅದೇ ರೀತಿ, ಗುತ್ತಲಿನ ( ಮಂಡ್ಯ ) ಮಾಸ್ತಿಗುಡಿಯಲ್ಲಿ ಮತ್ತು ಕಬ್ಬರಗಿಯ ( ಕುಷ್ಟಗಿ ) ಮಾಸ್ತಮ್ಮನ ಗುಡಿಯಲ್ಲಿ ಹೆಣ್ಣುಮಕ್ಕಳಿಗೆ ಪ್ರವೇಶವಿಲ್ಲ. ಹೆಮ್ಮನಹಳ್ಳಿಯ(ಮದ್ದೂರ ) ಮಾಸ್ತಿಮಂಟಪಕ್ಕೆ ಮುಟ್ಟಾದ ಸ್ತ್ರೀಯರು ಹೋಗುವಂತಿಲ್ಲ. ಕೊಪ್ಪದಲ್ಲಿ (ಸಾಗರ ) ಹೆಣ್ಣು ಮಕ್ಕಳು ಮಾಸ್ತಿಕಲ್ಲನ್ನು ಪೂಜಿಸಲೇಬಾರದೆಂಬ ನಿರ್ಬಂಧನೆ ಇದೆ. ಕೊಂಡದಹಳ್ಳಿಯ

ಮಾಸ್ತಿಗುಡಿಯಲ್ಲಿ, ಋತುಮತಿಯಾದ ಹುಡುಗಿ, ಮದುವೆಯಾದ ಹುಡುಗ ಪ್ರವೇಶಿಸುವಂತಿಲ್ಲ, ಅಲ್ಲಿಯ ( ಮಾಸ್ತಿ ) ಕೊಳದಲ್ಲಿ ಹೆಂಗಸರು ಬಟ್ಟೆ ಒಗೆಯುವಂತಿಲ್ಲ. ಅದನ್ನು ಹೊರಜಾದ ಸ್ತ್ರೀಯರಾಗಲಿ, ಕೆಳಜಾತಿಯವರಾಗಲಿ ಪ್ರವೇಶಿಸುವಂತಿಲ್ಲ. ಹೀಗೆ ಮಹಾಸತಿ ದೇವತೆ ಕುರಿತು ನಿರ್ದಿಷ್ಟಪಡಿಸಿದ ಕೆಲವು ನಿಷಿದ್ಧಗಳಿವೆ. ಅವುಗಳನ್ನು ಜನಪದ ಜೀವನದಲ್ಲಿ ತಪ್ಪದೇ ಪಾಲಿಸಿಕೊಂಡು ಬರಲಾಗುತ್ತಿದೆ, ಮನುಷ್ಯ ಕಾನೂನಿನ ಕಟ್ಟುಪಾಡು-ಗಳಿಗಿಂತಲೂ ತನಗರಿಯದ ಶಕ್ತಿಯ ನಂಬಿಕೆಗಳಿಗೆ, ನಿರ್ಬಂಧನೆಗಳಿಗೆ ಸಹಜವಾಗಿ ಬಂಧಿತನಾಗಿ ಬದುಕುವುದನ್ನು ಇಲ್ಲಿ ಕಂಡುಕೊಳ್ಳಬಹುದಾಗಿದೆ.

7. <u>ಸತಿಯ ಜಾತ್ರೆ – ಉತ್ಸವಗಳು:</u> ಸತಿಯ ಜಾತ್ರೆ – ಉತ್ಸವಗಳು ಕರ್ನಾಟಕದ ಹುಲ್ಲುಕಲ್ಲು ( ಹೊಸನಗರ ), ಕಾನಮಡಗು ( ಕೂಡ್ಲಿಗೆ ), ಅರಗಾ (ಕಾರವಾರ ), ಚಂದಾವರ ( ಹೊನ್ನಾವರ ), ಮುರ್ಡೇಶ್ವರ ( ಬಟ್ಕಳ ), ಅನಿಲಗೋಡಹಳ್ಳಿ (ಹೊನ್ನಾವರ), ಕೋಕ್ಕಿಕಟ್ಟೆ ( ಬಟ್ಕಳ ), ಅಂಕೋಲಾ, ಮಲ್ಲಂದೂರು ( ಸಾಗರ ), ಅಗಸನಹಳ್ಳಿ ( ಬ್ಯಾಡಗಿ ), ಕುಮಟಾ, ಕಬ್ಬರಗಿ ( ಕುಷ್ಟಗಿ ), ಕೊಂಡದಹಳ್ಳಿ ( ಚನ್ನಗಿರಿ ), ಅರಕೆರೆ, (ಶ್ರೀರಂಗಪಟ್ಟಣ ), ಮಾಚನಹಳ್ಳಿ ( ಮದ್ದೂರು ) – ಈ ಮೊದಲಾದ ಗ್ರಾಮಗಳಲ್ಲಿ ಜರುಗುವುದನ್ನು ಕಾಣುತ್ತೇವೆ. ಹೆಚ್ಚಾಗಿ ಈ ಜಾತ್ರೆ – ಉತ್ಸವಗಳು ವರ್ಷಕ್ಕೊಂದು ಬಾರಿ ನಡೆಯುತ್ತವೆ. ಆದರೆ ಕಬ್ಬರಗಿಯಲ್ಲಿ ನಡೆಯುವ ಜಾತ್ರೆ ಮಾತ್ರ ಮೂರು ವರ್ಷಗಳಿಗೊಮ್ಮೆ ನಡೆಯುತ್ತದೆ. ಇವು ಸಾಮಾನ್ಯವಾಗಿ ಒಂದು ದಿನದ ಜಾತ್ರೆಗಳಾಗಿರುತ್ತವೆ. ಆದರೆ ಅಗಸನಹಳ್ಳಿಯಲ್ಲಿ ಎರಡು ದಿನಗಳ, ಕಬ್ಬರಗಿಯಲ್ಲಿ ಮೂರು ದಿನಗಳ, ಮುರ್ಡೇಶ್ವರದಲ್ಲಿ ಐದು ದಿನಗಳ ಜಾತ್ರೆ ನಡೆಯುವುದನ್ನು ಕಾಣುತ್ತೇವೆ. ಈ ಜಾತ್ರೆ–ಉತ್ಸವಗಳೆಲ್ಲ ಸಾಮಾನ್ಯವಾಗಿ ಒಂದೇ ಸ್ವರೂಪದವುಗಳಾಗಿರುತ್ತವೆ. ಇವು ನಡೆಯುವ ಕಾಲಕ್ಕೆ ಸತಿ ಪೂಜೆ ಒಳ್ಳೆಯ ಉತ್ಸಾಹ – ಸಡಗರದಿಂದ ನೆರವೇರಿಸಲಾಗುತ್ತದೆ. ರಕ್ತಬಲಿಯಿಂದಲೋ, ಹೂವು – ಹಣ್ಣು – ಕಾಯಿಗಳಿಂದಲೋ ಪೂಜೆ ನಡೆಯುತ್ತದೆ.

ಸತಿಯ ಜಾತ್ರೆ – ಉತ್ಸವ ಸಮಾರಂಭಗಳ ಕಾಲಕ್ಕೆ ಸಾಮಾನ್ಯವಾಗಿ ಮಾಸ್ತಿ – ದೇವತೆ ಪೂಜಾರಿಯ ಮೈಯಲ್ಲಿ ಪ್ರವೇಶಿಸುತ್ತಾಳೆ. ಅರಗಾ, ಮುರ್ಡೇಶ್ವರ, ಕೋಕ್ಕಿಕಟ್ಟೆ,

ಚಂದಾವರ, ಅನಿಲಗೋಡಹಳ್ಳಿ, ಆಗಸನಹಳ್ಳಿ, ಅಂಕೋಲಾ, ಮಾಚನಹಳ್ಳಿ ಮೊದಲಾದ ಊರುಗಳಲ್ಲಿಯ ಮಾಸ್ತಿ ಮೈಯಲ್ಲಿ ಬರುವುದುಂಟು. ಅಂಕೋಲೆಯಲ್ಲಿ ಬಂಡಿಹಬ್ಬದಂದು ಮಾಸ್ತಿ ಮೈಯಲ್ಲಿ ಪ್ರವೇಶಿದ ಪೂಜಾರಿಯು ಮಾಸ್ತಿಮುಖವಾಡವನ್ನು ಹಿಡಿದುಕೊಂಡು ಅಗ್ನಿಪ್ರವೇಶ ಮಾಡುತ್ತಾನೆ.[122] ( ಚಿತ್ರ — 36) ಅದಕ್ಕೂ ಪೂರ್ವದಲ್ಲಿ ಗಂಡ ಯುದ್ಧಭೂಮಿಯಲ್ಲಿ ಸಾಯುವುದನ್ನು ಅಡಿತೋರಿಸಲಾಗುತ್ತದೆ. ಅದನ್ನು ಕೇಳಿದ ಸತಿ ಕೊಂಡಕ್ಕೆ ಬೀಳಲು ಸಿದ್ಧತೆಮಾಡಿಕೊಳ್ಳುತ್ತಾಳೆ. ಇದೇ ಸಮಯದಲ್ಲಿ ಜನರು ಹರಕೆ ಹೊತ್ತುಕೊಳ್ಳುತ್ತಾರೆ. ತಮ್ಮ ಕಷ್ಟ — ಸುಖಗಳ ಬಗ್ಗೆ ಕೇಳಿಕೊಳ್ಳುತ್ತಾರೆ. ಹೀಗೆ ಮಾಸ್ತಿ ಮೈಯಲ್ಲಿ ಪ್ರವೇಶಿಸಿದಾಗ ಹರಕೆ ಹೊತ್ತುಕೊಳ್ಳುವುದು ಮತ್ತು ಕಷ್ಟ ಸುಖಗಳ ಬಗ್ಗೆ ಕೇಳಿಕೊಳ್ಳುವುದು,— ಈ ಎಲ್ಲ ಬಗೆಯ ಆಚರಣೆಗಳು ಇನ್ನುಳಿದ ಊರುಗಳ ಜಾತ್ರೆಗಳಲ್ಲೂ ನಡೆಯುತ್ತವೆ.

ಕೊಂಡದಹಳ್ಳಿಯಲ್ಲಿ ಯುಗಾದಿಯ ನಂತರ, ಮಾಸ್ತಮ್ಮನ ಉತ್ಸವ ಆಗುತ್ತದೆ ಎಂದು ಡಾ: ಚಿದಾನಂದಮೂರ್ತಿಯವರು ತಿಳಿಸಿ, ಮಾಸ್ತಮ್ಮನ ಮದುವೆಯ ಆಚರಣೆಯನ್ನು ವಿವರಿಸುತ್ತ ಹೀಗೆ ಬರೆಯುತ್ತಾರೆ : ''....... ಗುಡಿಗೆ ಬಂದು ಅಲ್ಲಿ ಮಾಸ್ತ್ಯಮ್ಮ ಮತ್ತು ಆ ಕೆರೆಯ ಗಂಡನಿಗೆ ಮದುವೆ ನಡೆಸುತ್ತಾರೆ. 'ಅಮ್ಮನ ಕಲ್ಲಿಗೆ' ಅನೇಕ ಒಡವೆಗಳನ್ನು ಹಾಕಿ 'ಮುಖಪದ್ಮ' ಮತ್ತು 'ಗಂಡನ ಕಲ್ಲ'ಗೆ ಮುಡಿಸಿದ್ದ 'ಗರಿಸಾತ್ರ'ಗಳಿಂದ ಅಲಂಕರಿಸುತ್ತಾರೆ. ಇಲ್ಲಿ ಮದುವೆ ಸತ್ತ ಗಂಡನಿಗೂ ಬದುಕಿರುವ ಮಾಸ್ತ್ಯಮ್ಮನಿಗೂ ನಡೆಯುವುದರಿಂದ 'ಅಮ್ಮನ ಕಲ್ಲ'ಗೆ ಮುಖಪದ್ಮವಿಟ್ಟು ಅಲಂಕರಿಸುತ್ತಾರೆ. 'ಗಂಡನತಲೆ'ಗೆ ಯಾವುದೇ ಅಲಂಕಾರವನ್ನೂ ಮಾಡುವುದಿಲ್ಲ. ಇದು ಮಾಸ್ತ್ಯಮ್ಮ ಸಹಗಮನ ಮಾಡುವ ಮೊದಲು ಅಲಂಕಾರ ಮಾಡಿಕೊಳ್ಳುತ್ತಿದ್ದುದರ ಮತ್ತು ಅವಳಿಗೂ ಅವಳ ಸತ್ತ ಗಂಡನಿಗೂ ಮತ್ತೆ ಮದುವೆ ಶಾಸ್ತ್ರ ಮಾಡಿದುದರ ಸಂಕೇತವಿರಬೇಕು''.[123]

ಕಬ್ಬರಗಿಯಲ್ಲಿ ಮೂರುವರ್ಷಕ್ಕೊಮ್ಮೆ ದವನದ ಹುಣ್ಣಿಮೆಯ ಸಮಯದಲ್ಲಿ ಜಾತ್ರೆ ನಡೆಯುತ್ತದೆ. ಅಂದು ಕಂಬ ಏರುವ ವಿಶೇಷ ಸಮಾರಂಭವೊಂದು ನಡೆಯುತ್ತದೆ: '' ದವನದ ಹುಣ್ಣಿಮೆಯಾದ 9 ದಿವಸಕ್ಕೆ ( ಶುಕ್ರವಾರ ಮೊದಲು ಮಾಡಿ ) ಅಂದು ಸುಮಾರು

30 ಫೂಟು ಉದ್ದವಿರುವ ಒಂದು ದಪ್ಪ ಕಂಬವನ್ನು ದೇಗುಲದ ಹೊರಗಿನ ಬಯಲಿನಲ್ಲಿ ನೆಟ್ಟು ಒಬ್ಬ ವ್ಯಕ್ತಿ ( ಪೂಜಾರಿ ?) ಅದನ್ನೇರಿ ಅದರ ತುದಿಯ ಅಡ್ಡಪಟ್ಟಿಯ ಮೇಲೆ ಕುಳಿತು ಕೊಳ್ಳುವುದು. ಅವನೊಂದಿಗೆ ತೋಳಸರ, ಎಣ್ಣೆ, ಸುರಮಾ ಕೂಡಿಸಿ ಕುದಿಸಿದ ದ್ರವವನ್ನು 2 ಕೊಂಡದ ಹಂಡೆಯಲ್ಲಿ ಹಾಕಿ ಅವನು ಕುಳಿತ ಸ್ಥಾನಕ್ಕೆ ಕೊಡಲಾಗುವುದು. ಮೇಲೆ ಕುಳಿತ ಆತ ಆ ದ್ರವವನ್ನು ಕಂಬದ ಗುಂಟ ಸುರಿಯುವನು. ಆ ದ್ರವ ಕೆಳ — ಗಿಳಿಯುತ್ತಿದ್ದಂತೆ ಹರಕೆ ಇದ್ದ ಹಲವಾರು ಜನಭಕ್ತರು ಆ ಕಂಬವನ್ನೇರಬೇಕು. ಅವರು ಕಷ್ಟ ಪಟ್ಟು ಆ ಕಂಬವನ್ನು ಏರಿದ ನಂತರವೇ ಅಲ್ಲಿ ಮಾಸ್ತಿ ಜಾತ್ರೆ ಜರುಗುವುದು. ಪ್ರಾಣಿ ಬಲಿಯೊಂದಿಗೆ ಸುಮಾರು 3 ದಿವಸ ಅನವರತ ಜಾತ್ರೆ ನೆರವೇರುವುದು ''.[124] ಹೀಗೆ ಕಂಬ ಏರುವ ಸಮಾರಂಭ ಮುರ್ಡೇಶ್ವರ, ಕೋಕ್ತಿಕಟ್ಟೆ, ಅನಿಲಗೋಡಹಳ್ಳಿಗಳ ಮಾಸ್ತಿ ಜಾತ್ರೆಯಲ್ಲಿಯು ಸ್ವಲ್ಪ ಬದಲಾವಣೆಗೊಂಡು ನಡೆಯುವುದನ್ನು ಇಲ್ಲಿ ಸ್ಮರಿಸಬಹುದು.

ಕುಮಟಾದಲ್ಲಿ ನವರಾತ್ರಿಯಲ್ಲಿ ಮಾಸ್ತ್ಯಮ್ಮನ ಗುಡಿಯಲ್ಲಿ ದೊಡ್ಡ ಉತ್ಸವವೇ ಜರುಗುತ್ತದೆ.[125] ನಾಟಕ, ಕೀರ್ತನೆ, ಭಜನೆಗಳು ಆ ಕಾಲಕ್ಕೆ ನಡೆಯುತ್ತವೆ. ಯಜ್ಞಕುಂಡ ಏರ್ಪಡಿಸಲಾಗಿರುತ್ತದೆ. ಮುಲ್ಲಂದೂರಿನಲ್ಲಿ ದೀಪಾವಳಿಯ ಸಮಯಕ್ಕೆ ಮಾಸ್ತಿ ಗುಡಿಯ ಮುಂದೆ ಚಿಕ್ಕ ಉತ್ಸವವೊಂದುಜರುಗುತ್ತದೆ. ಆಗ ಮುಲ್ಲಂದೂರ, ದಾಸಕೊಪ್ಪ, ಕೈರ, ಶಿವಗಂಗೆ ಈ ಮೊದಲಾದ ಊರಿನ ಜನರು ತಮ್ಮ ತಮ್ಮ ಎತ್ತುಗಳನ್ನು ತಗೆದು ಕೊಂಡು ಬಂದು ಮಾಸ್ತಿಗುಡಿಯ ಹತ್ತಿರ ಸಾಲಾಗಿ ನಿಲ್ಲಿಸುತ್ತಾರೆ. ಮಾಸ್ತಿಗೆ ಹಣ್ಣು — ಕಾಯಿಗಳ ಪೂಜೆ ಮಾಡಿ ಎತ್ತುಗಳನ್ನು ಪೂಜಿಸುತ್ತಾರೆ. ಈ ಸಮಯದಲ್ಲಿ ವಾದ್ಯಗಳನ್ನು ಬಾರಿಸಲಾಗುತ್ತಿರುತ್ತದೆ. ಹೀಗೆ ಸುಮಾರು ಎರಡು ಗಂಟೆಗಳವರೆಗೆ ಪೂಜಾಕಾರ್ಯ ಮಾಡಿ, ನಂತರ ಎತ್ತುಗಳನ್ನು ತಮ್ಮ ತಮ್ಮ ಮನೆಗಳಿಗೆ ತಗೆದುಕೊಂಡು ಹೋಗುತ್ತಾರೆ. ಮಾಸ್ತಿ ಗುಡಿಗೆ ಎತ್ತುಗಳನ್ನು ತಂದು ಪೂಜಿಸುವುದೇಕೆ ಎಂದು ಕೇಳಿದರೆ, ಅದು ಮೊದಲಿನಿಂದಲೂ ನಡೆದು ಬಂದದ್ದು ಎಂದು ಮಾತ್ರ ಹೇಳುತ್ತಾರೆ. ಬಹುಶಃ ಮಾಸ್ತಿ ಉತ್ಸವದ ನಂತರವೇ ಹೊಲವನ್ನು ರೈತರು ಎತ್ತುಗಳಿಂದ ಉಳುತ್ತಿರುವ ಸಂಪ್ರದಾಯ ಮೊದಲು ಇಲ್ಲಿ ನಡೆದುಕೊಂಡು ಬರುತ್ತಿರಬೇಕು. ಡಾ: ಎಂ. ಚಿದಾನಂದಮೂರ್ತಿಯವರು ಕೊಂಡದ ಹಳ್ಳಿ ಮಾಸ್ತಿ ಕುರಿತು
[illegible]
ಬರೆಯುತ್ತ '' ಮಾಸ್ತೆಮ್ಮ ಅವನನ್ನು ಶಿಕ್ಷಿಸುತ್ತಾಳೆ ಎಂಬುದಕ್ಕೆ ಕತೆಗಳಿವೆ '' ಎಂದು ಹೇಳುವ

ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.[126]

ಆಗಸನಹಳ್ಳಿಯಲ್ಲಿ ಭಾರತ ಹುಣ್ಣಿಮೆಯಾದ ಒಂಭತ್ತು ದಿನಕ್ಕೆ ಮಾಸ್ತಿ ಜಾತ್ರೆ ನಡೆಯುತ್ತದೆ. ಅಂದಿನ ಜಾತ್ರೆಯಲ್ಲಿ ಭಜನೆಯ ಹಾಡುಗಳು, ಡೊಳ್ಳಿನ ಹಾಡುಗಳು ನಡೆಯುತ್ತವೆ. ತಳಿರು ತೋರಣಗಳಿಂದ ಗುಡಿಯನ್ನು ಸಿಂಗರಿಸಿರುತ್ತಾರೆ. ದೊಡ್ಡ ಪ್ರಮಾಣದಲ್ಲಿ ಕುರಿ — ಕೋಳಿಗಳ ಬಲಿಕೊಡಲಾಗುತ್ತದೆ. ಅದನ್ನೇ ಪ್ರಸಾದವಾಗಿ ಭಕ್ತರಲ್ಲಿ ಹಂಚಲಾಗುತ್ತದೆ. ಹರಕೆಹೊತ್ತ ಹೆಣ್ಣುಮಕ್ಕಳು ಬೇವಿನಸೊಪ್ಪನ್ನು ನಡುವಿಗೆ ಕಟ್ಟಿಕೊಂಡು ಸಂಪೂರ್ಣ ಬತ್ತಲೆಯಾಗಿ ಮಾಸ್ತಿಗುಡಿಯವರೆಗೆ ನಮಸ್ಕಾರ ( ದೀಡ ನಮಸ್ಕಾರ ) ಹಾಕುತ್ತಾರೆ. ಅಂದಿನ ದಿನವೇ ಮಾಸ್ತ್ಯಮ್ಮಳ ಪಲ್ಲಕ್ಕಿಯನ್ನು ಊರಿನಲ್ಲೆಲ್ಲ ಊದುತ್ತ — ಬಾರಿಸುತ್ತ ಮೆರೆಯಿಸಿ ಅದನ್ನು ಗುಡಿಯವರೆಗೆ ತಂದು ಜಾತ್ರೆಯನ್ನು ಮುಗಿಸಲಾಗುತ್ತದೆ.

— 0 —

ಅಡಿ ಟಿಪ್ಪಣಿಗಳು:

1. ಗ್ರಾಮೀಣ : ಡಾ: ಎಂ.ಚಿದಾನಂದಮೂರ್ತಿ 'ಸೌಭಾಗ್ಯದ ಲಕ್ಷಣಗಳು', ಪು.154 ಸೌಭಾಗ್ಯದ ಲಕ್ಷಣಗಳ ವಿವರಣೆಗಾಗಿ ಈ ಲೇಖನವನ್ನು ನೋಡಬಹುದು.

2. ಎಮ್.ಎ.ಆರ್. 1928, 88

3. ಕರ್ನಾಟಕದ ಇತಿಹಾಸ : ಪಂಚಮುಖಿ ಆರ್.ಎಸ್. 'ವೀರಗಲ್ಲುಗಳು—ಸ್ಮಾರಕಗಳು' ( ಭಾಗ –2, ಸಾಂಸ್ಕೃತಿಕ ಚರಿತ್ರೆ) ಪು.-195,

4. ವಿವರಕ್ಕಾಗಿ ಕೆಲವು ಮಾಸ್ತಿಕಲ್ಲುಗಳನ್ನು ಉದಾಹರಿಸಬಹುದು:
ತಾಳಿಯುಳ್ಳ ಮಾಸ್ತಿಶಿಲ್ಪ — ಇಟಗಿ ( ರಾಣೆಬೆನ್ನೂರ ) : ಕವಿಲೆದುರ್ಗ (ತೀರ್ಥಹಳ್ಳಿ) ಇಲ್ಲಿ 1 ಮತ್ತು 5ನೆಯ ಮಾಸ್ತಿಕಲ್ಲುಗಳಲ್ಲಿ 'ತಾಳಿ' ಇದೆ: ಶಿವಮೊಗ್ಗದ ಸಶಸ್ತ್ರ ಮೀಸಲು ಪಡೆ ಆಫೀಸಿನಲ್ಲಿರುವ 2ನೇ ಮಾಸ್ತಿಕಲ್ಲು ಶಿವಮೊಗ್ಗದ ವಸ್ತುಸಂಗ್ರಹಾಲಯದಲ್ಲಿರುವ 14ನೇ ಮಾಸ್ತಿಕಲ್ಲು. ಬಳೆಗಳುಳ್ಳ ಮಾಸ್ತಿಶಿಲ್ಪ — ಮಲ್ಲಂದೂರ(ಸಾಗರ) ಕುಂದೂರ ( ಸಿಗ್ಗಾಂವ ) ಕೆಳಗಿ ( ಸಾಗರ ) : ಶಿರಾಳಕೊಪ್ಪ ( ಶಿಕಾರಿಪುರ ) ಓಲೆಗಳುಳ್ಳ ಮಾಸ್ತಿಶಿಲ್ಪ — ಅಣೂರ ( ಬ್ಯಾಡಗಿ ) : ತಡಸ ( ಸಿಗ್ಗಾಂವ ) ಕವಿಲೆದುರ್ಗ ( ತೀರ್ಥಹಳ್ಳಿ ) 3ನೇ ಮಾಸ್ತಿಕಲ್ಲು: ಚಿಕ್ಕಹಾಲವಾಣ ( ಹೊನ್ನಾಳಿ ) ಕಡಗಗಳನ್ನುಳ್ಳ ಮಾಸ್ತಿಶಿಲ್ಪ — ಮಲ್ಲಂದೂರ ( ಸಾಗರ ) : ಉಮರಾಣಿ ( ಇಂಡಿ ) ಕೆಳದಿ ( ಸಾಗರ ) : ಕೊರಳಲ್ಲಿ ಮುತ್ತಿನ ಸರಗಳುಳ್ಳ ಮಾಸ್ತಿ ಶಿಲ್ಪ — ಮಲ್ಲಂದೂರ (ಸಾಗರ ), ಕವಿಲೆದುರ್ಗ ( ತೀರ್ಥಹಳ್ಳಿ ) 1ನೆಯ ಮಾಸ್ತಿಕಲ್ಲು: ಶಿವಮೊಗ್ಗದ ವಸ್ತುಸಂಗ್ರಹಾಲಯದಲ್ಲಿರುವ 14ನೆಯ ಮಾಸ್ತಿಕಲ್ಲು. ಡಾಬು ತೊಟ್ಟ ಮಾಸ್ತಿಶಿಲ್ಪ — ಕವಿಲೆದುರ್ಗ ( ತೀರ್ಥಹಳ್ಳಿ) — 3ನೆಯ ಮಾಸ್ತಿಕಲ್ಲು : ಚಿಕ್ಕಹಾಲವಾಣ ( ಹೊನ್ನಾಳಿ) ಶಿವಮೊಗ್ಗದ ವಸ್ತುಸಂಗ್ರಾಲಯದಲ್ಲಿರುವ 4ನೇ ಮಾಸ್ತಿಕಲ್ಲು. ತಲೆಯ ಮೇಲೆ ಮುತ್ತಿನ ಸರ ಹೊಂದಿದ ಮಾಸ್ತಿಶಿಲ್ಪ — ಮಲ್ಲಂದೂರ, ( ಸಾಗರ ) ಹೊಸಕುಳಿ (ಹೊನ್ನಾವರ ) — ಹೊನ್ನಮಾಸ್ತಿ : ಕೆಳದಿ ( ಸಾಗರ ) : ಕುಣಗನಹಳ್ಳಿ (ಗುಂಡ್ಲುಪೇಟೆ) ತಲೆಯ ಮೇಲೆ ಹೂವಿನ ದಂಡೆ ಹೊಂದಿದ ಮಾಸ್ತಿಶಿಲ್ಪ — ಕುಪ್ಪೇಗ್ರಾಮ ( ಸೊರಬ ) ಶಿರಾಲಿ ( ಬಟ್ಕಳ) ಕೆಳದಿ ( ಸಾಗರ ) : ಬಳ್ಳಿಗಾವೆ ( ಶಿಕಾರಿಪುರ ), ಕಾಲಲ್ಲಿ ಅಂದುಗೆ

ಹೊಂದಿ ಮಾಸ್ತಿಶಿಲ್ಪ — ಮಂಗಳೂರು ( ಸೊರಬ ) ಕಳಸ ಹೊಂದಿದ ಮಾಸ್ತಿಶಿಲ್ಪ— ಚಿಕ್ಕಹಾಲಿಮಾಣ ( ಹೊನ್ನಾಳಿ ) — 2ನೆಯ ಮಾಸ್ತಿಕಲ್ಲು: ಬಳ್ಳಿಗಾವೆ ( ಶಿಕಾರಿಪುರ ) ಸಂಡದ ( ಶಿಕಾರಿಪುರ ) ಕವಿಲೆದುರ್ಗ ( ತೀರ್ಥಹಳ್ಳಿ ) — 3ನೆಯ ಮಾಸ್ತಿಕಲ್ಲು ಹೂ ಹೊಂದಿದ ಮಾಸ್ತಿಶಿಲ್ಪ — ಕುಂಬತಿಗ್ರಾಮ ( ಸೊರಬ ) : ಕಿಪ್ಪಡಿ ( ಸಾಗರ ) ಮುಡಿಗೊಂಡ ( ಕೊಳ್ಳೆಗಾಲ ) — ಕಂಬದಿಂದ ಹೊರಟ ಕೈಯುಳ್ಳಮಾಸ್ತಿಕಲ್ಲಿನ ಮೇಲೆ ಹೂ, ಮುತ್ತಿನಸರ, ಕಳಸ, ಇವೆ. ಕನ್ನಡಿ ಹೊಂದಿದ ಮಾಸ್ತಿಶಿಲ್ಪ — ಶಿವಮೊಗ್ಗದ ವಸ್ತು ಸಂಗ್ರಹಾಲಯದಲ್ಲಿಯ 6ನೆಯ ಮಾಸ್ತಿಕಲ್ಲು : ಕವಿಲೆದುರ್ಗ ( ತೀರ್ಥಹಳ್ಳಿ ) — 2,3, 4,5,9, ಈ ಮಾಸ್ತಿಕಲ್ಲುಗಳು: ಅಂಚೆ ಹೊಂದಿದ ಮಾಸ್ತಿಶಿಲ್ಪ — ಅಣೂರ ( ಬ್ಯಾಡಗಿ ) ಮಾಸ್ತಿಕಟ್ಟ ( ಅಂಕೋಲಾ ) — ಮಾಸ್ತಿಗುಡಿಯ ಹಿಂದಿನ ಗೋಡೆಯಲ್ಲಿಯ ಮಾಸ್ತಿ — ಕಲ್ಲು : ಕುಂದೂರ ( ಸಿಗ್ಗಾಂವ ) : ಕುಪ್ಪೇಗ್ರಾಮ ( ಸೊರಬ ) : ಕಿಪ್ಪಡಿ (ಸಾಗರ ) : ಕೆಳದಿ ( ಸಾಗರ ) ಹುಲ್ಲುಕಲ್ಲು ( ಹೊಸನಗರ )

5. ಅನಿಲಗೋಡಹಳ್ಳಿ ( ಹೊನ್ನಾವರ ) : ಬಟ್ಕಳ ( ಬಟ್ಕಳ ) — ಶ್ರೀಕೋಕ್ತಿಕಟ್ಟೆ ಮಾಸ್ತಿ: ಶಿರಾಲಿ ( ಬಟ್ಕಳ ), ಮುರ್ಡೇಶ್ವರ ( ಬಟ್ಕಳ ) — ಹರಕೆಯ ಮಾಸ್ತಿಗೊಂಬೆಗಳು ಸೌಭಾಗ್ಯದ ಸಂಕೇತಗಳನ್ನು ಹೊಂದಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಇವು ಹೆಚ್ಚಾಗಿ ಕಾರವಾರ, ಮಂಗಳೂರು ಪ್ರದೇಶಗಳಲ್ಲಿ ಸಿಗುತ್ತವೆ.

6. ಹೊನ್ನಾವರ ( ಹೊನ್ನಾವರ ) : ಅರಗಾ ( ಕಾರವಾರ ) ಸಂತಕುಳಿ (ಹೊನ್ನಾವರ) ಅನಿಲಗೋಡಹಳ್ಳಿ ( ಹೊನ್ನಾವರ ) ಅಗಸನಹಳ್ಳಿ ( ಬ್ಯಾಡಗಿ )

7. ಸಕಲ ಪುರಾತನರ ವಚನಗಳು 1761

8. ಕವಿ ಚಕ್ರವರ್ತಿ ಜನ್ನ ವಿರಚಿತ ಅನಂತನಾಥ ಪುರಾಣಂ : ಪು.279.

9. ನಂಜುಂಡಕವಿ ವಿರಚಿತ ರಾಮನಾಥಚರಿತ (ಉತ್ತರಾರ್ಧ ) ಸಂಪುಟ — 3 ಪು. 336—337

10. ಅದೇ 336.

11. ಶ್ರೀ ಸಿದ್ಧೇಶ್ವರ ಮಹಾಪುರಾಣ, 12—35,36

12. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ XVI : 70—72.

13. ಸಿರುಮಣನಾಯಕನ ಸಾಂಗತ್ಯ: ಪು. 67

14. ಬಸವಣ್ಣನವರ ಟೀಕಿನ ವಚನಗಳು, ವ 680.

15. ಅಖಂಡೇಶ್ವರ ವಚನ ( ಷಣ್ಮುಖಸ್ವಾಮಿ ) ವ. 138.

16. ಜನಪದ ಕಥಾಸಂಗಮ : (ಸಂ) : ಡಿ. ಲಿಂಗಯ್ಯ, ಮಾಸ್ತಮ್ಮ — ಪು. 86, ಆಯ್ದ ಜನಪದ ಕತೆಗಳು : (ಸಂ) ಜೀ. ಶಂ. ಪರಮಶಿವಯ್ಯ ಕೊಂಡದಚೆನ್ನಮ್ಮ— ಪು. 158, ಕುಳಗುಚ್ಚಮ್ಮ — 163.

17. ಕತ್ತಾಲ ದಾರಿ ದೂರ : ಕೃಷ್ಣಮೂರ್ತಿ ಹನೂರ, ಪು. 33, 35,

18. ಅದೇ ಪು. 94

19. ಅದೇ ಪು. 105

20. ಜನಪದ ಖಂಡಕಾವ್ಯಗಳು: (ಸಂ) ಜೀ. ಶಂ. ಪರಮಶಿವಯ್ಯ, ಈರೋಬಿ, ಪು. 9.

21. ವಡ್ಡಗೆರೆ ನಾಗಮ್ಮ: (ಸಂ) ವೈಜಯಂತಿಮಾಲ. ಪು. 84

22. ಕತ್ತಾಲದಾರಿ ದೂರ : ಕೃಷ್ಣಮೂರ್ತಿ ಹನೂರ ಪು. 106, 107

23. ಜನಪದ ಖಂಡಕಾವ್ಯಗಳು: (ಸಂ) ಜೀ. ಶಂ. ಪರಮಶಿವಯ್ಯ ಪು. 26.

24. ಕತ್ತಾಲ ದಾರಿ ದೂರ : ಕೃಷ್ಣಮೂರ್ತಿ ಹನೂರ, ಪು :37,
'ಕಾಟವ್ವ' ಸತಿಹೋಗುವಾಗ ಹೀಗೆ ಪದ್ಯವೊಂದು ಬರುತ್ತದೆ.
ಗಂಜೀಯ ಸೀರುಡಿಸ್ಯಾರೆ ಗಂದಾದ ಬಟ್ಟಿಟ್ಟಾರೆ,
ತಂಗ್ಯೊರೊಯ್ದಾರೆ ಮುದುಲಕ್ಕಿ
ತಂಗ್ಯೊರೊಯ್ದಾರೆ ಮುಡುಲಕ್ಕಿ: ಕಾಟಮ್ಮನ
ಗಂಡನ ಮನಿಗೇ ಕಳುವ್ಯಾರೇ — ಅದೇ ಪು. 107.

25. ಪ್ರವಾಸಿ ಕಂಡ ಇಂಡಿಯಾ :(ಸಂ) — 2: (ಸಂ) ಎಚ್.ಎಲ್. ನಾಗೇಗೌಡ. ಪು. 460—461.

26. ಅದೇ, ಸಂ — 4, ಪು. 246 — 247

27. ಅದೇ, ಸಂ–1, ಪು.76

28. ಅದೇ, ಸಂ–5 , ಪು.472.

29. ಶ್ರೀ ಸಿದ್ಧೇಶ್ವರ ಮಹಾಪುರಾಣ : 12–35, 36

30 ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ XVI : 70:75

31. ಜನಪದ ಖಂಡಕಾವ್ಯಗಳು: ಸಂ: ಜೀ.ಶಂ.ಪರಮಶಿವಯ್ಯ, ಪು. 18 :ಇದೇ ರೀತಿಯ ಪದ್ಯಗಳು ಮಹಾಸತಿ ಕಾಟವ್ವ ಗೀತೆಯಲ್ಲಿ ಬರುತ್ತವೆ : ಕತ್ತಾಲ ದಾರಿ ದೂರ : (ಸಂ) ಕೃಷ್ಣಮೂರ್ತಿ ಹನೂರ, ಪು. 113, ಜಡೆ ಎಳೆದು ದೂಳಲ್ಲಿ ನಲಿಯುತ್ತ ಸತಿ ನಡೆಯುವ ಹೆಜ್ಜೆಯ ವಿವರಗಳು ಅಲ್ಲಿವೆ, ಕೊಂಡದ ಮಾಸ್ತ್ಯಮ್ಮ ಹಾಡಿನಲ್ಲಿ "ಕೊನೆ — ಮುಳ್ಳು" ತುಳಿಯುತ್ತ ನಡೆಯುವ ಸತಿಚಿತ್ರವಿದೆ — ಮಹಾಸತಿ ಆಚರಣೆ ಒಂದು ಅಧ್ಯಯನ, ಪು. 299.

32. ಕತ್ತಾಲ ದಾರಿ ದೂರ : ಸಂ॥ ಡಾ ಕೃಷ್ಣಮೂರ್ತಿ ಹನೂರು, ಪು.91.

33. ಅದೇ.

34. ಸತಿ ಹಾಗೂ ಸಂಗಡಿಗರು ಕುಣಿಯುತ್ತ ಹಾಡುತ್ತಿದ್ದ ಹಾಡಿದು (ಕೆಲವು ವರ್ಷಗಳ ಹಿಂದೆ ಅಡುಕಟ್ಟೆಯಲ್ಲಿ) ಡಾ॥ ಎಲ್.ಆರ್.ಹೆಗಡೆ, ಅವರು ಕೊಡುತ್ತಾರೆ: ನೋಡಿ, ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಪು. 559–560.

35. ಸಿರುಮಣನಾಯಕನ ಸಾಂಗತ್ಯ : ಪು.68.

36. ಪ್ರವಾಸಿ ಕಂಡ ಇಂಡಿಯಾ, ಸಂ — 2: ಸಂ: ಎಚ್.ಎಲ್.ನಾಗೇಗೌಡ.ಪು. 460–461.

37. ಅದೇ, ಸಂ — 4 : ಪು.241–243.

38. ನಂಜುಂಡಕವಿ ವಿರಚಿತ ರಾಮನಾಥ ಚರಿತ ( ಉತ್ತರಾರ್ಧ ) ಸಂ–3: ಪು.337

39. ಪ್ರವಾಸಿ ಕಂಡ ಇಂಡಿಯಾ, ಸಂ–2: ಸಂ:ಎಚ್.ಎಲ್.ನಾಗೇಗೌಡ.ಪು. 296.

40. ಇ.ಸಿ. III 60, ಬೆಳತೂರು, ಹೆಗ್ಗಡದೇವನ ಕೋಟೆ, ಕ್ರಿ.ಶ. 1057.

41. ಸಕಲಪುರಾತನರ ವಚನಗಳು. 1761

42. ಕವಿ ಚಕ್ರವರ್ತಿ ಜನ್ನವಿರಚಿತ ಅನಂತನಾಥ ಪುರಾಣಂ. ಪು. 279.

43. ಸಿರುಮಣನಾಯಕನ ಸಾಂಗತ್ಯ ಪು. 68

44. ನಂಜುಂಡಕವಿ ವಿರಚಿತ ರಾಮನಾಥಚರಿತ :(ಉತ್ತರಾರ್ಧ) : ಸಂ:ಎಚ್.ದೇವೀರಪ್ಪ ಪು. 485, 1964.

45. ಪ್ರವಾಸಿಕಂಡ ಇಂಡಿಯಾ: ಸಂ–1: ಸಂ:ಎಚ್.ಎಲ್.ನಾಗೇಗೌಡ. ಪು.76

46. ಅದೇ, ಸಂ–2, ಪು.296.

47. ಅದೇ, ಪು.296.

48. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ|| ಬಸವರಾಜ ಕಲ್ಗುಡಿ.ಪು.141.

49. ನಂಜುಂಡಕವಿ ವಿರಚಿತ ರಾಮನಾಥಚರಿತ : (ಉತ್ತರಾರ್ಧ) ಪು.337.

50. ಬಯಲು ಸೀಮೆಯ ಲಾವಣಿಗಳು: ಸಂ|| ಕಾಳೇಗೌಡ ನಾಗವಾರ :ವಡ್ಡಗೆರೆ ನಾಗಮ್ಮ. ಪು. 73–88.

51 ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ|| ಎಂ.ಚಿದಾನಂದಮೂರ್ತಿ, ಪು. 16

52. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ|| ಬಸವರಾಜ ಕಲ್ಗುಡಿ. ಪು.289.

53. ಕತ್ತಾಲ ದಾರಿ ದೂರ : ಸಂ|| ಕೃಷ್ಣಮೂರ್ತಿ ಹನೂರ, ಪು.37.

54. ಬಯಲುಸೀಮೆಯ ಲಾವಣಿಗಳು: ಸಂ|| ಕಾಳೇಗೌಡ ನಾಗವಾರ, ' ವಡ್ಡಗೆರೆನಾಗಮ್ಮ. ಪು. 73–88.

55. ಜನಪದ ಖಂಡಕಾವ್ಯಗಳು: ಸಂ|| ಜೀ.ಶಂ. ಪರಮಶಿವಯ್ಯ.ಪು.20.

56. ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ|| ಬಸವರಾಜ ಕಲ್ಗುಡಿ. ಪು. 330.

57. ಬಯಲು ಸೀಮೆಯ ಲಾವಣಿಗಳು: ಸಂ|| ಕಾಳೇಗೌಡ ನಾಗವಾರ ' ವಡ್ಡಗೆರೆ ನಾಗಮ್ಮ. ಪು.73–88,

58. ಇ.ಸಿ. III 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057

59. ಪಂಪಕವಿ ವಿರಚಿತ ಪಂಪಭಾರತಂ: ಪು.503.

60. ಅದೇ ಪು. 138, ಮಾದಿ್ರ ಹೇಳುತ್ತಾನೆ: ಎನಗಿಂದಿನೊಂದು ಸ್ವಪ್ನದೊಳ್
ನಿನಿಂದು ದೇವರುಗಳಿಂದುದನ್ನು ಸುರ್ಧ ನಿನಗಾ।
ನೆನಿತಾದೊಡವಿಪ್ಪನೆ ಮ
ತ್ತನಂತರ ಕೆಂದ್ಯೊಡೆ ಪಲುಂಬದಿರ ಪೆರೆಪೆರವಂ॥

ಮಹಾಕವಿ ರನ್ನ ವಿರಚಿತಮಪ್ಪ, ಅಜಿತತೀರ್ಥಂಕರ ಪುರಾಣತಿಲಕಂ: ಪು. 10. ಗುಂಡಮಬ್ಬೆ ಹೇಳುತ್ತಾಳೆ: ''ನಾಗದೇವನೊಡನಾಂ ಬೆಸವೇಳ್ದಪೆನೆಂದು ಬೇಡಿಕೊಂಡಿನಿಂದುನನಪ್ಪಿಕೊಂಡುಚಿತಮಾಗೆ ಚಿತಾಗ್ನಿಯಂದೊಳಣ್ಮಿಸತ್ತ ಸಜ್ಜನಿಕೆಂದು ಪೆಂಪು''

61. ಕವಿಚಕ್ರವರ್ತಿ ಜನ್ನವಿರಚಿತ ಅನಂತನಾಥ ಪುರಾಣಂ : ಪು.280.

62. ಸಕಲ ಪುರಾತನರ ವಚನಗಳು 1761.

63. ನಂಜುಂಡಕವಿ ವಿರಚಿತ ರಾಮನಾಥ ಚರಿತೆ: ಸಂ-3 ( ಉತ್ತರಾರ್ಧ ) ಪು.337.

64. ಸಿರುಮಣನಾಯಕನ ಸಾಂಗತ್ಯ: ಸಂ: ಡಾ॥ ಎಂ.ಎಂ. ಕಲಬುರ್ಗಿ. ಪು.67, 1983.

65. ಜನಪದ ಖಂಡಕಾವ್ಯಗಳು: ಸಂ॥ ಜೀ.ಶಂ.ಪರಮಶಿವಯ್ಯ. ಪು. 14-15.
ಇದೇ ರೀತಿ ಪದ್ಯಗಳು 'ಮಹಾಸತಿ ವೀರತಿಮ್ಮವ್ವ' 'ಮಹಾಸತಿ ಕಾಟವ್ವ' ಗೀತೆಗಳಲ್ಲಿಯೂ ಬರುತ್ತವೆ — ಕತ್ತಾಲದಾರಿ ದೂರ : ಸಂ॥ ಕೃಷ್ಣಮೂರ್ತಿ ಹನೂರ. ಪು.37, 103.

66. ಜನಪದ ಖಂಡಕಾವ್ಯಗಳು: ಸಂ॥ ಜೀ.ಶಂ.ಪರಮಶಿವಯ್ಯ. ಪು. 17.
ಇದೇ ಭಾವಗಳನ್ನುಳ್ಳ ಪದ್ಯಗಳು 'ಮಹಾಸತಿ ತಾಡಿನಾಗಮ್ಮ' ಗೀತೆಯಲ್ಲಿಯೂ ಬರುತ್ತವೆ — ಕತ್ತಾಲದಾರಿ ದೂರ: ಸಂ॥ ಕೃಷ್ಣಮೂರ್ತಿ ಹನೂರ, ಪು.89, (ನೋಡಿ: ವಡ್ಡಗೆರೆ ನಾಗಮ್ಮ : ಸಂ॥ ವೈಜಯಂತಿಮಾಲ, ಪು.66.)

67. ಕತ್ತಾಲ ದಾರಿ ದೂರ : ಸಂ॥ ಕೃಷ್ಣಮೂರ್ತಿ ಹನೂರ, ಪು. 82,-83,
(ನೋಡಿ ವಡ್ಡಗೆರೆ ನಾಗಮ್ಮ : ಸಂ॥ ವೈಜಯಂತಿಮಾಲ. ಪು. 72)

68. ಅದೇ, ಪು. 85

69. ಅದೇ ಪು. 92.

70. ಅದೇ ಪು. 109-110.

71. ಜನಪದ ಖಂಡಕಾವ್ಯಗಳು: ಸಂ ॥ ಜೀ.ಶಂ.ಪರಮಶಿವಯ್ಯ, ಪು. 16.

72. ಕತ್ತಾಲ ದಾರಿ ದೂರ : ಸಂ 11 ಕೃಷ್ಣಮೂರ್ತಿ ಹನೂರ, ಪು.38.
ಫ್ರಾನ್ಸಿಸ್ಕೊ ಪೆಲ್ಸಾರ್ಟ್ ವಿದೇಶಿಪ್ರವಾಸಿ, ಒಂದು ವರ್ಷದ ಮಗುವನ್ನು ಮುದ್ದಿಟ್ಟು ಓಡಿಹೋಗಿ ಸತಿಯಾದ ಚಿತ್ರವೊಂದನ್ನು ಕೊಡುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು — ಪ್ರವಾಸಿ ಕಂಡ ಇಂಡಿಯಾ, ಸಂ —4, ಸಂ: ಎಚ್.ಎಲ್.ನಾಗೇಗೌಡ. ಪು.154.

73. ಅದೇ, ಪು. 111

74. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ 11 ಬಸವರಾಜ ಕಲ್ಗುಡಿ ಪು.291.

75. ಪ್ರವಾಸಿ ಕಂಡ ಇಂಡಿಯಾ, ಸಂ—2 : ಸಂ11 ಎಚ್.ಎಲ್.ನಾಗೇಗೌಡ. ಪು. 461.

76. ಅದೇ ಸಂ.—4 ಪು. 141 — 143.

77. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ. ಪು. 141.
(Missionary Notices No. XXVIII Jan 1827. The letters prefaced 'Mr. England' - Letter dated June 12, 1826

78. ಕತ್ತಾಲ ದಾರಿ ದೂರ: ಸಂ 11 ಕೃಷ್ಣಮೂರ್ತಿ ಹನೂರ, ಪು.35, ಇದೇ ರೀತಿ ಕಾಟವ್ವ ತಾನು ಸತಿಹೋಗುವಾಗ "ಬ್ಯಾಗನೆ ಕಾಟಣ್ಣನ ಬರಹೇಳು" ಎಂದು ತನ್ನ ಅಣ್ಣನನ್ನು ಕರೆಯಿಸಬೇಕೆಂಬ ಮಾತೊಂದು 'ಮಹಾಸತಿ ಕಾಟವ್ವ' ಗೀತೆಯಲ್ಲಿ ಬರುತ್ತದೆ. ಅದೇ ಪು. 104.

79. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ 11 ಬಸವರಾಜ ಕಲ್ಗುಡಿ. ಪು.329—330.

80. ಕತ್ತಾಲ ದಾರಿ ದೂರ: ಸಂ11 ಕೃಷ್ಣಮೂರ್ತಿ ಹನೂರ, ಪು.89.

81. ಇ.ಸಿ. III 60 ಟಿಳತೂರು ಹೆಗ್ಗಡದೇವನಕೋಟೆ, ಕ್ರಿ.ಶ. 1057

82. ಪಂಪಕವಿ ವಿರಚಿತ ಪಂಪಭಾರತಂ : ಪು. 138, ಇದೇ ರೀತಿ ಕುಮಾರವ್ಯಾಸನು ಮುನಿಗಳೆದು-ರಲ್ಲಿ ಮಾದ್ರಿ ಸತಿಹೋದುದನ್ನು ಚಿತ್ರಿಸಿದ್ದಾನೆ — ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ : ಪು. 15.

83. ವಿವರಕ್ಕಾಗಿ ನೋಡಿ: ಕವಿ ಚಕ್ರವರ್ತಿ ಜನ್ನ ವಿರಚಿತ ಅನಂತನಾಥ ಪುರಾಣ : ಪು.279.

84. ನಂಜುಂಡಕವಿ ವಿರಚಿತ ರಾಮನಾಥ ಚರಿತ — ಸಂ —31 (ಉತ್ತರಾರ್ಧ) : ಪು.337.

85. ಶ್ರೀ ಸಿದ್ಧೇಶ್ವರ ಮಹಾಪುರಾಣ. 12–36.

86. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ XVI, 70–85

87. ಸಿರುಮಣನಾಯಕನ ಸಾಂಗತ್ಯ: ಪು.69.

88. ಅಖಂಡೇಶ್ವರ ವಚನ ( ಷಣ್ಮುಖಸ್ವಾಮಿ ) ವ 138.

89. ಜನಪದ ಖಂಡಕಾವ್ಯಗಳು: ಸಂ 11 ಜೀ.ಶಂ.ಪರಮಶಿವಯ್ಯ 'ಈರೋಬಿ' —ಪು.9–21 'ನಾಗವ್ವ' ನ ಕಾವ್ಯದಲ್ಲಿ ಅವಳ ತಂದೆ–ತಾಯಿ, ಮಾವ — ಅತ್ತೆ ಇವರು ಅವಳ ಸತಿ ಪ್ರಸಂಗದಲ್ಲಿ ಭಾಗವಹಿಸುವುದನ್ನು ಕಾಣುತ್ತೇವೆ. ಅದೇ ಪು.21–27: ಕಾಳೇಗೌಡ ನಾಗವಾರ ಅವರು ಸಂಗ್ರಹಿಸಿದ 'ವಡ್ಡಗೆರೆ ನಾಗಮ್ಮ' ಗೀತೆಯಲ್ಲಿ, ಅಪ್ಪ, ಅಣ್ಣ, ಅಕ್ಕ, ತಮ್ಮ, ಸತಿಪ್ರಸಂಗದಲ್ಲಿ ಭಾಗವಹಿಸಿದ್ದಾರೆ– ಬಂಧುಬಳಗ ಸೀಮೆಯಂತು ಲಾವಣಿಗಳು, ಪು. 73–88.

90. ಜಾನಪದ : ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ : ಡಾ 11 ದೇವೇಂದ್ರಕುಮಾರ ಹಕಾರಿ, ಪು.280

91. ಜಾನಪದ ಖಂಡಕಾವ್ಯಗಳು: ಸಂ11 ಜೀ.ಶಂ.ಪರಮಶಿವಯ್ಯ, ಪು.76.

92. ಕತ್ತಾಲ ದಾರಿ ದೂರ: ಸಂ 11 ಕೃಷ್ಣಮೂರ್ತಿ ಹನೂರ, 'ಮಹಾಸತಿ ವೀರತಿಮ್ಮವ್ವ' ಪು. 7–42.

93. ಅದೇ, 'ಮಹಾಸತಿ ತಾಡಿನಾಗಮ್ಮ' ಪು. 50–95.

94. ಅದೇ ಪು. 105, 106, 109, 110, 112.

95. ಅದೇ, ಪು. 110.

96. ಬಸವಣ್ಣನವರ ಟೀಕಿನ ವಚನಗಳು, ವ 680.

97. ಕತ್ತಾಲ ದಾರಿ ದೂರ: ಸಂ11 ಕೃಷ್ಣಮೂರ್ತಿ ಹನೂರ, ಪು.86.

98. ಪ್ರವಾಸಿ ಕಂಡ ಇಂಡಿಯಾ, ಸಂ–2 : ಸಂ11 ಎಚ್.ಎಲ್.ನಾಗೇಗೌಡ.
ಪು. 461, 1966

99. ವಡ್ಡಗೆರೆ ನಾಗಮ್ಮ: ಸಂ11 ವೈಜಯಂತಿಮಾಲ, ಪು.82–83, (ಮಹಾಸತಿ ತಾಡಿನಾಗಮ್ಮ ಪು.88 ಕತ್ತಾಲ ದಾರಿ ದೂರ: ಸಂ11 ಕೃಷ್ಣಮೂರ್ತಿ ಹನೂರ, ಕತ್ತಾಲದಾರಿ ದೂರ:

ಸಂ॥ ಕೃಷ್ಣಮೂರ್ತಿ ಹನೂರ, 'ಮಹಾಸತಿ ಕಾಟವ್ವ' ಪು. 114.

100. ಪ್ರವಾಸಿ ಕಂಡ ಇಂಡಿಯಾ, ಸಂ—2: ಸಂ॥ ಎಚ್.ಎಲ್.ನಾಗೇಗೌಡ 'ಸೀಜರ ಫ್ರೆಡರಿಕ' — ಪು461, ಅದೇ ಸಂ—4, 'ಎಮಾನುಯೆಲ ಬರ್ರಾಡಾಸ್' ಪು. 158—159, ಪಿಯೆತ್ರೊ ದೆಲ್ಲಾವಲ್ಲೆ' ಪು. 241—249.

101. ಮಾತನಾಡುವ ಕಲ್ಲು: ಆನಂದಕಂದರು, ಪು 59—60.

102. ತರಂಗ } ಪು. 9, 4 ಅಕ್ಟೋಬರ, 1987.

103. ಸತಿಮರಣದ ಹಿಂದೆಯೇ ನಡೆಲಾಗುತ್ತಿದ್ದ ಮಾಸ್ತಿಕಲ್ಲುಗಳ ಕುರಿತಾಗಿ ಇಲ್ಲಿಯೇ ವಿವರಿಸಬೇಕಾಗಿದ್ದರೂ, ''ಮಾಸ್ತಿಕಲ್ಲುಗಳು ಮತ್ತು ಅವುಗಳ ಹಾಳೆ'' ಎಂಬ ಮುಂದಿನ ಅಧ್ಯಾಯದಲ್ಲಿ ಅದನ್ನು ನಿರೂಪಿಸುವುದರಿಂದ ಆ ವಿಷಯವನ್ನು ಇಲ್ಲಿ ಕೈಬಿಡಲಾಗಿದೆ.

104. ಕುಮಾರವ್ಯಾಸ ಮಹಾಕವಿಯ ಕರ್ಣಾಟಭಾರತ ಕಥಾಮಂಜರಿ: ಪು. 15.

105. ಕತ್ತಾಲ ದಾರಿ ದೂರ: ಸಂ: ಕೃಷ್ಣಮೂರ್ತಿ ಹನೂರ, ಪು. 40.

106. ಇ.ಸಿ. III 60, ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057.

107. ಅದೇ, 61 ಹಬ್ಬಲಗುಪ್ಪೆ, ಹೆಗ್ಗಡದೇವನಕೋಟೆ (ತಾ) ಮೈಸೂರು ಕ್ರಿ.ಶ. 1088—89

108. ವಚನಕಾರರ ದೃಷ್ಟಿಯಲ್ಲಿ ಸ್ತ್ರೀ : ಶ್ರೀಮತಿ ಶೈಲಜಾ ಉಡಚಣ ಪು. 61.

109. ದಿ ವಿಲೇಜ ಗಾಡ್ಸ ಆಫ ಸೌತ ಇಂಡಿಯಾ: ವೈಟಹೆಡ್, ಪು. 26.

110. ಮಿರರ, ಜನೇವರಿ, 1981 'ದಿ. ಲಜೆಂಡ ಆಫ ರಾಣಿ ಸತಿ' ಪಾಂಡ್ಯ.ಎಸ್. ಪು. 28—29.

111. ಕಾರವಾರ ಜಿಲ್ಲೆಯ ಜನಪದ ಗೀತೆಗಳು: ಎನ್.ಆರ್.ನಾಯಕ, ಪು. 115—116.

112. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ: ಎಂ.ಚಿದಾನಂದಮೂರ್ತಿ ಪು. 43.

113. ವಿವರಕ್ಕಾಗಿ ನೋಡಿ: ಮಾತನಾಡುವ ಕಲ್ಲುಗಳು: ಆನಂದಕಂದರು 'ಕಂಕಣದ ಕೈ' ಪಿ ಪು. 48—61.

114. ಬಂರುಲು ಸೀಮೆಂರು ಲಾವಣಿಗಳು: ಸಂ|| ಕಾಳೇಗೌಡ ನಾಗವಾರ, ಪು. 73–88

115. ಕತ್ತಾಲ ದಾರಿ ದೂರ : ಸಂ|| ಕೃಷ್ಣಮೂರ್ತಿ ಹನೂರ, ಪು. 50

116. ಅದೇ. ಪು. 42.

117. ಗ್ರಾಮೀಣ : ಡಾ|| ಎಂ. ಚಿದಾನಂದಮೂರ್ತಿ ಪು. 123.

118. ಅದೇ. 126

119. ಗ್ರಾಮೀಣ : ಡಾ|| ಎಂ. ಚಿದಾನಂದಮೂರ್ತಿ. ಪು. 123.

120. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ|| ಬಸವರಾಜ ಕಲ್ಗುಡಿ.
ಪು. 177

121. ಗ್ರಾಮೀಣ ಡಾ|| ಎಂ. ಚಿದಾನಂದಮೂರ್ತಿ, ಪು. 118–120.

122. ಸತಿಕೊಂಡಕ್ಕೆ ಬೀಳುವುದು ರಾತ್ರಿ ಹನ್ನೆರಡು ಗಂಟೆಯ ನಂತರ ನಡೆಯುತ್ತದೆ. ಅಂದಿನ ದಿನದ ಮುಂಜಾನೆಯಲ್ಲಿ 'ಮಾಸ್ತಿ ಮದುವೆ' ಮಾಡಲಾಗುತ್ತದೆ. ಚಿಕ್ಕಹುಡುಗರಿಬ್ಬರನ್ನು 'ವೀರ' ಮತ್ತು 'ಸತಿ' ಎಂದು ತಿಳಿದು ಅವರಿಬ್ಬರ ಮಧ್ಯ ಮದುವೆಯ ಕ್ರಿಯೆ ಶಾಸ್ತ್ರದ ಪೂರ್ತಿ ಮಾಡಿ ತೋರಿಸುತ್ತಾರೆ.

123. ಗ್ರಾಮೀಣ : ಡಾ: ಎಂ ಚಿದಾನಂದಮೂರ್ತಿ. ಪು. 120.

124. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ: ಚೆನ್ನಕ್ಕ ಎಲಿಗಾರ, ಅಡಿಟಿಪ್ಪಣಿ
ಪು. 457.

125. ಇದೇ ರೀತಿ ಮಾಸ್ತಿಕಟ್ಟೆದಲ್ಲೂ (ಅಂಕೋಲಾ) ನವರಾತ್ರಿಯಂದು ಮಾಸ್ತಿ ಉತ್ಸವ ಜರುಗುತ್ತದೆ. ಆಗ ಸುಮಾರು 2000–3000 ಜನರಿಗೆ ಪ್ರಸಾದ ವಿತರಣೆ ಮಾಡಲಾಗುವುದು.

126. ಗ್ರಾಮೀಣ : ಡಾ|| ಎಂ. ಚಿದಾನಂದಮೂರ್ತಿ, ಪು. 121.

— 0 —

# ಅಧ್ಯಾಯ – 7

Chapter-7

## ಚಿತಾಪ್ರವೇಶ – ಸಮಾಧಿಪ್ರವೇಶ – ಇತರ ವಿಧಾನ

ಸತಿವಿಧಿಗಳಲ್ಲಿ ಮೃತನ ಪತ್ನಿಯ 'ಚಿತಾಪ್ರವೇಶ' ಇಲ್ಲವೆ 'ಸಮಾಧಿಪ್ರವೇಶ' ಎಂಬುದು ಅತ್ಯಂತ ಪ್ರಮುಖವಾದುದು. ಇದು ಸತಿಪದ್ಧತಿಯ ಆಚರಣೆಗಳಲ್ಲಿಯೇ ಪ್ರಧಾನ ವಾದ ಭಾಗವಾಗಿದೆ. ಈ ವಿಧಿ ಮುಖ್ಯವಾಗಿ ಮೃತನ ಪತ್ನಿ ಸತಿಹೋಗುವ ವಿಧಾನಕ್ಕೆ ಸಂಬಂಧಪಟ್ಟುದಾಗಿದೆ. ಚಿತಾಪ್ರವೇಶವೆಂದರೆ, ಸತಿಯು ಉರಿಯುತ್ತಿರುವ ಕೊಂಡದಲ್ಲಿ ಹಾರಿಕೊಂಡೋ, ಚಿತೆಗಾಗಿ ಒಟ್ಟಿದ ಕಟ್ಟಿಗೆಗಳ ಮೇಲೆ ಕುಳಿತು ಕಿಚ್ಚು ಹಚ್ಚಿಸಿಕೊಂಡೋ ತನ್ನನ್ನು ತಾನು ಕೊಂದುಕೊಳ್ಳುವ ಕ್ರಿಯೆಯಾಗಿದೆ. ಅದೇ ರೀತಿ, ಸಮಾಧಿ ಪ್ರವೇಶ ವೆಂದರೆ, ಸತಿಯು ಮಣ್ಣಿನಲ್ಲಿ ಜೀವಂತ ಹೂಳಿಸಿಕೊಂಡು ಸಾಯುವ ಕ್ರಿಯೆಯಾಗಿದೆ. ಈ ಎರಡೂ ವಿಧಾನಗಳು ಗಂಡಸತ್ತನಂತರ ಬದುಕಲಿಚ್ಛಿಸದ ಪತ್ನಿಯ ಉದ್ದೇಶವನ್ನು ಪೂರೈಸುವವುಗಳಾಗಿವೆ.

ಸತಿಯು ಸಾಮಾನ್ಯವಾಗಿ ಗಂಡನೊಡನೆ ಚಿತಾಪ್ರವೇಶ ಅಥವಾ ಸಮಾಧಿ ಪ್ರವೇಶವನ್ನು ಮಾಡುತ್ತಿದ್ದಳು. ಅದು ಸಾಧ್ಯವಾಗದಿದ್ದರೆ ಮೃತ ಗಂಡನ ಯಾವುದಾದರೂ ವಸ್ತುವಿನೊಡನೆ ಚಿತೆ ಇಲ್ಲವೆ ಸಮಾಧಿ ಪ್ರವೇಶ ಮಾಡುತ್ತಿದ್ದಳು. ಇವುಗಳಲ್ಲಿ ಒಂದು ಸಹಗಮನ ಎನಿಸಿಕೊಂಡರೆ, ಇನ್ನೊಂದು ಅನುಗಮನ ಎನಿಸಿಕೊಳ್ಳುತ್ತದೆ. ಮೃತ ಗಂಡನೊಡನೆ ಮರಣಹೊಂದುವದು ಸಹಗಮನ, ಸಹಮರಣವಾದರೆ, ಗಂಡ ಬೇರೆಲ್ಲಿಯೋ ಮಡಿದು ಅವನ ಗುರುತಿನ ವಸ್ತುವಿನೊಡನೆ — ಒಮ್ಮೊಮ್ಮೆ ಅದುಇಲ್ಲದೆ — ಮರಣಹೊಂದುವದು ಅನುಗಮನ, ಅನುಮರಣವಾಗುತ್ತದೆ. ಇವು ಎರಡು ಗಂಡನು ಮೃತಹೊಂದಿ ಈ ಲೋಕದಿಂದ ಇನ್ನೊಂದೆಡೆಗೆ ಹೋಗುವುದನ್ನು ಹಾಗೂ ಅವನನ್ನು ಪಡೆಯುಬಯಸಿದ ಅವನ ಪತ್ನಿಯು ಹೋಗುವುದನ್ನು ಸೂಚಿಸುವವುಗಳಾಗಿವೆ. ಒಂದರಲ್ಲಿ, ಗಂಡನ ಸಹಿತ ಪತ್ನಿಯ ಹೋಗುವಿಕೆ ಇದ್ದರೆ, ಇನ್ನೊಂದ ರಲ್ಲಿ, ಅವಳು ಗಂಡನನ್ನು ಹಿಂಭಾಲಿಸಿ ಹೋಗುವುದಿದೆ. ಈಗ, ಕರ್ನಾಟಕದಲ್ಲಿಯ ಚಿತಾ — ಪ್ರವೇಶ ಸಮಾಧಿಪ್ರವೇಶಗಳಿಗೆ ಹಿನ್ನೆಲೆಯಾಗಿ ಸಹಗಮನ — ಅನುಗಮನಗಳನ್ನು ವಿವರಿಸಬಹುದಾಗಿದೆ.

### ಸಹಗಮನ :

ಸಹಗಮನ, ಸಹಮರಣ, ಅನ್ವಾರೋಹಣ, ಎಂಬ ಪದಗಳನ್ನು ವಿದ್ವಾಂಸರು ಸಮಾನಾರ್ಥದಲ್ಲಿ ಬಳಸಿದ್ದಾರೆ.[1] ಈ ಪದಗಳು ಪತ್ನಿ ಗಂಡನ ಶವದೊಂದಿಗೆ ಚಿತೆಯೇರಿದ್ದನ್ನು

ಸೂಚಿಸುವವುಗಳಾಗಿವೆ. ಕರ್ನಾಟಕದ ಶಾಸನಗಳು ಮೃತನ ಪತ್ನಿ ಪತಿಯೊಡನೆ ಸತಿ ಹೋದುದನ್ನು ಸೂಚಿಸಲು 'ಸಹಗಮನ' ಎಂಬ ಪದವನ್ನು ವಿಫುಲವಾಗಿ ಬಳಸಿದ್ದರೂ ಎಲ್ಲಿಯೂ ಅದು 'ಅನುಮರಣ' 'ಅನ್ವಾರೋಹಣ' ದಂಥ ಪದಗಳನ್ನು ಉಪಯೋಗಿಸಿ ಕೊಂಡಿಲ್ಲ. ಅಲ್ಲದೆ, ''...... ಗುಡಿ ತನ್ನ ಪತಿ ಜೊಕ್ಕ ಗೌಡನ ಕೂಡೆ ಸ್ವರ್ಗಸ್ಥೆ ಯಾದಳು'', ''ಬೆನೂರ ಕುಂಬಾರ ಮಹಬಳದೇವನ ಮಗ ಬೊಮ್ಮಯ್ಯನ ಆತನ ಸೊಸೆ ಚಂಡವೆ ಇಬ್ಬರು ಸ್ವರ್ಗವನೆಯ್ದಿದರು'' ''ಜಕ್ಕಬೆ ಒಡಸತ್ತು ಸುರಲೋಕಕೆ-ಯ್ದಿದ'' ''ಹರಿಯಾರ ಅಮ್ಮಗುಡಿನ ಬಯಿರಮಗುಡಿ ತಮ್ಮ ಸ್ತ್ರೀಯರು ಸಹಸಂಗತಿಯಿಡಿದರು'' (ದೇವಿ) ನಾಯಕ ಆತನ ಮದವಳಿಗೆ ನಾಗಾಯಿ ದೇವಾಯಿಗಳು ಮಹಾಸತಿಯರಾಗಿ ಆತನ ಸಂಘಾತ ಸ್ವರ್ಗಸ್ಥರಾದರು'' ''ದುಪ್ಪನಾಯಕನೂ ತರುವ ತಿರಿಹಿ ಬಿದ್ದನು ಇತನ ಸತಿ ಕೂಡಹೋದಳು'' ''ನಾಗೆಸ (ಯು) ಕನು ಸ್ವರ್ಗಸ್ಥನಾದರೆ ಹೆಂಡತಿ ಕೂಡೆ ಹೋದಳು'' ''ತಂಗಣಗೌಡಿಯೂ ಆ ಬೊಮ್ಮಗೌಡನ ಕೂಡೆ ಸಮಾಧಿಯನೂ ಕೈಕೊಂಡಳು'' ''ಮಾದಿಗೊಂಡನ ಸತಿ ತಾಯಿಗುಡಿ ಇಬ್ಬರು ಸ್ವರ್ಗಸ್ಥರಾದರು'' ''ಗಣೇಶ್ವರನು ಆತನ ಪ್ರಾಣೇಶ್ವರಿ ಜೋಯಮಾಯಿಕೂಡಿ ಪತಿವ್ರತಾಗುಣದಿಂ ಅಗ್ನಿ-ಪ್ರವೇಶಂ ಮಾಡಿ ಸಂಗ್ರಾಮರಂಗದೊಳು ಸ್ವರ್ಗಪ್ರಾಪ್ತರಾದರು''. ''ಬೊಮ್ಮಗೌಡರು ತಾಉ. ತಮ್ಮ ಸುಯಿರ ಸಹ ಶಿವಪಾದಕ್ಕೈಸಂದರು'' ''ಬಯಿಚ ಗುಡ ಬಳಿಗೊಂಡಿ ಇಬ್ಬರು ದೇವರಪಾದಕ್ಕೆ ಸಂದಾಗಿ'', ''ಮೇದಗಿರಿ ವಿರುಪಂಣಒಡೆಯರ ಕೂಡಿ ಮಂಜಾದೇವಿ ಸ್ವರ್ಗವ ಸ್ವಾರ್ಥಿಗೊಂಡಳು'' ''ಬೊಂಮಗುಡರು ಆತನ ಸತಿ ಹರಿಮಾಇ ಸುರಲೋಕ ಪ್ರಾಪ್ತವಾದರೂ'' — ಎಂದು ಮೊದಲಾಗಿ ವಿವರಿಸುವ ಶಾಸನಗಳು ಪತ್ನಿ ಗಂಡನೊಡನೆ ಸತಿಹೋದದ್ದನ್ನು ಸೂಚಿಸುವವುಗಳೇ ಆಗಿವೆ.[2] ಇಲ್ಲಿಯ 'ಕೂಡೆ' ಇಬರು ಸ್ವರ್ಗವನೆ-ಯ್ದಿದರು' 'ಒಡಸತ್ತು', 'ಸಹಸಂಗತಿಯಿಡಿದರು' 'ಸಂಘಾತ' 'ಇಬ್ಬರು ದೇವರಪಾದಕ್ಕೆ ಸಂದಾಗಿ' ಇತ್ಯಾದಿ ಪದ ಮತ್ತು ವಾಕ್ಯಗಳು ಪತ್ನಿ ತನ್ನ ಗಂಡನ ಮೃತಶರೀರದೊಡನೆ ಸತಿಹೋದದ್ದನ್ನು ತಿಳಿಸಿಕೊಡುತ್ತವೆ. ಇವು 'ಸಹಗಮನ' ಪದವನ್ನು ಬಳಸದಿರುವುದು ವಿಶೇಷ ವಾಗಿದೆ. ಬಹುಶಃ ಜನಬಳಕೆಯಲ್ಲಿ 'ಸಹಗಮನ' ಎಂಬ ಪದ ಸಹಗಮನ ಮತ್ತು ಅನು-ಗಮನಗಳೆರಡು ಅರ್ಥದಲ್ಲಿ ಪ್ರಯೋಗಗೊಳ್ಳುತ್ತಿದ್ದಿರಬೇಕು. ಅದಕ್ಕಾಗಿಯೇ ಗಂಡನ

ಶವದೊಂದಿಗೆ ಪತ್ನಿ ಸತಿಹೋದದ್ದನ್ನು ತಿಳಿಸಲು ಈ ಮೇಲಿನ ವಿಶೇಷ ಪದ, ವಾಕ್ಯಗಳ ಬಳಕೆಗೊಂಡವೆನ್ನಬೇಕು. ಶಾಸನಗಳಲ್ಲಿ ಎಲ್ಲಿಯೂ 'ಅನುಗಮನ' ಶಬ್ದ ಪ್ರಯೋಗ-ಗೊಳ್ಳದಿರುವುದನ್ನು ಈ ಹಿನ್ನೆಲೆಯಲ್ಲಿ ಸ್ಮರಿಸಬಹುದಾಗಿದೆ. ಬಹುಶಃ ಸತಿ ಆಚರಣೆಯಲ್ಲಿಯು ಈ ಸಹಗಮನ — ಅನುಗಮನ ಎಂಬ ಸೂಕ್ಷ್ಮ ಭೇದ ಪಂಡಿತವರ್ಗದಲ್ಲಿ ಮಾತ್ರ ಉಳಿದುಕೊಂಡಿತ್ತು ಎನಿಸುತ್ತದೆ. ಈ ಮಾತುಗಳನ್ನು ಸಮರ್ಥಿಸಲು ಇನ್ನು ಕೆಲವು ಶಾಸನಪಾಠಗಳನ್ನು ಉಲ್ಲೇಖಿಸಬಹುದಾಗಿದೆ. ''ಉದಿಯಣ್ಣನು ಆತನ ಮದವಳಿಗೆ ಉದ್ರಿಯಕ್ಕ... ನಿಯಗ... ನೆ ಕೂಡಿ ಸಹಗಮನವ ಮಾಡಿದರು'', ''ಆತನ ಮದವಳಿಗೆ ಆತನ ಕೂಡೆ ಸಹಗಮನಸ್ಥಳಾದಳು'', ಭಯಿರವಗೌಡರು ಸ್ವರ್ಗಸ್ತರಾದಲ್ಲಿ ಅವರ ಮದವಳಿಗೆ ಭಯಿರಗೌಡಿಯು ಕೂಡಿಸಹಗಮನವ ಮಾಡಿದರು'', ''ಆತನ ಮದುವಳಿಗೆ ನಾಗಂಮ ಕೂಡೆ ಸಹಗಮನವಾದಲ್ಲಿ'' — ಈ ಶಾಸನಗಳಲ್ಲಿ ಸತಿಹೋದದ್ದನ್ನು ಸೂಚಿಸಲು ಕೇವಲ 'ಸಹಗಮನ' ಎಂಬ ಶಬ್ದ ಬಳಸದಿರುವುದನ್ನು ಗಮನಿಸಬೇಕು.[3] ಇವುಗಳಲ್ಲಿ 'ಕೂಡಿ ಸಹಗಮನ' ಎಂಬ ಹೆಚ್ಚಿನ ವಿವರಣೆ ಇದೆ. 'ಕೂಡಿ' ಮತ್ತು 'ಸಹ' ಎಂಬ ಪದಗಳು ಒಂದೇ ಅರ್ಥ ಸಾಮಾನ್ಯವಾಗಿ ಇಲ್ಲಿ ಕೊಡುತ್ತಿದ್ದರೂ ಇವೆರಡನ್ನು ಕೂಡಿಯೇ ಇಲ್ಲಿ ಬಳಸಿರುವ ಹಿನ್ನೆಲೆ ಬೇರೆಯೇ ಇದೆ. 'ಸಹ —ಗಮನ' ಎಂಬ ಪದ ಅನುಗಮನ — ಸಹಗಮನಗಳೆರಡನ್ನು ಸೂಚಿಸುವ ''ಸತಿ'' ಎಂಬ ವಿಶಿಷ್ಟಾರ್ಥದಲ್ಲಿ ಬಳಕೆಗೊಳ್ಳುತ್ತಿತ್ತು. ಆ ಕಾರಣದಿಂದ ಗಂಡನ ಶವದೊಂದಿಗೆ ಪತ್ನಿ ಸತಿಹೋದುದನ್ನು ಸೂಚಿಸಲು 'ಕೂಡಿಸಹಗಮನ' ಎಂಬ ಹೆಚ್ಚಿನ ವಿವರಣೆಯ ಅವಶ್ಯಕತೆ ಇಲ್ಲಿ ಶಾಸನ ಕರ್ತೃವಿಗೆ ಉಂಟಾಗಿರುವುದು ವೇದ್ಯವಾಗುತ್ತದೆ.

ಕ್ರಿ.ಶ. 1417 ರ ಹಿರೇಹಾರಕ ಶಾಸನವೊಂದು 'ಸಹಗಮನ ಘಟನೆಯೊಂದರ ಸುಂದರ ವಿವರಣೆ ನೀಡುತ್ತದೆ.[4] ವಿಜಯನಗರವನ್ನು ವೀರಪ್ರತಾಪ ದೇವರಾಯರು ಆಳುತ್ತಿದ್ದಾಗ, ಅವರ ಪರವಾಗಿ 'ಗೋವೆಗುತ್ತಿ 'ರಾಜ್ಯವನ್ನು ವಿರುಪದಣ್ಣಾಯಕರು' ಆಳುತ್ತ ಚಂದ್ರಗುತ್ತಿಯಲ್ಲಿ ಇರುತ್ತಿದ್ದರು. ಅವರ ಸಂಮುಖಿಗ ರಾಮಗೌಡರೂ ಅದೇ ಚಂದ್ರಗುತ್ತಿಯಲ್ಲಿದ್ದರು. ಈ ವಿಷಯವನ್ನು ಶಾಸನ ವಿವರಿಸುತ್ತ, ಹೀಗೆ ಹೇಳುತ್ತದೆ : ''ದೇವರಾಯ ನಿರುಪದಿಂ ಗೋವೆಗುತ್ತಿಯ ರಾಜ್ಯವನು ವಿರುಪದಣ್ಣಾಯಕರು ಚಂದ್ರಗುತ್ತಿಯಲಿ ಯಿದ್ದಲ್ಲಿ ಅವರ ಸಂಮುಖಿಗ ರಾಮಗೌಡರು ಹೋಗಿಯಿದ್ದು ಅಲ್ಲಿ ದೇವರ ಪಾದವ ಕೂಡಿದನು ಆ ಸ್ತ್ರೀಯನು

ಯಿರುಗ್ವಪೊಡೆಯರು ಚಿತ್ತಯಿಸಿ ಗುತ್ತಿಯಿಂದ ಹಾರಿಕಕೆ ಕಳುಹಿದಲ್ಲಿ ರಾಮಗೌಡ ಸ್ತ್ರೀಬೊಮ್ಮಗೌಡಿ ಆ ರಾಮಗೌಡರಕೂಡಿ ಸಹಗಮನವಮಾಡಿ ರಾಮಗೌಡಬೊಮ್ಮಕನ್ಯಾಸ್ವರ್ಗವ ಸೂರೆಗೊಂಡರು ಎಂದು ಬರೆದ ಶಿಲಾಶಾಸನಕ್ಕೆ ಮಂಗಳಮಹಾ ಶ್ರೀಶ್ರೀಶ್ರೀ" ರಾಮಗೌಡ ತಮ್ಮ ಊರನ್ನು ಬಿಟ್ಟು ಸಂಮುಖಿಗರಾಗಿ ಚಂದ್ರಗುತ್ತಿಯಲ್ಲಿದ್ದ ಸಮಯದಲ್ಲಿ "ಅಲ್ಲಿ ದೇವರಪಾದವ ಕೂಡಿ" ಕೊಳ್ಳುತ್ತಾನೆ. ರಾಮಗೌಡ "ಅಲ್ಲಿ" ಅಂದರೆ ಚಂದ್ರಗುತ್ತಿಯಲ್ಲಿ ಮರಣಹೊಂದುತ್ತಾನೆ. "ಆ ಸ್ತ್ರೀ" ಯನ್ನು ವಿರುಪದಂಣಾಯಕರು "ಚಿತ್ತಯಿಸಿ ಗುತ್ತಿಯಿಂದ" "ಹಾರಿಕಕೆ" ( ಈಗಿರುವ ಹಿರೇಹಾರಕಕ್ಕೆ ) "ಕಳುಹಿದಲ್ಲಿ ರಾಮಗೌಡ ಸ್ತ್ರೀಬೊಮ್ಮಗೌಡಿ ಆರಾಮಗೌಡರ ಕೂಡಿ ಸಹಗಮನವ" ಮಾಡುತ್ತಾಳೆ. ಗಂಡ ಸತ್ತಾಗ ಅವಳು(ಬಹುಶ: ಗಂಡನ ಊರಾದ ಹಿರೇಹಾರಕದಲ್ಲಿದ್ದಳು. ರಾಮಗೌಡ ಸತ್ತ 'ಆ ಸ್ತ್ರೀಯನು' ( ಸುದ್ದಿಯನ್ನು.) ವಿರುಪದಂಣಾಯಕರು 'ಚಿತ್ತಯಿಸಿ' 'ಹಾರಿಕಕೆ ಕಳುಹಿದಲ್ಲಿ' ಅಂದರೆ ಹೇಳಿಕಳುಹಿದಲ್ಲಿ 'ಬೊಮ್ಮಗೌಡಿ' ಗಂಡನಿರುವಲ್ಲಿಗೆ ಬಂದು ( ಕೂಡಿ ) ಅವನ ಶವದೊಡನೆ ಸಹಗಮನಗೊಂಡಳು ಎಂದು ಇಲ್ಲಿ ಅರ್ಥಮಾಡಿದರೆ, ಬೊಮ್ಮಗೌಡಿ ಸಹಗಮನ ಮಾಡಿರುವುದು ಚಂದ್ರಗುತ್ತಿಯಲ್ಲಿ, ಅವಳ ಸ್ಮಾರಕವಾಗಿ ಮಾಸ್ತಿಕಲ್ಲನ್ನು ನೆಟ್ಟದ್ದು ಹಿರೇಹಾರಕದಲ್ಲಿ ಎಂದು ಹೇಳಬೇಕಾಗುತ್ತದೆ. ಆದರೆ ರಾಮಗೌಡನ ಪತ್ನಿ ಬೊಮ್ಮಗೌಡಿ ಹಿರೇಹಾರಕದಲ್ಲಿಯೇ ಸತಿ ಹೋಗಿದ್ದಾಳೆ ಎಂದು ಹೇಳಲು ಶಾಸನದಲ್ಲಿಯೇ ಅವಕಾಶಗಳಿವೆ. ಗಂಡ ಚಂದ್ರಗುತ್ತಿಯಲ್ಲಿ ಮರಣಹೊಂದಲು, ಆ ಸುದ್ದಿ ವಿರುಪದಂಣಾಯಕರಿಂದ ತಿಳಿಯಲ್ಪಟ್ಟ ಬೊಮ್ಮಗೌಡಿ ಹಿರೇಹಾರಕದಲ್ಲಿ ಸತಿಹೋದಳು ಎಂಬುದಾಗಿ ಭಾವಿಸಿದರೆ ಅವಳ ಮರಣ ಅನುಮರಣ ಅಥವಾ ಅನುಗಮನ ವೆನಿಸಿಕೊಳ್ಳುತ್ತದೆ. ಆದರೆ ಅವಳು ಸತಿಹೋದದ್ದು ಸಹಗಮನದಿಂದಲೇ ಹೊರತು ಅನುಗಮನ — ದಿಂದಲ್ಲ. 'ಬೊಮ್ಮಗೌಡಿ ಆ ರಾಮಗೌಡರ ಕೂಡಿ ಸಹಗಮನಮಾಡಿ' ಎಂಬುದರಿಂದ ಇದು ಸ್ಪಷ್ಟಗೊಳ್ಳುತ್ತದೆ. ಇಲ್ಲಿಯ "ಕೂಡಿ" ಎಂಬ ಪದ, ಸುದ್ದಿ ತಿಳಿದ ಬೊಮ್ಮಗೌಡಿ ಗಂಡ ಮೃತನಾದ ಚಂದ್ರಗುತ್ತಿಗೆ ಬಂದು ( ಕೂಡಿ ) ಎಂದು ಅರ್ಥಕೊಡದೆ, ಗಂಡನ ಶವದೊಂದಿಗೆ ಅವಳು ಮರಣಹೊಂದಿದ್ದನ್ನು ಮಾತ್ರ ಸೂಚಿಸುತ್ತದೆ. "ಕೂಡಿ ಸಹಗಮನ ಮಾಡಿ" ಎಂಬಲ್ಲಿಯ 'ಸಹಗಮನ' ಎಂಬ ಪದ 'ಸತಿ' ಎಂಬುದನ್ನು ಧ್ವನಿಸುವುದಕ್ಕಾಗಿ ಇಲ್ಲಿ ಬಳಕೆ ಗೊಂಡಿರುವುದನ್ನು ಲಕ್ಷಿಸಬೇಕು.( ಕೂಡಿಸಹಗಮನ' ಎಂಬುದನ್ನು ಇದೀಗ ಹಿಂದೆ ವಿವರಿಸಿದೆ.)

‘ರಾಮಗೌಡ’ ಮೃತನಾದದ್ದು ಚಂದ್ರಗುತ್ತಿಯಲ್ಲಿ ಅಲ್ಲವೆ ? ಎಂದು ಪ್ರಶ್ನಿಸಿದರೆ ಅದಕ್ಕೆ ಉತ್ತರ ಕೊಡುವುದೇನು ಕಷ್ಟವಿಲ್ಲ. ರಾಮಗೌಡನ ಶವವನ್ನು ಚಂದ್ರಗುತ್ತಿಯಿಂದ ಹಿರೇಹಾರಕ–ಕ್ಕೆ ‘ವಿರುಪದಣಾಯಕರು’ ಕೊಟ್ಟು ಕಳುಹಿಸಿದರು ಎಂದು ಅರ್ಥೈಸಲು ಶಾಸನ ಪಾಠದಲ್ಲಿ ಅವಕಾಶವಿದೆ. ‘‘ಆಸ್ತಿಯನು ಯಿರುಗ್ಯವೊಡೆಯರು ಚಿತ್ತೈಸಿ ಗುತ್ತಿಯಿಂದ ಹಾರಿಕರೆ ಕಳುಹಿದಲ್ಲಿ’’ ಎಂಬ ಮಾತಿನಲ್ಲಿ ರಾಮಗೌಡರು ಮರಣಗೊಂಡ ಸುದ್ದಿಯನ್ನು ‘ವಿರುಪಗ್ಯವೊಡೆಯರು’ ಚಂದ್ರಗುತ್ತಿಯಿಂದ ಹಿರೇಹಾರಕಕ್ಕೆ ಹೇಳಿಕಳುಹಿಸಿದರು ಎಂದು ಅರ್ಥಹೊರಡುವುದು ಕಷ್ಟವಾಗುತ್ತದೆ. ಹಾಗೆ ಹೇಳಿಕಳುಹಿಸುವ ಸುದ್ದಿಯಾಗಿದ್ದರೆ ಶಾಸನ ಕರ್ತೃ ಮರೆಯದೇ ‘ಗುತ್ತಿಯಿಂದ ಹೇಳಿಕಳುಹಿದಲ್ಲಿ’ ಎಂದು ಬರೆಯುತ್ತಿದ್ದುದರಲ್ಲಿ ಸಂಶಯವಿಲ್ಲ. ಆ ಕಾರಣದಿಂದ ಮರಣಗೊಂಡ ತನ್ನ ‘ಸಂಮುಖಗನ ಸ್ಥಿತಿಯನ್ನು ವಿರುಪದಂಣಾಯಕರು ‘ಚಿತ್ತ್ರಯಿಸಿ’ — ಅಂದರೆ ಸಮಗ್ರ ಆಲೋಚನೆ ಮಾಡಿ — ಆತನ ಶವವನ್ನು ‘‘ಗುತ್ತಿಯಿಂದ ಹಾರಿಕಕೆ ಕಳುಹಿ’’ಸಿದರೆಂದೇ ಇಲ್ಲಿ ತಿಳಿಯಬೇಕಾಗಿದೆ. ಅದು ವಿರುಪದಂಣಾಯಕರಂಥವರ ನೈತಿಕ ಜವಾಬ್ದಾರಿಯೂ, ಕರ್ತವ್ಯವೂ ಆಗಿರಬೇಕು.

ಕ್ರಿ.ಶ.1424 ರ ಹೆಗ್ಗೋಡು ಶಾಸನವೊಂದನ್ನು ಸಂಕ್ಷಿಪ್ತ ಆಗಿ ಕುರಿತು ಬರೆಯುತ್ತ ಡಾ॥ ಎಂ.ಎಂ.ಕಲಬುರ್ಗಿ ಅವರು ಹೀಗೆ ಅಭಿಪ್ರಾಯಪಡುತ್ತಾರೆ: ‘‘ಪತಿಗಾಗಿ ಸತಿ ಮಡಿಯುವುದು ಸಾಮಾನ್ಯ. ಆದರೆ ‘‘ಹೆಗೋಡ ಬಯಿರಗವುಡರು ಅವನ ಸತಿ ಸಂಗಡ ವಯಿಕುಂಠಪ್ರಾಪಿತರಾದರು’’ ಎಂಬುದು ಮಾತ್ರ ಸತಿಯನ್ನು ಪತಿ ಹಿಂಬಾಲಿಸಿದ ಏಕೈಕ ಉಲ್ಲೇಖ.[5] ಇದನ್ನು ವಿವರಿಸುತ್ತ ಡಾ॥ ಆರ್.ಶೇಷಶಾಸ್ತ್ರಿ ಅವರು ಹೀಗೆ ಬರೆಯುತ್ತಾರೆ:[6] ಪ್ರಸ್ತುತ ಶಾಸನವು ಮಾಸ್ತಿಕಲ್ಲಿನ ಮೇಲೆ ಇದೆ ಎಂಬುದು ಗಮನಿಸಬೇಕಾದ ಅಂಶ. ಇದೇ ತೆರನ ಪಾಠ ವಿರುವ ಕ್ರಿ.ಶ.1451 ರ ಮತ್ತೊಂದು ಮಾಸ್ತಿಕಲ್ಲಿನ ಮೇಲಿನ ಶಾಸನವು ಅದೇ ಊರಲ್ಲಿ ದೊರೆಯುತ್ತದೆ. ಅದರಲ್ಲಿ ‘‘ತಂಮುಸೆಟ್ಟಿಯವರು ಅವರ ಸತಿ ಬೊಂಮ್ಮಗೌಡಿಯರು ಸಹಿತ ದೇವಲೋಕಕ್ಕೆ ಪ್ರಾಪ್ತರಾದರು’’ ಎಂದು ಇದೆ. ಇಲ್ಲೆಲ್ಲಾ ಈ ಶಾಸನಗಳ ಪಾಠವನ್ನು ಬಹುಶ: ಈ ರೀತಿ ಗ್ರಹಿಸಬೇಕೆಂದು ತೋರುತ್ತದೆ. ಗಂಡನು ಮಡಿದಾಗ ಆತನ ಹೆಂಡತಿಯು ಸಹಗಮನದ ಮೂಲಕ ಆತನನ್ನು ಹಿಂಬಾಲಿಸಿದಾಗ ಅವರು ತಮ್ಮ ಸತಿಯ ‘‘ಸಂಗಡ’’ ‘‘ಸಹಿತ’’ವೈಕುಂಠ ದೇವಲೋಕಕ್ಕೆ ಪ್ರಾಪ್ತರಾದರು ಎಂದು. ಮುಖ್ಯ ಅಂಶವೆಂದರೆ ಈ ಶಿಲೆಗಳಲ್ಲಿರುವ ಶಿಲ್ಪವು ಸಹಗಮನ ಮಾಡಿದ ಮಹಿಳೆಯಂತೆ ಬಿಡಿಸಲಾಗಿರುವುದು ತೀರಾ ಮುಖ್ಯ’’.

ಇಲ್ಲಿ ' ಹೆಗ್ಗೋಡೆ ಬಂಟುರಗಾವುಡರು ಅವನ ಸತಿ ಸಂಗಡ ಎಂಟುಕುಂಠ ಪ್ರಾಪಿತರು ' ಎಂದು ' ಶಾಸನ ಪಾಠವನ್ನು ಇದ್ದಕ್ಕಿದ್ದ ಹಾಗೆ ವಾಚ್ಯಾರ್ಥದಲ್ಲಿ ತಿಳಿದುಕೊಂಡರೆ ' ಸತಿಯನ್ನು ಪತಿ ಹಿಂಬಾಲಿಸಿದ ಏಕೈಕ ಉಲ್ಲೇಖ ' ಎಂದು ಹೇಳಬೇಕೆನಿಸುತ್ತದೆ. ಅಷ್ಟೇ ಏಕೆ, ಪತಿಯು ಸತಿಯನ್ನು ಹಿಂಬಾಲಿಸಿ ಹೋದದ್ದಲ್ಲ, ಸತಿಯೊಡನೆಯೇ ( ಸಂಗಡ ) ವೈಕುಂಠಕ್ಕೆ ಹೋದನೆಂದು ಹೇಳಬೇಕಾಗುತ್ತದೆ. ಆದರೆ ಇಲ್ಲಿ ನಿಜಾರ್ಥ ಹಾಗೆ ಇಲ್ಲವೇ ಇಲ್ಲ. ಗಂಡ —ನೊಡನೆ ಹೆಂಡತಿ ಸಹಗಮನ ಮಾಡಿಕೊಂಡದ್ದನ್ನೇ ಇದು ಸೂಚಿಸುತ್ತದೆ. ಡಾ|| ಶೇಷಶಾಸ್ತ್ರಿ —ಯವರು '' ಗಂಡನು ಮಡಿದಾಗ ಆತನ ಹೆಂಡತಿಯು ಸಹಗಮನದ ಮೂಲಕ ಆತನನ್ನು ಹಿಂಬಾಲಿಸಿದಾಗ ಅವರು ತಮ್ಮ ಸತಿಯ '' ಸಂಗಡ '' '' ಸಹಿತ '' ವೈಕುಂಠ ದೇವಲೋಕಕ್ಕೆ ಪ್ರಾಪ್ತರಾದರು '' ಎಂದು ಅರ್ಥೈಸಿದ್ದು ತಪ್ಪಾಗಿದೆ. ಇಲ್ಲಿ ಸತಿ ಹಿಂಬಾಲಿಸುವ ಪ್ರಶ್ನೆ ಇಲ್ಲವೇ ಇಲ್ಲ. ಇವು ( ಡಾ|| ಕಲಬುರ್ಗಿ ಅವರು ತಿಳಿಸಿದ ಶಾಸನ ಮತ್ತು ಡಾ|| ಶೇಷಶಾಸ್ತ್ರಿ ಅವರು ಉದಾಹರಣೆಗಾಗಿ ಕೊಟ್ಟ ಶಾಸನ ) ಸ್ಪಷ್ಟ ಸಹಗಮನದ ಉಲ್ಲೇಖಗಳಾಗಿವೆ. ಇಲ್ಲಿಯ ' ಸಂಗಡ ' ' ಸಹಿತ ' ಎಂಬ ಪದಗಳು ಪತ್ನಿ ಗಂಡನ ಶವದೊಡನೆ ಸತಿಹೋಗಿರುವುದನ್ನು ಹೇಳುತ್ತವೆ. ಇಲ್ಲಿ ಪತಿಯು ಪತ್ನಿ ಸಂಗಡ—ಸಹಿತ ವೈಕುಂಠ ಪಡೆದದ್ದು ಹೇಳುವುದು ಮುಖ್ಯವಾಗಿಲ್ಲ. ಪತಿ ಸತ್ತಾಗ ಪತ್ನಿಯು ಅವನ ಶವಸಮೇತ ಸಾಯುವುದನ್ನು ಹೇಳುವುದು ಮುಖ್ಯವಾಗಿದೆ. ಆ ಸಾಯುವ ಬಗೆಯನ್ನು ವೈಕುಂಠ ಪಡೆದರು ಎಂದು ಸೂಚಿಸುವ ವೈಚಿತ್ರ್ಯ ಇಲ್ಲಿದೆ. ಇದೇ ಸಂದರ್ಭದಲ್ಲಿ, '' ಬೊಮ್ಮಗುಡನು ತಂನಮುದವೊಳಿಗೆ ಜಬಗುಡಿಸಹಿತಸ್ವರ್ಗ್ಗ ....... '' ಎಂದು ಹೇಳುವ ಹಿರೇಕಬ್ಬೂರ ಶಾಸನವನ್ನು ಯುದ್ಧದಲ್ಲಿ ' ತಂಮುಗ ' ಭಯಂಕರ ಯುದ್ಧಮಾಡಿ ಅರಿನೃಪಾಲರನ್ನು ಕೊಂದು ಸತ್ತದ್ದನ್ನು ವರ್ಣಿಸುತ್ತ '' ತಂಮುಗ ರಣದೊಳು ಪೊಡವೀಶರ ಮುಡಿಹಿಂಡೆ ತಾನಡಗಿದ ಸತಿಗೂಡಿ ಶಿವನಪದಪಂಕಜದೊಳು '' ಎಂದು ಹೇಳುವ ಕುಪ್ಪಟೂರ ಶಾಸನವನ್ನು ಸ್ಮರಿಸಬಹುದಾಗಿದೆ.[7]

' ಪಂಪಭಾರತ 'ದಲ್ಲಿ ಪಾಂಡುರಾಜನು ಮರಣಹೊಂದಲಾಗಿ ಮಾದ್ರಿ, ' ನಿನ್ನೊಡನೆ—ವಂದು ದಿವದೊಳ್ ನಿನ್ನಮನೋರಥಮನರಸನೆಱಪದೆ ಮಾಣೆಂ '' ಎಂದು ಹೇಳುವ ಮಾತಿನಲ್ಲಿ ಸಹಗಮನದ ಚಿತ್ರಣವಿದೆ.[8] ಪಂಪಕವಿ ' ನಿನ್ನೊಡನೆವಂದು ' ಎನ್ನುವ ಮಾತನ್ನು ಉದ್ದೇಶಪೂರ್ವಕವಾಗಿ ಇಲ್ಲಿ ಇಟ್ಟಿದ್ದಾನೆ. ಹತ್ತನೆಯ ಶತಮಾನದ ಕನ್ನಡ ನಾಡಿನಲ್ಲಿ ಗಂಡಂದಿರ ಮೃತಶರೀರ—ಗಳೊಡನೆ ಸತಿಹೋಗುತ್ತಿದ್ದ ಪತ್ನಿಯರ ಚಿತ್ರ ಕವಿಯ ಮುಂದೆ ಇದ್ದಂತಿದೆ. ಅದೇ ರೀತಿ

ರನ್ನನ ಕೂಡ ನಾಗದೇವ ಮರಣಹೊಂದಲಾಗಿ ಅವನ ಪತ್ನಿ ಗುಂಡಮಬ್ಬೆ ‘‘ಇನಿಯನನಪ್ಪಿ ಕೊಂಡುಚಿತಮಾಗೆ ಚಿತಾವಗ್ನಿಯೊಳಣ್ಮಿ ಸತ್ತ ಸಜ್ಜನಿಕೆಯ ಪೆಂಪು....... ’’ ಎಂದು ಬಣ್ಣಿಸಿರುವುದನ್ನು ಇಲ್ಲಿ ಗಮನಿಸಬೇಕು.[9] ಸಿಂಗಿರಾಜಪುರಾಣದಲ್ಲಿ, ಬಿಜ್ಜಳನು ಸಿದ್ಧರಸ ಮಂತ್ರಿಗಳ ಮುಂದೆ ‘‘ಎಮ್ಮ ತಂದೆ ತೀರಲ್ತಾಯಿ ಸಹಗಮನಮಾಡಿ...... ’’ ಎಂದು ಹೇಳುವ ಮಾತಿನಲ್ಲಿ ಬಿಜ್ಜಳನ ತಾಯಿ ಗಂಡನೊಡನೆ ಸಹಗಮನ ಮಾಡಿಕೊಂಡ ವಿಷಯ ಸ್ಪಷ್ಟಗೊಳ್ಳುತ್ತದೆ.[10] ಕುಮಾರರಾಮನು ಮರಣಹೊಂದಿದ್ದನ್ನು ಕೇಳಿ ಅವನ ತಾಯಿ ಹರಿಹರದೇವಿ ಮಂತ್ರಿ ಬೈಚಪ್ಪನಿಗೆ’’ ತಿಳಿದು ನುಡಿದಳಿಂತೆಂದು ತಲೆಯ ತರಿಸಿಕೊಡು ಸೊಸೆ–ಯರನುರಿಗೊಂಡದೊಳಗೆ ಬೀಳ್ವಂತೆ ಮಾಡು’’ ಎಂದು ರಾಮನಾಥ ಚರಿತದಲ್ಲಿ ಬರುತ್ತದೆ[11] ಇಲ್ಲಿ ಪತಿಯ ರುಂಡದೊಡನೆ ಪತ್ನಿಯರು ಅಗ್ನಿಪ್ರವೇಶ ಮಾಡುತ್ತಿದ್ದ ಸೂಚನೆ ಇದೆ. ಹರಿಹರದೇವಿ ತಿಳಿದು ಅಂದರೆ ಅವಳು ತನ್ನಲ್ಲಿ ಸೂಕ್ತರೀತಿಯಲ್ಲಿ ಆಲೋಚಿಸಿ ಸೊಸೆಯಂದಿರರಿಗೆ ಮೃತ ಮಗನ ರುಂಡದೊಡನೆ ಅಗ್ನಿಪ್ರವೇಶ ಮಾಡಲು ವ್ಯವಸ್ಥೆಗೊಳಿಸಲು ಬೈಚಪ್ಪನಿಗೆ ಹೇಳುವಲ್ಲಿ ಸಹಗಮನ ಆಚರಣೆಯ ಛಾಯೆ ಇದೆ. ಅಂದು ಪತ್ನಿಯರು ಹೆಚ್ಚಾಗಿ ಗಂಡನ ಶವದೊಂದಿಗೆ ಸತಿ ಹೋಗುತ್ತಿದ್ದುದನ್ನು ಇದು ಅಭಿವ್ಯಕ್ತಗೊಳಿಸುತ್ತದೆ. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ತೋಂಟದರಾಯನ ಮಡದಿ ಚೆನ್ನಬಸವಮ್ಮ ‘‘ತನ್ನಯಗಂಡನನಪ್ಪಿ’’ ಸತಿ ಹೋಗುವುದನ್ನು ಕಾಣುತ್ತೇವೆ.[12] ವೀರಯ್ಯ ಯುದ್ಧದಲ್ಲಿ ಮರಣಹೊಂದಲಾಗಿ ಅವನ ಶವದೊಂದಿಗೆ ಅವನ ಪತ್ನಿಯರು ಸಮಾಧಿಯಲ್ಲಿ ಕುಳಿತು ಸತಿಹೋಗುವ ಚಿತ್ರಣ ಸಿರುಮಣ–ನಾಯಕನ ಸಾಂಗತ್ಯದಲ್ಲಿದೆ.[13]

ಕುಮಾರವ್ಯಾಸನು ತನ್ನ ಕರ್ಣಾಟ ಭಾರತ ಕಥಾಮಂಜರಿಯಲ್ಲಿ, ಮಾಗಧನ ಮರಣಾನಂತರ ‘‘ಅವನ ಸಂಸ್ಕಾರದಲಿ ನಾರೀ ನಿವಹ ಸಹಗತವಾಯ್ತು’’ ಎಂದು ತಿಳಿಸುತ್ತಾನೆ.[14] ಇಲ್ಲಿ ಮಹಾಕವಿ ಮೃತನಾದ ಪತಿಯೊಡನೆ ಪತ್ನಿಯರು ಸತಿಹೋದುದನ್ನು ‘ಸಹಗತವಾಯ್ತು’ ಎಂಬ ಮಾತಿನಲ್ಲಿ ಅಭಿವ್ಯಕ್ತಗೊಳಿಸಿದ್ದಾನೆ. ತೊರವೆರಾಮಾಯಣದಲ್ಲಿ ರಾಮನು ವಿಭೀಷಣನಿಗೆ ರಾವಣನ ಶವ ಸಂಸ್ಕಾರ ಮಾಡಲು ತಿಳಿಸುತ್ತಾನೆ. ಆಗ ಪದ್ಯವೊಂದು ಹೀಗೆ ಬರುತ್ತದೆ.[15]

ಬೀಳುಕೊಂಡಸುರೇಂದ್ರ ಬಂದು ವಿ
ಶಾಲ ವೈದಿಕ ವಿಹಿತದಿಂ ದಶ
ಮೌಳಿಯನು ಸಂಸ್ಕರಿಸಿದನು ಬಳಿಕಾಹಿತಾಗ್ನಿಯಲಿ
ಬಾಲಕಿಯರೊಳ್ಳಿಗಿದರು ವಹ್ನಿ
ಜ್ವಾಲೆಯಲಿ ವಿಲುಕ್ಕ ಸುರರಗ್ಗದ
ಬಾಲೆಯರು ಸಹಗಮನದಲಿ ನೀಗಿದರು ನಿಜತನುವ

ಇಲ್ಲಿ ವಿಭೀಷಣನು 'ದಶಮೌಳಿ'ಯನ್ನು ಸಂಸ್ಕರಿಸುವ ಹಾಗೂ ಆ ಅಗ್ನಿಯಲ್ಲಿಯೇ ಆತನ ಪತ್ನಿಯರು ಸತಿಹೋಗುವ ಚಿತ್ರಣವಿದೆ. ಅಲ್ಲದೆ ಉಳಿದ ಅಸುರರ ಪತ್ನಿಯರು ಕೂಡ 'ವಹ್ನಿಜ್ವಾಲೆ'ಯಲ್ಲಿ ಸಹಗಮನ ಮಾಡಿಕೊಂಡರೆಂಬ ಚಿತ್ರಣವೂ ಇದೆ. ರಾವಣನೊಡನೆ ಆತನ ಪತ್ನಿಯರು ಅಸುರರೊಡನೆ ಅವರವರ ಪತ್ನಿಯರು ಬೇರೆಬೇರೆ ಅಗ್ನಿಗಳನ್ನು ರಚಿಸಿಕೊಂಡು ಸತಿಹೋಗುವ ಅಪೂರ್ವ ದೃಶ್ಯವೊಂದನ್ನು ಕುಮಾರವಾಲ್ಮೀಕಿ ಇಲ್ಲಿ ಕೊಟ್ಟಿದ್ದಾನೆ. ತನ್ನ ಸಮಕಾಲೀನ ಬದುಕಿನಲ್ಲಿ ಜರುಗುತ್ತಿದ್ದ ಸತಿಘಟನೆಗಳನ್ನು ಕಂಡ ಕವಿಯು ಅವುಗಳನ್ನು ತನ್ನ ಕಾವ್ಯದಲ್ಲಿ ಅಲ್ಲಲ್ಲಿಗೆ ಪ್ರತಿಬಿಂಬಿಸಿದ್ದಾನೆಂಬುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಜನಪದ ಸಾಹಿತ್ಯವು ಪತ್ನಿಯರು ಗಂಡನೊಡನೆ ಸತಿಹೋಗುವ ಪ್ರಸಂಗಗಳನ್ನು ಅತ್ಯಂತ ಶ್ರೀಮಂತವಾಗಿ ಚಿತ್ರಿಸುತ್ತದೆ. 'ನಾಗವ್ವ' ಜನಪದ ಖಂಡಕಾವ್ಯದಲ್ಲಿ "ಅತ್ತೆಯ ಮಗನೆ ಚಂದಯ್ಯ (ನಾ) ಕುಟ್ಟಿ ನಾ ಹತ್ತ್ಯೇದೆ ಲೇಸು ಒಡಗಿಚ್ಚ" ಎಂದು ನಾಗವ್ವ ಹೇಳುವ ಮಾತಿನಲ್ಲಿ ಸಹಗಮನದ ಚಿತ್ರವಿದೆ.[16] "ಚಿಕ್ಕೊಕ್ಕೇಳು ಹಿರಿದಿಮ್ಮವ್ವ" ಕಾವ್ಯದಲ್ಲಿ ತಿಮ್ಮವ್ವ "ಗಂಡಾನ ತಲೆಯನ್ನು ತಲೆಕಡೆಮಡಿಕೊಂಡು" ಸತಿಹೋಗುತ್ತಾಳೆ.[17] ಅಂದರೆ ತಿಮ್ಮವ್ವ ಗಂಡನ ತಲೆಯ ಸಮೇತ ಸಹಗಮನ ಮಾಡಿಕೊಳ್ಳುತ್ತಾಳೆ. "ಜಗುನೆಯ ಜಕ್ಕಣ್ಣ ಮಗುನೆಯ ಬ್ಯಾಟಿಕಾರ" ಜನಪದ ಹಾಡಿನಲ್ಲಿ ಮಳಿಕೆಗೌಡನ ಮಗಳು ಹಂದಿಹೊಡೆದು ಸತ್ತ ಮಗುನೆಯ ಬ್ಯಾಟಿಕಾರ ತನ್ನ ಗಂಡನೆಂದೇ ಭಾವಿಸಿ ಅವನ ಶರೀರದ ತುಂಡುತುಂಡುಗಳನ್ನೆಲ್ಲ ಮಡಲಿಗೆ ಕಟ್ಟಿಕೊಂಡು, ಅವನ 'ಬೆಳ್ಳಿಕಟ್ಟಿನ ಕೊಳವಿ' ಕೈಯಲ್ಲಿ ಹಿಡಿದುಕೊಂಡು ಸತಿಹೋಗುತ್ತಾಳೆ.[18] ಈ ಹಾಡಿನಲ್ಲಿ ಮಳಿಕೆಗೌಡನ ಮಗಳು ಸತ್ತವನ ಶವವನ್ನು ಹುಡುಕುತ್ತ ಹೋಗುವುದು, ಸಿಕ್ಕ ಅವನ ಶರೀರದ ತುಂಡುಗಳನ್ನು ಮಡಲಿಗೆ ಕಟ್ಟಿಕೊಳ್ಳುವುದು, ಕೊನೆಗೆ ಅವೆಲ್ಲವುಗಳೊಡನೆ ಅವಳು ಅಗ್ನಿಪ್ರವೇಶ ಮಾಡುವುದು — ಇವೆಲ್ಲವುಗಳನ್ನು ಕಂಡರೆ ಪತ್ನಿಯರು ಗಂಡಂದಿರ ಶವದೊಂದಿಗೆ ಸತಿಹೋಗಲು ಬಯಸುತ್ತಿದ್ದುದು ಮನವರಿಕೆಯಾಗುತ್ತದೆ. 'ಕೊಂಡದ ಮಾಸ್ತ್ಯಮ್ಮ' ಗೀತೆಯಲ್ಲಿ ಮಾಸ್ತಮ್ಮ ಸತಿಹೋಗುವಾಗ "ಗಂಡಾನ ತೊಳು ತಲೆದಿಂಬೇ

ಮಾಸ್ತ್ಯಮ್ಮ ಕೆಂಡಕುಸುದಂಗೆ ಕುಸುದಾಳೆ" ಎಂಬ ವರ್ಣನೆ ಬರುತ್ತದೆ.[19] ಇಲ್ಲಿ ಗಂಡನ ತೋಳು ತಲೆಗೆ ದಿಂಬಿನಂತೆ ಆಧಾರವಾಗಿಟ್ಟುಕೊಂಡು ಅಗ್ನಿಯೊಳಗೆ ಉರಿದುಹೋಗುವ ಸತಿ ಚಿತ್ರಣವಿದೆ.

'ಸೀಜರ ಫ್ರೆಡೆರಿಕ್' ಎಂಬ ವಿದೇಶಿ ಪ್ರವಾಸಿ ವಿಜಯನಗರದಲ್ಲಿಯ ಸತಿ ಆಚರಣೆಯನ್ನು ವಿವರಿಸುತ್ತ "ದೊಡ್ಡ ಮನುಷ್ಯನೊಬ್ಬ ಸತ್ತಾಗ ಆತನ ಹೆಂಡತಿಯೂ ಅವನ ದಾಸಿಯರು ಒಟ್ಟಿಗೆ ಅವನ ಚಿತೆಯಲ್ಲಿ ಬಿದ್ದು ಸಾಯುತ್ತಾರೆ" ಎಂದು ಹೇಳುತ್ತಾನೆ.[20] ಹಾಗೇ ಅವನು ಮುಂದುವರಿದು, ಗಂಡನೊಡನೆ ಪತ್ನಿಯರು ಜೀವಂತ ಸಮಾಧಿಗೊಳ್ಳುತ್ತಿದ್ದ ವಿಷಯವನ್ನು ನಿರೂಪಿಸುತ್ತಾನೆ. ಮಿಷಿನರಿ ಟಿಪ್ಪಣಿಗಳಲ್ಲಿಯ ಪತ್ರವೊಂದರಲ್ಲಿ ಬೆಂಗಳೂರಿನ ಜೂನ್ 9, 1826 ರಂದು ನಡೆದ ಸತಿಘಟನೆಯೊಂದನ್ನು ಉಲ್ಲೇಖಿಸಲಾಗಿದೆ.[21] ಅದರಲ್ಲಿ, ಪತ್ನಿ ಗಂಡನ ಶವವನ್ನು ತಬ್ಬಿ ಅಗ್ನಿಯಲ್ಲಿ ಸತಿಹೋದುದನ್ನು ವಿವರಿಸಲಾಗಿದೆ. ಹೀಗೆ ವಿದೇಶಿವರದಿಗಳು, ಪತ್ನಿಯರು ಗಂಡನ ಶವದೊಂದಿಗೆ ಸತಿಹೋಗುತ್ತಿದ್ದುದನ್ನು ತಿಳಿಸಿ ಕೊಡುತ್ತವೆ.

ಅನುಗಮನ:

ಅನುಗಮನ ಅಥವಾ ಅನುಮರಣ ಎಂಬ ಪದ ಕನ್ನಡ ಶಾಸನ, ಕಾವ್ಯ, ಜನಪದ ಸಾಹಿತ್ಯ ಮೊದಲಾದ ಆಕರಗಳಲ್ಲಿ ಕಂಡು ಬರುವುದಿಲ್ಲವೆಂದು ಈಗಾಗಲೇ ತಿಳಿಸಲಾಗಿದೆ. ಸಂಸ್ಕೃತದಲ್ಲಿ ಅಪರಾರ್ಕನು ಅನುಗಮನದ ವಿಧಾನವನ್ನು ಸ್ಪಷ್ಟಪಡಿಸಿದ್ದಾನೆ. ಗಾಥಾಸಪ್ತಶತಿ, ಪದ್ಮ — ಪುರಾಣಗಳಲ್ಲಿ ಈ ಪದ ಉಲ್ಲೇಖಗೊಂಡಿದೆ, ಬಾಣನು ತನ್ನ ಕಾದಂಬರಿಯಲ್ಲಿ ಅನುಗಮನವನ್ನು ವಿರೋಧಿಸುವುದನ್ನು ಕಾಣುತ್ತೇವೆ.[22] ಅನುಗಮನವೆಂಬುದು ಗಂಡನು ದೂರದಲ್ಲಿ ಮಡಿದು ಹೋದ ನಂತರ ಅದನ್ನು ತಿಳಿದ ಅವನ ಪತ್ನಿ ಅವನ ಯಾವುದಾದರೂ ವಸ್ತುವಿನೊಡನೆ, ಅದೂ ದೊರಕದಿದ್ದರೆ ಸ್ವತಃ ತಾನೊಬ್ಬಳೇ ಅಗ್ನಿ ಅಥವಾ ಸಮಾಧಿಪ್ರವೇಶ ಮಾಡುವ ವಿಧಾನವಾಗಿದೆ. ಅಷ್ಟೇ ಅಲ್ಲದೆ, ಕೆಲವು ಕಾರಣಗಳಿಂದ ಗಂಡನ ಶವದೊಂದಿಗೆ ಸಹಗಮನಗೊಳ್ಳದೆ ಅವನ ಶವ ಸಂಸ್ಕಾರ ಮಾಡಿ ಬಂದ ಪತ್ನಿ ಕೆಲವು ದಿನಗಳ ನಂತರ ಸತಿಹೋಗುತ್ತಿದ್ದುದನ್ನು ಇದೇ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದಾಗಿದೆ. ಅಂದರೆ ದೂರದಲ್ಲಿ ಗಂಡ ಮಡಿದ ಕಾರಣಕ್ಕಾಗಿ ಮಾತ್ರ ಅನುಗಮನ ಆಚರಣೆ ನಡೆಯುತ್ತಿರಲಿಲ್ಲ ಎಂಬುದು ಸ್ಪಷ್ಟಗೊಳ್ಳುತ್ತದೆ.

ಕರ್ನಾಟಕದಲ್ಲಿ ದೊರಕುವ ಸತಿ ಆಕರಗಳಲ್ಲಿ ಅನುಗಮನ ಪದಪ್ರಯೋಗ-ವಿರದಿದ್ದರೂ ಅದರ ಉದಾಹರಣೆಗಳಿಗೇನೂ ಕೊರತೆಯಿಲ್ಲ. ಡಾ|| ಎಂ.ಎಂ.ಕಲಬುರ್ಗಿ ಅವರು ಮಾಸ್ತಿಶಾಸನದ ಮುಡಿಯಮಾಣಿಕ್ಯವೆಂದು ಹೊಗಳಿರುವ 1057 ರ ಬೆಳತೂರ ಶಾಸನವು 'ದೇಕಬ್ಬೆ'ಯ ಅನುಗಮನವನ್ನು ಸೂಚಿಸುತ್ತದೆ.[23] ರೆ|| ಕಿಟೆಲ್ಲರು, ''ಶೂದ್ರಳೊಬ್ಬಳು ಪ್ರಥಮಬಾರಿಗೆ ಪತಿಯ ಸಾವಿನ ನಂತರ ಸ್ವತಂತ್ರ ಮನೋಭಾವನೆಯಿಂದ ಅನುಗಮನ ಆಚರಿಸಿದ ಸಂಗತಿಯಿದು'' ಎಂದು ಶಾಸನದ ಮುಖ್ಯ ಸಂಗತಿ ಕುರಿತು ತಿಳಿಸಿದ್ದಾರೆ.[24] ಡಾ: ಎಂ.ಚಿದಾನಂದಮೂರ್ತಿಯವರಂತೂ ಹಲವು ಶಾಸನಗಳ ಆಧಾರಗಳ ಹಿನ್ನೆಲೆಯಲ್ಲಿ ದೇಕಬ್ಬೆ ಶಾಸನದಲ್ಲಿ ಉಲ್ಲೇಖಗೊಂಡ ಸ್ಥಳನಾಮಗಳ ಕುರಿತು ದೀರ್ಘ ಚಿಂತನೆಯನ್ನು ಮಾಡಿದ್ದಾರೆ. ಅಲ್ಲದೆ ದೇಕಬ್ಬೆ ಸತಿಹೋದ ಸ್ಥಳದ ಕುರಿತಾಗಿ ಹೊಸ ವಿಷಯವನ್ನು ಮುಂದಿಟ್ಟಿದ್ದಾರೆ.[25] ದೇಕಬ್ಬೆಯ ತಂದೆ ರವಿಗ ನುಗ್ಗೆನಾಡಿನ ಮಾಂಡಲಿಕನಾಗಿದ್ದವನು. ಬೆಳತೂರವೇ ಅವನ ರಾಜಧಾನಿಯಾಗಿತ್ತು. ರವಿಗ ತನ್ನ ಮಗಳನ್ನು ನವಿಲೆನಾಡಿನ ದೊರೆ ''ಕುರ್ಚುವಂದಕುಲ''ದ ಏಚನಿಗೆ ಕೊಟ್ಟು ಲಗ್ನ ಮಾಡಿದ್ದನು. ನವಿಲೆನಾಡಿನ ರಾಜಧಾನಿ ಪೆರ್ಬಯಲು : ಡಾ|| ಎಂ. ಚಿದಾನಂದಮೂರ್ತಿಗಳು ಹೇಳುವಂತೆ ಈಗಿನ ಹೆಬ್ಬಲಗುಪ್ಪೆ. ಬೆಳತೂರು ಮತ್ತು ಹೆಬ್ಬಲಗುಪ್ಪೆಗಳು ಈಗ ಅಕ್ಕಪಕ್ಕದ ಊರುಗಳಾಗಿವೆ. ಏಚನನ್ನು ದಾಯಾದಿಗಳು ತಲೆಕಾಡಿನಲ್ಲಿ ಇರಿದು ಕೊಲ್ಲುತ್ತಾರೆ. ಬಹುಶ: ಅವನ ಮರಣ ಯುದ್ಧದಲ್ಲಾದ ಮರಣವಲ್ಲ. ''ಅವನಂ ನೆಟ್ಟನೆ ತಲೆಕಾಡಲುಯ್ದು ಕೊಂದಂ ನರಪಂ'' ಎಂಬ ಮಾತನ್ನು ಲಕ್ಷಿಸಿದರೆ, ಅವನನ್ನು ತಲೆಕಾಡಿಗೆ ಒಯ್ದು ಕೊಂದ ಸೂಚನೆ ಕಂಡುಬರುತ್ತದೆ. ಬಹುಶ: ಅವನನ್ನು ಹಿಡಿದೊಯ್ದು, ಕರೆದೊಯ್ದು ದುರ್ಮರಣಕ್ಕೆ ಎಡೆಮಾಡಿರಬೇಕು. ''ಕಲಿಕಾಲಮೇಳನೆನಿಸಿದ ಕಲಿಚಾಗಿಯನಿೞಿದು ಕೊಂದಳೆಂಬುದು ಮಾತಂ ಲಲಿತಾಂಗಿ ಕೇಳ್ದು'' ಎಂಬಲ್ಲಿ 'ಇೞಿದು' ಎನ್ನುವ ಪದ ಹೋರಾಟದಲ್ಲಿ ಇರಿಯುವ ರೀತಿಯನ್ನು ಸೂಚಿಸಿದರೂ ಹೋರಾಟದಲ್ಲಿ ಮಾತ್ರವೇ ಈ 'ಇೞಿದು' ಪದ ಬಳಕೆಯಾಗ-ಬೇಕೆಂದೇನೂ ಇಲ್ಲ. ( ತಲೆಕಾಡಲುಯ್ದು ) ''ಕಲಿಚಾಗಿಯನಿೞಿದುಕೊಂದಳೆಂಬುದು'' ಎಂಬಲ್ಲಿ ಶಾಸನಕವಿ ಆ ದುರಂತವನ್ನು ಒತ್ತಿ ಹೇಳಿದ್ದಾನೆ. ಅದನ್ನು ಕೇಳಿದ ಲಲಿತಾಂಗಿ ದೇಕಬ್ಬೆ ಸತಿಹೋಗಲು ಗಟ್ಟಿಯಾದ ನಿರ್ಧಾರ ತಗೆದುಕೊಂಡು ಕೊಂಡಕ್ಕೆ ಹೊರಟೇ ಬಿಡುತ್ತಾಳೆ. ಅವಳು ತನ್ನ ಗಂಡನ ಯಾವುದಾದರೂ ಗುರುತಿನ ವಸ್ತುವಿನೊಡನೆ ಸತಿಹೋಗುವ ಸೂಚನೆಗಳಾವೂ ಈ ಶಾಸನದಲ್ಲಿ ಇಲ್ಲ. ಬಹುಶ: ಏಚನನ್ನು ತಲೆಕಾಡಿನಲ್ಲಿ ಕೊಂಡೊಯ್ದು ಕೊಂದಕಾರಣ

ಅವನ ಶವ ಅಥವಾ ಅವನ ವಸ್ತುಗಳು ಏನಾದರೂ ಬರುವ ಭರವಸೆ ಇಲ್ಲದ ದೇಕಬ್ಬೆ ಕೊಂಡಕ್ಕೆ ನಡೆದೇ ಬಿಡುತ್ತಾಳೆ. ಆ ಕ್ರಿಯೆಯನ್ನು ಶಾಸನಕವಿ ಅತ್ಯಂತ ತೀವ್ರಗತಿಯಲ್ಲಿ, 'ಕಲಿಜಾಗಿಯನಿ—ಟ್ಟಿದು ಕೊಂಡಳೆಂಬುದು ಮಾತಂ ಲಲಿತಾಂಗಿ ಕೇಳ್ದು ರವಿಗನ ಕುಲದೀಪಕಿ ಸಾಯಲೆಂದು ಕೊಣ್ಡಕೆ ನಡೆದಳ್'' ಎಂದು ತಿಳಿಸಿಬಿಟ್ಟಿರುವುದನ್ನು ಗಮನಿಸಬೇಕು. ಅಲ್ಲದೆ, ಆ ಸುದ್ದಿ ತಿಳಿದ ಪಕ್ಕದ ಊರವರಾದ ತವರುಮನೆಯವರು '' ತನ್ದೆಯುಮಬ್ಬೆಯುಮೊಡನೆಯೆ ಬನ್ಧುಗಳುಂ ಬಂದು'' ಎಂದು ಹೇಳುವಲ್ಲಿ ಅದೇ ತೀವ್ರತೆ ಮುಂದುವರಿದುಕೊಂಡು ಬಂದಿದೆ. 'ಒಡನೆಯೆ' ಎನ್ನುವ ಪದ ಆ ತೀವ್ರತೆಯನ್ನು ಧ್ವನಿಸುತ್ತದೆ. ಬಹುಶಃ ಗಂಡ ವೀರಮರಣಹೊಂದಿದ್ದರೆ ಈ ಶಾಸನದ ಧ್ವನಿಯೇ ಬೇರೆಯಾಗುತ್ತಿತ್ತು ಎನಿಸುತ್ತದೆ.

ಈಗ, ದೇಕಬ್ಬೆಯ ಶಾಸನ ಬೆಳತೂರಿನಲ್ಲಿದೆ. ಅದರ ಪಕ್ಕದ ಊರಾದ ಇಂದಿನ ಹೆಬ್ಬಲಗುಪ್ಪೆ ( ಪೆರ್ಮಯಲು ) ಏಚನ ನವಿಲೆನಾಡಿನ ಕೇಂದ್ರಸ್ಥಾನವಾಗಿತ್ತು. ಡಾ: ಚಿದಾನಂದ—ಮೂರ್ತಿಗಳು, ದೇಕಬ್ಬೆ ಸತಿಹೋದದ್ದು ಹೆಬ್ಬಲಗುಪ್ಪೆಯಲ್ಲಿಯೇ ಹೊರತು ಬೆಳತೂರಿನಲ್ಲಿ ಅಲ್ಲವೆಂದು ಹೇಳುವ ತಮ್ಮ ವಾದವನ್ನು ಹೀಗೆ ಮುಂದಿಡುತ್ತಾರೆ: '' ಗಂಡ ಏಚ ದಾಯಾದಿಗಳ ಕೈಲಿ ತಲಕಾಡಿನಲ್ಲಿ ಮಡಿದಾಗ ದೇಕಬ್ಬೆ ತನ್ನ ಗಂಡನ ಊರಲ್ಲಿದ್ದಳು ಎಂಬುದಕ್ಕೆ ಶಾಸನದಲ್ಲೇ ಸೂಚನೆಗಳಿವೆ. ಅವಳು ಪತಿಯೊಡನೆ ಜೊತೆಯಲ್ಲಿ ಬಾಳುತ್ತ ಸುಖವಾಗಿರುವಾಗ, ಪತಿಯ ಸಾವಿನ ಸುದ್ದಿಬಂದಿತು ಎಂದು ಶಾಸನ ಹೇಳುತ್ತದೆ. ( '' ಪಾರಿಜಾನನೆ ವಿನಯ ಚಿಂತಾಮಣಿ ಪತಿಹಿತೆಯೊಡಗೂಡಿ ಸುಖದಿನಿಳ್ದು ......... ಕಲಿಕಾಲವೇಳನೆನಿಸಿದ ಕಲಿಜಾಗಿಯನಿಟ್ಟಿದು ಕೊಂಡಳೆಂಬುದು ಮಾತಂ ಲಲಿತಾಂಗಿ ಕೇಳ್ದು..... '' ) ಅವಳು ಸಹಗಮನ ಮಾಡಲು ತೀರ್ಮಾನಿಸಿದಾಗ ತಂದೆ-ತಾಯಿಗಳು ಅವಳಲ್ಲಿಗೆ ಬಂದರೆಂದು ಶಾಸನಹೇಳುತ್ತದೆ. ( '' ತಂದೆಯುಂ—ಮಬ್ಬೆಯುಮೊಡನೆ ಬಂಧುಗಳುಂ ಬಂದು...... '' ). ಎಂದರೆ, ದೇಕಬ್ಬೆ ಅಗ್ನಿಪ್ರವೇಶ ಮಾಡಿದ್ದು ಪೆರ್ಮಯಲಲ್ಲಿ, ಅರ್ಥಾತ್ ಈಗಿನ ಹೆಬ್ಬಲಗುಪ್ಪೆಯಲ್ಲಿ ; ಅವಳ ತಂದೆ ರವಿಗ ತನ್ನ ಊರಾದ ಬೆಳತೂರಲ್ಲಿ ಮಗಳ ಸ್ಮಾರಕವಾಗಿ ಕಲ್ಲು ನಡೆಸಿದ. ( '' ನುಗುನಾಡ ರಾಥಮಂ ... ನಿಜಸುತೆಗನುರಾಗದಿಂ ಮಂಡಲಕ್ಕೆಲ್ಲಂಪಡಿಘಂದಮಾಗೆ ಶಿಲಾಸ್ತಂಭ ಶಾಸನಮಾಗೆ ನೆಟ್ಟಂ'' )[26] ಡಾ: ಚಿದಾನಂದಮೂರ್ತಿಯವರು ಹೆಬ್ಬಲಗುಪ್ಪೆಯಲ್ಲಿ ದೇಕಬ್ಬೆ ಸತಿಹೋದಳು ಎನ್ನುವುದಕ್ಕೆ

ಮುಖ್ಯವಾದ ಎರಡು ಕಾರಣಗಳನ್ನು ಕೊಡುತ್ತಾರೆ. ಒಂದು, ಅವಳು ಗಂಡನೊಡನೆ ಸುಖವಾಗಿದ್ದಳು ಎಂದು ವರ್ಣಿಸುವ ಶಾಸನ, ಗಂಡನ ಸಾವಿನ ಸುದ್ದಿಯನ್ನು ಆಗಲೇ ತಂದು ಮುಟ್ಟಿಸಿರುವಂತೆ ವರ್ಣಿಸಿರುವುದು. ಎರಡು : ಅವಳು ಸತಿಹೋಗಲು ನಿರ್ಧರಿಸಿದಾಗ ತಂದೆ-ತಾಯಿಗಳು ಅವಳಲ್ಲಿಗೆ ಬಂದರು ಎಂದು ಶಾಸನ ತಿಳಿಸಿರುವುದು. ಈ ಎರಡೂ ಕಾರಣಗಳು ಸಕಾರಣವಾಗಿವೆ ಎಂದೇ ಹೇಳಬೇಕು.[27] ಬೆಳತೂರಿನಲ್ಲಿದ್ದ ದೇಕಬ್ಬೆಯು ತಂದೆ ಬೇರೆ ಊರಿನಲ್ಲಿ ಸತಿಹೋದ ತನ್ನ ಮಗಳ ಸ್ಮಾರಕವಾಗಿ ಶಾಸನ ಬರೆಯಿಸಿ ತನ್ನೂರಿನಲ್ಲಿಯೇ ನೆಟ್ಟಿದ್ದಾನೆಂದು ಹೇಳುವಲ್ಲಿ ಯಾವ ತಪ್ಪೂ ಕಾಣಿಸದು.

ಕ್ರಿ.ಶ.1191 ರ ಹಿರೇಹಾರಕ ಶಾಸನವೊಂದು ಅನುಗಮನದ ವಿವರಣೆಯೊಂದನ್ನು ಕೊಡುತ್ತದೆ ಎಂದು ಅಭಿಪ್ರಾಯಪಡಲಾಗಿದೆ. ಹೋರಾಟದಲ್ಲಿ ಎಕ್ಕಲರಸ ಮಡಿಯಲಾಗಿ ಅವನ ಪತ್ನಿ ಜಳಿಬಿಯವ್ವೆ ಕಲ್ಲನಿರಿಸುವಲ್ಲಿ ಕೂಡೆಸತ್ತು ಸ್ವರ್ಗವಂ ಸೂರೆಗೊಂಡಳು" ಎಂದು ಆ ಶಾಸನ ವರ್ಣಿಸುತ್ತದೆ.[28] ಈ ಶಾಸನವನ್ನು ವಿವರಿಸುತ್ತ ಡಾ|| ಆರ್. ಶೇಷಶಾಸ್ತ್ರಿ ಅವರು "ಕರ್ನಾಟಕದಲ್ಲಿ ಸಹಗಮನ ಮಾತ್ರವಲ್ಲದೆ ಅನುಗಮನ ಪದ್ಧತಿಯೂ ಇತ್ತು. ವೀರನಿಗೆ ವೀರಗಲ್ಲನ್ನು ನಿಲ್ಲಿಸುವ ಸಂದರ್ಭದಲ್ಲಿ ಅನುಗಮನ ಮಾಡುತ್ತಿದ್ದಂತೆ ವೀರಗಲ್ಲಿನ ಪಾಠವೊಂದರಿಂದ ತಿಳಿದು ಬರುತ್ತದೆ. ಯುದ್ಧವೊಂದರಲ್ಲಿ ಸತ್ತ ತನ್ನ ಗಂಡನಿಗೆ "ವೀರಗಲ್ಲನಿರಿಸುವಲ್ಲಿ" ಬಿಯವ್ವೆ ಎಂಬುವಳು" ಕೂಡೆ ಸತ್ತು ಸ್ವರ್ಗವಂ ಸೂರೆಗೊಂಡಳು" ಎಂಬುದಾಗಿ ಆ ವೀರಗಲ್ಲಿನ ಪಾಠ ತಿಳಿಸುತ್ತದೆ" ಎಂದು ಹೇಳುತ್ತಾರೆ.[29] ಗಂಡನಿಗೆ ವೀರಕಲ್ಲು ನೆಡುವಲ್ಲಿ ಪತ್ನಿ ಕೂಡೆ ಸತಿಹೋದಳು ಎಂದು ಅರ್ಥೈಸಿದರೆ ಈ ಶಾಸನ ಅನುಗಮನ ಹೇಳುತ್ತದೆ ಎಂದು ಹೇಳಬೇಕಾಗುತ್ತದೆ. ಗಂಡ ಸತ್ತ ಮೇಲೆ ಕೆಲವು ದಿನಗಳಲ್ಲಿಯೇ ವೀರಗಲ್ಲು ನೆಡುತ್ತಿದ್ದರು ಎಂದು ಇಟ್ಟುಕೊಂಡರೂ ಆಗ ಸತ್ತ ಜಕ್ಕಿಬಿಯವ್ವೆಯ ಮರಣ ಅನುಮರಣವೇ ಆಗುತ್ತದೆ. ಆದರೆ ಈ ಶಾಸನ ಪಾಠವನ್ನು ಇನ್ನೊಂದು ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಬರುವಂತಿದೆ. 'ಜಕ್ಕಿಬಿಯವ್ವೆ ಕಲ್ಲನಿರಿಸುವಲ್ಲಿ" ಎಂದರೆ, — ವೀರರು ಮಡಿದಾಗ, ಪತ್ನಿಯರು ಸತಿಹೋದಾಗ ಅವರಿಗಾಗಿ ನಿಶ್ಚಿತವಾದ ಒಂದು ಸ್ಥಾನದಲ್ಲಿ ವೀರಗಲ್ಲುಗಳನ್ನು ಮಾಸ್ತಿಕಲ್ಲುಗಳನ್ನು ನೆಡುತ್ತಿದ್ದು ಆ ಸ್ಥಾನವನ್ನು ಗುರುತಿಸಲಿಕ್ಕೆ ಶಾಸನದಲ್ಲಿ "ಕಲ್ಲನಿರಿಸುವಲ್ಲಿ" ಎಂದು ಉಲ್ಲೇಖಗೊಂಡಿರಬೇಕು. ಅಂಥ ಸ್ಥಾನದಲ್ಲಿ ಜಳಬಿಯವ್ವೆ "ಕೂಡೆ ಸ್ವರ್ಗವಂ ಸೂರೆಗೊಂಡಳು" ಎಂದರೆ, ಗಂಡನ

ಮೃತಶರೀರದೊಡನೆ ಕೂಡಿಕೊಂಡು ಸಹಗಮನಹೊಂದಿರಬೇಕು ಎಂದು ಹೇಳಲು ಬರುವಂತಿದೆ. ಡಾ|| ಶೇಷಶಾಸ್ತ್ರಿಯವರು ಹೇಳುವಂತೆ ಸತ್ತ ತನ್ನ ಗಂಡನಿಗೆ 'ವೀರಗಲ್ಲನಿರ್ಧಿಸುವಲ್ಲಿ'' ಎಂದು ಶಾಸನದಲ್ಲಿಯೇನೂ ಹೇಳಿಲ್ಲ. ಅಲ್ಲಿ ''ಕಲ್ಲನಿರ್ಧಿಸುವಲ್ಲಿ'' ಎಂದು ಮಾತ್ರ ಹೇಳಲಾಗಿದೆ. ಇಲ್ಲಿ ಬಳಕೆಗೊಂಡ 'ಕೂಡೆ'' ಶಬ್ದವೂ ಬಹುಮುಖ್ಯವಾದುದು. ''ಜಳಬಿಯವ್ವೆ'' ಮೃತಗಂಡನಿಗೆ ವೀರಗಲ್ಲು ನಡೆವಲ್ಲಿ ಕೂಡೆ ಅಂದರೆ ಆ ಕಲ್ಲಿನೊಡನೆ ಸತ್ತದ್ದನ್ನು ತಿಳಿಸಿ-ದಂತಾಗುತ್ತದೆ. ಆದರೆ ಸಹಗಮನಗಳನ್ನು ತಿಳಿಸುವಾಗ 'ಕೂಡೆ' ಎಂಬ ಪದ ಶಾಸನಗಳಲ್ಲಿ ಧಾರಾಳವಾಗಿ ಬಳಕೆಗೊಂಡದ್ದನ್ನು ಗಮನಿಸಿದರೆ, ಇಲ್ಲಿ 'ಕೂಡೆ' ಎಂದು ಬಳಕೆಗೊಂಡ ಪದ ಹೊಸದಾಗಿ ಏನೂ ಬಳಕೆಗೊಂಡಂತೆ ಎನಿಸುವುದಿಲ್ಲ. ಹಾಗೆ ತಿಳಿದರೆ ಈ ಶಾಸನ 'ಅನುಗಮನ' ಹೇಳದೆ, ಜಳಿಬಿಯವ್ವೆ ಗಂಡನ ಮೃತ ಶರೀರದೊಡನೆ ಆ ಊರಿನಲ್ಲಿ 'ಕಲ್ಲನಿರ್ಧಿಸುವುದಕ್ಕೆ ನಿರ್ದಿಷ್ಟಪಡಿಸಿದ ಸ್ಥಳದಲ್ಲಿ ಸಹಗಮನಗೊಂಡದ್ದನ್ನು ಹೇಳುತ್ತದೆ ಎಂದು ಹೇಳಬೇಕಾಗುತ್ತದೆ

ಅನುಗಮನವನ್ನು ಸ್ಪಷ್ಟವಾಗಿ ತಿಳಿಸಿಕೊಡುವ ಮಹಾಸ್ತಿ ಶಿಲ್ಪವೊಂದು ಶಿಗ್ಗಾಂವ ತಾಲೂಕಿನ ಕುಂದೂರದಲ್ಲಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಕಲ್ಲಿನ ಬಲಭಾಗದಲ್ಲಿ ಕತ್ತಿ ಇದೆ. ಆ ಕತ್ತಿಯ ಎಡಭಾಗದಲ್ಲಿ ಸತಿ ಕೈಮುಗಿದುಕೊಂಡು ಕುಳಿತಿದ್ದಾಳೆ. ಕಲ್ಲಿನ ಎಡಭಾಗದಲ್ಲಿ ಕಂಬದ ಚಿತ್ರವಿದ್ದು ಅದರಿಂದ ಬಲಗೈಯನ್ನು ಎತ್ತಿದಂತೆ ಬಿಡಿಸಿ ತೋರಿಸಲಾಗಿದೆ. ಕೈಎತ್ತಿದ ಶಿಲ್ಪದ ರಚನೆ ಸತಿಹೋದುದನ್ನು ಸಾರುವುದರಲ್ಲಿ ಯಾವ ಸಂಶಯವೂ ಇಲ್ಲ. ಈ ಕಂಬದ ಪಕ್ಕಕ್ಕೆ ಕೈಮುಗಿದು ಕುಳಿತ ಸ್ತ್ರೀಯೇ ಸತಿಹೋದವಳು. ಅವಳ ಗಂಡನನ್ನು ಇಲ್ಲಿ ಚಿತ್ರಿಸದೇ ಇರುವುದು ತುಂಬ ವಿಶೇಷವಾಗಿದೆ. ಬಹುಶ: ಆತನು ಯೋಧನಾಗಿರಬೇಕು. ಆತನು ಶೂರನಾಗಿರುವುದಂತೂ ಸ್ಪಷ್ಟವಿದೆ. ಏಕೆಂದರೆ ಸತಿಯ ಬಲಭಾಗದಲ್ಲಿರುವ ಕತ್ತಿ ಆತನಿಗೆ ಸೇರಿದ್ದಾಗಿದ್ದು, ಆತನ ಮರಣಾನಂತರ ಅವನ ಪತ್ನಿ ಅದರೊಡನೆಯೇ ಸತಿಹೋಗಿರಬೇಕು. ಇದನ್ನು ಶಿಲ್ಪದ ಮೂಲಕ ಹಿಡಿದಿಡಲು ಶಿಲ್ಪಿ ಪ್ರಯತ್ನಿಸಿದ್ದಾನೆ. ಬಹುಶ: ಗಂಡ ಹೋರಾಟದಲ್ಲಿ ಮಡಿದು, ಅವನ ಶವದೊಡನೆ ಸತಿಹೋಗಲು ಸಾಧ್ಯವಾಗದಿದ್ದಾಗ ಅವನ ಪತ್ನಿ ಅವನ ಕತ್ತಿಯೊಂದಿಗೆ ಸತಿಹೋದಂತಿದೆ. ಅವಳು ಗಂಡನೊಡನೆ ಸಹಗಮನ ಮಾಡಿಕೊಂಡಿದ್ದರೆ ಖಂಡಿತ ಶಿಲ್ಪಿ ಗಂಡನನ್ನು ಆ ಕಲ್ಲಿನಲ್ಲಿ ಬಿಡಿಸುತ್ತಿದ್ದನೆಂಬುದನ್ನು ಮರೆಯಬಾರದು.

ವಿರಕ್ತತೋಂಟದಾರ್ಯನ ' ಸಿದ್ಧೇಶ್ವರ ಪುರಾಣ ' ದಲ್ಲಿ ಅನುಗಮನ ಮಾಡಿದ ವೀರನ ಪತ್ನಿಯೊಬ್ಬಳ ಚಿತ್ರಣ ದೊರಕುತ್ತದೆ.[30] '' ಸತಿಯುದೋರ್ವಳು ತನ್ನ ಪತಿ ದೂರದೊಳು ಪೋಗಿ ಕ್ಷಿತಿವರರ ಸಮರಾಂಗಣದೊಳು ಯುದ್ಧಗೆಯ್ಯು ಹತನಾದನೆಂಬುದಂ ತನ್ನ ಬಂಧುಗಳಾಪ್ತರಿಂಕೇಳ್ದು ನಿಜವಾಗಲು ಮೃತವಪ್ಪೆನುಳಿಯೆನೆಂದು '' ಇಚ್ಛಿಸಿ, ಸತಿ ಹೋಗುತ್ತಾಳೆ. ಇಲ್ಲಿ ಮೃತನಾದ ವ್ಯಕ್ತಿ ವೀರನಾಗಿದ್ದಾನೆ. ಅವನು ' ಕ್ಷಿತಿವರರ ಸಮರಾಂಗಣ ' ದಲ್ಲಿ ಯುದ್ಧಮಾಡಿ ಕೊಲ್ಲಲ್ಪಟ್ಟಿದ್ದಾನೆ. ಯುದ್ಧಭೂಮಿಯಾದರೋ ಅವನ ಪತ್ನಿ ಇದ್ದ ಸ್ಥಾನದಿಂದ ಬಹುದೂರದಲ್ಲಿದೆ. ಅವನು ಮಡಿದ ಸುದ್ದಿ ಅವನ ಪತ್ನಿಗೆ ಅವಳ ಬಂಧು — ಆಪ್ತರಿಂದ ತಿಳಿಯಲ್ಪಟ್ಟು ಅವಳು ಸತಿಹೋಗುತ್ತಾಳೆ. ಇಲ್ಲಿಯ ದೂರದ ಸಮರದಲ್ಲಿ ಮಡಿದ ಗಂಡನ ಸುದ್ದಿ '' ಬಂಧುಗಳಾಪ್ತರಿಂ ಕೇಳ್ದು ನಿಜವಾಗಲು '' ಎನ್ನುವ ಮಾತು ತುಂಬ ಮುಖ್ಯವಾಗಿದೆ. ಮೊದಲು ಗಂಡ ಮಡಿದ ವಿಷಯ ಕೇಳುತ್ತಾಳೆ: ಅಷ್ಟೇ ಅಲ್ಲ ಆ ವಿಷಯ ನಿಜವೆಂದು ಗುರುತಿಸಿಕೊಳ್ಳುತ್ತಾಳೆ. ಅಂದರೆ ಬಹುಶ: ಗಂಡ ಮಡಿದ ಕುರುಹಾಗಿ ಅವಳು ಏನನ್ನಾದರೂ ಪಡೆದುಕೊಂಡಿರಬೇಕು. ಅನಂತರದಲ್ಲಿ ಅವಳು ಉಳಿಯದೆ ಮರಣಹೊಂದಲು ಇಚ್ಛಿಸಿ, ಬೀದಿಬೀದಿಗಳಲ್ಲಿ ವಾದ್ಯಸಮೇತ ಮೆರೆದುಕೊಂಡು ಹೋಗಿ ಸತಿಹೋಗುತ್ತಾಳೆ. ಬಸವಣ್ಣನವರ ವಚನವೊಂದಕ್ಕೆ ಟೀಕೆ ಈ ರೀತಿ ಇದೆ: '' ಒಬ್ಬಾನೊಬ್ಬಪುರುಷನು ರಣ — ಮಂಡಲಕ್ಕೆ ಹೋಗಿ ಕಡಿದಾಡಿ ಮಡಿದಲ್ಲಿ ಅವನ ಸ್ತ್ರೀಯಳು ಎಣ್ಣೆ ಅರಿಷಣವನ್ನು ಹಚ್ಚಿ ಕೊಂಡು ಹೂವನ್ನು ಮುಡಿದುಕೊಂಡು ಮನೆಮನೆಗೆ ಕೋರೂಟವನ್ನು ಉಂಬುತ್ತ ಇಪ್ಪತ್ತೇಳು ದಿವಸ ಮಾಸ್ತಿಯಾಗಿ ಮೆರೆವ ಪರಿಯಂತರ ಪರಿಣಾಮವಾಗಿರುವುದು. ಕಡೆಯಲ್ಲಿ ಸತಿಕಲ್ಲ ಮೇಲೆ ನಿಂತುಕೊಂಡು ಕೈಯಲ್ಲಿ ನಿಂಬೆಹಣ್ಣನ್ನು ಪಿಡಿದುಕೊಂಡು ಕಿಚ್ಚಿನಲ್ಲಿ ಬಿದ್ದ ಪತಿವ್ರತಾಭಾವದ ಪರೀಕ್ಷೆಯನ್ನು ಕಾಣಿಸಿಹೆನೆಂದರೆ ಅಶಕ್ಯವಾಗಿರ್ಪುದು ''[31] ಇಲ್ಲಿ ಪುರುಷನು ಯುದ್ಧರಂಗಕ್ಕೆ ಹೋಗಿ ಮಡಿಯಲಾಗಿ ಅವನ ಸ್ತ್ರೀ ಸತಿಹೋಗುವ ಪೂರ್ವ ದಲ್ಲಿ ಸಿಂಗರಿಸಿಕೊಂಡು ಮನೆಮನೆಗೆ ಕೋರೂಟವನ್ನು ಮಾಡುತ್ತ ಇಪ್ಪತ್ತೇಳು ದಿವಸ ಮೆರೆಯುವ ಚಿತ್ರ ಇಲ್ಲಿದೆ. ಅಂದರೆ ಕರ್ನಾಟಕದಲ್ಲಿ ಪತಿ ಮಡಿದ ಇಪ್ಪತ್ತೇಳು ದಿನಗಳ ನಂತರದಲ್ಲಿ ಅನುಗಮನದ ಮೂಲಕ ಸತಿಹೋಗುತ್ತಿದ್ದರೆಂಬುದು ಈ ಟೀಕಿನ ವಚನದಿಂದ ಸ್ಪಷ್ಟಗೊಳ್ಳುತ್ತದೆ ಅಷ್ಟೇ ಅಲ್ಲದೆ, ಸ್ತ್ರೀ ಸೌಭಾಗ್ಯತಿಯಾಗಿ ಮೆರೆಯುವ, ಕೋರೂಟ ಉಂಬುವ — ಈ

ಮೊದಲಾದ ಕಾರ್ಯಗಳ ನಿರ್ವಹಣೆಯ ನಿಮಿತ್ತ ಅನುಗಮನದ ರೀತಿಯನ್ನು ಸತಿಯರು ಅನುಸರಿಸುತ್ತಿರಬೇಕು ಎನಿಸುತ್ತದೆ. ಇದೇ ರೀತಿ ಹಲವು ದಿನಗಳವರೆಗೆ ಮೆರೆದು ಸತಿಹೋಗಲಿರುವ ಗಿಯಕ್ಕಮಳ ಚಿತ್ರವನ್ನು ಪಿಯೆತ್ರೊ ದೆಲ್ಲಾವಲ್ಲೆ ಎಂಬ ವಿದೇಶಿ ಪ್ರವಾಸಿ ಕೊಟ್ಟಿರುವುದನ್ನು ಇಲ್ಲಿ ಸ್ಮರಿಸಬಹುದು.[32] ಗಿಯಕ್ಕಮಳು ಕುದುರೆಯ ಮೇಲೆ ಕುಳಿತುಕೊಂಡು, ಅಂಬೆಯ ಹಣ್ಣು, ಕನ್ನಡಿಗಳನ್ನು ಕೈಯಲ್ಲಿ ಹಿಡಿದುಕೊಂಡು, ತಲೆಯ ತುಂಬ ಹೂವುಗಳನ್ನು ಮುಡಿದು ಕೊಂಡುಅಳುತ್ತ — ಮಾತನಾಡುತ್ತ ಮೆರವಣಿಗೆಯಲ್ಲಿ ಹೋಗುವ ಚಿತ್ರ ಅಲ್ಲದೆ. ಅವಳಿಗೆ ದೊಡ್ಡದೊಂದು ಛತ್ರಿ ಹಿಡಿಯಲಾಗಿತ್ತು. ಅವಳು ಹಾಗೆ ವಾದ್ಯಗಳೊಡನೆ ಹಾಡುತ್ತಿದ್ದಳು. ಆಗ ಅವಳು ಮದುವೆಯ ಹೆಣ್ಣಿನಂತೆ ಕಾಣುತ್ತಿದ್ದಳೆಂದು ಪ್ರವಾಸಿ ತಿಳಿಸಿದ್ದಾನೆ. ಅಲ್ಲದೆ ಅವಳ ಅಂದಿನ ಮೆರವಣಿಗೆ ಗಂಡ ಸತ್ತ ಹತ್ತೊಂಭತ್ತನೆಯ ದಿನದ್ದು ಎಂದು ಹೇಳಿದ್ದಾನೆ. ಗಿಯಕ್ಕಮಳನ್ನು ಕುರಿತು ಹೀಗೇಕೆ ಸಿಂಗರಿಸಿಕೊಂಡಿರುವಿ ಎಂದು ಈ ಪ್ರವಾಸಿ ಕೇಳಿದ್ದಕ್ಕೆ ಅವಳು “ಮಾಸ್ತಿಯನ್ನು ಮೆಚ್ಚಿಸುವದಕ್ಕಾಗಿ ಹಾಗೆ ಮಾಡಿಕೊಳ್ಳಬೇಕೆಂದು ಹೇಳಿದಳು” ಎಂದು ವಿವರಿಸಿದ್ದಾನೆ. ಈ ಸತಿಯ ಮಾತನ್ನು ನೋಡಿದರೆ ಅನುಗಮದ ಹಿನ್ನೆಲೆಯಲ್ಲಿ ನಡೆಯುತ್ತಿದ್ದ ಕಾರ್ಯ ಚಟುವಟಿಕೆಗಳು ಗಮನಕ್ಕೆ ಬರುತ್ತವೆ. ಬಹುಶ: ಗಂಡ ಸತ್ತ ಮೇಲೆ ಹೆಂಡತಿಯಾದವಳು ಹಲವು ದಿನಗಳವರೆಗೆ ಮೆರೆದುಕೊಂಡು ಸತಿಯಾಗುತ್ತಿದ್ದುದು ಸಂಪ್ರದಾಯವಾಗಿ ಬಿಟ್ಟತ್ತೇನೋ ಎನಿಸುತ್ತದೆ. ಸೀಜರ ಫ್ರೆಡರಿಕನು ವಿಜಯನಗರದಲ್ಲಿ ಸತಿಹೋಗುತ್ತಿದ್ದವರನ್ನು ಕುರಿತು ಹೇಳುತ್ತ ಹೀಗೆ ಹೇಳುತ್ತಾನೆ:[33] “ಗಂಡ ಸತ್ತ ಮೇಲೆ ಹೆಂಡತಿ ಒಂದು ಅಥವಾ ಮೂರು ತಿಂಗಳ ನಂತರ ಚಿತೆಯಲ್ಲಿ ಬೀಳುವುದಕ್ಕೆ ಸಿದ್ಧಳಾಗುತ್ತಾಳೆ, ನಿರ್ದಿಷ್ಟವಾದ ದಿನ ಬಂದಾಗ ಬಹಳ ಹೊತ್ತಿಗೆ ಮುಂಚೆ ಎದ್ದು ಕುದುರೆಯ ಮೇಲೋ, ಆನೆಯ ಮೇಲೋ ಅಥವಾ ಎಂಟು ಜನಹೊತ್ತ ಪಲ್ಲಕ್ಕಿಯ ಮೇಲೋ ಕುಳಿತು ಚಿತೆಯ ಸ್ಥಳಕ್ಕೆ ಹೊರಡುತ್ತಾಳೆ. ಆಕೆ ವಧುವಿನಂತೆ ಅಲಂಕಾರ ಮಾಡಿಕೊಂಡಿರುತ್ತಾಳೆ. “ಇಷ್ಟೇ ಅಲ್ಲದೆ, ಅವನು ಮುಂದುವರೆದು ವಿಧವೆಯನ್ನು ಸುಡುವ ಸ್ಥಳಕ್ಕೆ ಹೋಗಿ ಅಲ್ಲಿ ಎಲ್ಲರು ಊಟ ಮಾಡಿ, ಹಾಡಿ, ಕುಣಿದು ಸಂತೋಷ ಪಡುವ ವಿಷಯವನ್ನು ನಂತರದಲ್ಲಿ ವಿಧವೆ ಚಿತೆಗೆ ಹಾರಿಕೊಂಡು ಸತಿಹೋಗುವುದನ್ನು ತಿಳಿಸುತ್ತಾನೆ. ಈ ಎಲ್ಲ ವಿವರಣೆಗಳಿಂದ ಮೃತನ ಪತ್ನಿಯು ಹಾಡಿ — ಕುಣಿದು — ಮೆರೆದು, ಎಲ್ಲರೊಡನೆ ಮಾತನಾಡುತ್ತ — ಬೀಳ್ಕೊಡುತ್ತ, ಊಟಮಾಡುತ್ತ, ಸಂಭ್ರಮ — ಸಡಗರಗಳಿಂದ ಸತಿಯಾಗ

ಬೇಕೆಂಬ ಕಲ್ಪನೆಯು ಹಿನ್ನೆಲೆಯಲ್ಲಿಯೂ ಅನುಗಮನ ಆಚರಣೆ ಕರ್ನಾಟಕದಲ್ಲಿ ನಡೆದು ಕೊಂಡು ಬಂದಿತ್ತು ಎನಿಸುತ್ತದೆ.

ಜನಪದ ಸಾಹಿತ್ಯವು ಅನುಗಮನ ಮೂಲಕ ಸತಿ ಹೋದವರ ಕುರಿತಾಗಿ ಕೆಲವು ವಿವರಗಳನ್ನು ಒದಗಿಸುತ್ತದೆ. ಈರೋಬಿ, ವಡ್ಡಗೆರೆನಾಗಮ್ಮ, ಮಹಾಸತಿ ವೀರತಿಮ್ಮವ್ವ, ಮಹಾಸತಿ ಕಾಟವ್ವ, ಲಾಳಸಂಕೊಳ್ಳಮ್ಮರ, ಕೆಂಪಮ್ಮ, ದೊಡ್ಡಜಿವಾಫ, ಮಹಾಸತಿ ತಂಗ್ಯಮ್ಮ, ಮಾಸ್ತಮ್ಮ — ಈ ಮೊದಲಾದ ಜನಪದ ಗೀತೆಗಳಲ್ಲಿ ಅನುಗಮನದ ವಿಷಯು ನಿರುಪಣೆಗೊಂಡಿದೆ.[34] ಈರೋಬಿಯ ಗಂಡ ಯುದ್ಧದಲ್ಲಿ ಮಡಿದು ಹೋಗುತ್ತಾನೆ. ಆ ಸುದ್ದಿ ತಂದು ಈರೋಬಿಗೆ ಹೀಗೆ ತಿಳಿಸಲಾಗುತ್ತದೆ:

ದಂಡಿನಾದೀಲಿ ಹಿಂಡೆಮ್ಮ ಮೇಸಾಳೆ
ನಿನ್ನ ಗಂಡನ ತಲೆಯು ಹೊಡೆದಾರೆ — ಈರೋಬಿ
ಹಿಂಡೆಮ್ಮ ಬಿಟ್ಟು ಮೆರೆಯಾಗೆ

ಈರೋಬಿ ಗಂಡ ಮಡಿದ ಸುದ್ದಿ ಕೇಳಿ ಹೀಗೆ ಉತ್ತರಿಸುತ್ತಾಳೆ :

ಸತ್ತ ಸುದ್ದಿ ಬರಲಿ ನೆತ್ತರದರಬಿ ಬರಲಿ
ಕಿತ್ತುಳ್ಳಿ ಬರಲಿ ಗುರುತೀಗೆ — ಸೋಮವಾರದ
ಹೊತನಂತೆ ಕೊಂಡ ಹೋಗುತೀನಿ

ಇಲ್ಲಿ ಈರೋಬಿ ಗಂಡ ಸತ್ತದ್ದನ್ನು ಕೇಳಿದಾಗ ಅದರ ನಿಜತ್ವಕ್ಕಾಗಿ ಗಂಡನ ರಕ್ತದ ಅರಿವೆ, ಕಿತ್ತುಳ್ಳಿ ಬರಲಿ ಎಂದೂ ಹಾಗೆ ಬಂದದ್ದಾದರೆ ತಾನು ಸೋಮವಾರದಂದು ಸತಿ ಹೋಗುತ್ತೇನೆ ಎಂದೂ ತಿಳಿಸುತ್ತಾಳೆ. ಅಷ್ಟರಲ್ಲಿ ಗಂಡನ ರಕ್ತದ ಅರಿವೆ, ಕತ್ತಿ, ಬಂದೇ ಬಿಟ್ಟವು. ಆಗ ಅವಳು ಸತಿಹೋಗಲು ಸಿದ್ಧತೆ ಮಾಡಿಕೊಂಡು ಎಲ್ಲರಿಂದ ಬೀಳ್ಕೊಂಡು ಮಹಾಸತಿ ಯಾಗುತ್ತಾಳೆ. 'ವಡ್ಡಗೆರೆ ನಾಗಮ್ಮ 'ಗೀತೆಯಲ್ಲಿಯೂ ಗಂಡನ ಸಾವಿನ ಸುದ್ದಿ ಬರುತ್ತದೆ. ನಾಗಮ್ಮ ' ಮಡಿದ ಸುದ್ದಿ ಕೇಳಿ ಮಡಿಯ ತೆಗೆದು ಉಡುತ್ತಾಳೆ, ಸೌಭಾಗ್ಯವತಿಯಂತೆ ಸಿಂಗರಿಸಿ ಕೊಳ್ಳುತ್ತಾಳೆ, ಜನರ ಮುಂದೆ ಮೆರೆಯುತ್ತಾಳೆ ಮಾವ, ಅತ್ತೆ, ಗುರುವಿನೊಡನೆ ಮಾತ ನಾಡುತ್ತಾಳೆ, ತವರೂರಿಗೆ ವಾಲೆ ಬರೆಸಲು ತಿಳಿಸುತ್ತಾಳೆ. ಕೊನೆಗೆ ಅವಳು ಸತಿಹೋಗಿಬಿಡುತ್ತಾಳೆ.

ಇಲ್ಲಿಯ ನಾಗಮ್ಮಳ ದೀರ್ಘ ಚಟುವಟಿಕೆಗಳು ಅವಳು ಅನುಗಮನ ಮೂಲಕ ಮಹಾಸತಿಯಾದುದನ್ನು ಅಭಿವ್ಯಕ್ತಗೊಳಿಸುತ್ತವೆ. ಮಹಾಸತಿ ಕಾಟವ್ವ ಗೀತೆಯಲ್ಲಿಯಂತೂ ಸತಿ ಹೋಗುವ ಪೂರ್ವದಲ್ಲಿ ಕಾಟವ್ವ ಮೆರೆಯುವ, ಊಟದ ಪ್ರಸಂಗದಲ್ಲಿ ಪಾಲ್ಗೊಳ್ಳುವ ವಿಷಯಗಳು ಬರುತ್ತವೆ. ' ಮಾಸ್ತಮ್ಮ ' ಗೀತೆಯಲ್ಲಿ ಮೃತನಾದ ಗಂಡನೊಡನೆ ಅಗ್ನಿ ಪ್ರವೇಶ ಮಾಡಬೇಕೆಂಬ ಮಾಸ್ತಮ್ಮಳ ಆಸೆ ಫಲಿಸದೇ ಹೋಗುತ್ತದೆ. ಅವಳು ಸತಿ — ಹೋಗಲಿಕ್ಕೆ ಅವಳ ಮಾವನ ಮನೆಯವರು, ತವರು ಮನೆಯವರು ಯಾರೂ ಸಹಕರಿಸುವುದಿಲ್ಲ. ಕೊನೆಗೆ ಅವಳು ಅಮುಲ್ದಾರರಿಗೆ ವಿಷಯ ತಿಳಿಸಿ, ಅವರಿಗೆ ಅನಿವಾರ್ಯತೆಯನ್ನುಂಟುಮಾಡಿ ತವರೂರಾದ ಗಂಗವಹಳ್ಳಿಯ ಬಾಳೆಯ ತೋಟದಲ್ಲಿ ಅಗ್ನಿಪ್ರವೇಶ ಮಾಡುತ್ತಾಳೆ. ಗಂಡನ ಶವಸಂಸ್ಕಾರ ಗಂಡನ ಊರಾದ ಭೂಮನಹಳ್ಳಿಯಲ್ಲಿ ನಡೆದರೆ, ಕೆಲವು ದಿನಗಳ ನಂತರ ಪತ್ನಿಯ ಅಗ್ನಿಪ್ರವೇಶ ಅವಳ ತವರೂರಾದ ಗಂಗನಹಳ್ಳಿಯಲ್ಲಿ ನಡೆಯುತ್ತದೆ. ಇಲ್ಲಿ ಅವಳು ಅನುಗಮನ ಮೂಲಕ ಸತಿಹೋಗಲು ಪರಿಸ್ಥಿತಿಯ ಒತ್ತಡ ಕಾರಣವಾಗಿರುವುದನ್ನು ಕಾಣುತ್ತೇವೆ. ' ಲಾಳಸಂಕೊಮ್ಮಾರ ' ಗೀತೆಯಲ್ಲಿ ಗಂಡಮೃತನಾಗಿರಬಹುದೆಂದು ಸಂದೇಹಪಟ್ಟ ಪತ್ನಿ, ಅವನ ಎಲುವು ಏನಾದರೂ ಗುರುತಿಗೆ ಸಿಕ್ಕರೆ ಸತಿಹೋಗುತ್ತೇನೆ ಎಂದು ತಳಮಳಿಸುವ ಚಿತ್ರ ಇದೆ.

ಒಂದೆಲುವಾನೆ ಸಿಕ್ಕಿದ್ರೆ
ಅದು ಕಿಚ್ಚನೇ ಮಾಡಿಕಂಡು
ಆ ಕೊಂಡದನೇ ಒಳೀಕೆ
ಅದನಾವೆ ಆಕ್ಕೊಂಡು
ನಾನಾವೆ ಬಿದ್ದು
ಬಿದ್ದುನೆ ಸಾಯುತಿದ್ದೆ

ಇಲ್ಲಿ ಗಂಡ ಸತ್ತ ಗುರುತಿಗಾಗಿ ಪರಿಶ್ರಮ ಪಡುವ, ಅದು ದೊರಕಿದರೆ ಅಗ್ನಿಪ್ರವೇಶ ಮಾಡಬೇಕೆಂದು ಇಚ್ಛಿಸುವ ಮೃತನ ಪತ್ನಿಯೊಬ್ಬಳ ಸಂದಿಗ್ಧ ಪರಿಸ್ಥಿತಿಯನ್ನು ಕಾಣುತ್ತೇವೆ. ಜೊತೆಗೆ ಅನುಗಮನಗೊಳ್ಳಲು ಪತ್ನಿಗೆ ಗಂಡನು ಮೃತನಾದ ಗುರುತುಗಳ ಅವಶ್ಯಕತೆ ಇರುವುದನ್ನು ಗುರುತಿಸಬಹುದಾಗಿದೆ.

' ದೋಂಡಜಿವಾಘ ' ಜನಪದ ಗೀತೆಯಲ್ಲಿ ಅನುಗಮನದ ಸುಂದರ ನಿರೂಪಣೆ ಬರುತ್ತದೆ. ಅಪ್ಪಾಸಾಹೇಬ ಯುದ್ಧದಲ್ಲಿ ಮಡಿದು ಹೋಗುತ್ತಾನೆ. ಅವನ ಪತ್ನಿ ಅನುಗಮನ ಮೂಲಕ ಸತಿಹೋಗುತ್ತಾಳೆ. ಮೊದಲು ದೋಂಡಜಿವಾಘ, ಅಪ್ಪಾಸಾಹೇಬ ಇಬ್ಬರು ಮಡಿದ ಸುದ್ದಿ ಬರುತ್ತದೆ. ಆಗ ಗೀತೆ ಹೀಗೆ ಮುಂದುವರೆಯುತ್ತದೆ :

ಒಳೊಳ್ಳೆ ಪಂಡಿತರು ಮಿಗಿಲಾದ ಶಾಸ್ತ್ರಿಗಳು
ಓದುಬಲ್ಲೀದ ರಾಯರು ಕೋಲ 1
ದೇವಬ್ರಹ್ಮರ ಕರೆದು ದೊರೆಯು ಕೇಳಿದನಿನ್ನು
ಇದಕಾನು ಹೇಳಿದಂದಾನು ಕೋಲ 1
ಕತ್ತಿ ನೆತ್ತರದರವಿ ಹಸ್ತ ಬಂದ ಮೇಲೆ
ಕಿಚ್ಚುಕೊಡುವುದು ಕುಲಧರ್ಮ ಕೋಲ

ಹೋರಾಟದಲ್ಲಿ ಮಡಿದ ಸುದ್ದಿ ಬಂದ ಮೇಲೆ ಯಾರು ಯಾರು ಸತಿ ಹೋಗಬೇಕು ಎಂಬುದರ ಕುರಿತಾದಿ ಚರ್ಚೆ ಇಲ್ಲಿದೆ. ಚರ್ಚೆಯು ಕಾಲಕ್ಕೆ ಸತ್ತ ಗುರುತಿಗಾಗಿ ರಕ್ತದ ಅರಿವೆ, ಹಸ್ತ, ( ಹಸ್ತಮುದ್ರೆ ? ) ಬರಬೇಕು, ಅನಂತರದಲ್ಲಿ ಸತಿ ಆಚರಣೆ ಜರುಗಿಸಬೇಕು— ಎಂದು ಪಂಡಿತರು, ಶಾಸ್ತ್ರಿಗಳು, ಓದುಬಲ್ಲದರು, ದೇವಬ್ರಹ್ಮರು ಅಭಿಮತ ವ್ಯಕ್ತಪಡಿಸುತ್ತಾರೆ. ಕೊನೆಗೆ ಸಾಳುಬಾಯಮ್ಮನ ಅಗ್ನಿಪ್ರವೇಶದ ಸಿದ್ಧತೆ ನಡೆಯುತ್ತದೆ. ಈ ಸಂದರ್ಭದಲ್ಲಿ ಅಪರೂಪದ ಮಾತೊಂದು ವ್ಯಕ್ತಗೊಂಡಿದೆ. " ಸಾಳುಬಾಯಮ್ಮನ ಆಗಮನಕ್ಕನುವಾಗಿ " ಅವಳಿಗೆ ತುಪ್ಪ ಹಚ್ಚಿ ಎರೆಯುವುದು, ವಸ್ತ್ರವ ಕೊಡುವುದು, ಹಣೆಗೆ ಕುಂಕುಮ ಹಚ್ಚುವದು, ಅರಿಷಿನ ಧರಿಸುವುದು, ದಂಡಿ ಮುಡಿಸುವುದು, ಬಗೆಬಗೆಯ ಆಭರಣ ತೊಡಿಸುವದು ಇತ್ಯಾದಿ ಕ್ರಿಯೆಗಳು ಜರುಗುತ್ತವೆ. ಇವೆಲ್ಲ ನಡೆಯುವುದು ಸಾಳುಬಾಯಿಯ ' ಆಗಮನಕ್ಕನುವಾಗಿ ' ಎಂದು ಜನಪದ ಕವಿ ತಿಳಿಸಿದ್ದಾನೆ. ಇಲ್ಲಿಯ ಆಗಮನ ಎಂಬುದು ಅನುಗಮನ ಎಂದಾಗಿರಬೇಕು. ' ಸಾಳುಬಾಯಮ್ಮನ ಅನುಗಮನಕ್ಕನುವಾಗಿ ' ಅವಳನ್ನು ಸಿಂಗರಿಸಿದರು ಎಂದು ಅರ್ಥೈಸಿದರೆ ಈ ಜನಪದ ಗೀತೆ ತುಂಬ ಅಪೂರ್ವ ಮಾತನ್ನು ಹೇಳಿದೆ ಎಂದು ಹೇಳಬೇಕಾಗುತ್ತದೆ. ದೂರದ ಯುದ್ಧದಲ್ಲಿ ಮಡಿದ ವೀರನ ಪತ್ನಿ ಅನುಗಮನಕ್ಕೆ ಹೊರಟಿದ್ದಾಳೆ. ಅವಳನ್ನು ಅದಕ್ಕಾಗಿ ಸಿಂಗರಿಸುತ್ತಿದ್ದಾರೆ. ಕೊನೆಗೆ ಸಾಳುಬಾಯಿ " ನೆತ್ತರದರಿವಿ ಹಸ್ತವನು ಬಲಗೈಯಾಗಿಟ್ಟುಕೊಂಡು ಕಪ್ಪುರಕಟಗೊಂಡು " ಕಿಚ್ಚು ಹಚ್ಚಿಸಿಕೊಂಡು ಸತಿಹೋಗುತ್ತಾಳೆ.

' ಕೊಂಡದ ಚೆನ್ನಮ್ಮ ' ಎಂಬ ಜನಪದ ಕಥೆ ಚೆನ್ನಮ್ಮ ಅನುಗಮನದ ಮೂಲಕ

ಸತಿಹೋದುದನ್ನು ನಿರೂಪಿಸುತ್ತದೆ [35] ಚೆನ್ನವ್ವನ ಗಂಡ ಯುದ್ಧದಲ್ಲಿ ಮಡಿಯುತ್ತಾನೆ ಅವನ ಜೊತೆಯವರು ಅವನು ಮಡಿದ ಸುದ್ದಿಯನ್ನು ಬರೆದು ಚೀಟಿಯ ನಾಯಿಯ ಕೊರಳಲ್ಲಿ ಕಟ್ಟಿ, ಅವನ ಕತ್ತಿಯನ್ನು ಅದರ ಬಾಯಲ್ಲಿ ಕೊಟ್ಟು ಕಳಿಸುತ್ತಾರೆ. ತನ್ನಲ್ಲಿಗೆ ಬಂದ ನಾಯಿಯ ಕೊರಳಲ್ಲಿಯ ಚೀಟಿಯನ್ನು ಓದಿಸಿದ ಚೆನ್ನವ್ವ ಅಗ್ನಿಪ್ರವೇಶ ಮಾಡುತ್ತಾಳೆ. ಈ ಕಥೆಯಲ್ಲಿ ಯುದ್ಧದಲ್ಲಿ ವೀರ ಮಡಿದ ಸುದ್ದಿಯನ್ನು ಊರಿಗೆ ಕಳುಹಿಸುವುದನ್ನು ಜೊತೆಗೆ ಗುರುತಿಗಾಗಿ ಅವನ ಕತ್ತಿಯನ್ನು ಕೊಟ್ಟು ಕಳುಹಿಸುವುದನ್ನು ಕಾಣುತ್ತೇವೆ. ಜೊತೆಗೆ ಅದನ್ನು ತಿಳಿದ ವೀರನ ಪತ್ನಿ ಗಂಡನ ಶವ ದೊರಕದ ನಿಮಿತ್ತ ಅನ್ಯವನ ಮೂಲಕ ಚಿತೆ ಏರುವುದನ್ನು ಕಾಣುತ್ತೇವೆ.

ಚಿತ್ರದುರ್ಗ ಜಿಲ್ಲೆಯ ಸಿರಿಗೆರೆಯ ಹೋಬಳಿಯ ಗಂಜಿಗಟ್ಟಿ ಗ್ರಾಮದಲ್ಲಿ ಮಾಸ್ತಿಕಲ್ಲಿನ ಕುರಿತಾಗಿ ಜನಪದ ಕಥೆಯೊಂದು ಬೆಳೆದುಕೊಂಡು ಬಂದಿದೆ. [36] ಗಾದ್ರಿಮಯ್ಯ ಮತ್ತು ಚಿನ್ನಪಾಲ್ನಾಯಕ ಎಂಬವರಿಬ್ಬರು ಅಣ್ಣ-ತಮ್ಮಂದಿರು ಹುಲಿಯೊಡನೆ ಹೋರಾಡಿ ಮಿಂಚೇರಿ ಹಳ್ಳದ ಹತ್ತಿರ ಹುಲಿಯನ್ನು ಕೊಂದು ತಾವೂ ಮಡಿಯುತ್ತಾರೆ. ಹಾಲು ಮಾಡಿ ಕೊಂಡು ಹೋಗುತ್ತಿದ್ದ ಅವರ ಪತ್ನಿಯರಾದ ಕೆಂಚವ್ವ ಮತ್ತು ಕಾವುವ್ವ ಇವರಿಬ್ಬರೂ ಅಲ್ಲಿಯೇ ಗಂಜಿಗಟ್ಟಿ ಗ್ರಾಮದಲ್ಲಿ ಕೊಂಡಮಾಡಿಸಿ ಸತಿಹೋಗುತ್ತಾರೆ. ಗಂಡಂದಿರು ಮಡಿದ ರೆಬ ಸುದ್ದಿ ತಿಳಿದು ಸತಿಹೋದ ಇಲ್ಲಿಯ ಕೆಂಚವ್ವ ಮತ್ತು ಕಾವುವ್ವರ ಆಚರಣೆ ಅನುಗಮನ ವಾಗಿದೆ. ಪತಿಯಂದಿರರು ಹುಲಿಯೊಡನೆ ಹೋರಾಡಿ ಮಿಂಚೇರಿ ಹಳ್ಳದ ಬಳಿಯಲ್ಲಿ ಮಡಿದರೆ, ಪತ್ನಿಯರು ಗಂಜಿಗಟ್ಟಿಗ್ರಾಮದಲ್ಲಿ ಸತಿಹೋಗುತ್ತಾರೆ, ಇಂದಿಗೂ ಮಿಂಚೇರಿ ಹಳ್ಳದ ಸಮೀಪ ಅಣ್ಣ-ತಮ್ಮಂದಿರ ಸಮಾಧಿಗಳು ಹುಲಿಯ ಸಮಾಧಿಯೂ ಇರುವುದನ್ನು ಇಲ್ಲಿ ಸ್ಮರಿಸಬಹುದು. ಗಂಜಿಗಟ್ಟಿ ಗ್ರಾಮದಲ್ಲಿ ಇವರ ಪತ್ನಿಯರ ಹೆಸರಿನಲ್ಲಿರುವ ಮಾಸ್ತಿಕಲ್ಲಿನ ಕೆಳಭಾಗದಲ್ಲಿ ಇಬ್ಬರು ಸತಿಯರು ಬಲಗೈ ಎತ್ತಿ ನಿಂತಿರುವುದನ್ನು, ಮೇಲ್ಭಾಗದಲ್ಲಿ ಇಬ್ಬರು ವೀರರು ಬಿಲ್ಲು ಹಿಡಿದು ಹುಲಿಯೊಡನೆ ಹೋರಾಡುವುದನ್ನು ಕಾಣಬಹುದಾಗಿದೆ. ಈ ಮಾಸ್ತಿಕಲ್ಲಿಗೆ ಹೊಂದಿ ನಾಲ್ಕು ಶತಮಾನಗಳಿಗೂ ಪ್ರಾಚೀನವಾದ ಬಿಲ್ಲೊಂದು ಇದೆ. ಬಹುಶಃ ಗಂಡಂದಿರ ಮರಣದ ಸುದ್ದಿ ಯನ್ನು ಬಿಲ್ಲಿನ ಮೂಲಕ ಅವರ ಪತ್ನಿಯರು ತಿಳಿದಿರಬೇಕು. ಇಲ್ಲಿಯ ಶಿಲ್ಪದ ವಿವರಗಳಿಗೂ, ಬೆಳೆದುಬಂದ ಜನಪದ ಕಥೆಗೂ ತುಂಬ ಸಾಮ್ಯವಿರುವುದು ಮಹತ್ವದ್ದಾಗಿದೆ.



ಬೆಳಗಾವ ಜಿಲ್ಲೆಯ ಕುಂಜನೂರಿನಲ್ಲಿ ನಾಗಲಬ್ಬೆ ಎಂಬವಳು ಗಂಡ ಯುದ್ಧ ಭೂಮಿಯಲ್ಲಿ ಮಡಿದುದನ್ನು ಕೇಳಿ ಚಿತೆ ಏರಿ ಸತಿಹೋಗುತ್ತಾಳೆ.[37] ಇದು ಕೂಡ ಅನು- ಮರಣವೇ ಆಗಿದೆ. ಇಂದಿಗೂ ಅವಳ ಮನೆತನದವರು ಕುಂಜನೂರಿನಲ್ಲಿದ್ದಾರೆ. ಡಾ|| ಎಂ. ಚಿದಾನಂದಮೂರ್ತಿಯವರು ಚಿಕ್ಕಹುಂಡೀವಿನ ಮಾಸ್ತ್ಯಮ್ಮಳ ಕುರಿತು ಕಥೆ ಸಂಗ್ರಹಿಸಿ, ಅದರ ಅಧ್ಯಯನ ಮಾಡಿದ್ದಾರೆ.[38] ಮಾಸ್ತ್ಯಮ್ಮಳ ಮದುವೆ ಚಿಕ್ಕಹುಂಡೀವಿನ ಕರಿಯಪ್ಪನೊಡನೆ ನಿಶ್ಚಯವಾಗಿತ್ತು. ಅವನು ಮದುವೆಗೆ ಮುಂಚಿತವೇ ಯುದ್ಧಕ್ಕೆ ಹೋಗಿ ಮಡಿಯುತ್ತಾನೆ. ಆ ಸುದ್ದಿ ಮಾಸ್ತ್ಯಮ್ಮಳಿಗೆ ಮುಟ್ಟುತ್ತದೆ. ತನ್ನ ಪ್ರಿಯನಿಗೆ ಸೇರಿದ ಇತರ ವಸ್ತುಗಳೂ ಬಂದು ಮುಟ್ಟುತ್ತವೆ. ಅವಳು ಸತಿಹೋಗಲು ನಿರ್ಧರಿಸಿದಾಗ ಯಾರೂ ಅವಳೊಡನೆ ಸಹಕರಿಸುವು — ದಿಲ್ಲ. ಕೊನೆಗೆ ಅವಳು ಬೆಂಕಿಗೆ ಹಾರಿ ಮಹಾಸತಿಯಾಗುತ್ತಾಳೆ. ಈ ಕಥೆಗಳಲ್ಲಿ ಹೋರಾಟ ದಲ್ಲಿ ಮಡಿದ ವೀರರ ಪತ್ನಿಯರು ಸತಿಹೋಗುವುದನ್ನು ಕಾಣುತ್ತೇವೆ. ಅವರ ಸತಿ ಆಚರಣೆ ಅನುಗಮನ ಮೂಲಕವೆಂಬುದು ಸ್ಪಷ್ಟವಿದೆ. ಸಾಮಾನ್ಯವಾಗಿ ಹೋರಾಟದಲ್ಲಿ ಮಡಿದವರ ಶವಗಳು ದೊರಕದೇ ಇರುವುದು ಮುಖ್ಯಕಾರಣವಾಗಿರಬೇಕು.

ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಟಿ. ನರಸೀಪುರ ತಾಲೂಕಿನಲ್ಲಿ ಬ್ರಾಹ್ಮಣಹೆಣ್ಣುಮಗಳು ಅನುಗಮನ ಮಾಡಿದ ಕುರಿತು ಸರ್ಕಾರದ ದಾಖಲೆಯಲ್ಲಿ ಪರಿಪತ್ರವೊಂದು ಇದೆ. ಅದರ ಪಾಠ ಹೀಗಿದೆ.[39] ''ಶ್ರೀ ಮತ್ತು ಪೂರ್ಣೈಯ್ಯನವರು ಸೋಸಲೆ ಅಮಲದಾರ ವೆಂಕಟರಮಣೈಯ್ಯಗೆ ಆಶೀರ್ವಾದ. ಆಗಾಗಿ ಕಳುಹಿಸ್ಥ ಅರ್ಜಿಯಿಂದಾ ವಿವರ ಯಾವತ್ತು ಶ್ರುತವಾಯಿತು. ತಲಕಾಡು ತಲಕಾಡಿನಲ್ಲಿ ವೆಂಕಟ್ರಾಮಶಾಸ್ತ್ರಿಗಳುಗೆಯಿದದಕೆಯಿದ ಹಾಗೆ ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ರಿಂದ, ಅವರ ಕುಟುಂಬ ಸಹಗಮನ ಮಾಡ ಬೇಕೆಂಬುದಾಗಿ ಯಾರು ಹೇಳಿದಾಗ್ಯೂ ಕೇಳದೆ ಮುಷ್ಕರ ಮಾಡಿಕೊಂಡು ಅಪ್ಪಣೆ ಕೊಡಿಸ್ಸ ಬೇಕೆಂಬುದಾಗಿ ಯಿದಾರೆಬ ವಿವರಗಳಾಗಿ ಬರದು ಸರಿಯಷ್ಟೇ. ಆ ಬಗ್ಗೆ ಅವರು ದೊಡ್ಡ ಬ್ರಾಂಹರು ಅವರು ಯಿದದುಕ್ಕೆ ಯೀಕೆ ಈ ಮೇರೆಗೆ ಮಾಡಬಾರದು. ಬೇಡವೆಂಬದಾಗಿ ಹೇಳಿದರೆ ಕೇಳದ ಮೇಲೆ ಆಕೆ ಹೇಳಿದ ಮೇರೆಗೆ ನಡದುಕೊಳ್ಳುವಂತೆ ಅಪ್ಪಣೆ ಕೊಟ್ಟು ಬಿಡುವುದು. ರಕ್ತಾಕ್ಷಿ ಸಂವತ್ಸರದ ಪಾಲ್ಗುಣ ಬ 6 ಲು ರುಜು ಶ್ರೀ

ಪೈವಸ್ತಗಿ ಪಾಲ್ಗುಣ 9 ಲು, ಸಾಗಮನ ಮಾಡುವ ಹೆಂಗಸಿಗೆ ಅಪ್ಪಣೆ

ಇಲ್ಲ ' ವೆಂಕಟ್ರಾಮ ಶಾಸ್ತ್ರಿಗಳು ಮರಣಹೊಂದಿದ ಕಾರಣ ಅವರ ಪತ್ನಿ ಸತಿ ಹೋಗಲು ಬಯಸಿ ಹಠಹಿಡಿದಳೆಂದೂ, ಅದಕ್ಕಾಗಿ ಸರ್ಕಾರದಿಂದ ಅಪ್ಪಣೆದೊರಕಿತೆಂದೂ ತಿಳಿದು

ಬರುತ್ತದೆ. ಗಂಡನ ಮರಣಾನಂತರ ಸತಿಹೋಗಲಿಕ್ಕೆ ಸರ್ಕಾರದ ಅಪ್ಪಣೆ ದೊರಕಿಸಿಕೊಳ್ಳಲು ಕೆಲವು ದಿನಗಳವರೆಗೆ ತಡೆದು, ಅಪ್ಪಣೆ ಪಡೆದು ನಂತರದಲ್ಲಿ ಅನುಗಮನ ಮಾಲಕ ಸತಿಹೋದ ಬ್ರಾಹ್ಮಣಸ್ತ್ರೀಯ ಉಲ್ಲೇಖ ಇದಾಗಿದೆ.

ಕರ್ನಾಟಕದಲ್ಲಿ ಅನುಗಮನಕ್ಕಿಂತಲೂ ಸಹಗಮನವೇ ಹೆಚ್ಚು ಪ್ರಚಲಿತದಲ್ಲಿತ್ತು ಎಂದು ದೊರಕುವ ಆಧಾರಗಳ ಮೇಲಿಂದ ಹೇಳಬಹುದಾಗಿದೆ. ಪತ್ನಿಯರು ಹೆಚ್ಚಾಗಿ ಗಂಡನ ಶವದೊಡನೆ ಸತಿಹೋಗಲು ಇಚ್ಛಿಸುತ್ತಿದ್ದುದು ಇದಕ್ಕೆ ಕಾರಣವಾಗಿರಬೇಕು. ಅಲ್ಲದೆ, ಗಂಡ ದೂರದಲ್ಲಿ ಮಡಿದು ಅವನ ಶವ ದೊರಕದ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾದಾಗ ಮಾತ್ರ ಹೆಚ್ಚಾಗಿ ಅನುಗಮನದಂಥ ಸತಿ ಆಚರಣೆ ಜರುಗುತ್ತಿತ್ತು ಎಂಬುದನ್ನು ಮರೆಯಬಾರದು. ಸತ್ತ ವೀರರ ಶವಗಳನ್ನು ತಂದು ಅವರ ಪತ್ನಿಯರಿಗೆ ಒಪ್ಪಿಸುತ್ತಿದ್ದ ಹಾಗೂ ಅವರು ಅವುಗಳೊಡನೆ ಸಹಗಮನ ಮಾಡಿಕೊಳ್ಳುತ್ತಿದ್ದ ವಿವರಗಳು ಕಾವ್ಯಗಳಲ್ಲಿ ದೊರಕುತ್ತವೆ. ಕುಮಾರರಾಮನ ತಾಯಿ ಹರಿಹರದೇವಿ ಸತಿಹೋಗಲು ಸೊಸೆಯಂದಿರಿಗೆ ಮಗನ ತಲೆಯನ್ನು ತಂದುಕೊಡಲು ಮಂತ್ರಿ ಬೈಚಪ್ಪನಿಗೆ ಹೇಳುವ ವಿಷಯವನ್ನು ಇಲ್ಲಿ ಸ್ಮರಿಸಬಹುದು. ಅಲ್ಲಿಯೇ ಬೈಚಪ್ಪನು ಮಾಡಿದ ವ್ಯವಸ್ಥೆಯನ್ನು ತಿಳಿಸುವ ಪದ್ಯವೊಂದು ಹೀಗೆ ಬರುತ್ತದೆ: [40]

ಕುವರನೊಡನೆ ಸತ್ತ ಸುಭಟರ ತಲೆಗಳ
ನವರವರಂಗನೆಯರಿಗೆ
ತವಕದಿಂ ತರಿಸಿಕೊಟ್ಟುರಿಗೊಂಡಗಳ ಬೇ
ರವರವರಿಗೆ ಮಾಡಿಸಿದನು 11

ಕುಮಾರರಾಮನೊಡನೆ ಸತ್ತ ಸುಭಟರ ತಲೆಗಳನ್ನು ಅವರವರ ಪತ್ನಿಯರಿಗೆ ಒಪ್ಪಿಸಿಕೊಡುವ ವಿವರ ಇಲ್ಲದೆ, ಅಲ್ಲದೆ ಅವರವರಿಗೆ ಬೇರೆ ಬೇರೆ ಕಿಚ್ಚಿನಕೊಂಡಗಳನ್ನು ಮಾಡಿಸಿ ಕೊಡುವ ಅಪೂರ್ವ ವಿವರಣೆಯೂ ಇಲ್ಲಿ ದೊರಕುತ್ತದೆ. ಕುಮಾರವಾಲ್ಮೀಕಿಯು 'ತೊರವೆ ರಾಮಾಯಣ'ದಲ್ಲಿ ರಾವಣನ ಅವಸಾನದ ನಂತರ ರಾವಣನೊಡನೆ ಅವನ ಪತ್ನಿಯರು ಹಾಗೂ ಇನ್ನುಳಿದ ಅಸುರರೊಡನೆ ಅವರವರ ಪತ್ನಿಯರುಸತಿಹೋದದ್ದನ್ನು ಸೂಚಿಸುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. [41] ಬಹುಶ: ಯುದ್ಧಭೂಮಿಯಲ್ಲಿ ಸತ್ತವರ ಶವಗಳನ್ನು ಪಡೆದು

ಪತ್ನಿಯರು ಸಹಗಮನಗೊಳ್ಳುತ್ತಿದ್ದುದರ ಚಿತ್ರ ಇದು ಕೊಡುತ್ತದೆಯೆಂದು ಹೇಳುವಲ್ಲಿ ಯಾವ ತಪ್ಪೂ ಕಾಣಿಸದು. ಈ ಹಲವು ಕಾರಣಗಳಿಂದ ಕರ್ನಾಟಕದಲ್ಲಿ ಅನುಗಮನಕ್ಕಿಂತ ಸಹಗಮನ ಘಟನೆಗಳ ಉಲ್ಲೇಖಗಳು ಹೆಚ್ಚಾಗಿ ಕಂಡು ಬರುತ್ತವೆ ಎಂದು ಹೇಳಬಹುದಾಗಿದೆ. ಇವೆಲ್ಲವುಗಳ ಜನಪದ ಜೀವನದಲ್ಲಿ ' ಅನುಗಮನ ' ಎಂಬುದು ' ಸಹಗಮನ ' ಎಂಬಂತೆಯೇ ಬಳಕೆಗೊಂಡಿದ್ದನ್ನು, ಆದರಿಂದಾಗಿ ' ಅನುಗಮನ 'ವನ್ನು ಸೂಚಿಸಲು ' ಸಹಗಮನ ' ಪದವೇ ಹೆಚ್ಚಾಗಿ ಬಳಕೆಗೊಂಡಿರಬಹುದಾದ ಸಾಧ್ಯತೆಯನ್ನು ಮರೆಯಬಾರದು.

1. ಚಿತಾಪ್ರವೇಶ :

ಕರ್ನಾಟಕದಲ್ಲಿ, ಮೃತನ ಪತ್ನಿ ಚಿತಾಪ್ರವೇಶ ಮಾಡಿ ಸತಿಹೋಗುವುದೇ ಹೆಚ್ಚಾಗಿ ಪ್ರಚಲಿತದಲ್ಲಿದ್ದುದು ಕಂಡು ಬರುತ್ತದೆ. ಶಾಸನಗಳು ಈ ವಿಷಯವನ್ನು ಹೀಗೆ ವರ್ಣಿಸಿವೆ: '' ಬಾಸೆಯ ಬೊಂಮಕ್ಕ ಬೊಂಮ್ಮಯ್ಯ ನಾಯಕನ ಕೂಡೆ ಕಿಚ್ಚಪರಯದದು '', '' ಮಾಳೆಯ ತಮ್ಮಗೌಡ ಆತನ ಮಡದಿ ಹಂಪಗೌಡನ ಮಗಳು ಮಲ್ಲಾಯಿ ತಿಚ್ಚಹಾಯಿದಲ್ಲಿ '' '' ಆತನ ಹೆಂಡತಿ ಚಳಿಕೆಯ ನಾಗಾಂಡಿಗೆ....... ತಾಗಾಯಿಂಚ್ಚಹೋದಳು '', '' ಆತನ ಹೆಂಡತಿ ನಾಕವೆ. ಹಾಯ್ದಳು '', '' ಆತನ ಸ್ತ್ರೀ....... ಬಿಬಿಯನಾಯಕ..... ಹಾಯ್ದು....... ಪ್ರಾಪ್ತರಾದಲ್ಲಿ '' '' ರಾಮುಜಜೀಯ ಮಗಳು ವಳಿಹಿಹುಲಿಯಮಜಿ ರಾಯಕುಮೆ... ಪಾಯಿದಳು '', '' ಗಣೇಶ್ವರನು ಆತನ ಪ್ರಾಣೇಶ್ವರಿ ಜೊಂಮಾಯಿ ಕೂಡಿ ಪತಿಬ್ರತಾಗುಣದಿಂ ಅಗ್ನಿಪ್ರವೇಶಂಮಾಡಿ ಸಂಗ್ರಾಮರಂಗದೊಳು ಸ್ವರ್ಗ್ಗಪ್ರಾಪ್ತರಾದರು.'' '' ಭೂಮಿಪೊಂಪುಟ್ಟಗೆ ವಸುಧನಮುಂ ಧನಮುಂ ನೀಡುತುಂ ದೇವರದೇವಂಗ್ಗಳ್ಗೆಯುಂ ಕಯ್ಯುಗಿದುರಿವುರಿಯುಂ ಪೊಕ್ಕು ದೇಕಬ್ಬೆ '', '' ಆತನ ಮಡದಿಗೆ.... ಯಿಂಗಗೌಡಿ ಅಗ್ನಿಪ್ರವೇಶವನು ಮಾಡಿದಳು '' 'ವನಜಾಕ್ಷಿ ಮಹಾಲಕ್ಷ್ಮಿಮು ಘನತರ ಶೌರ್ಯದೊಳುಮಗ್ನಿಯೊಳ್ಸಲೆ ಪಾಯಿದಳು '', '' ಸುರಿಗೆಯ ನಯಜನ ಮಗಳು ಚಿಯಕನು ಸಾಯಿಯನಾಯಕನ ಮಗ ವೀರಪ್ಪನ ಕೂಡೆ ಕಿಚ್ಚಹಗಲು ಶ್ರೀವೀರದಂಕ '', '' ಬಾಚಿಯಕ್ಕ ಕಿಚ್ಚುಹಾಯ್ದಳು '' '' ಮಹಾಸತಿ ಲಖಮಾಯಿ ಅಗ್ನಿಪ್ರವೇಶಮಾಡಿ ಸುರಲೋಕಪ್ರಾಪ್ತೆಯಾದರು ''.[42] ಇಲ್ಲಿ, ಸತಿಯ ಅಗ್ನಿಪ್ರವೇಶ ವಿಷಯವನ್ನು ಹೇಳುವಲ್ಲಿ ಕೆಲವು ಶಾಸನಗಳು ತ್ರುಟಿತವಾಗಿಯೂ, ಅಸ್ಪಷ್ಟವಾಗಿಯೂ, ಇರುವುದನ್ನು ಕಾಣುತ್ತೇವೆ. ಆದರೂ ಅಲ್ಲಿ ಬಳಕೆಗೊಂಡ ' ಹಾಯ್ದಳು '

'ಹಾಯ್ದು'' 'ಹಾಯಿದಳು' ಎಂಬ ಪದಗಳು ಮೃತರ ಪತ್ನಿಯರು ಅಗ್ನಿಯ ಮೂಲಕ ಸತಿ ಹೋದುದನ್ನು ಧ್ವನಿಸುತ್ತವೆ ಎಂದು ಹೇಳಬಹುದಾಗಿದೆ. ಈ ಶಾಸನಗಳಲ್ಲಿ ಸತಿ ಪ್ರವೇಶ ಮಾಡಿದ ಬೆಂಕಿಯನ್ನು ಕಿಚ್ಚು, ಅಗ್ನಿ, ಉರಿ ಎಂದು ಕರೆಯಲಾಗಿದೆ. ಬೊಮ್ಮಕ್ಕ, ಮಲ್ಲಾಯಿ, ಚಳಕೆಯ ನಾಗಾಂಡಿ, ನಾಕವೆ, ಜೊಂಮಾಯಿ, ದೇಕಬ್ಬೆ, ಮಹಾಲಕ್ಷ್ಮಮ್ಮ, ಚಿಂಯಕ, ಬಾಚಿಯಕ್ಕ ಉಮಾಯಿ — ಈ ಮೊದಲಾದ ಮಹಾಸತಿಯರ ಚಿತಾಪ್ರವೇಶ ಮಾಡಿದರೆಂದು ಈ ಮೇಲಿನ ಶಾಸನಗಳಿಂದ ತಿಳಿದುಬರುತ್ತದೆ.

ಮಹಾಕವಿ ಪಂಪ ಸತಿಯು ಪ್ರವೇಶಿಸುವ ಚಿತಾಗ್ನಿಯನ್ನು ''ಕಿರ್ಚು'' ಎಂದು ಕರೆದರೆ, ರನ್ನನು ಅದನ್ನು 'ಚಿತಾಗ್ನಿ' ಎಂದು 'ಶಿಖಿ' ಎಂದು ಕರೆದಿದ್ದಾನೆ.[43] ಬಸವಣ್ಣನವರ ವಚನದಲ್ಲಿ ಅದು ''ಉರಿ'' ಎಂದು, ಅಕ್ಕಮಹಾದೇವಿ ವಚನದಲ್ಲಿ ''ಕೊಂಡಕೆಂಡ'' ಎಂದು, ರಾಮನಾಥ ಚರಿತದಲ್ಲಿ ''ಉರಿಗೊಂಡ'' ಎಂದು ತೊರವೆರಾಮಾಯಣದಲ್ಲಿ ಅಗ್ನಿ, ವಹ್ನಿ ಎಂದು ಪ್ರಯೋಗಗೊಂಡಿದೆ.[44] ವಡ್ಡಗೆರೆ ನಾಗಮ್ಮ ಜನಪದ ಹಾಡಿನಲ್ಲಿ ಚಿತಾಗ್ನಿಯನ್ನು ಅಗ್ನಿ, ಕಿಚ್ಚು ಎಂದು, ಈರೋಬಿ ಮತ್ತು ನಾಗವ್ವ ಹಾಡುಗಳಲ್ಲಿ 'ಕಿಚ್ಚು' 'ಒಡಗಿಚ್ಚು' ಎಂದು. ಚಿಕ್ಕೋಳಿ ಹಿರಿದಿಮ್ಮವ್ವ ಗೀತೆಯಲ್ಲಿ 'ಕೆಂಡಕೊಂಡ' ಎಂದು, ಮಹಾಸತಿ ವೀರತಿಮ್ಮವ್ವ ಗೀತೆಯಲ್ಲಿ ಕಿಚ್ಚು, ಕೆಂಡ ಎಂದು, ಮಹಾಸತಿ ಕಾಚವ್ವ ಗೀತೆಯಲ್ಲಿ ಉರಿ ಎಂದು, ದೊಂಡಜಿ ವಾಥ ಕೋಲುಪದದಲ್ಲಿ ಅಗ್ನಿ ಎಂದು ಕರೆಯಲಾಗಿದೆ.[45] ಗುಂಡಮಬ್ಬೆ, ಕುಮಾರರಾಮನ ಪತ್ನಿಯರು, ವಡ್ಡಗೆರೆ ನಾಗಮ್ಮ , ಈರೋಬಿ, ಹಿರಿದಿಮ್ಮವ್ವ, ವೀರತಿಮ್ಮವ್ವ, ಮಹಾಸತಿ ಕಾಚವ್ವ , ಕೆಂಪಮ್ಮ, ಕೊಂಡದ ಚೆನ್ನಮ್ಮ, ಸಾಳುಬಾಯಿ, ತಂಗ್ಯಮ್ಮ, ಕೊಂಡದಮಾಸ್ತಮ್ಮ ಈ ಮೊದಲಾದವರು ಅಗ್ನಿಪ್ರವೇಶ ಮಾಡಿ ಸತಿಹೋದವರೆಂಬುದು ಕಾವ್ಯ — ಜನಪದ ಕಾವ್ಯಗಳಿಂದ ತಿಳಿದುಬರುತ್ತದೆ.[46] ಅಲ್ಲದೆ, ಕೊಂಡದಹಳ್ಳಿ ( ಚನ್ನಗಿರಿ.ತಾ. ), ಚಿಕ್ಕಹುಡೇವು ( ಚನ್ನಗಿರಿ.ತಾ. ) ಅಂಕೋಲಾ, ನೀಲಂಕಟ್ಟು ( ಅಂಕೋಲಾ ), ಗುತ್ತಲು ( ಮಂಡ್ಯ ), ಹೆಮ್ಮನಹಳ್ಳಿ (ಮದ್ದೂರು ), ಕಮ್ಮಾರಗಟ್ಟೆ ( ಹೊನ್ನಾಳಿ ), ಕುಂಚನೂರ ( ಬೆಳಗಾವ ) ಈ ಮೊದಲಾ — ದೆಡೆಗಳಲ್ಲಿ ಅಗ್ನಿಪ್ರವೇಶಮಾಡಿದ ಸತಿಯರು ಕುರಿತಾಗಿ ಜನಪದ ಕಥೆ ಮತ್ತು ವದಂತಿಗಳಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಈ ವಿವರಣೆಯಿಂದ ಮೃತನ ಪತ್ನಿಯರು ಚಿತಾಪ್ರವೇಶ ಮಾಡಿ ಮಹಾಸತಿಯರಾಗುತ್ತಿದ್ದುದೇ ಹೆಚ್ಚು ಎಂದು ಸ್ಪಷ್ಟವಾಗುತ್ತದೆ.

ಪತ್ನಿ ಗಂಡನ ಮರಣಾನಂತರ ಸತಿಹೋಗಲು ನಿರ್ಧಾರ ಮಾಡಿದ ಮೇಲೆ ಅವಳ ಚಿತೆಯ ಸಿದ್ಧತೆ ನಡೆಯುತ್ತಿತ್ತು. ಅದಕ್ಕಾಗಿ ಸ್ಥಳವೊಂದನ್ನು ಮೊದಲು ಗುರುತಿಸುತ್ತಿದ್ದರೆನಿಸುತ್ತದೆ. ಅನಂತರದಲ್ಲಿ ಕೊಂಡ ತೆಗೆದು ಅದರಲ್ಲಿ ಕಟ್ಟಿಗೆಗಳನ್ನು ಹಾಕಿಯೋ, ನೆಲದ ಮೇಲೆ ಕಟ್ಟಿಗೆಗಳನ್ನು ಒಟ್ಟಿಯೋ ಚಿತೆಯನ್ನು ಅಣಿಗೊಳಿಸುತ್ತಿದ್ದರು. ಬಹುಶ: ಬಂಧುವರ್ಗದಲ್ಲಿ ಇದಕ್ಕಾಗಿ ದೀರ್ಘವಾದ ಚಟುವಟಿಕೆಯೇ ನಡೆಯುತ್ತಿರಬೇಕು. ಅನಂತರ ಪತ್ನಿ ಪತಿಯ ಶವದೊಂದಿಗೋ ಶವವಿಲ್ಲದೆಯೋ ಚಿತಾಪ್ರವೇಶ ಮಾಡುತ್ತಿದ್ದಳು. ಅವಳ ದಹನದ ನಂತರ ಬಂಧುವರ್ಗದವರು ಅವಳ ಗುಣಗಾನಮಾಡುತ್ತ, ಅವಳ ತ್ಯಾಗ — ಧೈರ್ಯಗಳನ್ನು ಸ್ಮರಿಸುತ್ತ ಮರುಳುತ್ತಿದ್ದರು. ಈ ಒಂದು ಕಠೋರ ಮತ್ತು ಅಸಾಮಾನ್ಯವಾದ ಕಾರ್ಯಾಚರಣೆ ಸಹಜವೆವೆಂಬಂತೆ ಮುಗಿದು ಹೋಗುತ್ತಿತ್ತು. ಈ ಕಾರ್ಯಾಚರಣೆಯ ಮುಖ್ಯಾಂಶಗಳನ್ನು ಈಗ ಒಂದೊಂದಾಗಿ ವಿವರಿಸಬಹುದಾಗಿದೆ.

ಸತಿಯ ಚಿತೆಯ ಸ್ಥಳ : ಕರ್ನಾಟಕದಲ್ಲಿ ಇಂದು ಮಾಸ್ತಿಕಲ್ಲುಗಳಾಗಲಿ, ಮಾಸ್ತಿ ಕಲ್ಲುಗಳಾಗಲಿ, ಮಾಸ್ತಿ ಗುಡಿಗಳಾಗಲಿ ಊರಲ್ಲಿಯೋ, ಊರ ಮುಂದೆಯೋ, ಹೊಲ-ಗದ್ದೆಗಳಲ್ಲಿಯೋ, ಕಾಡುಗಳಲ್ಲಿಯೋ ಬಿಡಿಬಿಡಿಯಾಗಿ ದೊರಕುವುದನ್ನು ಕಾಣುತ್ತೇವೆ. ಇದರಿಂದಾಗಿ ಚಿತಾಪ್ರವೇಶ ಸಾಮಾನ್ಯವಾಗಿ ಊರಿನ ಯಾವುದಾದರೂ ಒಂದು ನಿರ್ದಿಷ್ಟ ಸ್ಥಾನದಲ್ಲಿಯೇ ನಡೆಯುತ್ತಿತ್ತೆಂದು ಹೇಳುವುದು ಸಾಧ್ಯವಿಲ್ಲ. ಬಹುಶ: ಸತಿಯ ಮನೆಯವರು ತಮಗೆ ಅನುಕೂಲವೆನಿಸಿದಲ್ಲಿ ತಮ್ಮ ಹೊಲ ಗದ್ದೆಗಳಲ್ಲಿ, ತೋಟಗಳಲ್ಲಿ ಅಗ್ನಿಪ್ರವೇಶವನ್ನು ಜರುಗಿಸುತ್ತಿದ್ದರೆನಿಸುತ್ತದೆ. ಆದರೆ ಎಲ್ಲೆಡೆಯೂ ಹೀಗೇ ನಡೆದಿದೆ ಎಂದು ಹೇಳುವಂತಿಲ್ಲ. ಕೆಲವು ಸ್ಥಾನಗಳಲ್ಲಿ ಗುಂಪು ಗುಂಪಾಗಿ ಮಾಸ್ತಿಕಲ್ಲುಗಳು ಸಿಗುವುದನ್ನು ಈ ಹಿನ್ನೆಲೆಯಲ್ಲಿ ಸ್ಮರಿಸಬಹುದಾಗಿದೆ.

‘‘ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಮಾಲಂದೂರು ಗ್ರಾಮದಲ್ಲಿ ‘ಮಾಸ್ತಿಹಕ್ಕಲು’ ಎಂಬ ಪ್ರದೇಶದಲ್ಲಿ ಅನೇಕ ಮಾಸ್ತಿಕಲ್ಲುಗಳಿವೆ. ವಿಜಯನಗರ ಕಮಲಾಪುರ ಬಳಿಯಲ್ಲಿ ಇಂತಹ ಹಲವು ಮಾಸ್ತಿ ಸಂಗ್ರಹಗಳನ್ನು ಕಾಣಬಹುದು. ಇವುಗಳನ್ನು ಗಮನಿಸಿದಾಗ ಅದು ಮಾಸ್ತಿಯರ ಸಹಗಮನದ ಸ್ಥಳವೊ ಅಥವಾ ಬೇರೆಡೆ ಸಹಗಮನ ಹೊಂದಿದ್ದರೂ ಪವಿತ್ರ ಸ್ಥಾನವೆಂದು ಇಲ್ಲಿ ತಂದು ನಿಲ್ಲಿಸಿರುವರೋ ತಿಳಿಯುವುದಿಲ್ಲ’’ ಎಂದು ಡಾ|| ಚೆನ್ನಕ್ಕ ಎಲಿಗಾರ

ಅವರು ಬರೆಯುತ್ತಾರೆ.[47] ಈ ಮೊದಲು ತೀ.ತಾ. ಶರ್ಮರು, "ಆ ಊರಿನ ಸತಿಯರು ಅಲ್ಲಿಯೇ ಸಹಗಮನಗೊಂಡು ಕಲ್ಲುನಡೆಸಿದ್ದಿರಬಹುದೇ ?" ಎಂದು ಪ್ರಶ್ನೆ ಹಾಕಿಕೊಂಡಿದ್ದರು.[48] ಮಲ್ಲಂದೂರಿನ ಈಶ್ವರದೇವರ ಕೆರೆಯ ಮುಂದಿನ ವಿಶಾಲಭೂಮಿಯೇ ಮಾಸ್ತಿಹಕ್ಕಲು ಎನಿಸಿಕೊಂಡಿದೆ. ಅಲ್ಲಿ ಒಂದು ಮಾಸ್ತಿಗುಡಿಯೂ ಉಂಟು. ಅಲ್ಲಿಯೇ ಸಮೀಪದಲ್ಲಿ ಮಾಸ್ತಿ ದೇವತೆಯದು ಎಂದು ಹೇಳಲಾದ ಗದ್ದೆಯೂ ಉಂಟು. ಜೊತೆಗೆ ಗುಡಿಯ ಸಮೀಪದಲ್ಲಿ ಏಳು 'ಒಂಟಿಗೈಮಾಸ್ತಿಕಲ್ಲು'ಗಳು ಇವೆ. ಇನ್ನು ಹಲವಾರು ಮಾಸ್ತಿಕಲ್ಲುಗಳು, ವೀರಗಲ್ಲುಗಳು ಇದ್ದುವೆಂದೂ, ಹಲವರು ಮನೆಕಟ್ಟಲಿಕ್ಕೆ ತಗೆದುಕೊಂಡು ಹೋಗಿದ್ದಾರೆಂದು, ಕೆಲವು ಸ್ಥಳದಲ್ಲಿಯೇ ಹೂತುಹೋಗಿವೆ ಎಂದೂ ಊರವರು ಹೇಳುತ್ತಾರೆ, ಇದೇ ರೀತಿ "ವರದಾನದಿಯ ತೀರದ "ಮೂಡಿ" ಎಂಬ ಹಳ್ಳಿಯಲ್ಲಿ ಚಿತೆಯೇರಿದ ಒಂದು ದೊಡ್ಡ ಸ್ಥಳವಿದೆ. ಅಲ್ಲಿ ಅನೇಕ ತರದ ಮಾಸ್ತಿಗಲ್ಲು ಬಿದ್ದಿರುವುದನ್ನು ಕಣ್ಣಾರೆ ಕಂಡು ಮನಗಾಣಬಹುದು".[49] ಕೊಳ್ಳೆಗಾಲದ ಮುಡಿ-ಗೊಂಡ ಎಂಬ ಹಳ್ಳಿಯ ಮುಂದೆ ಇರುವ ಕೆರೆಯ ಪಕ್ಕಕ್ಕೆ ಹದಿನಾರು ಮಾಸ್ತಿಕಲ್ಲುಗಳಿರುವುದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ. ಹೀಗೆ ಕೆಲವು ಸ್ಥಳಗಳಲ್ಲಿ ಮಾಸ್ತಿಕಲ್ಲುಗಳು ಗುಂಪಾಗಿ ಇರುವುದನ್ನು ನೋಡಿದರೆ, ಮೃತರ ಪತ್ನಿಯರು ಕೆಲವು ಊರುಗಳಲ್ಲಿ ನಿರ್ದಿಷ್ಟ ಸ್ಥಾನಗಳಲ್ಲಿ ಸತಿಹೋಗಿದ್ದಾರೆ ಎನಿಸುತ್ತದೆ. ಇದೇ ಹಿನ್ನೆಲೆ ಇಟ್ಟುಕೊಂಡು "ಜಳಬಿಯವ್ವೆ ಕಲ್ಲನಿರಿಸುವಲ್ಲಿ ಕೂಡಿಸಿತ್ತು" ಎಂದು ಹೇಳುವ ಶಾಸನ ಗಂಡನಿಗಾಗಿ ವೀರಗಲ್ಲನ್ನು ನಿಲ್ಲಿಸುವಾಗ ಸತಿಹೋದ-ಳೆಂಬುದನ್ನು ಸೂಚಿಸುತ್ತದೆ ಎನ್ನುವುದಕ್ಕಿಂತ ವೀರರಿಗಾಗಿ, ಮಹಾಸತಿಯರಿಗಾಗಿ ನಿರ್ದಿಷ್ಟಪಡಿಸಿದ ಸ್ಥಳವೊಂದನ್ನು ಅದು "ಕಲ್ಲನಿರಿಸುವಲ್ಲಿ" ಎಂದು ಹೇಳುತ್ತದೆ ಎಂದು ಅಭಿಪ್ರಾಯ ಪಡಬಹುದಾಗಿದೆ.[50]

'ಸೀಜರ ಫ್ರೆಡೆರಿಕ' ಎಂಬ ವಿದೇಶಿಪ್ರವಾಸಿ ವಿಜಯನಗರದಲ್ಲಿ ಜರುಗುತ್ತಿದ್ದ ಸತಿಘಟನೆಗಳನ್ನು ವರ್ಣಿಸುತ್ತ ಹೀಗೆ ಬರೆಯುತ್ತಾನೆ: "ಊರ ಹೊರಗಿರುವ ನಿಗೊಂದಿನ ಎಂಬ ನದಿಯ ದಡ ಸೇರುತ್ತಾರೆ. ಅದು ವಿಧವೆಯರನ್ನು ಸುಡುವ ಸ್ಥಳ".[51] ಅಂದರೆ ಈ ಪ್ರವಾಸಿ ವರ್ಣಿಸುವಂತೆ ನಿರ್ದಿಷ್ಟವಾದ ಸ್ಥಾನವೊಂದರಲ್ಲಿ ಮಾತ್ರ ಸತಿಘಟನೆಗಳು ಜರುಗುತ್ತಿದ್ದುವು. ಅದು ನದಿದಡದಂಥ ಪ್ರಶಾಂತ ಸ್ಥಳದಲ್ಲಿ ಎಂಬುದನ್ನು ಗಮನಿಸಬೇಕು.

" ವಡ್ಡಗೆರೆ ನಾಗಮ್ಮ " ಗೀತೆಯಲ್ಲಿ ಚಿತಾಕುಂಡವನ್ನು ' ವಡ್ಡಿಗೆರೆಯ ಬುಟ್ಟಿರಾಜಣ್ಣನ ಬೆಳೆವ ಬಯಲಾಗೆ' ' ವಡ್ಡಿಗೆರೆಯ ಅತ್ತಿಯ ಮರದ ಬೌಲಾಗೆ' ತೆಗೆದಿದ್ದೀರಿಯೇ ಎಂದು ಕೇಳುವ ನಾಗಮ್ಮಳ ಮಾತುಗಳು ಹೊಸ ವಿಷಯವನ್ನು ತಿಳಿಸಿಕೊಡುತ್ತವೆ.[52] ರಾಜಣ್ಣನ ಬೆಳೆವಲ್ಲಿ, ಅತ್ತಿಮರದ ಬಯಲಿನಲ್ಲಿ ಸಾಮಾನ್ಯವಾಗಿ ಚಿತಾಕುಂಡ ಏರ್ಪಡಿಸುತ್ತಿದ್ದರೆಂಬುದು ಇದರಿಂದ ತಿಳಿದುಬರುತ್ತದೆ. ಕೃಷ್ಣಮೂರ್ತಿ ಹನೂರ ಅವರು ಸಂಗ್ರಹಿಸಿದ, ಮಹಾಸತಿ ತ್ಯಾಡಿನಾಗಮ್ಮ ಗೀತೆಯಲ್ಲಿ ನಾಗಮ್ಮ " ಮರದಡಿಲಿ ಕೊಂಡಾವ ನೀನು ತಗುಸಣ್ಣ " ಎಂದು ಕೇಳಿ ಕೊಳ್ಳುತ್ತಾಳೆ.[53] ಇಲ್ಲಿ ಮರದ ಕೆಳಗೆ ಚಿತಾಕುಂಡ ತಗೆಯಲು ತನ್ನ ಅಣ್ಣನನ್ನು ಸತಿ ಕೇಳಿಕೊಳ್ಳುವ ವಿವರ ಇದೆ. ಹಾಗೇ ಅವಳು ಮುಂದುವರೆದು " ವಡ್ಡಗೆರೆ ಸಾಲುಬೇವಿನ ಮರದಡಿಲಿ ವಂಡಾವ ನೀನು ತಗುಸಣ್ಣ " ಎಂದು ನಿರ್ದಿಷ್ಟಸ್ಥಾನವನ್ನು ಗುರುತಿಸಿಯೂ ಬಿಡುತ್ತಾಳೆ. ಇಲ್ಲಿಯೇ ಕಟ್ಟೆಯ ಹಿಂದೆ, ಏರಿಯ ಕೆಳಗೆ " ಕೊಂಡ " ತಗೆಯುತ್ತಿದ್ದರೆಂಬ ಸೂಚನೆ ಗಳಿವೆ. ' ಮಹಾಸತಿ ಕಾಟವ್ವ ' ಗೀತೆಯಲ್ಲಿ " ಪುಲಿಕುಂಟೆ ಮೂಡಲ ದಿನ್ನ್ಯಾಗ ಗಾಜಿನ ಕೊಂಡ " ಎಂಬ ಮಾತು ಬರುತ್ತದೆ.[54] ಅಂದರೆ ಹುಲಿಕುಂಟೆ ಊರಿನ ಪೂರ್ವದ ' ದಿನ್ನೆ ' ಯಲ್ಲಿ ಕೊಂಡ ತಗೆಯುತ್ತಿದ್ದ ವಿವರ ಇದಾಗಿದೆ. ' ಮಾಸ್ತಮ್ಮ ' ಗೀತೆಯಲ್ಲಿ " ಗಂಗನಹಳ್ಳಿಯ ಬಾಳೆಯ ತೋಟ ' ದಲ್ಲಿ ಮಾಸ್ತಮ್ಮ ಸತಿಹೋದ ಉಲ್ಲೇಖ ಬರುತ್ತದೆ.[55] ಇದೇ ರೀತಿ ' ಕೊಂಡದ ಚೆನ್ನಮ್ಮ ' ಎಂಬ ಜನಪದ ಕಥೆಯಲ್ಲಿ ಊರಮುಂದಿನ ತೋಪಿನಲ್ಲಿ ಸತಿ ಘಟನೆ ಜರುಗಿದುದರ ವಿವರ ಕಾಣಿಸುತ್ತದೆ.[56] ಈ ಎಲ್ಲ ವಿವರಗಳ ಹಿನ್ನೆಲೆಯಲ್ಲಿ ಸತಿಯ ಚಿತಾಸ್ಥಳವು ವಿಶಾಲ ಬಯಲಾಗಿಯೂ, ರಾಜಣ್ಣನ ಬೆಳೆವ ಬಯಲಾಗಿಯೂ ಅತ್ತಿಯ ಮರದ ಬಯಲಾಗಿಯೂ ಪ್ರಶಾಂತ ನದಿಯ ದಡವಾಗಿಯೂ ಇರುವುದನ್ನು ಕಾಣುತ್ತೇವೆ ಅಲ್ಲದೆ ಊರಿನ ಕಟ್ಟೆಯ ಹಿಂದೆ, ಏರಿಯ ಕೆಳಗೆ, ಮೂಡಲ ದಿನ್ನೆಯಲ್ಲಿ, ಬೇವಿನ ಮರದಡಿ, ಕಿರುನೆಲ್ಲಿ ಅಡಿಯಲ್ಲಿ ಬಾಳೆಯ ತೋಟದಲ್ಲಿ ಸತಿಯರು ಚಿತೆ ಹೋಗುತ್ತಿದ್ದರೆನಿಸುತ್ತದೆ. ಇಂದಿಗೂ ಹಲವು ಮಾಸ್ತಿಕಲ್ಲುಗಳು, ಮಾಸ್ತಿಗುಡಿಗಳು ತೋಪಿನಲ್ಲಿ, ಗಿಡಗಳ ಅಡಿಯಲ್ಲಿ ವಿಶಾಲ ಬಯಲಿ ನಲ್ಲಿ ಇರುವುದನ್ನು ಗಮನಿಸಬಹುದಾಗಿದೆ.

ಸತಿಯ ಚಿತೆಯ ಸಿದ್ಧತೆ : ಚಿತೆಗೆ ಬೇಕಾಗಿರುವುದು ಮುಖ್ಯವಾಗಿ ಕಟ್ಟಿಗೆ, ಅದನ್ನು ಕೂಡಿ ಹಾಕುವ ಕೆಲಸ ಮೃತನ ಪತ್ನಿ ಸತಿಹೋಗಲು ನಿರ್ಧರಿಸಿದ ಮೇಲೆ ನಡೆಯುತ್ತಿತ್ತು. ಬಹುಶಃ ಈ ಕೆಲಸ ತುಂಬ ವ್ಯವಸ್ಥಿತವಾಗಿ, ಸರಳ ಮತ್ತು ಸಹಜವೆಂಬಂತೆ ನಡೆದುಹೋಗುತ್ತಿತ್ತು.

ಕರ್ನಾಟಕ ಕಾದಂಬರಿಯಲ್ಲಿ, ಪುಂಡರೀಕ ಮರಣಹೊಂದಿದಾಗ ಮಹಾಶ್ವೇತೆ ತನ್ನ ಜೊತೆಯವರಿಗೆ " ಸಂಗಡಿಸಿಂಧನಂಗಳಂ ಬಿಸು ಬೇಗವಿಂ ಚಿತೆಯಂ " ಎಂದು ಹೇಳುತ್ತಾಳೆ[57] ಇಲ್ಲಿ ಸೌದೆಗಳನ್ನು ಕೂಡಿಸಿ ಚಿತೆಯನ್ನು ಸಿದ್ಧಗೊಳಿಸುವ ಚಿತ್ರಇದೆ. ' ರಾಮನಾಥ ಚರಿತೆ ' ಯಲ್ಲಿ ಸತಿಹೋಗುವುದಕ್ಕೆ ಸಿರಿಗಂಧದ ಕೊರಡುಗಳಿಂದ ಉರಿಗೊಂಡ ತಂಯಾರಿಸುವ ಉಲ್ಲೇಖ ಬರುತ್ತದೆ.[58] ಅಂದರೆ, ಇಲ್ಲಿ ಚಿತೆಗಾಗಿ ಗಂಧದ ಕಟ್ಟಿಗೆಗಳನ್ನು ಉಪಯೋಗಿಸುತ್ತಿದ್ದ ಚಿತ್ರವನ್ನು ನಂಜುಂಡಕವಿ ಕೊಟ್ಟಿದ್ದಾನೆ.

' ವಡ್ಡಗೆರೆ ನಾಗಮ್ಮ ' ಜನಪದ ಹಾಡಿನಲ್ಲಿ ಆಲದ ಮತ್ತು ಅತ್ತಿಮರದ ಕೊರಡು ಗಳನ್ನು ಸತಿ ಚಿತೆಗಾಗಿ ಮಾವ ಸಿದ್ಧಗೊಳಿಸುವ ವಿವರಗಳಿವೆ. ಅಲ್ಲದೆ ' ದ್ಯಾವರಳ್ಳಿ ಸಿರಿಗಂಧ ಕೊರಡುಗಳು ಚಿತೆಗಾಗಿ ಬರಬೇಕೆಂಬ ಸೂಚನೆಯೂ ಇದೆ.[59] ತಿಮ್ಮವ್ವಳ ಚಿತೆಗಾಗಿ ' ಎಳು ಗಾಡಿ ಸೌದೆ ' ತರಿಸುವ ಚಿತ್ರ ' ಚಿಕ್ಕೋಳು ಹಿರಿದಿಮ್ಮವ್ವ ' ಗೀತೆಯಲ್ಲಿದೆ.[60] ' ಮಹಾಸತಿ ವೀರತಿಮ್ಮವ್ವ ' ಹಾಡಿನಲ್ಲಿ " ಕಿಚ್ಚ ಮಾಡೋರು ಎಚ್ಚಾಗಿ ಮಾಡೀರಿ " ಎಂದು ಹೇಳಿ " ಗಂಡಾಲದ ಮರವ " ಕಡಿಸುವ ಧೀರ ಸತಿಯ ವಿವರಣೆ ಇದೆ.[61] ಇಂಥದೇ ಚಿತ್ರ ' ಮಹಾಸತಿ ಕಾಟವ್ವ ' ಗೀತೆಯಲ್ಲಿ ಹೀಗೆ ಬರುತ್ತದೆ.[62]

ಕೊಂಡ ಆತ್ಯಾಳ್ ಇಂದಾಕ ನೋಡ್ಯಾಳೆ
ಕೊಂಡದೀ ಕೆಂಡ ಸುಡದೆಂದು
ಕೊಂಡದೀ ಕೆಂಡ ಸುಡದೆಂದು । ಮತ್ತೊಂದು
ಜೊತ್ತಾಲದ ಮರನಾ ಕಡಿಸ್ಯಾಳೆ

' ಕೆಂಪಮ್ಮ ' ಗೀತೆಯಲ್ಲಿ ಮಾವಿನ ಮರದಿಂದ, ' ಮಹಾಸತಿ ತಂಗ್ಯಮ್ಮ ' ಗೀತೆಯಲ್ಲಿ 'ಅತ್ತಿಯ ' ' ಆಲದ ' ಅಸಿಂಯಾ ತಗ್ಗಲಿ ಮರದ ' ಕೊರಡುಗಳಿಂದ ಚಿತೆ ಮಾಡುವ ವಿವರಗಳು ಬರುತ್ತವೆ.[63] ಅಪರೂಪವೆಂಬಂತೆ ಬೆಂಗಳೂರಿನಲ್ಲಿ, ಜೂನ್ 9, 1826 ರಲ್ಲಿ ನಡೆದ ಸತಿಘಟನೆಯೊಂದರಲ್ಲಿ ಚಿತೆಗಾಗಿ ಸಗಣಿಯಿಂದ ಮಾಡಿದ ಬೆರಣಿಗಳನ್ನು ಉಪಯೋಗಿಸಿದ್ದನ್ನು ಕಾಣುತ್ತೇವೆ.[64]

ಚಿತೆಗೆ ಕೊರಡುಗಳನ್ನು ಕೂಡಿಸಲು ಹೊರಟ ತಂದೆಯ ಚಿತ್ರ ಈರೋಬಿ ಜನಪದ ಗೀತೆಯಲ್ಲಿ ಸುಂದರವಾಗಿ ಬರುತ್ತದೆ:[65]

తుప్పు అన్నవుండు ఒప్పుళ్ళ నడుకట్టు
దప్పదొందు కొడల హేగలొడ్డి — ఈరోబి
నిమ్మప్పదిర్హ్లారటారే కొరడిగే

ఇదే రీతి అణ్ణందిర చిత్రవూ ఒందు ఇల్లింయే బరుత్తదే. మగళ చితిగే తందే, తంగియు చితిగే అణ్ణందిరు కొరడు కూడిసలు కొడల హిడిదు హొరట వివరణి ఇల్లదే. ఇదర ముందిన చిత్రణ మహాసతి తాడినాగమ్మ గీతెయల్లదే.[66]

అత్తిమర సుత్తి సుత్తి కడివోనే
తేక్కే తురుబిన మ్యదున
తేక్కే తుబుబిన మ్యదున 1 ఉద్దగరాయు
అత్తియు సేక్కే మగబాళ

ఇల్లి మ్యదున చితిగాగి అత్తిగిడ ఏరి కొరడుగళన్ను కడియువల్లి తల్లీనానాగిద్దానే. జనపద కవి అదన్ను సుత్తి సుత్తి కడివోనే ఎంబ మాతినల్లి ధ్వనిసిద్దానే. ఆదరే సతిహోగలిరువ నాగమ్మ ' అత్తియు సేక్కే మగబాళ ' ఎందు ' తేక్కే తురుబిన మ్యదున 'నిగే ఎచ్చరిసువ ఉన్నత చిత్ర ఇల్లదే. అత్తి ఎురద హొగే బహళ, అదరల్లియూ ఈగ తానే కడిదు హాకుత్తిరువ హసిమరద హొగెయంతూ ఇన్ను బహళవెంబుదు నాగమ్మళ వాస్తవికతెయ అరివికే ఇల్లదే.

చితాస్థళక్కే గాడిగళల్లి కట్టిగెగళన్ను సాగిసువ వివరగళన్ను ఈరోబి, నాగమ్మ, చికొక్కళు హిరిదిమ్మవ్వ, మాస్తమ్మ ఈ మొదలాద గీతెగళు కొడుత్తవే.[67] సామాన్యవాగి గాడిగే ఎత్తు, కోణగళన్ను హూడుత్తిద్ద చిత్రగళు అల్లవే. అందు ఎత్తు, కోణగళన్ను విశేష రీతియల్లి సింగరిసలాగుత్తిత్తు. ఈ ప్రసంగవన్ను వివరిసువ ' ఈరోబి ' ఖండకావ్యదల్లియు పద్యవొందు హీగిదే:

కిచ్చిగే సాదే హొరువ ఎత్తిన జోడనోడి
కొంబిగే ముత్తు కొరళిగే — హూవిన మాలే
కిచ్చిగి సాదే హొరుతావే

ಕೊಂಬಿಗೆ ಮುತ್ತುಕಟ್ಟಿದ, ಕೊರಳಿಗೆ ಹೂವಿನ ಮಾಲೆ ಹಾಕಿದ ಎತ್ತುಗಳ ಚಿತ್ರ ಇಲ್ಲದೆ, ' ನಾಗಮ್ಮ — ಹಾಡಿನಲ್ಲಿ ಎತ್ತುಗಳ ಕೊರಳಲ್ಲಿ ಗೆಜ್ಜೆ — ಹೂವಿನ ಮಾಲೆಗಳನ್ನು ಹಾಕಿದ ವಿವರಗಳಿವೆ. ಸಾಮಾನ್ಯವಾಗಿ ಎತ್ತುಗಳನ್ನು ಸಿಂಗರಿಸಿ ಹೂಡುವುದು ಸಡಗರ — ಸಂಭ್ರಮಗಳವಾತಾವರಣದಲ್ಲಿ ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸತಿಯ ಚಿತೆಗಾಗಿ ಅತ್ತಿ, ಮಾವು, ಆಲ ತಗ್ಗಲಿ, ಶ್ರೀಗಂಧ ಈ ಮೊದಲಾದ ಮರಗಳ ಕಟ್ಟಿಗೆಗಳನ್ನು ಉಪಯೋಗಿಸುತ್ತಿದ್ದರೆನಿಸುತ್ತದೆ. ತಂದೆ, ಅಣ್ಣ, ಮೈದುನ ಮೊದಲಾದವರು ಕಟ್ಟಿಗೆಗಳನ್ನು ಕೂಡಿಹಾಕುವಲ್ಲಿ ನೆರವಾಗುತ್ತಿದ್ದರು. ಅದು ತುಂಬ ದೊಡ್ಡ ಪ್ರಮಾಣದಲ್ಲಿಯೇ ಕೂಡಿಹಾಕುತ್ತಿದ್ದರೆನಿಸುತ್ತದೆ. ' ಪಿಯೆತ್ರೊ ದೆಲ್ಲಾವಲ್ಲೆ ' ಗಿಯಕ್ಕಮಳು ಸತಿಹೋಗುವ ಪ್ರಸಂಗವನ್ನು ವಿವರಿಸುತ್ತ '' ಚಿತೆಯನ್ನೇರುವ ಮುನ್ನ ಆಕೆ ನನ್ನ ಬಿಡಾರಕ್ಕೆ ಬಂದು ಇಲ್ಲಿಯ ಪದ್ಧತಿಯಂತೆ ಚಿತೆಗೆ ಬೇಕಾದ ಸೌದೆಕೊಳ್ಳಲು ನನ್ನಿಂದ ಭಿಕ್ಷೆ ಬೇಡುವುದಾಗಿಯೂ, ಅದನ್ನು ಕೊಡುವ ಕೃಪೆಮಾಡಬೇಕಾಗಿಯೂ ಹೇಳಿದಳು '' ಎಂದು ತಿಳಿಸುತ್ತಾನೆ.[68] ಅಂದರೆ ಸಾಧ್ಯವಾದ ಮಟ್ಟಿಗೆ ಚಿತೆಗಾಗಿ ಹೆಚ್ಚು ಹೆಚ್ಚಾಗಿಯೇ ಕಟ್ಟಿಗೆಗಳ ಸಂಗ್ರಹಣೆ ನಡೆಯುತ್ತಿದ್ದುದು ಇದರಿಂದ ವಿದಿತವಾಗುತ್ತದೆ. ಎಂಟು ದಿನಗಳವರೆಗೆ ಚಿತೆ ಉರಿದ ಉಲ್ಲೇಖವೊಂದು ' ವಡ್ಡಗೆರೆ ನಾಗಮ್ಮ ' ಹಾಡಿನಲ್ಲಿ '' ಎಂಟೆಂಟು ದಿನವು ಬೆಂದಾವೆ ಆ ಕೊಂಡ '' ಎಂದು ಬಂದಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.[69]

ಸತಿಯ ಚಿತೆಯ ರಚನೆ:— ಸತಿಯ ಚಿತೆ ಮುಖ್ಯವಾಗಿ ಎರಡು ಬಗೆಯಲ್ಲಿ ರಚಿಸುತ್ತಿದ್ದರೆನಿಸುತ್ತದೆ. ಒಂದು ; ನೆಲವನ್ನು ಕುಂಡದ ರೀತಿಯಲ್ಲಿ ಅಗೆದು ಅದರಲ್ಲಿ ಸೌದೆಯನ್ನು ಹಾಕಿ ಚಿತೆ ನಿರ್ಮಿಸುವುದು, ಇನ್ನೊಂದು : ನೆಲದ ಮೇಲೆಯೇ ಸೌದೆಯನ್ನು ಒಟ್ಟಿ ಚಿತೆ ನಿರ್ಮಿಸುವುದು. ಕುಂಡದಚಿತೆ ಮುಖ್ಯವಾಗಿ ಮೃತನ ಪತ್ನಿ ಹಾರಿಕೊಂಡು ಸತಿಹೋಗುವ ವಿಧಾನಕ್ಕೆ ಸಂಬಂಧ — , ಪಟ್ಟುದಾದರೆ ಒಟ್ಟಿದ ಸೌದೆಯ ಚಿತೆ ಅವಳು ಅದರ ಮೇಲೆ ಕುಳಿತುಕೊಂಡೋ, ಮಲಗಿಕೊಂಡೋ ಕಿಚ್ಚು ಹಚ್ಚಿಸಿಕೊಂಡು ಸತಿಹೋಗುವ ವಿಧಾನಕ್ಕೆ ಸಂಬಂಧಪಟ್ಟುದಾಗಿದೆ.

ಸಂಸ್ಕೃತದ ' ಕುಂಡ ' ಕನ್ನಡದಲ್ಲಿ ತದ್ಭವವಾಗಿ ' ಕೊಂಡ ' ಎಂದು ಪ್ರಯೋಗಗೊಂಡಿದೆ. ಕ್ರಿ.ಶ. 1057 ರ ಬೇತೂರ ಶಾಸನದಲ್ಲಿ ಮೊಟ್ಟಮೊದಲು '' ಕೊಂಡ ''

ಎಂಬುದು ಸತಿಪ್ರಸಂಗದ ಹಿನ್ನೆಲೆಯಲ್ಲಿ ಬಳಕೆಗೊಂಡಿದೆ.[70] ಅಕ್ಕಮಹಾದೇವಿ ವಚನದಲ್ಲಿ "ಕೊಂಡಕ್ಕೆ ಬೀಳ್ವಂತ ಲಂಡಸ್ತ್ರೀಯರುಳು" ಎಂದು ಬಳಕೆಗೊಂಡಿದೆ.[71] ಬಸವಣ್ಣನವರ "ಪುರುಷನಿರ್ವಾಣಕ್ಕುರಿವಗ್ನಿಯು ಬಂದುಹೊಕ್ಕು" ಎನ್ನುವ ವಚನವೂ ಕೊಂಡದ ಅಗ್ನಿಯನ್ನೇ ಸೂಚಿಸುತ್ತಿರಬೇಕು.[72] ನೆಲದ ಮೇಲಿನ ಚಿತಾಗ್ನಿಯಲ್ಲಿ ಪ್ರವೇಶಿಸುವುದೆಂದರೆ ಸರಳವಾದುದಲ್ಲ, ಅದಕ್ಕಿಂತಲೂ ಕುಂಡದಲ್ಲಿಯ ಬೆಂಕಿಯಲ್ಲಿ ಮೇಲಿನಿಂದ ಜಿಗಿದು ಪ್ರವೇಶಿಸುವುದು ಸರಳವಾದುದು ಎಂಬುದನ್ನು ಇಲ್ಲಿ ಸ್ಮರಿಸಬೇಕು.

'ರಾಮನಾಥ ಚರಿತೆ'ದಲ್ಲಿ 'ಕೊಂಡ'ದ ವಿವರಣೆಗಳು ಬರುತ್ತವೆ.[73] ಕುಮಾರ — ರಾಮನ ಪತ್ನಿಯರು ಸತಿಹೋಗಲಿಕ್ಕೆ ಮಂತ್ರಿ ಬೈಚಪ್ಪನು "ಸಿರಿಗಂಧದ ಕೊರಡುಗಳಿಂದಲಿ" "ಉರಿಗೊಂಡ"ವನ್ನು ಮಾಡಿಸುತ್ತಾನೆ. ಅಷ್ಟೇ ಅಲ್ಲ ಕುಮಾರರಾಮನೊಡನೆ ಸತ್ತ ಸುಭಟರ ಪತ್ನಿಯರಿಗಾಗಿಯೂ ಬೇರೆ ಬೇರೆ ಕೊಂಡಗಳನ್ನು ಮಂತ್ರಿ ಮಾಡಿಸಿಕೊಡುತ್ತಾನೆ. ಇಲ್ಲಿ "ಉರಿಗೊಂಡ" ಎಂಬ ಪದವು ಕೊಂಡ ತಗೆದು ಅದರಲ್ಲಿ ಬೆಂಕಿ ಮಾಡಿದ್ದನ್ನು ಸೂಚಿಸುತ್ತದೆ. ನಂತರದಲ್ಲಿಯೇ ಮೃತರ ಪತ್ನಿಯರು ಅದರಲ್ಲಿ ಬೀಳಬೇಕು. "ಗಂಡಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು ಪುಂಡ ವೀರಸ್ತ್ರೀ......." ಎಂದು ಸತಿಸಂಗತಿಯನ್ನು ವರ್ಣಿಸುವ ಷಣ್ಮುಖಶಿವಯೋಗಿಯ ವಚನವನ್ನು ಇಲ್ಲಿಯೇ ನೆನೆಯಬೇಕು.[74] ಬಹುಶ: ಕೊಂಡ ತೆಗೆದು ಅದರಲ್ಲಿ ಬೆಂಕಿ ಮಾಡಿರಬೇಕು. ಅದು ನಿಗಿನಿಗಿ ಉರಿಯುವ ಕೆಂಡವಾಗಿತ್ತು ಎನಿಸುತ್ತದೆ. ಅದನ್ನೇ ಷಣ್ಮುಖಶಿವಯೋಗಿ 'ಕೆಂಡ' ಎಂದು ಕರೆದಂತಿದೆ.

ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ಮನ್ಮಥ ಮರಣ ಹೊಂದಲಾಗಿ ರತಿ ಶಿವನನ್ನು ಕುರಿತು "ಕೊಂಡವ ತೋಡಿಸಬೇಡ, ಶುಷ್ಕವ ಸುಟ್ಟು ಕೆಂಡವ ಮಾಡಿಸಬೇಡ" ನಿನ್ನ ಕಣ್ಗಿಚ್ಚಿನಿಂದ ತನ್ನನ್ನು ಸುಡಬೇಕೆಂದು ಕೇಳಿಕೊಳ್ಳುವ ಪದ್ಯವೊಂದು ಬರುತ್ತದೆ.[75] ಇಲ್ಲಿ ನೆಲ ಅಗಿದು ಕೊಂಡ ತೋಡುವುದು, ನೆಲದ ಮೇಲೆ ಕೆಂಡ ನಿರ್ಮಿಸುವುದು — ಹೀಗೆ ಚಿತಾ ರಚನೆಯ ಎರಡು ಪ್ರಕಾರಗಳನ್ನು ಸೂಚಿಸಲಾಗಿದೆ. ಇದು ಕವಿಯ ಕಾಲವಾದ 16ನೆಯ ಶತಮಾನದ ವಿಧಾನಗಳೆಂದು ಬೇರೆ ಹೇಳಬೇಕಿಲ್ಲ. ಇಲ್ಲಿಯ 'ಶುಷ್ಕ ಸುಟ್ಟು' 'ಕೆಂಡ' ಎನ್ನುವ ಮಾತು, ಉಪಯೋಗಕ್ಕೆ ಬಾರದ ಕಟ್ಟಿಗೆಗಳನ್ನು ಸುಟ್ಟುದಕೆಂಡ ಮಾಡುವುದು ಎಂದು ಅರ್ಥವಾಗುತ್ತದೆ. ಬಹುಶ: ಚಿತೆಗಾಗಿ ಶ್ರೀಗಂಧ ಮರದ ಕಟ್ಟಿಗೆಯನ್ನು ಉಪಯೋಗಿಸುವುದು

ಎಲ್ಲರಿಂದಲೂ ಸಾಧ್ಯವಾಗದೇ ಇರುವುದಕ್ಕೆ ಅವರು ಇನ್ನುಳಿದ ಬೇರೆ ಬೇರೆ ಮರಗಳ ಕಟ್ಟಿಗೆಗಳನ್ನು ಅದಕ್ಕಾಗಿ ಉಪಯೋಗಿಸುತ್ತಿದ್ದುದನ್ನು ಈ ಮಾತು ಧ್ವನಿಸುವಂತಿದೆ.

ನೆಲ ಅಗೆದು ಕೊಂಡ ರಚಿಸುತ್ತಿದ್ದಂತೆ, ನೆಲ ತೋಡಿ ಕಲ್ಲುಗಳಿಂದ ಅದನ್ನು ಕಟ್ಟಿ. ಇನ್ನೊಂದು ವಿಧದ ಕೊಂಡವನ್ನು ನಿರ್ಮಿಸುತ್ತಿದ್ದರೆನಿಸುತ್ತದೆ, 'ಮಹಾಸತಿ ತಾಡಿನಾಗಮ್ಮ' ಗೀತೆಯಲ್ಲಿ ನಾಗಮ್ಮ ಸತಿಹೋಗಲು ನಿರ್ಧರಿಸಿ ಅಣ್ಣನಿಗೆ ಹೀಗೆ ಹೇಳುತ್ತಾಳೆ[76]:

ಮೊತ್ತುಂಟಿ ಏಳಣ್ಣ ತಟ್ಟೊಡ್ಡರನ ಕರಸಣ್ಣ
ವಂಡಾಕ ಕಲ್ಲು ವಡೆಸಣ್ಣ
ವಂಡಾಕ ಕಲ್ಲು ವಡೆಸಣ್ಣ । ಮರದಡಿಲಿ
ಮೊಂಡಾವ ನೀನು ತಗುಸಣ್ಣ

ಇಲ್ಲಿ ಮುಂಜಾವಿನಲ್ಲಿ ಎದ್ದು ವಂಡ (ಕೊಂಡ)ಕ್ಕೆ ವಡ್ಡರನ್ನು ಕರೆಸಲು ಅಣ್ಣನಿಗೆ ನಾಗಮ್ಮ ಸೂಚಿಸುತ್ತಿದ್ದಾಳೆ. ಅಷ್ಟೇ ಅಲ್ಲದೆ ಅವಳು ಮುಂದುವರೆದು,

ಅಳ್ಳೇಯ ಗೌಡರು ಕೊಳ್ಳೇರೊಂದೀಳ್ಯಾವು
ತೆಳ್ಳನ್ನ ಕಲ್ಲು ಬರಬೇಕು
ತೆಳ್ಳನ್ನ ಕಲ್ಲು ಬರಬೇಕು । ವಡ್ಡಗೆರೆ
ಕೊಂಡಾವು ನಿಲಬೇಕು

— ಎಂದು ಹೇಳುತ್ತಾಳೆ, ಬಹುಶಃ ಕೊಂಡಕ್ಕೆ ಸೌದೆ ಕೊಡುವುದು ಹೇಗೆ ಸಂಪ್ರದಾಯವಾಗಿತ್ತೋ, ಅದೇ ರೀತಿ ಕೊಂಡ ಕಟ್ಟಲು, ಕಲ್ಲುಗಳನ್ನು ಒದಗಿಸುವುದೂ ಸಂಪ್ರದಾಯವಾಗಿತ್ತು ಎನಿಸುತ್ತದೆ. 'ತೊರವೆ ರಾಮಾಯಣ'ದಲ್ಲಿ ಸೀತೆಯು ತನ್ನ ಪರಿಶುದ್ಧತೆಯನ್ನು ತೋರ್ಪಡಿಸಲು ಅಗ್ನಿಪ್ರವೇಶ ಮಾಡುವಾಗ ಕುಂಡ ಕಟ್ಟುವ ವಿವರಣೆ ಬರುತ್ತದೆ. ಬಹುಶಃ ಕುಮಾರವಾಲ್ಮೀಕಿಯು ಅದನ್ನು ಚಿತ್ರಿಸುವಾಗ ಅವನ ಕಣ್ಣಮುಂದೆ ಜರುಗುತ್ತಿದ್ದ ಸತಿಯರ ಅಗ್ನಿಪ್ರವೇಶಗಳೇ ಹಿನ್ನೆಲೆಯಾಗಿರಬೇಕೆನಿಸುತ್ತದೆ. ಅಲ್ಲಿ ಪದ್ಯಗಳೆರಡು ಹೀಗೆ ಬರುತ್ತವೆ.[77]

ರಚಿಸು ಕುಂಡವನಗ್ನಿದೇವರ
ರುಚಿ ದಿಗಂತವ ಬೆಳಗಲೆಂಬೀ
ವಚನಮಾತ್ರಕೆ ಕೋಟಿ ಸಂಖ್ಯೆಯ ಸರಿಗರಕ್ಕಸರು
ಪ್ರಚುರ ತರವೆನೆ ಸಿಳಿದರು ಬಳಿ

ಕಡಲಿಯನು ಸಮಚೌಕದಲಿ ಶಶಿ
ರುಚಿಯ ಶಿಲೆಗಳ ಕಂಡರಿಸಿ ಕಟ್ಟಿದರು ಕುಂಡದಲಿ

ತಂದು ಬಳಿಕೊಟ್ಟಿದರು ಪರಿಮಳ
ಚಂದನದ ನೀರಸ ಕುಜಂಗಳ
ನಂದವಿಗೆ ಮಧ್ಯದಲಿ ಸರಿದರು ಭಾರಸಂಖ್ಯೆಯಲಿ
ಒಂದು ತಾಳುತ್ಸೇಧದಲಿ ಹಳು
ಕೊಂದಿದುತ್ತಮ ಕರ್ಪುರವನ
ಲ್ಲಿಂದ ಮೇಲುರಿಗೊಳಿಸಿ ನಿಲಿಸಿದರನಿಲಬಾಂಧವನ

ಇಲ್ಲಿ 'ಸಮಚೌಕದಲಿ ಶಶಿರುಚಿಯ ಶಿಲೆಗಳಿಂದ ಕುಂಡಕಟ್ಟಿದ ನಂತರದಲ್ಲಿ ಚಂದನ ಮೊದಲಾದವುಗಳಿಂದ ಉರಿಗೊಳಿಸುತ್ತಾರೆ, '....... ಧರಿತ್ರೀದವಗೆ ಕೈಮುಗಿದುರಿಯೊಳಗೆ ಧುಮ್ಮಿಕ್ಕಿದಳು ಸೀತೆ' ಎಂಬ ವಿವರ ಮುಂದೆ ಬರುತ್ತದೆ. ಸೀತೆಯ ಈ ಅಗ್ನಿಪ್ರವೇಶ ಸತಿಯ ಅಗ್ನಿಪ್ರವೇಶವನ್ನು ನೆನಪಿಸುತ್ತದೆ ಎನ್ನುವುದರಲ್ಲಿ ಯಾವ ಸಂಶಯವು ಇಲ್ಲ.

ಕೊಂಡಗಳನ್ನು ದೊಡ್ಡ ಪ್ರಮಾಣದಲ್ಲಿಯೇ ತಗೆಯುತ್ತಿದ್ದರೆನಿಸುತ್ತದೆ. ಮೃತನ ಪತ್ನಿ ಒಬ್ಬಳೇ ಸತಿಹೋಗುವವಳಿದ್ದರೆ ಕೊಂಡ ಸಾಧಾರಣ ಪ್ರಮಾಣದಾಗಿ ರಚನೆಗೊಳ್ಳುತ್ತಿರಬೇಕು. '' ಆಳುದ್ದ ಕೊಂಡಾಕ '' ಎನ್ನುವ ಮಾತು ಕೊಂಡದ ಮಾಸ್ತ್ಯಮ್ಮ ಗೀತೆಯಲ್ಲಿ ಬರುತ್ತದೆ.[78] ಇದರಿಂದ ಬಹುಶ: ಕೊಂಡ ಸುಮಾರು ದೊಡ್ಡದು ಇರುತ್ತಿದ್ದಬೇಕೆನಿಸುತ್ತದೆ. ಮಹಾಸತಿ ವೀರತಿಮ್ಮವ್ವನಂಥ ಹಾಡಿನಲ್ಲಿ ಕೊಂಡದಲ್ಲಿ ಹಾಕಿದ ಕೊರಡುಗಳ ಕಿಚ್ಚು ಸಾಲದೆಂದು ಮತ್ತು ಮರಕಡಿಸಿ ಚಿತೆ ಮಾಡಿಸುವ ವಿವರಗಳು ಬರುವುದನ್ನು ನೋಡಿದರೆ ಈ ಮಾತು ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲ, ಜನಪದ ಕವಿ ಅಲ್ಲಿಯೇ 'ತಿಮ್ಮವ್ವ'ಳ ಮಾಲಕ '' ಗುಂಡಿ ಮಾಡೋರು ಇಂಬಾಗಿ ಮಾಡಿ '' ಎಂದು ಹೇಳಿಸಿಯೂ ಇದ್ದಾನೆ.[79] ಒಮ್ಮೊಮ್ಮೆ ಒಬ್ಬನಿಗೆ ಹಲವು ಜನ ಪತ್ನಿಯರಿದ್ದು ಅವನ ಮರಣದ ನಂತರ ಅವರೆಲ್ಲ ಕೊಂಡದ ಮಾಲಕ ಸತಿಹೋಗುವ ಪ್ರಸಂಗ ಬರುತ್ತಿತ್ತು. ಆಗ ಕೊಂಡ ಇನ್ನೂ ಹೆಚ್ಚು ದೊಡ್ಡದಾಗಿರಬೇಕಾಗುತ್ತಿತ್ತು. '' ರಾಜನು ಸತ್ತರೆ ಅವನ ಅಂತ:ಪುರದ ನಾನಾಮಾನು ಐನೂರು ಸ್ತ್ರೀಯರು ಅವನೊಡನೆ ಚಿತೆಯಲ್ಲಿ ಬೀಳುತ್ತಾರೆ. ಇಷ್ಟು ಜನರ ಅನುಕೂಲಕ್ಕಾಗಿ ಚಿತೆಯ ಗುಂಡಿಯನ್ನೂ ಚಿತಾಗ್ನಿಯನ್ನೂ ಬಹಳ ದೊಡ್ಡದು ಮಾಡಿರುತ್ತಾರೆ. ಶ್ರೀಗಂಧ ಮುಂತಾದ ಮರಗಳನ್ನು ಎಣ್ಣೆ ತುಪ್ಪಗಳನ್ನೂ ಹೇರಳವಾಗಿ

ಶೇಖರಿಸುತ್ತಾರೆ" ಎಂದು ವಿದೇಶಿ ಪ್ರವಾಸಿ ದು ಆರ್ತೆ ಬಾರ್ಬೋಸಾ ಹೇಳುವ ಮಾತನ್ನು ಇಲ್ಲಿ ಸ್ಮರಿಸಬಹುದು.[80]

ಕೊಂಡದಲ್ಲಿ ಚಿತೆಮಾಡಿ ಉರಿಸುವಾಗ ಅದು ಭಯಾನಕ — ರೌದ್ರವಾಗಿ ಕಾಣುತ್ತಿರಬೇಕು. "ಕಿಚ್ಚಿನ ಹೊಂಡವ ಕಂಡು ಹೆದರಿ ಹಿಮ್ಮೆಟ್ಟಿದರೆ" ಎಂದು ಷಣ್ಮುಖ ಶಿವಯೋಗಿ ಹೇಳುವ ಮಾತಿನಲ್ಲಿ ಅದನ್ನು ಗುರುತಿಸಬಹುದಾಗಿದೆ.[81] "ಮಹಾಸತಿ ತಾಡಿನಾಗಮ್ಮ" ಹಾಡಿನಲ್ಲಿ ಸತಿಹೋಗಲಿರುವ ನಾಗಮ್ಮ ತನ್ನಲ್ಲಿ ತಾನೇ ಅಂದುಕೊಳ್ಳುವ ಪದ್ಯವೊಂದು ಹೀಗೆ ಬರುತ್ತದೆ.[82]

ಅಂಬಾರದುದ್ದಾಕ ಉರಿಯೆದ್ದೇಳುತಾವೆ
ನಾನೆಂಗೋಗಾಲಿ ಸಿವಸಿವನೆ
ನಾನೆಂಗೋಗಾಲಿ ಸಿವಸಿವನೆ. 1 ಏಸಿವನೆ
ರಾಯರ ಪ್ರಾಣವ ತಿರುವಯ್ಯ

ಕೊಂಡದ "ಉರಿ" ಆಕಾಶಮುಟ್ಟುವಂತೆ ಸತಿಗೆ ಕಾಣುವ ಚಿತ್ರ ಇಲ್ಲಿದೆ. ಅದನ್ನು ಕಂಡ ಸತಿಯ ಧೈರ್ಯ ಸಹಜವಾಗಿ ಕೆಲಮಟ್ಟಿಗೆ ಅಸ್ಥಿರಗೊಂಡಿರಬೇಕು. ಅದನ್ನು ಜನಪದ ಕವಿ "ನಾನೆಂಗೋಗಾಲಿ ಸಿವಸಿವನೆ 1 ಏ ಸಿವನೆ ರಾಯರ ಪ್ರಾಣವ ತಿರುವಯ್ಯ" ಎಂಬ ಮಾತಿನಲ್ಲಿ ಧ್ವನಿಸಿದ್ದಾನೆ. ಸತಿಯರು ಹೀಗೆ ಚಿತೆಯ ಕೆಂಡವನ್ನು ಕಂಡು ಹೆದರಬಾರದೆಂದೇ ಅಡ್ಡವಾಗಿ ಪರದೆ ಕಟ್ಟುವ ವ್ಯವಸ್ಥೆಯೂ ಇತ್ತು. 'ರಾಮನಾಥ ಚರಿತ'ದಲ್ಲಿ ಸತಿಹೋಗಲಿರುವ ಕುಮಾರರಾಮನ ಪತ್ನಿಯರನ್ನು "ಕೊಂಡೊಯ್ದು ಕೊಂಡದ ಕೆಲದಲ್ಲಿ ನಿಲ್ಲಿಸಿ ತೆರೆಪಿಡಿದು" ಎಂದು ಹೇಳಲಾಗಿದೆ.[83] ವಿದೇಶಿ ಪ್ರವಾಸಿ 'ಸೀಜರ್ ಫ್ರೆಡೆರಿಕ್' ವಿಜಯನಗರದಲ್ಲಿಯ ಸತಿ ಘಟನೆಗಳನ್ನು ವರ್ಣಿಸುತ್ತ "ಕೆಲವು ವೇಳೆ ಚಿತೆಯ ಸುತ್ತ ತಟ್ಟಿ ಕಟ್ಟಿರುತ್ತಾರೆ — ಬೆಂಕಿಯ ಜ್ವಾಲೆ ಕಾಣಿಸದಿರಲೆಂದು. ಕೆಲವು ಹೆಂಗಸರು ಈ ತಟ್ಟಿಯನ್ನು ಕಿತ್ತುಹಾಕುತ್ತಾರೆ; ತಾವು ಬೆಂಕಿಗೆ ಹೆದರುವುದಿಲ್ಲ ಎಂಬುದನ್ನು ತೋರಿಸಲು" ಎಂದು ಹೇಳಿರುವುದನ್ನು ಇಲ್ಲಿ ನೆನಪಿಸಿ — ಕೊಳ್ಳಬಹುದು.[84] ಇದೇ ರೀತಿ 'ಮಹಾಸತಿ ವೀರತಿಮ್ಮವ್ವ' 'ಮಹಾಸತಿ ಕಾಟವ್ವ' 'ಕೊಂಡದ ಮಾಸ್ತ್ಯಮ್ಮ' ಹಾಡುಗಳಲ್ಲಿಯೂ ಹಚ್ಚಡ, ಕಂಬಳಿ, ಪಾವುಡಗಳನ್ನು ಚಿತಾಗ್ನಿಗೆ ಮರೆಯಾಗಿ ಕಟ್ಟುತ್ತಿದ್ದ ವಿವರಗಳಿವೆ.[85] ಅಲ್ಲಿಯೂ ಸತಿಯರು ತಾವು ಬೆಂಕಿಗೆ ಅಂಜುವುದಿಲ್ಲವೆಂದೂ ತೆರೆ ತಗೆಯಬೇಕೆಂದೂ ಕೇಳಿಕೊಳ್ಳುವ ಮಾತುಗಳಿವೆ. 'ಮಹಾಸತಿಕಾಟವ್ವ' ಗೀತೆಯಲ್ಲಿ ಆ ಪ್ರಸಂಗವನ್ನು ಚಿತ್ರಸುವ ಎರಡು ಪದ್ಯಗಳು ಹೀಗೆ ಬರುತ್ತವೆ.

ಕಿಚ್ಚು ಗಂಜ್ಯಾಳಿಂದು ಅಚ್ಚಡವ ತೆರೆಕಟ್ಟಿಸ್ತ,
ಕಿಚ್ಚುಗಂಜೂರ ಮಗಳಲ್ಲ 1 ಸಿರಿಗೊಂಡಗೌಡ
ಅಚ್ಚಡದ ತೆರೆಯಾ ತಗುಸಂಯ್ಯ

ಕೊಂಡ ಕಂಜ್ಯಾಳಿಂದು ಕಬ್ಳಿ ತೆರೆಯು ಕಟ್ಟಿಸ್ತ
ಕೊಂಡ ಕಂಜೂರ ಮಗಳಲ್ಲ 1 ಸಿರಿಗೊಂಡಗೌಡ
ಕಂಬಳಿ ತೆರೆಯಾ ತಗುಸಂಯ್ಯ

ಸೀಜರ ಫ್ರೆಡರಿಕನು ಸತಿಯರು ತಾವು ಬೆಂಕಿಗೆ ಅಂಜುವುದಿಲ್ಲವೆಂಬುದನ್ನು ತೋರಿಸಲು ಸ್ವತ: ಅವರೇ ತೆರೆಯನ್ನು ತಗೆಯುತ್ತಿದ್ದರೆಂದು ತಿಳಿಸುತ್ತಾನೆ. ಈ ಜನಪದ ಹಾಡಿನಲ್ಲಿ ಸತಿ '' ಕಿಚ್ಚುಗಂಜೂರ ಮಗಳಲ್ಲ '' — ಎಂದು ಹೇಳಿ '' ಅಚ್ಚಡದ ತೆರೆ '', '' ಕಂಬ್ಳಿ ತೆರೆ '' ತಗೆಯಲು ಹೇಳುವ ವಿವರಗಳಿವೆ.

ನೆಲದ ಮೇಲೆ ಕಟ್ಟಿಗೆಗಳನ್ನು ಒಟ್ಟಿ ಸತಿಯ ಚಿತೆಯನ್ನು ರಚಿಸುತ್ತಿದ್ದ ಕುರಿತಾಗಿ ಕೆಲವು ಉಲ್ಲೇಖಗಳಿವೆ. ಗಂಡನ ಶವದೊಂದಿಗೆ ಪತ್ನಿ ಕುಳಿತು ಅಥವಾ ಮಲಗಿ ಸತಿಹೋಗಬೇಕಾಗಿದ್ದಲ್ಲಿ, ಬಹುಶ: ಇಂಥ ಚಿತೆಯನ್ನೇ ಹೆಚ್ಚಾಗಿ ಏರ್ಪಡಿಸುತ್ತಿದ್ದರೆನಿಸುತ್ತದೆ. ಈ ದೃಷ್ಟಿಯಿಂದ ' ಗುಂಡಮಬ್ಬೆ 'ಯು ಸಹಗಮನಗೊಂಡ ಚಿತೆ ಇಂಥದ್ದೇ ಆಗಿರಬೇಕು. ಅವಳು '' ಇನಿಯನೆನಪ್ಪಿ—ಕೊಂಡುಚಿತವಾಗಿ ಚಿತಾಗ್ನಿಯಲೊಳಣ್ಕಿ ಸತ್ತವಳು.[86] ಅದೇ ರೀತಿ ' ಕರ್ಣಾಟಕ ಕಾದಂಬರಿ ' ಯಲ್ಲಿ ಪುಂಡರೀಕ ಸತ್ತಾಗ, ಮಹಾಶ್ವೇತೆ ಸಾಯಬಿಚ್ಛಿಸಿ ಸಂಗಾತಿಗೆ '' ವೀರಚಿಸು ಬೇಗವಿಂ ಚಿತೆಯನು '' ಎಂದುಹೇಳುವ ಮಾತು ಇದೇ ಬಗೆಯ ಚಿತೆಯನ್ನು ರಚಿಸಲು ಸೂಚಿಸುವಂತಿದೆ.[87]

ಬಳ್ಳಿಗಾವೆಯ ವೀರಗಲ್ಲಿನ ಶಿಲ್ಪದಲ್ಲಿ ನೆಲದ ಮೇಲೆ ರಚನೆಗೊಂಡ ಸತಿಯ ಚಿತೆಯನ್ನು ಕಾಣಬಹುದಾಗಿದೆ. ( ಚಿತ್ರ — 4 ) ಎತ್ತರವಾದ ವೇದಿಕೆಯಿಂದ ಅಗ್ನಿಯು ಭಯಂಕರವಾಗಿ ಉರಿಯುವುದನ್ನು ಶಿಲ್ಪಿ ಅಲ್ಲಿ ಸಮರ್ಥವಾಗಿ ಕಂಡರಿಸಿದ್ದಾನೆ. ಅಗ್ನಿಯ ಎರಡೂ ಪಕ್ಕಗಳಲ್ಲಿ ಸಿಂಗಾರಮಾಡಿಕೊಂಡು ನಿಂತ ಸುಮಂಗಲೆಯರಿದ್ದಾರೆ. ಅವರು ಬಲಗೈಯಿಂದ ಅಕ್ಷತೆಯನ್ನು 'ಚಿತೆಗೆ ಹಾಕುತ್ತಿದ್ದಂತೆ ತೋರಿಸಲಾಗಿದೆ. '' ಈ ವೀರಗಲ್ಲಿನ ಶಿಲ್ಪಿ ತನ್ನ ಕಾಲದಲ್ಲಿ ಕಂಡ ವೀರನ ದಹನಕ್ರಿಯೆಯೊಂದಿಗೆ ನಡೆಯುವ ಆತನ ಹೆಂಡತಿಯ ಸಹಗಮನದ ವಿವರಗಳನ್ನು ತನ್ನ ಪರಿಮಿತಿಯಲ್ಲಿಯಥಾಶಕ್ತಿಯಾಗಿ ಇಲ್ಲಿ ಹಿಡಿದಿಟ್ಟಿದ್ದಾನೆ. ಈ ರೀತಿಯ ವಿವರಣಾತ್ಮಕವಾದ ಸಹಗಮನದ ಚಿತ್ರವನ್ನು ನೀಡುವ ವೀರಗಲ್ಲುಗಳು, ಮಾಸ್ತಿಗಲ್ಲುಗಳು ಬೇರೆ ಇಲ್ಲ ''.[88]

' ಚಿಕ್ಕೋಳು ಹಿರಿದಿಮ್ಮವ್ವ ' ಹಾಡಿನಲ್ಲಿ ಚಿತೆಯ ಮೇಲೆ ತಿಮ್ಮವ್ವ ಗಂಡನ ತಲೆಯನ್ನು ತಲೆಯ ಕಡೆಗೆ ಮಾಡಿಕೊಂಡು ಮಲಗಿ ಸತಿಹೋಗುತ್ತಾಳೆ.[89] ' ದೊಂಢಜಿ ವಾಘ ' ಕೋಲುಪದದಲ್ಲಿ ಸಾಳುಬಾಯಿ ಚಿತೆಯ ಮೇಲೆ ಕುಳಿತುಕೊಂಡು ಮಹಾಸತಿಯಾಗುತ್ತಾಳೆ.[90] ಮಾಸ್ತ್ರಮ್ಮ ಹಾಡಿನಲ್ಲಿ ಏಳುಬಂಡಿ ಶ್ರೀಗಂಧದ ಕೊರಡುಗಳ ಮೇಲೆ ಮಾಸ್ತ್ರಮ್ಮ ಮಲಗಿ ಸತಿಹೋಗುವ ಪ್ರಸಂಗವಿದೆ.[91] ಈ ' ಮಾಸ್ತ್ರಮ್ಮ ' ಹಾಡಿನಲ್ಲಿಯೇ '' ಹಿಂದೆ ಎರಡು ಗಜ ಮುಂದೆ ಎರಡು ಗಜ ನಾಲ್ಕು ಗಜ ಜಮೀನು ಅಳೆದು '' ಅದರ ಮೇಲೆ ಶ್ರೀಗಂಧದ ಸಾದೆ ಹಾಕುವ ಅಪೂರ್ವ ವಿವರಗಳಿವೆ. ಅಂದರೆ ನೆಲದಮೇಲೆ ರಚಿಸುತ್ತಿದ್ದ ಚಿತೆಗಾಗಿ ನಾಲ್ಕುಗಜ ಭೂಮಿಯನ್ನು ಉಪಯೋಗಿಸುತ್ತಿದ್ದರೆಂದು ಹೇಳಬಹುದಾಗಿದೆ. ಅದರ ಮೇಲೆ ಸುಮಾರು ಏಳು ಬಂಡಿಯಷ್ಟು ಕಟ್ಟಿಗೆ ಒಟ್ಟಿ ಚಿತೆ ರಚಿಸಬಹುದಾಗಿತ್ತು.

ಸತಿಯ ಚಿತಾಪ್ರವೇಶ : ನೆಲದ ಮೇಲಿನ ಚಿತೆಗಿಂತಲೂ ಕೊಂಡದಲ್ಲಿಯ ಚಿತೆ ಹೆಚ್ಚು ಸರಳ ಮತ್ತು ಸುಲಭವಾದುದಾಗಿತ್ತು. ನೆಲದ ಮೇಲಿನ ಚಿತೆಯಲ್ಲಿ ಕುಳಿತುಕೊಂಡು ಅಥವಾ ಮಲಗಿಕೊಂಡು ಕಿಚ್ಚು ಹಚ್ಚಿಸಿಕೊಳ್ಳುವುದು ಅಷ್ಟೇನು ಸುಲಭವಲ್ಲ. ಇನ್ನು ಉರಿಯುತ್ತಿರುವ ಇಂಥ ಚಿತೆಯನ್ನು ಏರುವುದಂತೂ ಇನ್ನೂ ಕಷ್ಟತರವಾದುದು. ಕೊಂಡದ ಕೆಂಡದಲ್ಲಿ ಕ್ಷಣಾರ್ಧದಲ್ಲಿ ಜಿಗಿದುಕೊಳ್ಳುವ ಸೌಲಭ್ಯ ಇನ್ನುಳಿದ ಮಾರ್ಗಗಳಲ್ಲಿ ಇಲ್ಲದಿರುವುದನ್ನು ಇಲ್ಲಿ ಗಮನಿಸಬೇಕು.

ದೇಕಬ್ಬೆ ಕೊಂಡದಗ್ನಿಯ ಮೂಲಕ ಸತಿಹೋದವಳು.[92] ಶಾಸನಕವಿ ಅದನ್ನು ಸ್ಪಷ್ಟವಾಗಿ '' ರವಿಗನ ಕುಲದೀಪಕಿ ಸಾಯಲೆನ್ದು ಕೊಣ್ಡಕೆ ನಡೆದಳ್ '' ಎನ್ನುವಲ್ಲಿ ಅದನ್ನು ಸ್ಪಷ್ಟಪಡಿಸಿದ್ದಾನೆ. ಅಷ್ಟೇ ಅಲ್ಲದೆ, ಅವಳು '' ಕಱಯುಗ್ರಗಿದುರಿವುರಿಯುಂ ಪೊಕ್ಕು '' ಎಂದು ಹೆಚ್ಚಿನ ನಿರೂಪಣೆ ಕೊಟ್ಟಿದ್ದಾನೆ. ಅವಳು ಕೊಂಡದ ಸಮೀಪಕ್ಕೆ ಬಂದು ' ದೇವರದೇವಂಗಗ್ರಳ್ತಿಯುಂ ' ನಮಸ್ಕರಿಸಿ ಉರಿಯನ್ನು ಹೊಕ್ಕು ಬಿಡುತ್ತಾಳೆ. ಇಲ್ಲಿಯ ' ಪೊಕ್ಕು ' ಎಂಬುದು 'ಜಿಗಿದು ' ಎಂದೇ ಅರ್ಥಕೊಡುತ್ತದೆ. ಅವಳು ಸತಿಯಾಗಲು ಹೊರಟಿರುವುದು ಕೊಂಡ ಮೂಲಕ ಎಂಬುದನ್ನು ಹಿನ್ನೆಲೆಯಾಗಿಟ್ಟುಕೊಂಡು ' ಪೊಕ್ಕು ' ಎಂಬುದನ್ನು ನಿರೀಕ್ಷಿಸಿದರೆ, ಜಿಗಿದುಕೊಂಡು,

ಹಾರಿಕೊಂಡು ಎಂದೇ ಅರ್ಥಮಾಡಬೇಕಾಗುತ್ತದೆ. ಬೆಂಕಿ ಕ್ರಿಯಾರೂಪದಲ್ಲಿರುವುದನ್ನು 'ಉರಿವುರಿಯಂ ಎಂದು ಶಾಸನದಲ್ಲಿ ತಿಳಿಸಿಕೊಡಲಾಗಿದೆ. ಕೊಂಡದಲ್ಲಿ, ಉರಿಯುವ ಉರಿ ಇದ್ದು, ಆ ಸಮಯಕ್ಕೆ 'ದೇಕಬ್ಬೆ' ಅದನ್ನು 'ಪೊಕ್ಕು' ಸತಿಹೋಗುತ್ತಾಳೆ. ಇಷ್ಟೊಂದು ಸ್ಪಷ್ಟವಾಗಿ ಸತಿಹೋಗುವ ವಿಧಾನವನ್ನು ತಿಳಿಸುವ ಶಾಸನ ಕರ್ನಾಟಕದಲ್ಲಿ ಮತ್ತೊಂದಿಲ್ಲ. ಕ್ರಿ.ಶ. 1385 ರ ಎಮುತ್ತೂರ ಶಾಸನವೊಂದು 'ಬೊಂಮಯನು' ಮರಣಹೊಂದಲಾಗಿ ಆತನ ಹೆಂಡತಿ ಕಾಮಾಯಿ 'ಕಿಚ್ಚುಹಾರಿದಲ್ಲಿ' ಎಂದು ಉಲ್ಲೇಖಿಸುತ್ತದೆ.[93] ಇಲ್ಲಿಯ ಕಾಮಾಯಿಯು ಕೂಡ ಕೊಂಡದಗ್ನಿಯಲ್ಲಿಯೇ ಹಾರಿಕೊಂಡು ಸತಿಹೋದವಳಾಗಿದ್ದಾಳೆ. ಇಲ್ಲಿಯ ''ಹಾರಿದಲ್ಲಿ'' ಎಂಬ ಪದ ಅಪರೂಪವಾದುದು. ಇನ್ನು ಕೆಲವು ಶಾಸನಗಳಲ್ಲಿ ಹಾಯ್ದು, ಹಾಯ್ದಳು, ಪಾಯಿದಳ್, ಅಗ್ನಿಪ್ರವೇಶವನು ಮಾಡಿದಳು, ಕಿಚ್ಚುಹಾಯ್ದಳು ಎಂದು ಸತಿಹೋದ ವಿಷಯವನ್ನು ವರ್ಣಿಸುವ ಮಾತುಗಳನ್ನು ಹೇಗೆ ಅರ್ಥಮಾಡಿಕೊಳ್ಳಬೇಕೋ ತಿಳಿಯದು.[94] ಸತಿ ಅಗ್ನಿಪ್ರವೇಶ ವಿಷಯವನ್ನು ಇವು ಹೇಳುತ್ತವೆ ಎಂಬುದರಲ್ಲಿ ಮಾತ್ರ ಯಾವ ಸಂಶಯವೂ ಇಲ್ಲ. ಆದರೆ ಕೊಂಡದಗ್ನಿಯ ವಿಧಾನ ಅಥವಾ ನೆಲದ ಮೇಲಿನ ಚಿತಾಗ್ನಿಯ ವಿಧಾನ ಇವುಗಳಲ್ಲಿ ಯಾವುದರ ಮೂಲಕ ಇಲ್ಲಿಯ ಸತಿಘಟನೆಗಳು ಸಂಭವಿಸಿವೆ ಎಂಬುದನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಕೆಲವು ಶಾಸನಗಳು ಸತಿಹೋದ ವಿಷಯವನ್ನು ಹೀಗೆ ನಿರೂಪಿಸುತ್ತವೆ : ''ಬಾಸೆಯ ಬೊಂಮಕ್ಕಬೊಂಮೆಶೆಟ್ಟಿಯನಾಯಕನಕೂಡೆಕಿಚ್ಚ ಪರಿಯದದು'', ''ಗಣೇಶ್ವರನು, ಆತನ ಪ್ರಾಣೇಶ್ವರಿ ಜೋಯಮಾಯಿಕೂಡಿ ಪತಿಬ್ರತಾಗುಣದಿಂ ಅಗ್ನಿಪ್ರವೇಶಂ ಮಾಡಿ ಸಂಗ್ರಾಮರಂಗದೊಳು ಸ್ವರ್ಗ್ಗಪ್ರಾಪ್ತರಾದರು, ''ಸುರಿಗೆಯ ನಯಚನ ಮಗಳು ಚಿಯಕನು ಸಾಯಿಯನಾಯಕನ ಮಗ ವೀರಪ್ಪನ ಕೂಡೆ ಕಿಚ್ಚ ಹಗಲು ಶ್ರೀ ವೀರದಂಕ''[95] ಬಹುಶ: ಇಲ್ಲಿಯ ಮಾತುಗಳು ನೆಲದ ಮೇಲಿನ ಚಿತೆಯಲ್ಲಿ ಸತಿಹೋದ ವಿಷಯವನ್ನು ನಿರೂಪಿಸುವಂತಿವೆ. ಈ ಮೂರೂ ಶಾಸನಗಳು ಮೃತರ ಕೂಡಿ ಅವರ ಪತ್ನಿಯರು ಸಹಗಮನಗೊಂಡ ವಿಷಯವನ್ನು ಸ್ಪಷ್ಟಗೊಳಿಸುತ್ತವೆಯಷ್ಟೇ. ಬಹುಶ: ಗಂಡನೊಡನೆ ಪತ್ನಿ 'ಸಹಗಮನಗೊಳ್ಳುವ ಕಾಲಕ್ಕೆ ಹೆಚ್ಚಾಗಿ ನೆಲದ ಮೇಲೆಯೇ ಚಿತೆ ರಚಿಸುತ್ತಿರಬೇಕು. ಚಿತೆಯ ಕಟ್ಟೆಯಲ್ಲಿ ಗಂಡನ ಶವವನ್ನು ಹಾಕಿ ಅಗ್ನಿಸ್ಪರ್ಶಮಾಡಿ ಅದರಲ್ಲಿ ಪತ್ನಿ ಹಾರಿಕೊಂಡು ಸತಿಹೋದಳೆಂದು ಹೇಳುವುದಾಗಲೀ, ಉರಿಯುತ್ತಿರುವ ಕೊಂಡದಲ್ಲಿ

ಪತ್ನಿ ಗಂಡನ ಶವದೊಂದಿಗೆ ಹಾರಿಕೊಂಡು ಸತಿಹೋದಳೆಂದು ಹೇಳುವುದಾಗಲೀ ಅಷ್ಟೊಂದು ಸಂಭಾವ್ಯವೆನಿಸುವುದಿಲ್ಲ. ಆ ಕಾರಣದಿಂದಾಗಿ ಸಹಗಮನವನ್ನು ವರ್ಣಿಸುವ ಈ ಮೇಲಿನ ಶಾಸನಗಳಲ್ಲಿಂತು ಪತ್ನಿಯರು ಗಂಡಂದಿರ ಶವಗಳೊಂದಿಗೇ ನೆಲದಮೇಲೆ ರಚಿಸಿದ ಚಿತೆಯಲ್ಲಿ ಕುಳಿತುಕೊಂಡೋ ಮಲಗಿಕೊಂಡೋ ಕಿಚ್ಚು ಹಚ್ಚಿಸಿಕೊಂಡಿರಬೇಕು ಎಂದು ಅಭಿಪ್ರಾಯ ಪಡಬಹುದಾಗಿದೆ.

ಮೃತನ ಪತ್ನಿ ಅಗ್ನಿಪ್ರವೇಶಮಾಡುವ ಮೊದಲು ಚಿತೆಯನ್ನು ಪ್ರದಕ್ಷಿಣೆ ಹಾಕುವಳೆಂದು 'ದು ಆರ್ತೆಬಾಬೋಸಾ' ತಿಳಿಸುತ್ತಾನೆ.[96] ಈರೋಬಿ, ಜಗುನೆಂತು ಜಕ್ಕಣ್ಣ ಮಗುನೆಂತು ಬ್ಯಾಟಿಕಾರ, ಕೊಂಡದ ಚೆನ್ನಮ್ಮ — ಈ ಮೊದಲಾದ ಜನಪದ ಹಾಡು ಮತ್ತು ಕಥೆಗಳಲ್ಲಿ ಸತಿ ಚಿತೆಗೆ ಪ್ರದಕ್ಷಿಣೆ ಹಾಕುವುದನ್ನು ನಿರೂಪಿಸಲಾಗಿದೆ.[97] ''ಕೊಂಡ ಮುರಾರುಸುತ್ತ ಬಳಸ್ಯಾಳು — ಈರೋಬಿ ಕಳಸವ ಮಡಗಿ ಕೈಯೆತ್ತಿ ಮುಗಿದಾಳು — ಈರೋಬಿ ಕೊಂಡಕೆ ಮುಂದಾಗಿ ನಡೆದಾಳು ಎಂದು ಈರೋಬಿ ಜನಪದ ಖಂಡಕಾವ್ಯದಲ್ಲಿ ಚಿತಹೆ ಚಿತ್ರಿಸಿದರೆ ಜಗುನೆಂತು ಜಕ್ಕಣ್ಣ ಮಗುನೆಂತು ಬ್ಯಾಟಿಕಾರ ಹಾಡಿನಲ್ಲಿ ಈ ಪ್ರಸಂಗವನ್ನು ಚಿತ್ರಿಸುವ ಪದ್ಯ ಹೀಗೆ ಬರುತ್ತದೆ.

ಕಿಚ್ಚನ್ನ ಮುರಾರುಸುತ್ತ
ಬಂದಳು ನೋಡಿರಂತ್ಯ
ಕಿಚ್ಚನ ಒಳ್ಗಾಕಿನ್ನ -
ನೆಗೆದಳು ನೋಡಿರಂತ್ಯ
ದಗದಗ ಉರಿತಾಳೆ

ಇಲ್ಲಿ 'ನೆಗೆದಳು' ಎಂಬ ಪದ ಬಹುಮುಖ್ಯವಾದುದು. ಕುಂಡದಗ್ನಿಯಲ್ಲಿ ಮೃತನ ಪತ್ನಿ ಜಿಗಿದು ಸತಿಹೋಗುವ ವಿಧಾನವನ್ನು ಇದು ಧ್ವನಿಸುತ್ತದೆ. ಅದಕ್ಕೂ ಪೂರ್ವ ದಲ್ಲಿ ಅವಳು ಚಿತೆಯ ಪ್ರದಕ್ಷಿಣೆ ಹಾಕುವ ಚಿತ್ರ ಇಲ್ಲದೆ.

ಬಸವಣ್ಣನವರ ಟೀಕಿನ ವಚನದಲ್ಲಿ ಮೃತನಪತ್ನಿ ''.......... ಕಡೆಯಲ್ಲಿ ಸತಿಕಲಹ್ಲ ಮೇಲೆ ನಿಂತುಕೊಂಡು'' ಕಿಚ್ಚಿನಲ್ಲಿ ಬೀಳುವ ವಿವರಣೆ ದೊರಕುತ್ತದೆ.[98] ಮಹಾಲಿಂಗಸ್ವಾಮಿಯ ಭೂಲರಾಮನ ಸಾಂಗತ್ಯದಲ್ಲಿ, ಕುಮಾರರಾಮನ ಪತ್ನಿಯರು ಸತಿ ಹೋಗುವಾಗ, 'ಸ್ವಾತಿಕಲ್ಲ' (ಸತಿಕಲ್ಲು) ಹತ್ತಿದರು ಎಂದು ಉಲ್ಲೇಖಿಸಿದೆ.[99]

ನಾಗಮ್ಮ ಜನಪದ ಹಾಡಿನಲ್ಲಿ ಇದೆ ವಿವರಣೆ ಬರುತ್ತದೆ: [100]

ಅತ್ತಿತ್ತ ನೋಡ್ಯಾಳೆ ಹತ್ತ್ಯಾಳೆ ಸತಿಕಲ್ಲ
ಹತ್ತೀರ ಬರುತಾರೆ ಅವರಪ್ಪ । ತಾಯಮ್ಮ
ನೂರಾಯಕೊಟ್ಟೇನು ಇರುಮಗಳೆ

ಇಲ್ಲಿ 'ಸತಿಕಲ್ಲ' ಮೇಲೆ ನಿಂತು ಸತಿಹೋಗುವ ಪ್ರಸಂಗ ಇದೆ. ಅಡಗನಹಳ್ಳಿ ಮಾಸ್ತಿಹಾಡಿನಲ್ಲಿ, ಮಾಸ್ತಮ್ಮ ಸತಿಹೋಗುವ ಮೊದಲು 'ಸಾತಿಕಲ್ಲತ್ತಿ ಸ್ವಾಕಾವೆ ಮಾಡ್ಯಾಳೆ' ಎಂಬ ಮಾತು ಬರುತ್ತದೆ.[101] ಈ ವಿವರಣೆಗಳನ್ನು ನೋಡಿದರೆ ಚಿತಾಗ್ನಿಯ ಸಮೀಪದಲ್ಲಿ ಮಾಸ್ತಿಕಲ್ಲನ್ನು ಇಡುತ್ತಿದ್ದರೆಂದೂ, ಅದನ್ನು ಹತ್ತಿ ಮೃತನಪತ್ನಿ ಚಿತಾಪ್ರವೇಶ ಮಾಡುತ್ತಿದ್ದಳೆಂದೂ ಬಹುಶಃ ಅದನ್ನೆ ಮುಂದೆ ಸ್ಮಾರಕಕ್ಕಾಗಿ ಬಳಸುತ್ತಿದ್ದರೆಂದೂ ಅರ್ಥವಾಗುತ್ತದೆ ಇಲ್ಲಿ 'ಸತಿಕಲ್ಲ' ಎಂಬುದನ್ನು ಬಿಡಿಬಿಡಿಯಾಗಿ ಗುರುತಿಸಿ ಸತಿಯು 'ಕಲ್ಲ' ಹತ್ತಿ ಚಿತಾ – ಪ್ರವೇಶ ಮಾಡುತ್ತಿರಬಹುದೆಂದು ಅರ್ಥಮಾಡಲೂ ಸಾಧ್ಯವಿದೆ. ಸತಿಯು ಚಿತಾಪ್ರವೇಶಕ್ಕೆ ಅನುಕೂಲವಾಗಲೆಂಬ ಉದ್ದೇಶದಿಂದ ಕಲ್ಲನ್ನೊಂದು, ಕಿಚ್ಚಿನ ಸಮೀಪದಲ್ಲಿ ಇಡುತ್ತಿರಬೇಕು. 'ಮಹಾಸತಿ ವೀರತಿಮ್ಮವ್ವ' ಗೀತೆಯಲ್ಲಿ 'ಕಟ್ಟೆಕಲ್ಲನೆತ್ತಿ' 'ಏರಿಕಲ್ಲನೆತ್ತಿ' ಎಂಬ ವಿವರಗಳು ಬರುವುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು.[102]

ಸತಿಯರು ಚಿತಾಪ್ರವೇಶ ಮಾಡುವ ಬಗೆಯನ್ನು ರಾಮನಾಥ ಚರಿತದಲ್ಲಿ ಸುಂದರವಾಗಿ ಚಿತ್ರಿಸಲಾಗಿದೆ. ಅಲ್ಲಿ ಕುಮಾರರಾಮನ ಪತ್ನಿಯರು ಚಿತಾಪ್ರವೇಶದ ಸಂದರ್ಭದ ಪದ್ಯವೊಂದು ಹೀಗಿದೆ.[103]

ಬಳಿಕ ಕೃತಕದ ಮಾಸತಿಯರು ಪುರಜನ
ಗಳ ಪರಸುತ ಲೀಲೆ ಮಿಗಿಲು
ಝಳಿಲನುರಿವ ಕೊಂಡದೊಳಗೆ ಬಿದ್ದರು ಮರ
ಲಲನೆಯರೆಲ್ಲ ಘೋಳಿಡಲು

ಇಲ್ಲಿ ಸತಿಯರು 'ಲೀಲೆಮಿಗಿಲು' ಚಿತಾಗ್ನಿ ಕೊಂಡದಲ್ಲಿ 'ಝಳಿಲನೆ' ಬಿದ್ದರೆಂಬ ವಿವರಣೆ ತುಂಬ ದೃಶ್ಯವತ್ತಾಗಿದೆ, 'ಸಂಗಮ' ಕಾಲದ ಸಾಹಿತ್ಯದಲ್ಲಿಯು 'ಪೆರುಂಕೋಪ್ಪೆಂಡು'

ಎಂಬವಳು ಸತಿಹೋಗುವಾಗ ಚಿತಾಗ್ನಿಯು "ನನಗೆ ಈ ಸರೋವರದ ತಣ್ಣೀರಿಗಿಂತ ಭಿನ್ನವಲ್ಲ" ಎಂದು ಹೇಳುವ ಮಾತು ಈ ಸಂದರ್ಭದಲ್ಲಿ ನೆನಪಾಗುತ್ತದೆ. [104]

'ದೋಂಡಜಿ ವಾಘ' ಕೋಲುಪದದಲ್ಲಿ, ಸಾಳುಬಾಯಿ ದೂರದಲ್ಲಿ ಮಡಿದ ಗಂಡನ ಸುದ್ದಿ ಕೇಳಿ, ಚಿತೆ ರಚಿಸಿ, ಅದರ ಮೇಲೆ ಹತ್ತಿ ಕಿಚ್ಚು ಹಚ್ಚಿಸಿಕೊಳ್ಳುವ ವಿವರ ಬರುತ್ತದೆ. 'ಕಿಚ್ಚ ಹಚ್ಚುತಲೆ ಅಚ್ಯುತನೆನೆದಳು........ ದೇವರ ಧ್ಯಾನದಲಿ ದಹನವಾದಳು' ಎಂದು ಜನಪದ ಕವಿ ಆ ಪ್ರಸಂಗದ ಕೊನೆ ಹಾಡುತ್ತಾನೆ. [105] ಇಲ್ಲಿ ದೇವರಧ್ಯಾನ ಮಾಡುತ್ತ ದಹನವಾಗುವ ವಿಷಯವಿದೆ. ಇದೇ ರೀತಿ ಬೆಳತೂರು ಶಾಸನದಲ್ಲಿ, ದೇಕಬ್ಬೆ "ದೇವರದೇವಂಗ್ಗಳಿಯುಂ ಕಯ್ಯುಮ್ಮುಗಿದು" ಅಗ್ನಿಪ್ರವೇಶಿಸುವ ವಿವರವಿದೆ. [106] ನಾಗಮ್ಮ ಚಿತೆಯಲ್ಲಿ ಬಿದ್ದು ಉರಿದು ಹೋಗುವ ಚಿತ್ರವನ್ನು 'ಮಹಾಸತಿ ತಾಡಿನಾಗಮ್ಮ' ಹಾಡು ಉನ್ನತಮಟ್ಟದಲ್ಲಿ ಚಿತ್ರಿಸುತ್ತದೆ. [107]

ಅಂಗಾಲು ಉರುದಾವೆ ಅಂಗೈ ಉರುದಾವೆ
ಉಂಗುರದ ಬೆಟ್ಟು ಉರುದಾವೆ
ಉಂಗುರದ ಬೆಟ್ಟು ಉರುದಾವೆ 1 ನಾಗಮ್ಮನ
ಸಂಗತಿರಿಂದಾಕ ತಿರುಮ್ಯಾರೆ

ಮೊಣಕೈ ಉರುದಾವೆ ಮೊಣಕಾಲು ಉರುದಾವೆ
ಕಿರುಕುಣದ ಬೆಟ್ಟು ಉರುದಾವ
ಕಿರುಕುಣದ ಬೆಟ್ಟು ಉರುದಾವೆ 1 ನಾಗಮ್ಮನ
ಗೆಣೆಕಾತಿರಿಂದಾಕ ತಿಳುಗ್ಯಾರೆ

ಇಲ್ಲಿ 'ಅಂಗಾಲು' 'ಅಂಗೈ' 'ಮೊಳಕೈ' 'ಮೊಳಕಾಲು' ಹೀಗೆ ಸತಿಯ ಶರೀರದ ಒಂದೊಂದು ಭಾಗಗಳು ಉರಿದುಹೋಗುವ ಕರುಳು ಹಿಂಡುವ ಚಿತ್ರ ಇದೆ. ಅಷ್ಟೇ ಅಲ್ಲ, ಜನಪದಕವಿ 'ಉಂಗುರದ ಬೆಟ್ಟು ಉರುದಾವೆ' ಎಂದು ಒತ್ತಿ ಸೂಚಿಸಿ ಇನ್ನು ಈ ಪ್ರಸಂಗದ ರುದ್ರತೆಯನ್ನು ಹೆಚ್ಚಿಸುತ್ತಾನೆ. ಇಂಥ ವಿವರಣೆಗಳು ಶಾಸನ, ಕಾವ್ಯ ಇನ್ನುಳಿದ ಆಕರಗಳಲ್ಲಿ ಇಲ್ಲವೇ ಇಲ್ಲ. ಸತಿ ಸಂಗತಿಯೊಡನೆ ಕವಿ ಹೃದಯದ ನೇರ ಸಂಪರ್ಕ ಏರ್ಪಟ್ಟು ದೃಶ್ಯ — ವತ್ತಾದ ಸತ್ಯ ಚಿತ್ರ ಇಲ್ಲಿ ಮೂಡಿ ನಿಂತಿದೆ. ಇಂಥವುಗಳ ಚಿತ್ರಣ ಜನಪದ ಕಾವ್ಯದಿಂದ ಮಾತ್ರ ಸಾಧ್ಯವೇನೋ !

ಸತಿಯರು ಚಿತೆಯಲ್ಲಿ ಕೆಲವು ವಸ್ತುಗಳನ್ನು ಹಾಕುತ್ತಿದ್ದ ವಿವರಣೆಗಳು ದೊರಕುತ್ತವೆ. ಸತಿ ತನ್ನೊಡನೆ ಕೆಲವು ವಸ್ತುಗಳನ್ನು ತಗೆದುಕೊಂಡು ಹೋಗುತ್ತಿದ್ದುದಲ್ಲದೆ, ಅವಳು ಚಿತೆಗೆ ಪ್ರವೇಶಿಸಿದ ಮೇಲೆಯೂ ಅಗ್ನಿಗೆ ಕೆಲವು ವಸ್ತುಗಳನ್ನು ಹಾಕುತ್ತಿದ್ದರು. ಬಳ್ಳಿಗಾವೆಯ ಶಿಲ್ಪದಲ್ಲಿ ಸತಿಯು ಚಿತೆಗೆ ಸುಮಂಗಲೆಯರು ಅಕ್ಷತೆ ಹಾಕುವುದನ್ನು ಸೂಚಿಸಲಾಗಿದೆ. ಈರೋಬಿ ಜನಪದ ಕಾವ್ಯದಲ್ಲಿ ಕಳಸಹೊತ್ತುಕೊಂಡು ಸತಿ ಅಗ್ನಿಪ್ರವೇಶ ಮಾಡುತ್ತಾಳೆ.[108] ಲಿಂಬೆಹಣ್ಣು ಹಿಡಿದುಕೊಂಡು ಸತಿ ಚಿತಾಗ್ನಿ ಹೋಗುವುದನ್ನು ಬಸವಣ್ಣನವರ ಟೀಕಿನ ವಚನದಲ್ಲಿ ಬರುತ್ತದೆ.[109] ಚಿತೆಗೆ ಎಣ್ಣೆಯನ್ನು ಹಾಕಿ ಅನಂತರ ಸತಿಯನ್ನು ಚಿತೆಗೆ ಹಾಕುವ ವಿವರಗಳನ್ನು ದು ಆರ್ತೆಬಾರ್ಬೋಸಾ ನೀಡುತ್ತಾನೆ.[110] ಅಲ್ಲದೆ ಅವಳು ಚಿತೆಗೆ ಹಾರಿದ ಮೇಲೆ ಸುತ್ತನೆರೆದವರು ಅವಳ ಮೇಲೆ ಎಣ್ಣೆ, ತುಪ್ಪ — ಒಣಸೌದೆಗಳನ್ನು ಹಾಕುತ್ತಿದ್ದರೆಂದೂ ವಿವರಿಸುತ್ತಾನೆ. ಇಂಥದೇ ಚಿತ್ರವನ್ನು ವಿಜಯನಗರಕ್ಕೆ ಭೇಟಿಕೊಟ್ಟ ವಿದೇಶಿಪ್ರವಾಸಿ ಸೀಜರ ಪ್ರೆಡೆರಿಕ್ ಕೊಡುತ್ತಾನೆ.[111] ಮಿಷನರಿ ಟಿಪ್ಪಣಿಗಳಲ್ಲೊಂದು ಪತ್ರವೊಂದರಲ್ಲಿ, ಪತಿಶವದೊಡನೆ ಚಿತೆಯಲ್ಲಿ ಕುಳಿತ ಪತ್ನಿಯ ಮೇಲೆ ಹುಲ್ಲು, ಅಂಟು, ರೇಸಿನ್ ಮೊದಲಾದ ಉರಿಯುವ ಪದಾರ್ಥಗಳನ್ನು ಹಾಕುವ ವಿವರಗಳಿವೆ.[112]. ರಾಮನಾಥ ಚರಿತದಲ್ಲಿ ಕುಮಾರರಾಮನ ಪತ್ನಿಯರ ಚಿತಾಕೊಂಡಕ್ಕೆ ಹಾಕುವ ವಸ್ತುಗಳ ವಿವರವನ್ನು ಎರಡು ಪದ್ಯಗಳಲ್ಲಿ ಹೀಗೆ ಚಿತ್ರಿಸಲಾಗಿದೆ :[113]

ಪನಿನೀರ ಕುಪ್ಪಿಗೆ ಕರ್ಪೂರದಡೆ ಮೂ
ವಿನ ಪೊಟ್ಟಣ ಮೃಗಮದದ
ತನಿಗಂಪಿನ ವೀಣೆ ಸಾದಿನ ಭರಣಿಗ
ಳನಲ ಕೊಂಡಕೆ ಹಾಕಿದರು

ಭೂರಕದಗಿಲು ಸುಗಂಧದ ಪುಡಿಗಳ
ಭರಣಿಗಳನು ಭರದಿಂದ
ತರಿಸಿ ಹಾಕಿಸಿದನು ರಾಮನುರಾಣಿಯ
ರುರಿಗೊಂಡಕಾ ಮಂತ್ರಿವರನು

‘ದೋಂಡಜಿ ಪಾಥ’ ಜನಪದ ಹಾಡಿನಲ್ಲಿ ಚಿತೆಗೆ ತುಪ್ಪ ಹಾಕುವ ಮಾತು ಬರುತ್ತದೆ.[114] ಮಹಾಸತಿ ವೀರತಿಮ್ಮವ್ವ' ನ ಕೊಂಡದಲ್ಲಿ ''ಎಣ್ಣೆಯ ಕೊಡ ಉಳ್ಳೆಳ್ಳ ಬೇವಾಗ''
"ತುಪ್ಪದ ಕೊಡ ಉಕ್ಕೆಳ್ಳ ಬೇವಾಗ" →

ಎಂಬ ಚಿತ್ರಗಳು ಬರುತ್ತವೆ.[115] ಈ ಎಲ್ಲ ವಿವರಣೆಗಳ ಹಿನ್ನೆಲೆಯಲ್ಲಿ ಸತಿಯು ಚಿತೆಗೆ ಮಂಗಲ ವಸ್ತುಗಳನ್ನು ಹಾಕುತ್ತಿದ್ದರಲ್ಲದೆ, ಅಗ್ನಿ ಹೆಚ್ಚಿಸಲು ಅನುಕೂಲವಾದ ವಸ್ತುಗಳನ್ನೂ ಹಾಕುತ್ತಿದ್ದರೆಂಬುದು ಸ್ಪಷ್ಟಗೊಳ್ಳುತ್ತದೆ

ಮೃತನ ಪತ್ನಿ ಚಿತೆಯಲ್ಲಿ ಉರಿದು ಮಹಾಸತಿಯಾದ ಮೇಲೆ ಅವಳ ಸ್ಮಾರಕಗಳು ನಿರ್ಮಾಣಗೊಳ್ಳುತ್ತಿದ್ದವು. ಅವಳ ನೆನಪು 'ಇಂಥ ರೂಪ' ದಲ್ಲಿಯೇ ಉಳಿದುಕೊಳ್ಳುತ್ತಿತ್ತು— ಎಂದು ಹೇಳುವುದು ಕಷ್ಟ. ಅದು ಹಾಡಾಗಿ, ಕಥೆಯಾಗಿ, ಗಾದೆ ಮಾತಾಗಿ ಜನಮನದಲ್ಲಿ ಬೇರೂರುತ್ತಿದ್ದಿತು. ಕೆಲವೊಮ್ಮೆ ಸತಿಯ ಬಳೆ, ಸೀರೆ, ಕಳಸ, ಕನ್ನಡಿ ಅವಳ ಕಥೆ ಹೇಳುವ ಸ್ಮಾರಕಗಳಾಗುತ್ತಿದ್ದವು. ಮುಖ್ಯವಾಗಿ ಮಾಸ್ತಿಕಲ್ಲುಗಳು ನಿರ್ಮಾಣಗೊಳ್ಳುತ್ತಿದ್ದವು. ದೇಕಬ್ಬೆಯಂಥವಳಿಗೆ ಶಾಸನಗಳು ಕಂಡರಿಸಲ್ಪಡುತ್ತಿದ್ದವು. ಕೆಲವೊಮ್ಮೆ ನಾಗಮ್ಮನಂಥ ಮಹಾಸತಿಗೆ ಗುಡಿಗಳು ನಿರ್ಮಾಣಗೊಳ್ಳುತ್ತಿದ್ದವು. ಮಾಸ್ತಮ್ಮಳಂಥವಳಿಗೆ ಗದ್ದಿಗೆಗಳು ಸಿದ್ಧಗೊಳ್ಳುತ್ತಿದ್ದವು. ಶಿವಮ್ಮವ್ವನಂಥ ಸತಿಯರಿಗೆ ಅವರ ಕೊಂಡದ ಮೇಲೆ ಕಟ್ಟೆಗಳು ನಿರ್ಮಾಣಗೊಳ್ಳುತ್ತಿದ್ದವು. ಬಹುಶಃ ಸತಿಹೋದ ಮೇಲೆ ಕೊಂಡಗಳನ್ನು ಮುಚ್ಚಿ ಆ ಅಗಲಕ್ಕೆ ಕಟ್ಟೆಗಳನ್ನು ಕಟ್ಟುತ್ತಿದ್ದರೆನಿಸುತ್ತದೆ. ರಾಮನಾಥ ಚರಿತದಲ್ಲಿ ಕುಮಾರರಾಮನ ಪತ್ನಿಯರು ಉರಿಗೊಂಡದಲ್ಲಿ ಬಿದ್ದು ಸತಿಹೋದ ಮೇಲೆ ಅದನ್ನು ಮುಚ್ಚಿದ ಅಪರೂಪದ ವಿವರಣೆಯೊಂದು ''ಹೂಳಿಸಿ ಹುತವಹಕುಂಡವನು'' ಎಂದು ಬರುವುದನ್ನು ಇಲ್ಲಿ ಸ್ಮರಿಸಬಹುದು.[116]

## 2. ಸಮಾಧಿ ಪ್ರವೇಶ :

ಕರ್ನಾಟಕದಲ್ಲಿ ಮೃತರ ಪತ್ನಿಯರು ಚಿತಾಪ್ರವೇಶ ಮಾಡಿ ಸತಿಹೋದಂತೆ ಸಮಾಧಿ ಪ್ರವೇಶ ಮಾಡಿಯೂ ಸತಿಹೋಗಿದ್ದಾರೆ. ಸತಿಯರ ಸಮಾಧಿ ಪ್ರವೇಶ ಜೈನ ಸಮಾಧಿ ಮರಣದಿಂದ ಭಿನ್ನವೆಂಬುದನ್ನು ಮರೆಯಬಾರದು. ಇವುಗಳಲ್ಲಿ ಜೈನರದು, ಧಾರ್ಮಿಕ ಮರಣವಾದರೆ ಇದು ಲೌಕಿಕ ಮರಣವಾಗಿದೆ. ಈ ಮರಣಗಳ ಹಿನ್ನೆಲೆಯಲ್ಲಿರುವ ಕಾರಣ ಮತ್ತು ಉದ್ದೇಶಗಳು ಹಾಗೂ ಇವುಗಳನ್ನು ಆಚರಿಸುವ ವಿಧಾನಗಳು ಬೇರೆ ಬೇರೆಯಾಗಿ ಇವೆ. ಮೃತನ ಪತ್ನಿ ಗಂಡನ ಶವದೊಂದಿಗೋ, ಶವವಿಲ್ಲದೆಯೋ ಮಣ್ಣಲ್ಲಿ ಹೂಳಿಸಿಕೊಂಡು ಮಹಾಸತಿಯಾಗುವ ವಿಧಾನವೇ 'ಸಮಾಧಿ ಪ್ರವೇಶ' ಎಂಬುದಾಗಿದೆ.

ಕ್ರಿ.ಶ. 1404, ಮಾರ್ಚ 16 ರಂದು ರವಿವಾರ ' ಮಲಿದೇವಿ ' ಎಂಬವಳು ಸಮಾಧಿ ಪ್ರವೇಶ ' ಮಾಡಿ ಸತಿಹೋದಳೆಂದು ಹೆಡಿಯಾಲ ಶಾಸನ ತಿಳಿಸುತ್ತದೆ. ಈಗಿನ ಮಟ್ಟಿಗೆ ಕರ್ನಾಟಕದಲ್ಲಿ ಸತಿಯರ ಸಮಾಧಿ ಪ್ರವೇಶವನ್ನು ತಿಳಿಸುವ ಮೊಟ್ಟಮೊದಲ ಶಾಸನ ಇದಾಗಿದೆ, ಎಂದೇ ಹೇಳಬೇಕು. ಈ ಶಾಸನ ಪಾಠ ಹೀಗಿದೆ: '' ಹೆ.ಯಾಲದ ರಾಮೆ.. ಯಕರು ಲಿಂಗದೊ.. ದಲ್ಲಿ ಆತನ ಅರ್ಧಾಂಗಿ ಮಲಿದೇವಿ ನಡಸಮಾಧಿಯನು ಹೊಕ್ಕು ದೇವರೋ.. ಗಾ.. ಗಿ ಅವರ ಮಹಾಜಿತಿಯು ಪ್ರತುಮೆ ( ಪ್ರ ) ಥಿಷ್ಟೆ ಮಾಡಿಸಿದ ಮಗ ಮಾದೇನಾಯು ( 0) ಕನು [117] ಇಲ್ಲಿ ಮಲಿದೇವಿಯು ಗಂಡ ಲಿಂಗ ದೊಳಗಾದಲ್ಲಿ ಅವಳು' ಸಮಾಧಿ 'ಯನ್ನು ಹೊಕ್ಕಳೆಂದು ಶಾಸನ ಸೂಚಿಸುತ್ತದೆ. ಶಾಸನ ದಲ್ಲಿಯ ' ನಡಸಮಾಧಿ ' ಎಂಬ ಮಾತು ವಿಶೇಷ ಕುತೂಹಲಕೆರಳಿಸುತ್ತದೆ, ಬಹುಶ: ಗಂಡನ ಸಮಾಧಿಯ ನಡುವೆ ಹೊಕ್ಕು ಎಂದು ಇದು ಅರ್ಥಕೊಡುತ್ತಿರಬೇಕು. ಅಂದರೆ ಮೃತನನ್ನು ಹೂಳುವ ಸಮಾಧಿಯಲ್ಲಿಯೇ ಇವಳು ಸಮಾಧಿಗೊಂಡಳು ಎಂದು ಹೇಳಬಹುದಾಗಿದೆ. ಈ ಕಲ್ಲು ಮಾಸ್ತಿಶಿಲ್ಪವುಳ್ಳದಾಗಿದೆ. ಸು.6 ಫೂಟು ಎತ್ತರ ಕಲ್ಲಿನಲ್ಲಿ ಬಲಗೈ ಎತ್ತಿಮೈತುಂಬ ವಸ್ತ್ರ — ಒಡವೆಗಳಿಂದ ಸಿಂಗರಿಸಿಕೊಂಡು ನಗುಮುಖದಿಂದ ನಿಂತ ' ಮಲಿದೇವಿ ' ಇದೆ. ಅವಳ ಎಡಕ್ಕೆ ಭುಜದ ಮೇಲೆ ಪತಿ–ಸತಿ ಕುಳಿತ ಸುಂದರ ಕೆತ್ತನೆ ಇದೆ. ಪತಿಯು ಸತಿಯ ಹೆಗಲ ಮೇಲೆ ತನ್ನ ಎಡಗೈ ಹಾಕಿ ಕುಳಿತಿದ್ದಾನೆ. ಬಹುಶ: ಸಮಾಧಿಯಲ್ಲಿ ಇದೇ ರೀತಿ ಮೃತ ಗಂಡನನ್ನು ಕುಳ್ಳಿರಿಸಿಕೊಂಡು ' ಮಲಿದೇವಿ 'ಮರಣಗೊಂಡಿರಬೇಕು. ಈ ಕಲ್ಲಿನ ಮೇಲ್ಭಾಗ ದಲ್ಲಿ ಲಿಂಗವನ್ನು ಕಂಡಿರಿಸಲಾಗಿದೆ. ಶಾಸನಪಾಠದಲ್ಲಿಯೂ '' ಲಿಂಗದೊ.. ದಲ್ಲಿ '' ಎಂದು ಉಲ್ಲೇಖಗೊಂಡಿರುವುದನ್ನು ಸ್ಮರಿಸಬಹುದು. ಈ ವಿವರಣೆಗಳಿಂದ, ಮಲಿದೇವಿಯು ಕುಟುಂಬ ಶೈವ ಸಮಾಜಕ್ಕೆ ಸೇರಿದ್ದಾಗಿದ್ದು ಗಂಡ ಸಹಜ ಮರಣಹೊಂದಲಾಗಿ ಅವಳು ಸತಿಹೋಗಲು ಬಯಸಿ ತನ್ನಸಮಾಜದ ಮಾರ್ಗಕ್ಕನುಗುಣವಾಗಿ ಹೂಳಿಸಿಕೊಂಡುಸತ್ತಳೆಂದು ಹೇಳಬಹುದಾಗಿದೆ.

' ಕುಂಬತಿಗ್ರಾಮ ' ಶಾಸನವೊಂದು ' ಮಸಣಗೌಂಡ ಸ್ವರ್ಗಸ್ಥನಾದ ಆತನ ಮದವಳಿಗೆ ಸಮಾಧಿಯಲಿ ಕುಳಿ....... '' ಎಂದು ವಿವರಿಸುತ್ತದೆ.[118] ಇಲ್ಲಿ ಮಸಣಗೌಡನ ಪತ್ನಿ ಸಮಾಧಿಯಲ್ಲಿ ಕುಳಿತು ಸತಿಹೋದ ಸೂಚನೆ ಇದೆ. ಈ ಕಲ್ಲಿನಲ್ಲಿ ಕಂಬದಿಂದ ಹೊರಟ ಬಲಗೈ ಎತ್ತಿದ ಶಿಲ್ಪವನ್ನು ಬಿಡಿಸಲಾಗಿದೆ. ಕಂಬದ ಮೇಲ್ಭಾಗದಲ್ಲಿ ಪತಿ–ಸತಿ ಕೈಮುಗಿದು

ಕುಳಿತಿದ್ದಾರೆ, ಈ ಕಲ್ಲಿನ ಮೇಲೆ ಲಿಂಗ ಮತ್ತು ನಂದಿಯರ ಚಿತ್ರಗಳನ್ನು ಕಂಡರಿಸ ಲಾಗಿದೆ. ಈ ಕಲ್ಲಿನ ಪಾಠ ಮತ್ತು ಶಿಲ್ಪಗಳ ಹಿನ್ನೆಲೆಯಲ್ಲಿ 'ಮಸಣಗೌಡ' ನ ಕುಟುಂಬ ಶೈವದಾಗಿತ್ತೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

ಗುಂಜನೂರಿನ ಶಾಸನದಲ್ಲಿ, ಗಂಡ ಮರಣಹೊಂದಲಾಗಿ '' ಅವರ ಮದವಳಿಗೆ ಚಿಕ್ಕಗುಡಿ ಅವರ ಕೂಡೆ ಸಮಾಧಿಯನು ಪೊಕ್ಕು ಸ್ವರ್ಗಸ್ಥರಾದರು '' ಎಂದು ಹೇಳ ಲಾಗಿದೆ.[119] ಇಲ್ಲಿ 'ಚಿಕ್ಕಗುಡಿ' ಎಂಬವಳು 'ಅವರ ಕೂಡೆ' ಅಂದರೆ ಗಂಡನೊಡನೆ — ಅವನ ಮೃತಶರೀರದೊಡನೆ ಮಣ್ಣು ಮುಚ್ಚಿಸಿಕೊಂಡು ಸತಿಹೋದದ್ದು ಸ್ಪಷ್ಟವಿದೆ. ಗುಂಜನೂರಿ ನಲ್ಲಿ 'ಚಿಕ್ಕಗುಡಿ'ಯ ಕುಟುಂಬ ಮುಖ್ಯವಾಗಿತ್ತೆಂಬ ವಿವರಣೆಗಳು ಶಾಸನದಲ್ಲಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಕ್ರಿ.ಶ. 1457 ರ ಶಾಸನವೊಂದರಲ್ಲಿ '' ಗುಮಾರದಲು ಕುಪ್ಪೆಯ ಬಮ್ಮಪ್ಪಗೌಡರ ಮಗ ಸಿರಿಯಗೌಡರು ದೇವರಪಾದವನು ಕೂಡಿದನು ಆತನಮದವಳಿಗೆ ತಂಗರಣಗೌಡಿ ಯೂ ಆಬೊಂಮಗೌಡನ ಕೂಡೆ ಸಮಾಧಿಯನು ಜಾಳಿದಳು '' ಎಂದು ಹೇಳಲಾಗಿದೆ.[120] ಸಿರಿಯಗೌಡ ಮರಣಗೊಂಡದ್ದನ್ನು ತಿಳಿಸಿ, ಆ ಮೇಲೆ ಅವನ ಪತ್ನಿ ತಂಗಣಗೌಡಿ ಅವನೊಡನೆಯೇ ಸಮಾಧಿ ಕುಳಿತಳೆಂದು ಹೇಳುವ ಇಲ್ಲಿಯ ಶಾಸನದ ಪಾಠ ತುಂಬ ವಿವರಣಾತ್ಮಕವಾಗಿಯೂ, ಸ್ಪಷ್ಟವಾಗಿಯೂ ಇರುವುದನ್ನು ಗುರುತಿಸಬಹುದಾಗಿದೆ.

ಬುಳ್ಳಿದೇವನು ಮರಣಹೊಂದಲಾಗಿ ಅವನ ಮೂವರು ಪತ್ನಿಯರು ಸಮಾಧಿ ಪ್ರವೇಶಿಸಿದ್ದನ್ನು ತಿಳಿಸುವ ಅಪರೂಪದ ಶಾಸನವೊಂದು ಬೆಳಗಾವಿಯಲ್ಲಿದೆ.[121] 'ಬುಳ್ಳಿದೇವನು'. 15ನೆಯ ಶತಮಾನದ ಪೂರ್ವಾರ್ಧದ ವಿಜಯನಗರ ಕಾಲದಲ್ಲಿ ನೈತಿಕವಾಗಿ, ಧಾರ್ಮಿಕವಾಗಿ ಉನ್ನತವಾದ ಒಬ್ಬ ವೀರಶೈವನಾಗಿದ್ದನೆಂಬುದು ಶಾಸನದ ವಿವರಣೆಯಿಂದ ತಿಳಿದು ಬರುತ್ತದೆ. ಅವನನ್ನು ಶಾಸನವು ಹೀಗೆ ಕೊಂಡಾಡುತ್ತದೆ: '' ಬುಳ್ಳಿದೇವಂಗಳ ಸುಚಾರಿತ್ರವೆಂತೆಂಡೆ ಪರಮಶುದ್ಧ.. ಪಾವನಚರಿತ್ರವಿಸಾಲಚಿತ್ರಂ ಶಾಸ್ತ್ರದೊಬ್ಬಂ ಗೌತಮಾಂನ್ವಯಾಂಬುಧಿಸುಧಾಕರಂ ಶ್ರೀ.. ಕಲ್ಪಭೂರುಹಂ......... ನರಾತಿದ... ಪರಾಜಿಪಂಧರೆಯೊಳಾ ಬೊಂಮಿದೇವನ ಸುಪುತ್ರನ ಬುಳ್ಳದೇವಂಕ್ರಿತದಾನ..... ಸಿಗಮೋಕ್ತಿಯ ವಿಚಾರದೊಳುಂಮಿಗಿ... ಪ್ರಭಾವಧಾರುಣಿಯೊಳುತನ್ನಂ...... ಕೊಟ್ಟ... ನಂಬುಧಾರೆಯನೆರೆದು... ಭಕ್ತಿ... ನೆ ತಂನೊಳಾವಗಂ ವರಗುಣ ಬುಳ್ಳಿದೇವನ ಚರಿತ್ರತೆಗಾರ್ಸರಿಭೂತಳಾಗ್ರದೊಳು11

ಕರಚರಣದ್ವಯಕ್ಕೆ · ಜಂಗಮರೂಪಿನಿಂದ ಧಾರಿಣಿಯೊಳು ಪೂಜೆಗೊಂಬನತಿಭಕ್ತರ ರತಾವದೊಳು ನಿರಂತರಂ ಪರಮಶಿವಾಗಮಿ ಕರಿಗೆ ತಾವಧಿಕಾರಿ ಎನಿಪನಾವಗಂ ಸ್ಥಿರತೆಯೊಳು ಬುಳ್ಳಿದೇವನ ಗುಣಂಗಳ ಬಣ್ಣಿಪರಾರ್ಧರಿತ್ರಿಯೊಳು 11 '' ಇಂಥಜಂಗಮರೂಪಿಯ ಮರಣವನ್ನು ಶಾಸನಕವಿ ಹೀಗೆ ತಿಳಿಸುತ್ತಾನೆ : ''........ ಅದಿಯಮಾರದೊಳ್ಬ....... ಸ್ಥಿರವಲ್ಲೆನಗೆಂದು.... ಬುಳ್ಳಿದೇವನುಸುರಲೋಕಕೈದಿದ ''. ಆಗ ಅವನ '' ಮೂವರು ಕಾಂತೆಯರುಉನ್ನತದಿಂದಲೇ ಸಮಾಧಿಗೊದಲಂ '' ಕೊಡುತ್ತಾರೆ· ಅವರ ಹೆಸರನ್ನು '' ಜೆನಬುಳ್ಳಾಯ ಬಾಚಲೆ ಉನತಮಧುಕಾಯ '' ಎಂದು ಶಾಸನಕವಿ ತಿಳಿಸುತ್ತಾನೆ· ಈ ಮೂವರು ಸಮಾಧಿಗೊಡಲನ್ನು ಕೊಟ್ಟಿದುದು '' ತಂಮೊಳತಿದಯದಿಂದಂ '' ಎಂದು ಶಾಸನದ ಕೊನೆಯಲ್ಲಿ ತಿಳಿಸಲಾಗಿರುವುದನ್ನು ಲಕ್ಷಿಸಬೇಕು· ಅವರು ಪ್ರೀತಿಪೂರ್ವಕವಾಗಿ ಅತಿಸಂತೋಷದಿಂದ ಸತಿಹೋದದ್ದನ್ನು '' ಅತಿದಯದಿಂದ '' ಎಂಬ ಪದದಲ್ಲಿ ಅಡಕಗೊಳಿಸಲಾಗಿದೆ· '' ಉನ್ನತದಿಂದಲೇ ಸಮಾಧಿಗೊಡಲಂಕೊಟ್ಟ '' ಎಂಬಲ್ಲಿಯ '' ಉನ್ನತದಿಂದಲೇ '' ಎಂಬುದು ಅದನ್ನೇ ಧ್ವನಿಸುತ್ತದೆ· ಅಲ್ಲದೆ, ' ಸಮಾಧಿಗೊಡಲಂಕೊಟ್ಟ ' ಎಂಬ ಮಾತು ಮೂವರು ಪತ್ನಿಯರು ಗಂಡನ ಸಮಾಧಿಯೊಂದಿಗೆಯೇ, ತಮ್ಮ ಶರೀರದಳನ್ನು ಅರ್ಪಿಸಿದರು· ಎಂದು ಸ್ಪಷ್ಟವಾಗಿ ತಿಳಿಸುವುದಾಗಿದೆ· ಗಂಡನ ಶವದೊಂದಿಗೆ ಮೂರು ಜನ ಪತ್ನಿಯರು ಒಂದೇ ಸಮಾಧಿಯಲ್ಲಿ ಕೂಡಿ ಸತಿಹೋದ ಅಪೂರ್ವ ಉಲ್ಲೇಖ ಇದಾಗಿದೆ· ಇದೇ ಸಂದರ್ಭದಲ್ಲಿ ' ಸಿರುಮಣನಾಯಕನ ಸಾಂಗತ್ಯ 'ದಲ್ಲಿಯ ವೀರಯ್ಯನ ಮರಣ ಪ್ರಸಂಗದಲ್ಲಿ ಅವನ ಸತಿಯರು ಅವನೊಡನೆ ಸಮಾಧಿಗೊಂಡುದನ್ನು ನೆನಪಿಸಿಕೊಳ್ಳಬಹುದಾಗಿದೆ· ಅಲ್ಲಿ ಪದ್ಯವೊಂದು ಹೀಗೆ ಬರುತ್ತದೆ· 122

ಬಾಗಿನವನು ಕೊಟ್ಟು ಬಂದರು ಸತಿಯರು
ಬೇಗ ಸಮಾಧಿಗೆ ಕುಳಿತು 1
ಭೋಗಿಭೂಷಣ ಕೈಲಾಸಕೆ ನಡೆಯೆನು
ತಾಗ ಸಮಾಧಿ (ಯು) ಮುಗಿಯೇ 1

ಇಲ್ಲಿ ವೀರಯ್ಯನ ಪತ್ನಿಯರು ಸಮಾಧಿಯಲ್ಲಿಕುಳಿತು ಸತಿಹೋಗುವುದನ್ನು ಕಾಣುತ್ತೇವೆ· ' ಸಮಾಧಿಯು ಮುಗಿಯೆ ' ಎನ್ನುವಲ್ಲಿ ಅಗೆದ ನೆಲದಲ್ಲಿ ( ಪತಿಯೊಂದಿಗೆ )

ಸತಿಯರನ್ನು ಕುಳ್ಳಿರಿಸಿ ಮಣ್ಣುಮುಚ್ಚಿದರು ಎಂಬುದಾಗಿ ಅರ್ಥಗೋಚರಿಸುತ್ತದೆ.

ಕ್ರಿ. ಶ. ಸು. 1509 ರ ಹರೂರ ಶಾಸನವೊಂದು ' ಬೊಮ್ಮಗೌಡ ಸ್ವರ್ಗಸ್ಥನಾದಲ್ಲಿ ಆತನಮಡದಳಿಗೆ ಬೊಂಮಿಗೌಡಿಸಮದಿ ಕುಳಿತು ಸ್ವರ್ಗಕೆ ಸಂದಳು '' ಎಂದು ಹೇಳುತ್ತದೆ [123] ಈ ಶಾಸನ ವಾಕ್ಯವನ್ನು ಉದ್ಧರಿಸಿ ಡಾ|| ಎಂ.ಎಂ.ಕಲಬುರ್ಗಿ ಅವರು ಈ '' ವಾಕ್ಯಕ್ಕೆ ಜೀವವಿರುವಾಗಲೇ ಮಣ್ಣನ್ನು ಮುಚ್ಚಿಸಿಕೊಂಡಳು ಎಂದು ಅರ್ಥಹಚ್ಚದೆ ಜೈನ ಸಮಾಧಿ ಮರಣದಿಂದ ತೀರಿಕೊಂಡಳು ಎಂದು ಅರ್ಥ ಹೇಳುವುದು ಹೆಚ್ಚು ಯೋಗ್ಯ '' ಎಂದು ಬರೆಯುತ್ತಾರೆ. [124] ಡಾ|| ಆರ್ ಶೇಷಶಾಸ್ತ್ರಿ ಅವರು ಡಾ|| ಕಲಬುರ್ಗಿ ಅವರ ಅಭಿಪ್ರಾಯವನ್ನು ತಿಳಿಸಿ, '' ಪ್ರಸ್ತುತ ಶಾಸನವು ಮಾಸ್ತಿಕಲ್ಲಿನ ಮೇಲೆ ಇರುವುದರಿಂದ ತನ್ನ ಗಂಡನೊಂದಿಗೆ ಬೊಮ್ಮಗವುಡಿಯಲ್ಲಿ ಮಣ್ಣಲ್ಲಿ ಹುದುಗಿಸಿಕೊಂಡಳು ಎಂಬುದರಲ್ಲಿ ಸಂಶಯ ವಿಲ್ಲ, ಹಾಗೆನಾದರೂ ಆಕೆ ಜೈನ ಧರ್ಮದ ಸಮಾಧಿ ಕುಳಿತು ಸತ್ತಿದ್ದರೆ ಮಾಸ್ತಿಕಲ್ಲಿನ ಬದಲು ಆಕೆಯ ಸ್ಮಾರಕ ಶಿಲೆ ನಿಷಿಧಿಯಾಗುತ್ತಿತ್ತು '' ಎಂದು ಸ್ಪಷ್ಟಗೊಳಿಸುತ್ತಾರೆ. [125] ಈ ಶಾಸನದಲ್ಲಿಯ '' ಸಮದಿ ಕುಳಿತು '' ಎಂಬುದಕ್ಕೆ ಜೀವಂತ ಮರಣಹೊಂದಲಿಕ್ಕೆ ಅಗೆದ ನೆಲ ದಲ್ಲಿ ಕುಳಿತುಕೊಂಡು ಎಂದೇ ಅರ್ಥಮಾಡಬೇಕಾಗುತ್ತದೆ. ಈ ಕಲ್ಲಿನಲ್ಲಿ ಎಡಕ್ಕೆ ಕಂಬದ ರಚನೆ ಇದ್ದು ಅದರಿಂದ ಬಲಗೈಯನ್ನು ಎತ್ತಿದಂತೆ ಬಿಡಿಸಿತೋರಿಸಲಾಗಿದೆ. ಹೆಬ್ಬೆರಳು ಮತ್ತು ತೋರಬೆರಳಿನಿಂದ ಲಿಂಬೆಹಣ್ಣನ್ನು ಹಿಡಿದಂತೆ ತೋರಿಸಲಾಗಿದೆ. ತೋಳಿನ ಮೇಲಾಬ್ಬಗದಲ್ಲಿ ಪತಿ—ಸತಿಯರು ಕೈಮುಗಿದುಕುಳಿತುಕೊಂಡಿದ್ದಾರೆ. ಮೇಲಾಬ್ಬಗದಲ್ಲಿ ಲಿಂಗ — ನಂದಿಯರ ಚಿತ್ರಗಳನ್ನು ಕಂಡರಿಸಲಾಗಿದೆ. ಈ ಕಲ್ಲಿನ ಶಿಲ್ಪ ಮಾಸ್ತಿ ಶಿಲ್ಪ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆ ಕಾರಣದಿಂದ ' ಬೊಂಮಿಗೌಡಿ 'ಯ ಮರಣ ಜೈನಸಮಾಧಿ ಮರಣವಲ್ಲ, ಹಿಂದೂ ಸತಿಯ ಸಮಾಧಿ ಪ್ರವೇಶ ಮರಣವಾಗಿದೆ ಎಂದು ಅಭಿಪ್ರಾಯ ಪಡಬಹುದಾಗಿದೆ.

ಡಾ|| ಎಂ.ಎಂ.ಕಲಬುರ್ಗಿ ಅವರು ' ಸಸ್ತಾಪುರ 'ದಲ್ಲಿರುವ ಮಾಸ್ತಿಕಲ್ಲನ್ನು ಶೋಧಿಸಿ, ಅದನ್ನು ತಮ್ಮ ' ಸಮಾಧಿ—ಬಲಿದಾನ—ವೀರಮರಣ ಸ್ಮಾರಕಗಳು ' ಎಂಬ ತಮ್ಮ ಗ್ರಂಥದಲ್ಲಿ ಪ್ರಕಟಿಸಿದ್ದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ( ಚಿತ್ರ — 62) ಆ ಕಲ್ಲಿನ ಶಿಲ್ಪವನ್ನು ಕುರಿತು ಡಾ|| ಕಲಬುರ್ಗಿ ಅವರು ''....... ಮಾಸ್ತಿಶಿಲೆಯಲ್ಲಿ ಕಂಬದಿಂದ ಒಂದು ಕೈಹೊರಟಿದ್ದು ಅದರ ಮೇಲಾಬ್ಬಗದಲ್ಲಿ ಸ್ವರ್ಗದಲ್ಲಿ ಕುಳಿತ ದಂಪತಿಗಳ ಚಿತ್ರ, ಕೆಳ

ಭಾಗದಲ್ಲಿ ಚಿತೆಯ ಕುಂಡದಲ್ಲಿ ಮಲಗಿರುವ ದಂಪತಿಗಳ ಚಿತ್ರವಿದೆ" ಎಂದು ಹೇಳಿದ್ದಾರೆ[126] ಇದನ್ನು ಒಪ್ಪದ ಡಾ॥ ಆರ್. ಶೇಷಶಾಸ್ತ್ರಿ ಅವರು "ಶಿಲ್ಪಿಯು 'ಸಮಾಧಿ' ಎಂಬುದನ್ನು ಸೂಚಿಸಲು ಸುತ್ತಲೂ ಮಣ್ಣಿರುವಂತೆ ವಿವರಗಳನ್ನು ಬಿಡಿಸಿದ್ದಾನೆ. ಅವನು ಚಿತೆಯನ್ನು ಬಿಡಿಸಬೇಕೆಂದಿದ್ದರೆ ಖಂಡಿತವಾಗಿ ವೇದಿಕೆಯನ್ನು, ಅಗ್ನಿಜ್ವಾಲೆಗಳನ್ನು ಬಿಡಿಸುತ್ತಿದ್ದ" ಎಂದು ಹೇಳಿದ್ದಾರೆ.[127] ಡಾ॥ ಶೇಷಶಾಸ್ತ್ರಿ ಅವರ ಅಭಿಪ್ರಾಯದಂತೆ, ಸಸ್ತಾಪುರ ಮಾಸ್ತಿಕಲ್ಲಿನ ಶಿಲ್ಪದಲ್ಲಿ ಚಿತೆಯ ಚಿತ್ರವಿರದೇ ಸಮಾಧಿ ಚಿತ್ರವಿದೆ ಎಂದೇ ಹೇಳಬೇಕು. ಮೃತಗಂಡನೊಡನೆ ಹೆಂಡತಿ ಕೊಂಡದಲ್ಲಿ' ಮಲಗಿ ಕಿಚ್ಚು ಹಚ್ಚಿಸಿಕೊಂಡ ಉದಾಹರಣೆಗಳು ಇಲ್ಲದಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಕೊಂಡದ ಚಿತೆಯಲ್ಲಿ ಸತಿಯಾದವರೆಲ್ಲ ಕೊಂಡದಗ್ನಿಯಲ್ಲಿ ಹಾರಿಕೊಂಡೇ ಪ್ರವೇಶಿಸಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲೂಕಿನ ಕವಲೆದುರ್ಗದ ಕೆರೆಯ ಸಮೀಪದಲ್ಲಿ ಹಲವಾರು ಸಮಾಧಿಗಳಿವೆ. ಈ ಸಮಾಧಿಗಳ ಮುಂದೆ ವೀರರ ಜೊತೆಗೆ ಮಹಾಸತಿಯರ ಶಿಲ್ಪಗಳುಳ್ಳ ಒಟ್ಟು ಹದಿಮೂರು ಕಲ್ಲುಗಳಿವೆ. "ಇವು ಕೆಳದಿಯ ನಾಯಕರು, ವೀರರು, ಹೋರಾಟದಲ್ಲಿಸತ್ತಾಗ ಅವರನ್ನು ಯುದ್ಧಭೂಮಿಯಿಂದ ತಂದು ಇಲ್ಲಿ ಸಮಾಧಿಮಾಡಲಾಯಿತಂತೆ (ಇದು ಅಲ್ಲಿಯ ಜನರ ಅಭಿಪ್ರಾಯ). ವೀರಗಲ್ಲಿನ ಶಿಲ್ಪದಲ್ಲಿ ಬಿಡಿಸಲಾಗಿರುವ ಮಹಿಳೆಯರು ಯುದ್ಧದಲ್ಲಿ ಮಡಿದ ತಮ್ಮ ಗಂಡಂದಿರೊಡನೆ ಸಮಾಧಿಯಲ್ಲಿ ಹುಗಿಸಿಕೊಳ್ಳುವುದರ ಮೂಲಕ ಸಹಗಮನ ಮಾಡಿರಬೇಕು.[128] "ಆದರೆ ಕೆರೆಯ ಅಂಚಿನಲ್ಲಿರುವ ಯಾವ ಕಲ್ಲಿನ ಶಿಲ್ಪದಲ್ಲಿಯೂ ಸತಿ ಸಮಾಧಿಗೊಂಡದ್ದನ್ನು ಚಿತ್ರಿಸಿಲ್ಲವೆಂಬುದು ಆಶ್ಚರ್ಯವನ್ನುಂಟುಮಾಡುತ್ತದೆ. "ಇವುಗಳ ಸಮರ್ಪಕವಾದ ಉತ್ಖನನ ಕಾರ್ಯವು ನಡೆದಾಗ ಹಲವಾರು ಹೊಸ ವಿಷಯಗಳು ಖಂಡಿತಾ ಹೊರಬರುತ್ತವೆ.[129]

ವಿಜಯನಗರ ಕಾಲದ ಸತಿಪದ್ಧತಿಯನ್ನು ಕುರಿತು ಸೀಜರ ಫ್ರೆಡರಿಕ್ ವಿವರಿಸುತ್ತ "ಸತ್ತ ಗಂಡನ ಶವವನ್ನು ಚಕ್ಕಲುಬೊಕ್ಕಲಾಗಿ ಕುಳ್ಳರಿಸಿರುತ್ತಾರೆ. ಅವನ ಹೆಂಡತಿ ಬಂದು ಅವನ ಕತ್ತಿಗೆಯನ್ನು ತಬ್ಬಿಕೊಂಡು ಕುಳಿತುಕೊಳ್ಳುತ್ತಾಳೆ. ಗಾರೆಯವರು ಸುತ್ತಲೂ ಗೋಡೆ ಕಟ್ಟುತ್ತಾರೆ. ಇನ್ನೇನು ಗೋಡೆಯನ್ನು ಮುಚ್ಚಬೇಕು, ಅಷ್ಟರಲ್ಲಿ ಗಂಡಸೊಬ್ಬನು

ಬಂದು ಆಕೆಯು ಕುತ್ತಿಗೆಯನ್ನು ಹಿಸುಕಿ ಸಾಯಿಸಿಬಿಡುತ್ತಾನೆ. ಆಮೇಲೆ ಗೋಡೆಯನ್ನು ಮುಚ್ಚಿ ಇಬ್ಬರನ್ನು ಸಮಾಧಿ ಮಾಡುತ್ತಾರೆ'' ಎಂದು ಬರೆಯುತ್ತಾನೆ.[130] ಇಲ್ಲಿ ನೆಲದ ಮೇಲೆ ಕುಳಿತ ದಂಪತಿಗಳನ್ನು ( ಮೃತಪತಿಯೊಂದಿಗೆ ಪತ್ನಿ) ಸುತ್ತಲೂ ಗೋಡೆಕಟ್ಟಿ ಸಮಾಧಿಗೊಳಿಸುವ ವಿಧಾನವೊಂದನ್ನು ವಿದೇಶಿಪ್ರವಾಸಿಸೂಚಿಸುವಂತಿದೆ. ವಿಜಯನಗರದ ತೆಲುಗರಲ್ಲಿ 'ಗಂಡ ಸತ್ತಾಗ ಹೆಂಡತಿಯನ್ನು ಜೀವ ಸಹಿತ ಗಂಡನೊಡನೆ ಹೂಳುತ್ತಾರೆ' ಎಂದು ಹೇಳಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.[131] ಇದೇ ರೀತಿ, ದುಆರ್ತೆ ಬಾರ್ಬೋಸಾ ''ಗಂಡ ಸತ್ತಾಗ ಹೆಂಡತಿ ಗಂಡನ ಶವದೊಡನೆ ಸಮಾಧಿಯಾಗುತ್ತಾಳೆ. ಒಂದಾಳುಮಟ್ಟಕ್ಕಿಂತ ಹೆಚ್ಚು ಆಳವಾದ ಗುಂಡಿಯನ್ನು ತೋಡಿ, ಅದರೊಳಗೆ ಆಕೆಯನ್ನು ನಿಲ್ಲಿಸಿ, ಸುತ್ತಲೂ ಮಣ್ಣನಾಕಿ, ತುಳಿದು ದುಮ್ಮಸ್ಸು ಮಾಡಿ, ತಲೆಯ ಮೇಲೆ ದೊಡ್ಡ ಕಲ್ಲು ಹೇರಿ ಮಣ್ಣನ್ನು ಎಳೆಯುತ್ತಾರೆ. ಆಕೆ ನಿಧಾನವಾಗಿ ಸಾಯುತ್ತಾಳೆ''. ಎಂದು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[132] ಈತನ ವಿವರಣೆಯಲ್ಲಿ ಪತ್ನಿ ನೆಲದಲ್ಲಿ ಅಗೆದು ಮಾಡಿದ ಗುಂಡಿಯಲ್ಲಿ ಗಂಡನ ಶವದೊಡನೆ ನಿಂತು ಮಣ್ಣುಮುಚ್ಚಿಸಿಕೊಂಡ ಸತಿಹೋಗುವ ವಿಶೇಷ ವಿಧಾನವೊಂದುಗೋಚರಿಸುತ್ತದೆ. ಇಂಥ ವಿಷಯವನ್ನು ತಿಳಿಸುವ ಮಾಸ್ತಿಕಲ್ಲಿನ ಶಿಲ್ಪವೊಂದು ತೀರ್ಥಹಳ್ಳಿಯ ಕವಲೆದುರ್ಗದಲ್ಲಿರುವುದನ್ನು ಗಮನಿಸಬಹುದಾಗಿದೆ. (ಚಿತ್ರ –63 )

ಸತಿಯರ ಚಿತಾಪ್ರವೇಶಗಳೊಂದಿಗೆ ಹೋಲಿಸಿದಾಗ ಸಮಾಧಿಪ್ರವೇಶಗಳು ಅತ್ಯಲ್ಪವೆಂದೇ ಹೇಳಬೇಕು. ಇವುಗಳ ಹಿನ್ನೆಲೆಯಲ್ಲಿರುವ ಅನುಕೂಲಮತ್ತು ಅನಾನುಕೂಲಗಳೇ ಇದಕ್ಕೆ ಮುಖ್ಯ ಕಾರಣಗಳಾಗಿರಬೇಕು. ಚಿತಾಪ್ರವೇಶದಲ್ಲಿ ತೀವ್ರವಾಗಿ ಸತಿಯನ್ನು ಮರಣಕ್ಕೆಡೆ ಮಾಡುವ ಸೌಲಭ್ಯವಿದೆ, ಸಮಾಧಿ ಪ್ರವೇಶದಲ್ಲಿ ಇದು ಸಾಧ್ಯವಿಲ್ಲ. ಅದೇ ರೀತಿ ಅಗ್ನಿಯಲ್ಲಿ ಕ್ಷಣಾರ್ಧದಲ್ಲಿ ಹಾರಿ ಪ್ರವೇಶಿಸಬಹುದಾಗಿದೆ. ಧರ್ಮಾಮೃತದಲ್ಲಿ ಬೇರೆ ಸಂದರ್ಭವೊಂದರಲ್ಲಿ ಬಂದ ''ಕಿಚ್ಚನೊಳ್ತೊಳಗದೊರ್ಮೆಯೆ ಪಾಯಲಪ್ಪುದು'' ಎಂಬ ಮಾತನ್ನು ಇಲ್ಲಿ ಸ್ಮರಿಸಬಹುದು.[133] ಬೆಂಕಿಯಲ್ಲಿ ತಟ್ಟನೆ ನುಗ್ಗಬಹುದೆಂಬ ಮಾತು ಇಲ್ಲಿದೆ. ಇಲ್ಲಿಯ 'ಒರ್ಮೆಯೆ' ಎಂಬ ಪದ ಬಹುಮುಖ್ಯವಾದುದು. ಸಮಾಧಿ ಪ್ರವೇಶವು ಸಾಮಾನ್ಯವಾಗಿ ನಿಧಾನವಾಗಿ ನಡೆಯುವಂಥದ್ದು. ಅಥವಾ ಚಿತಾಪ್ರವೇಶದಷ್ಟು ತೀವ್ರತೆ ಇದರಲ್ಲಿಲ್ಲವೆಂದಾದರೂ ಹೇಳಬಹುದು. ಅಲ್ಲದೇ ಹಿಂದೂಗಳಲ್ಲಿ ಅಗ್ನಿಯ ಕುರಿತಾಗಿ ವಿಶೇಷ ಭಾವನೆಯಿರುವುದೂ ಕೂಡ

ಸತಿಯು ಚಿತಾಪ್ರವೇಶಮಾರ್ಗ ಅನುಸರಿಸಲು ಕಾರಣವಾಗಿರಬೇಕು. ಈ ಅಗ್ನಿಯನ್ನು ದೇವಮಾನವರ ನಡುವಿನ ದೂತನೆಂದು ಪರಿಗಣಿಸಿದ್ದರು ಶವದಹನ ಕ್ರಿಯೆಯನ್ನು ಒಂದು ಹೋಮವೆಂದು ಪರಿಗಣಿಸಿದ್ದರಿಂದ ಅದು ಎಲ್ಲೆಡೆಯೂ ರೂಢಿಗೆ ಬಂದಿತು. ಆದರೆ ಕೇವಲ ವಿಶೇಷವಾದ ಸನ್ನಿವೇಶದಲ್ಲಿ ಮಾತ್ರ ಹೂಳುವುದಕ್ಕೆ ಇಲ್ಲವೆ ಜಲಸಮಾಧಿ ಮಾಡಲು ಅವಕಾಶವಿದ್ದಿತು. ಬಾಳೆಲ್ಲವೂ ಒಂದು ಹೋಮವಿದ್ದಂತೆ ಎಂದು ಪರಿಗಣಿಸಿದ ಹಿಂದುಗಳು ಸಾವನ್ನು ಒಂದು ಮಹಾಹೋಮವೆಂದೇ ಅರಿತು ಆಚರಿಸಿದರು. ಈ ಹಿನ್ನೆಲೆ ಇದ್ದ ಹಿಂದುಗಳು ಸತಿಯ ಸಮಾಧಿಮರಣಕ್ಕಿಂತಲೂ ಚಿತಾಪ್ರವೇಶ ಮರಣವನ್ನು ಹೆಚ್ಚು ಇಚ್ಛಿಸಿದಂತಿದೆ.

3. ಇತರ ವಿಧಾನಗಳು:

ಮೃತನ ಪತ್ನಿ ಚಿತಾಪ್ರವೇಶ ಇಲ್ಲವೆ ಸಮಾಧಿಪ್ರವೇಶ ಮಾಡಿ ಸತಿಹೋಗುತ್ತಿದ್ದುದು ಸಾಮಾನ್ಯವಾಗಿತ್ತೆನಿಸುತ್ತದೆ. ಈ ಮುಖ್ಯವಿಧಾನಗಳಿಂದಲ್ಲದೆ ಕೆಲವೊಮ್ಮೆ ಅವರು ಸಾನು ಪ್ರದೇಶದಿಂದ ಹಾರಿಕೊಂಡೋ, ಜೈನಸಮಾಧಿಯೊಂದಿಗೋ ಗಂಡನೊಡನೆ ಮೇಳವಾಳಿಗೊಂಡೋ ಜೋಹರದಿಂದಲೋ ( ಗಂಡನ ಮರಣ ಪೂರ್ವದಲ್ಲಿ ) ಸತಿಹೋಗುತ್ತಿದ್ದುದುಂಟು. ಈಗ ಈ ಬಗೆಯ ಸತಿಮರಣದ ವಿಧಾನಗಳನ್ನು ವಿವರಿಸಬಹುದಾಗಿದೆ.

ಕ್ರಿ.ಶ.ಸು. 1088—89 ರ ಹೆಬ್ಬಲಗುಪ್ಪೆ ಶಾಸನವು ನವಲಾಷ್ಠಿರಾಜನ ಪತ್ನಿಯು ಸಾನುಪ್ರದೇಶದಿಂದ ಹಾರಿಕೊಂಡು ಸತಿಹೋದುದನ್ನು ತಿಳಿಸುತ್ತದೆ.[135] ಆ ಶಾಸನ ಪಾಠ ಹೀಗಿದೆ: '' ನವಿಲೆನಾಡನಾಳ್ವಾಗ್ಗವುಣ್ಡ ಪೆರ್ಬಯಲ ಅಳಗಿಯ ಜೋಳಂ ಆತನ ಮಗಂ ನವಲಾಷ್ಠಿರಾಜ ಸತ್ತಡೆ ಆತನ ಎಳೆತಿ ತಪಱಿಯ ಕಮ್ಮಾರಿವ್ವೆಯುಂ ಸತ್ತಡವಗೆ ಬಿಟ್ಟ......'' ರೈಸ್ ಅವರು ಇದೇ ಎಫಿಗ್ರಾಫಿಯಾ ಕರ್ನಾಟಕದಲ್ಲಿ ಈ ಶಾಸನಕ್ಕೆ '' ನವಲಾಷ್ಠಿರಾಜನ ಚಿಕ್ಕಹೆಂಡತಿಯಾದ ತಪರೆಯ ಕಮ್ಮಾರಿಯು ಬೆಂಕಿಗೆ ಬಿದ್ದು ಸತ್ತಳು.'' ಎಂದು ಅನುವಾದ ಬರೆಯುತ್ತಾರೆ. ಡಾ|| ಎಂ.ಎಂ.ಕಲಬುರ್ಗಿ ಅವರು ನವಲಾಷ್ಠಿರಾಜನ ಪತ್ನಿ ಬೆಂಕಿಯಲ್ಲಿ ಹಾರಿ ಸತಿಹೋದದ್ದನ್ನು ಸಂದೇಹಪಟ್ಟು ಅವರು 1980 ರಲ್ಲಿ ಪ್ರಕಟಿಸಿದ ತಮ್ಮ ಸಮಾಧಿ — ಬಲಿದಾನ — ವೀರಮರಣಸ್ಮಾರಕಗಳು ಎಂಬ ಗ್ರಂಥದಲ್ಲಿ ಹೀಗೆ ಬರೆಯುತ್ತಾರೆ: '' ಚಿತಾಪ್ರವೇಶ ವಿಧಾನ ಸಾಮಾನ್ಯವಾಗಿ ರೂಢಿಯಲ್ಲಿದ್ದರೂ ಬೇರೆ ವಿಧಾನಗಳಿಂದಲೂ ಸತಿಯಾದ ಉಲ್ಲೇಖಗಳು ಸಿಗುತ್ತವೆ. ನವಲಾಷ್ಠಿರಾಜನು ಸಾಯಲು '' ಆತನ ಎಳೆತಿ ತಪಱಿಯ ಕಮ್ಮಾರಿವ್ವೆಯುಂ ''

ಅಂದರೆ ಬಹುಶಃ ಬೆಟ್ಟ(=ಕಮರಿ ) ದಿಂದ ಬಿದ್ದು ಸತ್ತಿರಬಹುದು". (ಪು. 39) ಇಲ್ಲಿ ಡಾ|| ಕಲಬುರ್ಗಿ ಅವರು ನವಲಾಕ್ಷಿರಾಜನ ಪತ್ನಿ ಬೆಟ್ಟದಿಂದ ಬಿದ್ದು ಮರಣಗೊಂಡಿರಬೇಕೆಂದೂ, ಇದು ಚಿತಾಪ್ರವೇಶ ವಿಧಾನದಿಂದ ಭಿನ್ನವಾದುದೆಂದೂ ತೋರಿಸಿಕೊಡಲು ಪ್ರಯತ್ನಿಸಿದ್ದಾರೆ. ಈ ವಿಷಯವನ್ನು ಕುರಿತು ಡಾ|| ಎಂ. ಚಿದಾನಂದಮೂರ್ತಿ ಅವರು ' ವಾಗರ್ಥ ' ಎಂಬ ತಮ್ಮ 1981 ರಲ್ಲಿನ ಪ್ರಕಟಣೆಯ ಗ್ರಂಥದಲ್ಲಿ ದೀರ್ಘವಾಗಿ ಚಿಂತಿಸಿದರು. ( ಪು 184–185) ಅಲ್ಲಿನ ಅವರ ನಿರೂಪಣೆ ಹೀಗಿದೆ :

"ಈ ಶಾಸನದ ಭಾಷೆಯಲ್ಲಿ ಕೆಲವು ಸಮಸ್ಯೆಗಳಿವೆಯಾದರೂ ಇದೊಂದು ಮಾಸ್ತಿಕಲ್ಲು ಎಂಬುದಂತೂ ಸ್ಪಷ್ಟ. ( ಶಾಸನ ಸಂಪುಟದಲ್ಲಿ ಸೂಚಿಸಿರುವಂತೆ ವೀರಗಲ್ಲು ಇರಬಹುದು ) ನವಿಲೆನಾಡಿನ ನಾಳ್ಗಾವುಂಡ ಪೆರ್ಮಯ್ಯನಅಳಗಿಯ ಜೋಳ್ಗನ ಮಗ ನವಲಾಷಿರಾಜ ( ಇವನ ಹೆಸರಲ್ಲಿ ನವಲೆನಾಡಿನ ಹೆಸರು ಅಡಕವಾಗಿರಬಹುದು ) ಸತ್ತಾಗ, ಆತನ ಎಳೆಯವಯಸ್ಸಿನ ಹೆಂಡತಿ(" ಎಳೆತಿ ")ಗಂಡನ ಜೊತೆ ಸಾಯುತ್ತಾಳೆ. ಆದರೆ ಮೇಲಿನ ಪಾಠವನ್ನು ಬಿಡಿಸಿಕೊಳ್ಳುವುದು ಅಷ್ಟು ಸುಲಭವಾಗಿಲ್ಲ. "ಆತನ ಎಳೆತಿ ತಪರ್ಯ ಕಮ್ಮರಿವುಯ್ದು ಸತ್ತಳ್" — ಇಲ್ಲಿ "ಕಮ್ಮರಿವುಯ್ದು" ಎಂಬುದನ್ನು "ಕಮ್ಮರಿ — ಪಾಯ್ದು" ಎಂದು ಊಹೆಯಿಂದ ತಿದ್ದಿದರೆ ನವಲಾಷಿರಾಜನ ಹೆಂಡತಿ ತಪರ್ಯ ಎಂಬವಳು ಕಣಿವೆಯಿಂದ ( ಅಥವಾ ಎತ್ತರದಿಂದ ? ಕಮ್ಮರಿ = ಕಣಿವೆ ) ಹಾರಿ ಬಿದ್ದು ಸತ್ತಳೆಂದು ಅರ್ಥಮಾಡಬೇಕಾಗುತ್ತದೆ ಮತ್ತು ಹೀಗೆ ಅರ್ಥೈಸುವುದು ತೀರ ವಿಚಿತ್ರವಾಗಿಯೂ ತೋರುತ್ತದೆ. ' ತಪರ್ಯ ' ಎಂಬುದ್ದೆತೂ ವ್ಯಕ್ತಿನಾಮವಾಗಿ ತೋರುವುದಿಲ್ಲ. ಅದೇ ದೇಕಬ್ಬೆಯ ಗಂಡ ಏಚನವಂಶದ ಸೊಸೆಯೊಬ್ಬಳು ದೇಕಬ್ಬೆಯಂತೆಯೇ ಅಗ್ನಿಪ್ರವೇಶ ಮಾಡಿದಳೆಂದು ಭಾವಿಸುವುದು ಉಚಿತವಾಗಿ ತೋರುವುದಾದರೆ, ಆಗ ಆ ಶಾಸನಭಾಗವನ್ನು "ಆತನ ಎಳೆತಿ ತಪರ್ಯಕಮ್ಮರಿಪಾಯ್ದು ಸತ್ತಳ್" ಎಂದು ತಿದ್ದಬಹುದು. ಹೀಗೆ ತಿದ್ದಲು ಸೂಚನೆಗಳು ಉಂಟು. ಶಾಸನದ (ಮೂ ) ಮತ್ತು (ವು)ಗಳನ್ನು(ಮು) ಮತ್ತು(ಪಾ) ಎಂದು ತಿದ್ದಿದೆ. ಶಾಸನ ಕೆತ್ತುವಾಗ ಸ್ವರದ ಚಿಹ್ನೆಗಳ ಜಾಗ ಅದಲು ಬದಲಾಗಿರಬಹುದು. ಈ ತಿದ್ದುಪಾಠವನ್ನು ಒಪ್ಪಿಕೊಂಡರೆ ' ತಪರ್ಯಕ ' ಎಂಬುವುದು ಅಗ್ನಿಪ್ರವೇಶ ಮಾಡಿದ



ಸ್ತ್ರೀಯು, ಎಂದರೆ ನವಲಾಕ್ಷಿರಾಜನ ಎಳೆಯ ಹೆಂಡತಿಯ ಹೆಸರಾಗುತ್ತದೆ. ( ಆ ಹೆಸರಿನ ಉತ್ತರಾರ್ಧವು — ಅಕ್ಕ ಎಂಬುದರ ಸವೆದ ರೂಪವೆಂಬುದು ಸ್ಪಷ್ಟ )''

ವಿದ್ವಾಂಸರ ವಿವರಣೆಯಲ್ಲಿ ಎರಡು ಮುಖ್ಯ ಸಂಗತಿಗಳು ಹೊಳೆಯುತ್ತವೆ. ಒಂದು ; ಶಾಸನದ ಭಾಷೆಗೆ ಸಂಬಂಧಿಸಿದ್ದು ಇನ್ನೊಂದು ; ನವಲಾಕ್ಷಿರಾಜನ ಪತ್ನಿಯ ವಂಶಕ್ಕೆ ಸಂಬಂಧಿಸಿದ್ದು. ಇವರು ನವಲಾಕ್ಷಿರಾಜನ ಪತ್ನಿ ಅಗ್ನಿಪ್ರವೇಶ ಮಾಡಿದಳೆಂಬ ವಿಷಯ ವನ್ನು ಹೇಳುತ್ತಾರೆ. ಅವಳು ಕಣಿವೆಯಿಂದ ಹಾರಿಬಿದ್ದು ಸತ್ತಳೆಂದು ಅರ್ಥೈಸುವುದು ತೀರ ವಿಚಿತ್ರವೆಂದು ಅವರು ಅಭಿಪ್ರಾಯಪಟ್ಟಿರುವುದಕ್ಕೆ ' ತಪರ್ರೆಯು ' ಎಂಬುದು ವ್ಯಕ್ತಿ ನಾಮವಾಗಿ ತೋರುವುದಿಲ್ಲ ಎಂಬ ಅವರ ನಿಲುವು ಕಾರಣವಾಗಿರಬೇಕು. ಇಲ್ಲವೆ ಕಮ್ಮಾರಿ-ಯಿಂದ ಹೀಗೆ ಹಾರಿಕೊಂಡು ಸತಿಹೋದ ಉಲ್ಲೇಖಗಳು ಇಲ್ಲದಿರುವುದೇ ಕಾರಣವಾಗಿರಬೇಕು. ಆದರೆ ಈ ಶಾಸನ ಪಾಠವನ್ನು ಹೀಗೆ ಅರ್ಥೈಸಬಹುದೆಂದು ತೋರುತ್ತದೆ. ' ಎಳೆತಿ ' ಎಂಬುದು ಎಳೆಯ ವಯಸ್ಸಿನ ಪತ್ನಿ ' ಎಂದು ಸೂಚಿಸದೇ ಕೇವಲ ' ಪತ್ನಿ ' ಎಂದು ಸೂಚಿಸುತ್ತಿರ ಬೇಕು. ಕೇಶಿರಾಜನು ಪತ್ನಿ ಎಂಬುದನ್ನು ಸೂಚಿಸಲು ' ಎಳಿಲೆ ' ಎಂದು ಬಳಸಿರುವುದನ್ನು ಇಲ್ಲಿ ಸ್ಮರಿಸಬಹುದು.° ಎಳಿಲೆ > ಎಳಲೆ ಎಂದಾಗುತ್ತದೆ. ಶಾಸನ ಓದಿ ಪಾಠ ಬರೆದುಕೊಳ್ಳುವಾಗ ' ಎಳಲೆ ' ಎಂಬುದನ್ನು ತಪ್ಪಾಗಿ ' ಎಳತಿ ' ಎಂದು, ಬರೆದುಕೊಂಡತಿದೆ. ' ನವಲಾಕ್ಷಿರಾಜ ಸತ್ತಡೆ ಆತನ ' ಎಳೆತಿ ' ( ಎಳಲೆ ) ಎನ್ನುವಲ್ಲಿ ' ನವಲಾಕ್ಷಿರಾಜನು ಸಾಯಲುಅವನ ಪತ್ನಿಯು ' ಎಂದೇ ಅರ್ಥಹೊರಡುತ್ತದೆ, ಅಲ್ಲದೆ ' ತಪರ್ರೆ ' ಎಂಬುದು ' ಕಮ್ಮರಿ ' ಯಹೆಸರಾಗಿರಬೇಕು. ಆದನ್ನು ಶಾಸನಕವಿ '' ತಪರ್ರೆಯಕಮ್ಮಾರಿ '' ಎಂದು ಸೂಚಿಸಿದಂತಿದೆ. ಹೀಗೆ ತಿಳಿದು ಕೊಂಡಾಗ ನವಲಾಕ್ಷಿರಾಜನ ಪತ್ನಿ ( ಎಳಲೆ ) ' ತಪರ್ರೆಯ ' ಎಂಬ ' ಕಮ್ಮರಿಯನ್ನು ಹಾರಿಕೊಂಡು ಸತಿಹೋದಳೆಂದು ಹೇಳಬೇಕಾಗುತ್ತದೆ.

ಈ ಸ್ಮಾರಕ ಶಿಲೆ ಶಿಲ್ಪದ ದೃಷ್ಟಿಯಿಂದ ಮಾಸ್ತಿಕಲ್ಲು ಅಲ್ಲ, ಮುಖ್ಯವಾಗಿ ಅದು ವೀರಗಲ್ಲಾಗಿದೆ, ಕಲ್ಲಿನ ಎಡ-ಬಲಗಳಲ್ಲಿ ಮೇಲಿನಿಂದ ಕೆಳಗೆ ಲಿಪಿಯನ್ನು ಕಂಡರಿಸಲಾಗಿದೆ. ಮಧ್ಯದಲ್ಲಿ ಶಿಲ್ಪವನ್ನು ಬಿಡಿಸಲಾಗಿದೆ. ಈ ಕಲ್ಲಿನಲ್ಲಿ ಮುಖ್ಯ ಮೂರು ಹಂತಗಳಿವೆ.

---

° ಈ ವಿಷಯವನ್ನು ತಿಳಿಸಿದವರು ಡಾ|| [illegible]

ಮೊದಲನೆಯ ಹಂತದಲ್ಲಿ, ವೀರ ಬಲಗೈಯಲ್ಲಿ ಚೂರಿ ಹಿಡಿದು ಹೋರಾಡುತ್ತಿದ್ದಾನೆ. ಅವನಿಗೆ ಎದುರಾಗಿ ಇನ್ನಿಬ್ಬರು ಆಯುಧದಿಂದ ಇರಿಯುತ್ತಿದ್ದಾರೆ. ಈ ಹೋರಾಟದ ಬಲಭಾಗಕ್ಕೆ ಎತ್ತರದ ಭಾಗದಲ್ಲಿ ವೀರನಪತ್ನಿ ನಿಂತಿದ್ದಾಳೆ ಇಲ್ಲಿ ಅವಳು ನಿಂತ ಸ್ಥಾನವನ್ನು ಎತ್ತರವಾಗಿ ಕಂಡರಿಸಿರುವುದನ್ನು ಗಮನಿಸಬೇಕು. ಹಾಗೂ ಅವಳು ನಿಂತ ಭಂಗಿಯೂ ವಿಶೇಷವಾಗಿದೆ ಎರಡೂ ಪಾದಗಳನ್ನು ಉತ್ತರಕ್ಕೆ ಮುಖಮಾಡಿ ಕೆಳಗೆ ಜಿಗಿಯುವ ಸ್ಥಿತಿಯಲ್ಲಿ ಅವಳನ್ನಿರಿಸಲಾಗಿದೆ. ಬಲಗೈ ಹೊಟ್ಟೆಯ ಕಡೆಗೆ ಬಾಚಿದಂತೆ ಬಿಡಿಸಿರುವುದೂ ಅವಳು ಹಾರುವ ಭಾವವನ್ನೇ ಸೂಚಿಸುವುದಾಗಿದೆ. ಎಡಗೈಎತ್ತಿ ಹಿಡಿದುಕೊಂಡಂತೆ ಚಿತ್ರಿಸಲಾಗಿದೆ. ಇನ್ನೊಂದು ವಿಶೇಷವೆಂದರೆ ಇವಳ ಬಲಭಾಗದಲ್ಲಿ ಮೃದಂಗ ಬಾರಿಸುವ ಪುರುಷನ ಚಿತ್ರವೊಂದನ್ನು ಕಂಡರಿಸಲಾಗಿದೆ. ಇದನ್ನು ಯಾವ ರೀತಿ ಅರ್ಥೈಸಬೇಕೋ ತಿಳಿಯದು. ಎರಡನೆಯ ಭಾಗದಲ್ಲಿ ವೀರನನ್ನು ದೇವಕನ್ನಿಕೆಯರು ತಗೆದುಕೊಂಡು ಹೋಗುತ್ತಿದ್ದಾರೆ. ಮೂರನೆಯ ಭಾಗದಲ್ಲಿ ವೀರ ಕುಳಿತಿದ್ದಾನೆ. ಅವನ ಬಲಕ್ಕೆ ಚಾಮರ ಬೀಸುವ ಸ್ತ್ರೀ
ಇಷ್ಟಲ್ಲದೆ, ಆತನ ಎಡಕ್ಕೆ ಅಸ್ಪಷ್ಟವಾದ ಸ್ತ್ರೀ
ಶಿಲ್ಪವಿದೆ. ಈ ಶಾಸನ ಶಿಲ್ಪ ಮುಖ್ಯವಾಗಿ ನವಿಲಾಕ್ಷಿರಾಜನಿಗೆ ( ವೀರನಿಗೆ ) ಹೆಚ್ಚು ಮಹತ್ವ ಕೊಟ್ಟಿದೆ. ಮೊದಲನೆಯ ಭಾಗದಲ್ಲಿ ಮಾತ್ರ ಸತಿ ಸಾನು ಪ್ರದೇಶದ ಮೇಲೆ ನಿಂತು ಕೊಂಡದ್ದನ್ನು ಚಿತ್ರಿಸಲಾಗಿದೆ. ಇದು ಬಹುಶ: ನವಲಾಕ್ಷಿರಾಜನಪತ್ನಿ ''ತಪರ್ಯು ಕಮ್ಮಾರಿ'' ಹಾರಿದ್ದನ್ನು ಸೂಚಿಸುತ್ತಿದ್ದರಬೇಕು. ( ಚಿತ್ರ — 52 )

ಕ್ರಿ.ಶ. 1262 ರ ಚೌಡದಾನಪುರ ಶಾಸನವನ್ನು ತಪರ್ಯು ಕಮ್ಮಾರಿ ಹಾರಿದ ಳೆಂಬ ವಿಷಯದ ಹಿನ್ನೆಲೆಯಲ್ಲಿ ಗಮನಿಸುವುದು ಬಹುಮುಖ್ಯವಾದುದು. ಈ ಶಾಸನವು ಮುಕ್ತೇಶ್ವರ ಗುಡಿಯ ಹಾಸಿಗೆ ಕಲ್ಲಿನ ಮೇಲಿದೆ. ಈ ಶಾಸನವು ಕಂಹ್ನಲೆಯು ಗಂಡ ಮರಣಹೊಂದಲಾಗಿ ಕಮರ್ಮ ( ರಿ ) ಯು ಅಂದರೆ ಕಮ್ಮರಿಯನ್ನು ಹಾರಲು ಬಯಸುವ ಸ್ಥಿತಿಯನ್ನು ತಿಳಿಸುತ್ತದೆ. ಶಾಸನದ ಪಾಠ ಹೀಗಿದೆ : ''......... ಮೊದವಿದ ಶಿವಭಕ್ತಿಯ ಸಂಪದಮಂ ಕಲ್ಲರಸನರಸಿಕಂ (ನಾ ) ದೇವಿಗೆ ಮುದದಿಂದವಿತ್ತ ಚೀಲೋಳದೇವ ಜಂಗಮ- ಸುಖೈಕಗುಣಸದ್ಭಾವಂ 11 ಆ ಸತಿ ಕಂನಾದೇವಿ ಶ್ರೀ ಸುಖಸಂಪದವಿಳಾಸವಿಭವಾದಿಗಳಂ ಬಾಸಣಿಸಿ ಶಿವಗಣಂಗಳಿಗೋಸರಿಸದೆ ಮಾಡಿ ಕೂಡಿ ಸುಖಸುತ್ತಿಪ್ಪಳು11 ವಚನ 11 ತದ- ನಂತರವು 11 ಕಮರ್ಮ ( ತಿ ) ಶಯುದಿ ನಿಜಪತಿಧರ್ಮಧ್ವಜನಾ ದೇವಲೋಕವನೆಯ್ದಲ ಧರ್ಮಜ್ಞೆದೇವಿ ಕಂಹ್ನಲೆ ಕಮ್ಮರ್(ರಿ) ಯು ಪಾಂಯುಲುಜ್ಜುಗಂಗೆಯ್ದನಂ 11 ಪರಮಗುರು

ಸಿದ್ಧ ( ರೇ ) ವಣ ಸಿರಿಗಿರಿಂಯ ನಿವಾಸನಾಜ್ಞೆಂಯು ಬೆಸಸಿದ ( ನ ) ಜ (ಜ್ಞ ) ರಿಂಯ ಮುನಿಂಯ ಮುಕ್ತೇಸ್ವರಲಿಂಗದೊಳಲ್ಲ ತುಂಗಭದ್ರೆಂಯ ತಡಿಂಯೊಳು 11 ಯು········ ನೆನಸಿನದೆ ಸದುಗ್ಗರು ತಾನೇನಂ ತೋರ್ರಿದ ವಿಚಿತ್ರಮನುತಪ್ತಂ ಮಾನಿನಿ ಕ (ನ್ನಾ)········ ನಂದದಿ ಬಂದು ಮುಕ್ತಿನಾಥನ ಕಂಡರು 11·········.. 101 ಇಲ್ಲಿ ಕಂಹ್ನಲೆ ಕಮ್ಮರಿ ಹಾರಲು ಉದ್ಯೋಗಿಸಿದನ್ನು ಕಾಣುತ್ತೇವೆ. ಇಲ್ಲಿಂಯ ಕಮ್ಮರ (ರಿ) ಕಮ್ಮ ( ರಿ ) ಎಂದು ಸಹಜವಾಗಿ ರೂಪಗೊಳ್ಳುತ್ತದೆ. ಈ ಹಿನ್ನೆಲೆಂಯಲ್ಲಿ ನವಲಾಷಿರಾಜನ ಪತ್ನಿ ಕಮರಿಹಾರಿ ಸತ್ತದ್ದು ತುಂಬ ಮುಖ್ಯವಾದುದು.

ಕ್ರಿ. ಶ. ಸು.950 ರ ಶಾಸನವು 'ಸಾವಿಂಯಬ್ಬೆ' ೦ಯನ್ನು ಹೊಗಳುತ್ತದೆ.[136] ಅವಳತಂದೆ ಬಾಂಯಕ, ತಾಂಯ ಜಾಬಂಯ್ಯೆ, ಸಹೋದರರು ಮಾದುವರ, ದೋಂಯಲಮ್ಮರು, ಅವಳ ಮಾವ ಧೋರನು. ಗಂಡ ಲೋಕವಿದ್ಯಾಧರನು ಹೀಗೆ ಶಾಸನವು 'ಸಾವಿಂಯಬ್ಬೆ' ೦ಯ ಸಂಬಂಧವನ್ನು ತಿಳಿಸಿ ಅನಂತರ ಅವಳನ್ನು,

'' ಶ್ರಾವಕಧರ್ಮದೊಳ್ ದೊರೆಂಯನಲ್ ಪೆರ್ರಿಲ್ಲೆನೆ ಸನ್ದರೇವತಿ
ಶ್ರಾವತಿ ತಾನೆ ಸಜ್ಜನಿಕೆಂಯೊಳ್ ಜನಕಾತ್ಮಜೆ ತಾನೆ ರೂಪಿನೊಳ್
ದೇವಕಿ ತಾನೇ ಪೆಂಪಿನೊಳರುಂಧತಿ ತಾನೇ ಜಿನೇನ್ದ್ರಭಕ್ತಿನ
ದಾಭವದೆ ಸಾವಿಂಯಬ್ಬೆ ಜಿನಶಾಸನದೇವತೆ ತಾನೆ ಕಾಣರೇ ''

ಎಂದು ಕೀರ್ತಿಸಿ ನಂತರ ಅವಳು ಸತ್ತ ವಿಷಂಯವನ್ನು ತಿಳಿಸುತ್ತದೆ ಶಾಸನದ ಈ ಭಾಗವೆಲ್ಲ ತುಟಿತವಾಗಿರುವುದರಿಂದ ಅರ್ಥ ಸ್ಪಷ್ಟಗೊಳ್ಳುವುದಿಲ್ಲ. ಈ ಸ್ಮಾರಕದ ಶಿಲ್ಪವನ್ನು ಗಮನಿಸಿದರೆ, ಬಹುಶ: ಸಾವಿಂಯಬ್ಬೆಂಯ ಪತಿ ಲೋಕವಿದ್ಯಾಧರನು ಹೋರಾಟದಲ್ಲಿ ಮಡಿದಿರಬೇಕೆಂದೂ, ಅದನ್ನು ತಿಳಿದ ಸಾವಿಂಯಬ್ಬೆ ಸಮಾಧಿಕುರಿತ ಮರಣಹೊಂದಿರಬೇಕೆಂದೂ ಹೇಳಬಹುದಾಗಿದೆ. ಇಲ್ಲಿ ಮೊದಲನೆಂಯ ಸ್ತರದಲ್ಲಿ ವೀರರ ಹೋರಾಟದ ಚಿತ್ರವಿದೆ. ಎರಡನೆಂಯ ಸ್ತರದಲ್ಲಿ ಸಾವಿಂಯಬ್ಬೆ ಸಲ್ಲೇಖನ ಕುರಿತ ಚಿತ್ರವಿದೆ. ಮೂರನೆಂಯ ಹಂತದಲ್ಲಿ ಅವಳು ತೀರ್ಥಂಕರರೆಡೆಗೆ ಕೈಮುಗಿದುಕೊಂಡು ಕುರಿತ ಚಿತ್ರವಿದೆ. ( ಚಿತ್ರ — 64 ) ಬಹುಶ: ಜೈನಸ್ತ್ರೀಂಯರು ಗಂಡಮ್ಮತನಾಗಲು 'ಸಮಾಧಿ ಮರಣ' ( ಸಲ್ಲೇಖನ ಮರಣ ) ವಿಧಾನವನ್ನು ಅನುಸರಿಸುತ್ತಿದ್ದರೆಂದು ಈ ಶಿಲ್ಪದ ಹಿನ್ನೆಲೆಂಯಲ್ಲಿ ಹೇಳಬಹುದಾಗಿದೆ.

1077

ಕ್ರಿ.ಶ. 1977 ರ ಮುಳ್ಳೂರು ಶಾಸನವು ಪದ್ಮಲದೇವಿಗೆ ದಳಪತಿಗಳಿಬ್ಬರು ಮೇಳವಾಳಿಯಾಗಿ ಮರಣಗೊಂಡದ್ದನ್ನು ತಿಳಿಸುತ್ತದೆ.[137] ಈ ಶಾಸನ ಪಾಠ ಹೆಚ್ಚು ತ್ರುಟಿತಗೊಂಡಿದೆ. ಇಲ್ಲಿಯ ಇದೇಕಾಲದ ಇನ್ನೊಂದು ಶಾಸನವು ಉತ್ತಮಜೋಳಸೆಟ್ಟಿಯು ತನ್ನ ಬಾಲೆಯ ತಲೆಯನ್ನು ಕಡಿದು ತಾನೂ ಮಡಿದುದನ್ನು ಹೇಳುತ್ತದೆ.[138] ಕ್ರಿ.ಶ.1220 ರ ಹಳೇಬೀಡು ಶಾಸನವು ಕುವರಲಕ್ಷ್ಮ, ಆತನ ಸತಿ ಸುಗ್ಗಲೆ ಮತ್ತು ಕೆಲವು ಜನ ಲೆಂಕರು ಸಾಕಿಸಲಹಿದ ವೀರಬಲ್ಲಾಳನಿಗಾಗಿ ಪ್ರಾಣಾರ್ಪಣೆ ಮಾಡಿಕೊಂಡದ್ದನ್ನು ಹೇಳುತ್ತದೆ.[139] ಇದೇರೀತಿ ಸ್ತ್ರೀವೇಳವಾಳಿಗೊಂಡ ಮೂರು ಉಲ್ಲೇಖಗಳು ಬಾಚ-ಹಳ್ಳಿಯ ಶಾಸನಗಳಲ್ಲಿ ದೊರಕುತ್ತವೆ. ಹೊಯ್ಸಳ ವೀರನಾರಸಿಂಗದೇವನಿಗಾಗಿ ಲಕ್ಕೆಯ ನಾಯಕ ಅವನ ಹೆಂಡತಿ ಗಂಗಾದೇವಿ ಮತ್ತು ಮೂವರು ಲೆಂಕರೂ, ಹೊಯ್ಸಳ ಸೋಮೇಶ್ವರನಿಗಾಗಿ ಕಂನೆಯನಾಯಕ ಅವನ ಹೆಂಡತಿಯರಾದ ಉಮವ್ವೆ' ಜವನವ್ವೆ, ಕಲ್ಲವ್ವೆ ಮತ್ತು ಲೆಂಕತಿಯರೂ, ವೀರನಾರಸಿಂಹದೇವನಿಗಾಗಿ ಸಿಂಗೆಯನಾಯಕ ಅವನ ಹೆಂಡತಿಯರಾದ ಕೇತವೇನಾಯಕಿತಿ, ಹೊಂನವೆನಾಕಿತಿ, ನಾಚವ್ವೆನಾಯಕಿತಿ ಮತ್ತು ಲೆಂಕತಿಯರೂ ಮರಣಗೊಂಡದದ್ದನ್ನು ಅವು ತಿಳಿಸುತ್ತವೆ.[140] ( ಚಿತ್ರ — 65) ಇಲ್ಲಿ ಒಡೆಯರಿಗಾಗಿ ಸೇವಕರು ಮಡಿಯುವಾಗ ಅವರ ಪತ್ನಿಯರೂ ಮಡಿಯುವುದನ್ನು ಕಾಣುತ್ತೇವೆ. ಆದರೆ ಅವರು ಮರಣಹೊಂದಿದ ವಿಧಾನವನ್ನು ಈ ಶಾಸನಗಳಿಂದ ತಿಳಿದು ಕೊಳ್ಳುವುದು ಇನ್ನೂ ಸಾಧ್ಯವಾಗುವುದಿಲ್ಲ ಎಂಬುದನ್ನು ಗಮನಿಸಬೇಕು. ಅಬ್ಬಲೂರಿನ ಶಿಲ್ಪವೊಂದರಲ್ಲಿ ಗಂಡ, ಇಬ್ಬರು ಹೆಂಡತಿಯರು ಸಿಡಿದಲೆಕೊಟ್ಟಿರುವುದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ. ( ಚಿತ್ರ — 66) ಇವೆಲ್ಲ ಗಂಡನೊಡನೆ ಪತ್ನಿಯರ ಸಹಮರಣವನ್ನೇ ಸೂಚಿಸುತ್ತವೆ.

ಗಂಡನ ಮರಣವನ್ನು ನಿಶ್ಚಯಿಸಿದ ಪತ್ನಿಯರು ಆವನ ಮರಣಪೂರ್ವದಲ್ಲಿ (ಜೋಹರ ವಿಧಾನದಿಂದ ) ಮರಣಗೊಳ್ಳುತ್ತಿದ್ದುದನ್ನು ಇಲ್ಲಿಯೇ ವಿವರಿಸಬಹುದಾಗಿದೆ . ರಾಮನಾಥ ಚರಿತದಲ್ಲಿ, ಮಾತಂಗಿಯೊಡನೆ ಕುಮಾರರಾಮನು ಯುದ್ಧಕ್ಕೆ ಹೊರಡಲು ಅವನ ಪತ್ನಿಯರು ಅಗ್ನಿಪ್ರವೇಶಮಾಡುತ್ತಾರೆ. ಅದನ್ನು ಕವಿ ಹೀಗೆ ವರ್ಣಿಸುತ್ತಾನೆ:[141]

ಕಂಡನಗಿಲು ಬಾವನ್ನಗೊರಡುಗಳ
ಕೆಂಡಗಳಿಂದಡಿದಿರ್ಕೆ
ಕುಂಡಗಳನು ರಾಜಾಂಗಣದೊಳು ಮುಂ
ಕೊಂಡು ನಿಂದಿರ್ದ ಪೆಣ್ಗಳನು

ಕೇಸುರಿಗೆದರ್ಥವ ಕೆಂಡಗಳಿಂದ ವಿ
ಲಾಸವಡೆದ ಕುಂಡಗಳೊಳು
ಸೂಸುತ ಕರ್ಪೂರಂಗಳನು ನಿಂದಿರ್ದವು
ಹಾಸತಿಯರ ಕಂಡನಲ್ಲಿ

ತನ್ನಳಿವುಳಿವ ಕೇಳುತ ಕೆಳದಿಯರಿಂದ
ಕನ್ನಡಿ ನಿಂಬೆವಣ್ಗಳನು
ಮನ್ನಿಸುತಲ್ಲಿರ್ದ ನಿಜಸತಿಯರ ಮೊಗ
ಗನ್ನಡಿಗಳ ಕೆಂಡನೊಸೆದು

ವೀಣೆಕಿನ್ನರಿಗಳಿಂ ತನ್ನ ಪೆಸರ ಪದ
ಶ್ರೇಣಿಯನೊಸೆದು ಬಾಜಿಸುವ
ರಾಣೀವಾಸಗಳನು ಕಂಡನು ಸಯ್ಯು
ತ್ರಾಣಬಲಾಬ್ಧಿ ಬಾಡಬನು

ಅಂಗನೆಯರ ಮೊಗನೋಡಿ ನುಡಿದನು ತ
ರಂಗಿತವೀರರಸದೊಳು
ಪಿಂಗದಿಂದೆನಗಾಜಿಯೊಳು ದೇವವೇಶ್ಯಾಭು
ಜಂಗದರ್ಶನವೆಂದನು

ಇಂದೆನಗಿಂದು ಶೇಖರಪದಯುಗಳರ
ವಿಂದಾವಲೋಕನಲಾಭ
ಸಂದೇಹವಿಲ್ಲದಾದಪುದೆಂದೊರೆದನಾ
ನಂದ ಕೈಮಿಗೆ ವೀರರಾಮ

ನುಡಿಯಲಾ ಮಾತು ಹಿಂಚಿತು ಕುವರನನೊಡ
ನೊಡನಮರ್ದಮರ್ದಪ್ಪಿಕೊಂಡು
ಮಡದಿಯರಾನಂದ ಕೈಮಿಗೆ ಬೇಳ್ದರಂ
ದಡಿಗಡಿಗಗ್ನಿಕುಂಡದೊಳು



ನಳನಳಿಸುವ ಕೆಂದಾವರೆಯುಡಿದಿರ್ದ
ಕೊಳದೊಳು ಜಲಕೇಳಿಯೊಳು
ಎಳಸಿ ಬಿಳ್ದಂತೆ ಬಿಳ್ದರು ಲಲನೆಯರಾ
ಕಳಕಳಿಪಗ್ನಿಕೊಂಡದೊಳು

ಕುಮಾರರಾಮನ ಮಡದಿಯರು ಕನ್ನಡಿ, ನಿಂಬೆಹಣ್ಣುಗಳನ್ನು ಕೊಡುತ್ತ, ಪತಿಯ ಹೆಸರನ್ನು ವೀಣೆ ಕಿನ್ನರಿಗಳಿಂದಬಾರಿಸುತ್ತ, ಅವನನ್ನು ಅಪ್ಪಿಕೊಳ್ಳುತ್ತ, ಅವರು "ಕೊಳದೊಳು ಜಲಕೇಳಿಯೊಳು ಎಳಸಿ ಬಿಳ್ದಂತೆ" ಅಗ್ನಿಕುಂಡದಲ್ಲಿ ಬಿದ್ದ ಇಲ್ಲಿಯ ದೃಶ್ಯ ಅಪೂರ್ವವಾದುದು. ಇಂಥದೇ ಪ್ರಸಂಗವೊಂದು 'ಸಿರುಮಣನಾಯಕ ಸಾಂಗತ್ಯ' ದಲ್ಲಿ ಅತೀ ಬೀಕರವಾಗಿ ಹೀಗೆ ಕಾಣಿಸಿಕೊಳ್ಳುತ್ತದೆ.[142]

ಅರುಣನಾರ/ ರಂಭೆವೆಣ್ಣಿಗೆ ತಂದು ಕೊಟ್ಟರು
ಕುರುಹಿನ ಕಾಲಕುಪ್ಪಸವ
ಮೆರೆವ ರಭಸಕೆ ಸೂಸಕ ದಂಡೆಯ ತಮ್ಮ
ತುರುಬಿನೊಳಳವಡಿಸಿದರು

ದರುಶನ ಕಳೆಯುಳ್ಳ ಹೆಣ್ಣುಮಕ್ಕಳಿಗೆಲ್ಲ
ಬೆರಸಿ ಕರ್ಪೂರದ ತೈಲವನು
ತರಸಿ ಹೇಮದ ಬಟ್ಟಲೊಳು ಕೊಡೆ ವಿಷಕೊಂಡು
ಸೊರಗಿ ಬಿದ್ದರು ಅವನಿಯಲಿ

ಹಿರಿಯ ಕಾಚಣ್ಣ ರಾಟೆಯ ಸೋಮಯ್ಯಗೆ
ಬೆರಸಿಕೊಟ್ಟರು ಬಟ್ಟಲೊಳಗೆ
ಮರಮಟ್ಟ ಸೊರಗಿ ಬೀಳಲು ಕೊಂಡಕಳೆದ (ನು)
ದುರುಳೆಕುಮಾರ ಮಲ್ಲಣನು

ಮುಡಿಯ ಗಾಯಕೆ ಬಿದ್ದ ಮಡದಿಯರೆಲ್ಲರ
ಕೆಡವು ಕೊರಳ ಕೊಯ್ಯುತಲಿ
ಹಿಡಿಹಿಡಿದೆತ್ತಿ ಕೊಂಡಕೆ ಹಾಕಿ ಮಲ್ಲಣ್ಣ
ಸುಡು ಸಂಸಾರವೇಕೆಂದ

ಇಲ್ಲಿ ಜೋಹರ ಸಂಪ್ರದಾಯದ ಅಪೂರ್ವ ವಿವರಣೆ ಇದೆ. ಯುದ್ಧಕ್ಕೆ ಹೋಗುವ ಪೂರ್ವದಲ್ಲಿ ತಮ್ಮ ಪತ್ನಿಯರನ್ನು ಚರಿತದಲ್ಲಿ ಸ್ತ್ರೀಯರೇ ಅಗ್ನಿಕುಂಡದಲ್ಲಿ

ಹಾರಿಕೊಳ್ಳುವುದನ್ನು ಕಂಡರೆ, ಸಿರುಮಣನಾಯಕನ ಸಾಂಗತ್ಯದಲ್ಲಿ ಸ್ತ್ರೀಯರ ತಲೆಯನ್ನು ಕತ್ತರಿಸಿ ಅವರನ್ನು ಅಗ್ನಿಕುಂಡಕ್ಕೆ ಎಳೆದುಹಾಕುವುದನ್ನು ಕಾಣುತ್ತೇವೆ. "ಜೋಹರನಲ್ಲಿ ಸ್ತ್ರೀಯರು ಮುತ್ತೈದೆಯರಾಗಿ ಸತ್ತು, ಅವರನ್ನು ಅವರ ಗಂಡದಿದಿರು ಹಿಂಬಾಲಿಸುತ್ತಾರೆ. ಮತ್ತು ಇದು ಸಾಮೂಹಿಕವಾದುದು. ಸಹಗಮನದಲ್ಲಿ ಸತ್ತ ಗಂಡನನ್ನು ಅವನ ವಿಧವೆ ಹಿಂಬಾಲಿಸುತ್ತಾಳೆ. ಮತ್ತು ಇದು ವೈಯಕ್ತಿಕವಾದುದು. ಎರಡರಲ್ಲೂ ಮೂಲ ಮನೋಭಾವ ಒಂದೇ ಎಂಬುದನ್ನು ಸುಲಭವಾಗಿ ಗುರುತಿಸಬಹುದು." [143]

ಅಡಿಟಿಪ್ಪಣಿಗಳು:

1. ಹಿಸ್ಟ್ರಿ ಆಫ್ ಧರ್ಮಶಾಸ್ತ್ರ – II – I : ಪಿ.ವಿ.ಕಾಣೆ, ಪು. 627–628
2. ಅನುಕ್ರಮವಾಗಿ: ಇ.ಸಿ. VIII – II 25ಮುಟಿಮುಗ್ರಾಮ, ಸೊರಬ, ಕ್ರಿ.ಶ. 1391: ಅದೇ 461 ಬಿಸ್ನಾಳ್ಳರು, ಕ್ರಿ.ಶ. 1423 : ಅದೇ 457 ಬಿಸ್ನಾಳ್ಳರು ಕ್ರಿ.ಶ. 972: ಅದೇ, 163 ಹರೂರು, ಕ್ರಿ. ಶ. 1442: ಎಸ್.ಐ.ಐ. XVIII, 276ಕಣವಿ, ಗದಗ, ಕ್ರಿ.ಶ. 1407 : ಇ.ಸಿ. VIII – II, 482 ದುಗೂರು, ಸೊರಬ, ? : ಅದೇ, 37 ಗುಂಜನೂರು, ? : ಅದೇ, 496 ಕುಪ್ಪೇಗ್ರಾಮ, ಕ್ರಿ. ಶ. 1458 : ಅದೇ 559 ಕೊಂಡಗಳಲೆ, ಕ್ರಿ.ಶ. 1448 : ಇ.ಸಿ. VII – I 141 ಬೆಳಗಾವಿ, ಶಿಕಾರಿಪುರ, ಕ್ರಿ.ಶ. 1286 : ಇ.ಸಿ. VIII – II 458 ಬಿಸ್ನಾಳ್ಳರ, ಸೊರಬ, ?: ಅದೇ 544 ಇಂಡುವಳ್ಳಿ, ? : ಅದೇ, 16 ಆರಗ, ತೀರ್ಥಹಳ್ಳಿ, ಕ್ರಿ.ಶ. 1377: ಇ.ಸಿ. VII – I 252 ಬಂದಳಿಕೆ, ಶಿಕಾರಿಪುರ, ಕ್ರಿ.ಶ. 1416.
3. ಇ.ಸಿ. VIII – II 541 ಕಲ್ಲಂಬಿಗ್ರಾಮ, ಸೊರಬ, ? : ಅದೇ, 134 ಹಿರೇಅವಲಿ, ಕ್ರಿ.ಶ. 1393 : ಇ.ಸಿ. VII – I 36, ಹಿರೇಜಾಗಕ, ಶಿಕಾರಿಪುರ, ಕ್ರಿ.ಶ. 1445: ಅದೇ, 72 ಉತ್ತರಾಣಿಹಳ್ಳಿ, ಕ್ರಿ. ಶ. 1051 : ಇದೇ ರೀತಿಯ ಶಾಸನಗಳು : ಇ.ಸಿ. VIII – II 48 ಸಿರೂರ, ಸಾಗರ, ಕ್ರಿ. ಶ. 1454, ಅದೇ, 51 ಕಾನಲೆ, ಕ್ರಿ. ಶ. 1431.
4. ಇ.ಸಿ. VII – I 37, ಹಿರೇಜಾಗಕ, ಶಿಕಾರಿಪುರ, ಕ್ರಿ.ಶ. 1417
5. ಸಮಾಧಿ – ಬಲಿದಾನ – ವೀರಮರಣ ಸ್ಮಾರಕಗಳು: ಡಾ|| ಎಂ.ಎಂ.ಕಲಬುರ್ಗಿ, ಪು. 40. ( ಶಾಸನ: ಇ.ಸಿ. VIII – II 565 ಹೆಗ್ಗೋಡು, ಸೊರಬ, ಕ್ರಿ.ಶ. 1424 )
6. ಪ್ರಜಾವಾಣಿ: ಭಾನುವಾರ, 10ನೇ ಮೇ, 1981 "ಸಾಪ್ತಾಹಿಕ ಪುರವಣಿ" ಪು. 4, ಅಧ್ಯಯನ– ಅನುಮಾನ–ಅಭಿಪ್ರಾಯ : ಡಾ|| ಆರ್. ಶೇಷಶಾಸ್ತ್ರಿ.

7. ಇ.ಸಿ. VIII–II 396, ಹಿರೇಕಬ್ಬೂರ, ಸೊರಬ,? : ಅದೇ 259
ಕುಪ್ಪಟೂರು ?

8. ಪಂಪಕವಿ ವಿರಚಿತ ಪಂಪಭಾರತಂ, ಪು.136.

9. ಮಹಾಕವಿ ಕವಿರನ್ನ ವಿರಚಿತವಪ್ಪ ಅಜಿತತೀರ್ಥಂಕರ ಪುರಾಣತಿಲಕಂ ಪು.10.

10. ಸಿಂಗಿರಾಜ ಕವಿಕೃತ ಸಿಂಗಿರಾಜಪುರಾಣ, ಸಂ–39, ಪ. 40

11. ನಂಜುಂಡಕವಿ ವಿರಚಿತ ರಾಮನಾಥಚರಿತ ( ಉತ್ತರಾರ್ಧ) ಸಂ–3), ಪು.336

12. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ XVI :70–86

13. ಸಿರುಮಣನಾಯಕನ ಸಾಂಗತ್ಯ, ಪು.68

14. ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ, ಪು.89

15. ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ, ಸಂ–2, ಪು.638

16. ಜನಪದ ಖಂಡಕಾವ್ಯಗಳು: ಜೀ. ಶಂ. ಪರಮಶಿವಯ್ಯ, ಪು.26

17. ಅದೇ, ಪು.76 : ಇದೇ ರೀತಿಯ ಚಿತ್ರಣವೊಂದು ಕಳಗುಚ್ಚಮ್ಮ ಜನಪದ ಕಥೆಯೊಂದರಲ್ಲಿ ಬರುತ್ತದೆ — ಆಯ್ದ ಜನಪದ ಕಥೆಗಳು: ಸಂ|| ಜೀ.ಶಂ.ಪರಮ–ಶಿವಯ್ಯ, ಪು.163: ಕೊಂಡದಹಳ್ಳಿ ಮಾಸ್ತಿಗುಡಿ ಅಧ್ಯಯನ ನಡೆಸಿದ ಡಾ|| ಎಂ. ಚಿದಾನಂದಮೂರ್ತಿ ಅವರು ನಿರೂಪಿಸಿದ ಅಲ್ಲಿಯ ಕಥೆಯೂ ಇಂಥದ್ದೇ ಆಗಿದೆ — ಗ್ರಾಮೀಣ: ಡಾ||.ಎಂ.ಚಿದಾನಂದಮೂರ್ತಿ, ಪು.117–121: ಇಂಥದೇ ವಿಷಯ 'ಉರುಳಮಾರಮ್ಮ' ಐತಿಹ್ಯದಲ್ಲಿ ಬರುತ್ತದೆ — ಕನ್ನಡ ಐತಿಹ್ಯಗಳು: ಸಂ|| ಜಿ.ವಿ. ಡಿ. ಪು.40–41.

18. ಲಾವಣಿಗಳು : ಸಂ|| ಕೆ. ಮರುಳಸಿದ್ಧಪ್ಪ : ಸಂ|| ಕೆ. ಮರಳಸಿದ್ಧಪ್ಪ, '' ಜಗುನೆಯ ಜಕ್ಕಣ್ಣ ಮಗುನೆಯ ಬ್ಯಾಟೆಕಾರ'', ಪು.111 – 113.

19· ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ॥ ಬಸವರಾಜ ಕಲ್ಗುಡಿ, ಪು·300: 'ಬಂಜೆನಾಗಮ್ಮ' ಎಂಬ ಕಥೆಯಲ್ಲಿ "ನಾ ಕುತ್ಕೊಂಡು ನನ್ನ ಗಂಡನ ತಲೀನ ನನ್ನ ತೊಡೆಯ ಮೇಲೆ ಮಡಿಕಂಡು ಕುಳಿತ್ಕೊಳ್ತೀನಿ, ಆಗ ಹಚ್ಚಿಬಿಟ್ಟುಹೋಗಿ'' ಎಂದು ಸತಿಯಾಗಬಯಸಿದ ಹೆಣ್ಣಿನ ಚಿತ್ರಣವೊಂದು ದೊರಕುತ್ತದೆ — ಕರ್ನಾಟಕ ಜನಪದ ಕಥೆಗಳು· ರಾಗೌ, ಪು·90·

20· ಪ್ರ·ಕಂ·ಇ॥ ಸಂ—2: ಸಂ॥ ಎಚ್·ಎಲ್·ನಾಗೇಗೌಡ· ಪು·461—463,

21 ಉಲ್ಲೇಖ : ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ॥ ಬಸವರಾಜ ಕಲ್ಗುಡಿ, ಪು· 141, ~~1985~~·

22· ವಿವರಗಳಿಗೆ ಈ ಗ್ರಂಥಗಳನ್ನು ಗಮನಿಸಬಹುದು: ಹಿಸ್ಟ್ರಿ ಆಫ ಧರ್ಮಶಾಸ್ತ್ರ, II—I : ಪಿ·ವಿ· ಕಾಣೆ, ಪು· 628—629: ದಿ ಪೊಜಿಶನ್ ಆಫ ವುಮೆನ್ ಇನ್ ಹಿಂದು ಸಿವಿಲೈಜೇಶನ್: ಎ·ಎಸ್· ಅಳ್ತೇಕರ, ಪು·129: ದಿ ಡೀಡ್ಸ್, ಆಫ ಹರ್ಷ: ವಿ·ಎಸ್· ಅಗ್ರವಾಲ, ಪು·127 : ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ:ಬಸವರಾಜ ಕಲ್ಗುಡಿ, ಪು·26, 35: ಹೊನ್ನಮ್ಮನ ಹದಿಬದೆಯ ಧರ್ಮ : ಡಾ॥ ಸದಾನಂದ ನಾಯಕ, ಶ್ರೀಮತಿ ಸರೋಜನಿದೇವಿ ನಾಯಕ· ಪು·5

23· ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ॥ ಎಂ·ಎಂ·ಕಲಬುರ್ಗಿ, ಪು· 28: ಇ·ಸಿ· VII 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ· ಶ·1057·

24· ಇ·ಆಂಟಿ· VI ಪು·215·

25· ವಾಗರ್ಥ : ಡಾ॥ ಎಂ·ಚಿದಾನಂದಮೂರ್ತಿ '' ದೇಕಬ್ಬೆ ಶಾಸನದ ಸ್ಥಳನಾಮಗಳನ್ನು ( ಮತ್ತು ಇತರ ಕೆಲವು ಸಂಗತಿಗಳನ್ನು ) ಕುರಿತು ಪು· 180·

26· ಅದೇ ಪು· 184—185·

27· ದೇಕಬ್ಬೆಯ ಶಾಸನದ ಸಮೀಪದಲ್ಲಿ ಒಂದು '' ಕುಂಬಾತಿಕಲ್ಲು '' ಎಂಬುದಿದೆ· ಅಲ್ಲಿಂದಲೇ ದೇಕಬ್ಬೆ ಸತಿಹೋದದ್ದು ಎಂದು ಊರವರು ತೋರಿಸುತ್ತಾರೆ·

28. ಇ.ಸಿ. VII — I 38 ಹಿರೇಹಾರಕ, ಶಿಕಾರಿಪುರ, ಕ್ರಿ. ಶ. 1191

29. ಕರ್ನಾಟಕದ ವೀರಗಲ್ಲುಗಳು : ಡಾ॥ ಆರ್ ಶೇಷಶಾಸ್ತ್ರಿ, ಪು.93

30. ಶ್ರೀಸಿದ್ಧೇಶ್ವರ ಮಹಾಪುರಾಣ 12—35

31. ಬಸವಣ್ಣನವರ ಟೀಕಿನ ವಚನಗಳು: ವ 680.

32. ಪ್ರ.ಕಂ.ಇಂ — ಸಂ—4: ಡಾ॥ ಬಿಜೆ.ಎಲ್.ನಾಗೇಗೌಡ. ಪು. 241—249.

33. ಅದೇ, ಸಂ—2, ಪು. 460—463

34. ಜನಪದ ಖಂಡಕಾವ್ಯಗಳು: ಜೀ. ಶಂ. ಪರಮಶಿವಯ್ಯ 'ಈರೋಬಿ' — 9—21: 'ಪಡ್ಡಗೆರೆ ನಾಗಮ್ಮ' : ಸಂ॥ ವೈಜಯಂತಿಮಾಲ : ಕತ್ತಾಲದಾರಿ ದೂರ : ಸಂ॥ ಕೃಷ್ಣಮೂರ್ತಿಹನೂರು, 'ಮಹಾಸತಿ ವೀರತಿಮ್ಮವ್ವ' — 7—42, ಮಹಾಸತಿ ಕಾಟವ್ವ — 100—115, 1981 : ಲಾವಣಿಗಳು : ಸಂ॥ ಕೆ. ಮರುಳಸಿದ್ಧಪ್ಪ' ಲಾಳಸಂಕೋಮ್ಮಾರ : ಹುಟ್ಟಿದ ಹಳ್ಳಿ : ಸಂ॥ ಅರ್ಚಕ ಬಿ. ರಂಗಸ್ವಾಮಿ, ಪು.91,1971 : ಜೀವನ ಜೋಕಾಲಿ : ಸಂ॥ ಡಾ॥ ಎಂ.ಎಸ್. ಸುಂಕಾಪುರ. ದೋಂಡಜಿವಾಘ, ಪು 88—108 : ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ: ಬಸವರಾಜ ಕಲ್ಗುಡಿ, ಮಹಾಸತಿ ತಂಗ್ಯಮ್ಮ, 280—292, ಮಾಸ್ತಮ್ಮ, 315—332.

35. ಆಯ್ದ ಜನಪದ ಕಥೆಗಳು: ಸಂ॥ ಜೀ.ಶಂ ಪರಮಶಿವಯ್ಯ, ಪು. 158

36 ಪ್ರಜಾವಾಣಿ : 12—9—1982, 'ಹುಲಿಯೊಡನೆ ಹೋರಾಡಿದ ವೀರಶ್ರೇಷ್ಠ ಸ್ಮಾರಕ: ಕೃಷ್ಣಮೂರ್ತಿಹನೂರ.

37. ಮಾತನಾಡುವ ಕಲ್ಲು: ಆನಂದಕಂದ, ಪು. 46—61.

38. ಗ್ರಾಮೀಣ : ಡಾ॥ ಎಂ.ಚಿದಾನಂದಮೂರ್ತಿ, ಪು. 122 — 124.

39. ಎಮ್.ಎ.ಆರ್ 1938, ಟಿ. ನರಸೀಪುರ ತಾಲೂಕ ಕಛೇರಿಯಿಂದ ಬಂದ ಸನ್ನದು, 24 ಮಾರ್ಚ 1805.

40. ನಂಜುಂಡ ಕವಿ ವಿರಚಿತ ರಾಮನಾಥ ಚರಿತ ( ಉತ್ತರಾರ್ಧ ) ( ಸಂ –3 ), ಪು. 337.

41. ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ, ಪು. 638,

42. ಅನುಕ್ರಮವಾಗಿ : ಇ.ಸಿ. VIII – II, 78 ಸೇಣಗೆ, ಸಾಗರ, ಕ್ರಿ. ಶ. 1265: ಇ.ಸಿ. VII –I 305 ಸಂಡದ, ಶಿಕಾರಿಪುರ, ? : ಎಸ್.ಆಂಧ್.ಆಂಧ್ XX 356 ಸಿಡೇನೂರು, ಹಿರೇಕೆರೂರು, ಸು. 13–14ನೆಯ ಶತಮಾನ : ಇ.ಸಿ. VIII – II 361 ಬಿಸ್ಸೂರು, ಸೊರಬ, ಕ್ರಿ. ಶ. 1259 (?) : ಇ.ಸಿ VI 81 ಅಗ್ರಹಾರ ಬಾಚಹಳ್ಳಿ, ಕೃಷ್ಣರಾಜಪೇಟೆ, ಸು. 13ನೆಯ ಶತಮಾನ : ಇ.ಸಿ. V – II 21 ಉಂಡಿಗನಾಳು, ಅರಸಿಕೆರೆ, ? : ಇ.ಸಿ. VII – I 141 ಬೆಳಗಾಮಿ, ಶಿಕಾರಿಪುರ, ಕ್ರಿ.ಶ. 1286: ಇ.ಸಿ. III 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ. ಶ. 1057 : ಇ.ಸಿ. VIII – II 467, ಮಂಗಳೂರು, ಸೊರಬ, ಕ್ರಿ.ಶ. 1412: ಎಮ್.ಎ.ಆರ್. 1942, 361, ಸೊರಬ, 14ನೆಯ ಶತಮಾನ: ಎಮ್.ಎ.ಆರ 1938, ಶಂಕರಹಳ್ಳಿ, ಅರಸಿಕೆರೆ 13ನೆಯ ಶತಮಾನ: ಎಂ.ಎ.ಆರ್. 1930, 72 ಸಾಗರ, ಕ್ರಿ.ಶ. 1528 : ಇ.ಸಿ. XI 116 ದಾವಣಗೆರೆ, ಕ್ರಿ.ಶ. 1397.

43. ಪಂಪಕವಿ ವಿರಚಿತ ಪಂಪಭಾರತಂ, ಪು. 138 : ಮಹಾಕವಿ ಕವಿರನ್ನ ವಿರಚಿತಮಪ್ಪ ಅಜಿತತೀರ್ಥಂಕರ ಪುರಾಣತಿಲಕಂ, ಪು. 10, 168.

44 ಬಸವಣ್ಣನವರ ವಚನಗಳು, 678, ಶಿವಶರಣೆಯರ ವಚನಗಳು, ಪು. 153 : ನಂಜುಂಡಕವಿವಿರಚಿತ ರಾಮನಾಥ ಚರಿತ ( ಉತ್ತರಾರ್ಧ ) (ಸಂ–3), ಪು. 336 : ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ, (ಸಂ–1 ) ಪು.205– 395.

45. ಎಡ್ಡಗೆರೆ ನಾಗಮ್ಮ : (ಸಂ) ವೈಜಂಯಂತಿಮಾಲ, ಪು.73, 80: ಜನಪದ ಖಂಡಕಾವ್ಯಗಳು: (ಸಂ) ಜೀ.ಶಂ.ಪರಮಶಿವಯ್ಯ, ಪು 14 ,15, 26, 76 : ಕತ್ತಾಲ ದಾರಿ ದೂರ : (ಸಂ) ಕೃಷ್ಣಮೂರ್ತಿ ಹನೂರ, 37, 114: ಜೀವನ ಜೋಕಾಲಿ : (ಸಂ) ಡಾ11 ಎಂ.ಎಸ್.ಸುಂಕಾಪುರ. ಪು.88–108.

46. 'ಕೆಂಪಮ್ಮ' — ಹುಟ್ಟಿದಹಳ್ಳಿ : ಸಂ|| ಅರ್ಚಕ ಬಿ. ರಂಗಸ್ವಾಮಿ, ಪು.91, 'ಕೊಂಡದ ಚೆನ್ನಮ್ಮ' — ಆಂಧ್ರ ಜನಪದ ಕಥೆಗಳು: ಸಂ|| ಜೀ.ಶಂ.ಪರಮಶಿವಯ್ಯ ಪು. 158: 'ತಂಗ್ಯಮ್ಮ' ಹಾಗೂ 'ಕೊಂಡದ ಮಾಸ್ತಮ್ಮ' — ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ|| ಬಸವರಾಜ ಕಲ್ಗುಡಿ, ಪು.281, 293,

47. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ: ಚೆನ್ನಕ್ಕ ಎಲಿಗಾರ, ಪು 446

48. ಸಂಭಾವನೆ ( ಶ್ರೀಕಂಠಯ್ಯನವರಿಗೆ.... ), '' ವೀರಗಲ್ಲು — ಮಾಸ್ತಿಗಲ್ಲು: ಶಿ. ತಾ. ಶರ್ಮ, ಪು.67.

49. ಜಯ ಕರ್ನಾಟಕ, ಸಪ್ಟಂಬರ, 1958, ಸಂ—36, ಸಂ—9, '' ಕನ್ನಡಿಗರ ಕೀರ್ತಿಯ ನೆಟ್ಟಗಲ್ಲುಗಳು'' : ಡಾ|| ಬಿ.ಎಸ್. ಗದ್ದಗಿಮಠ

50. ಇ.ಸಿ. VIII — I 38 ಹಿರೇಹಾರಕ, ಶಿಕಾರಿಪುರ, ಕ್ರಿ.ಶ. 1191, ಸಮಾಧಿಮೂಲಕ ಸತಿಹೋಗಿರಬಹುದಾದ ಸತಿಯರ ಮತ್ತು ವೀರರ ಸಮಾಧಿಗಳು, ಅವರ ನೆನಪಿನ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ತೀರ್ಥಹಳ್ಳಿಯ ಕವಲೆದುರ್ಗದಲ್ಲಿರುವುದನ್ನು ಗಮನಿಸಬಹುದು.

51. ಪ್ರ.ಕಂ.ಇಂ. ಸಂ—2: ಸಂ|| ಎಚ್.ಎಲ್.ನಾಗೇಗೌಡ.ಪು.461.

52. ಎಡ್ಡಗೆರೆ ನಾಗಮ್ಮ: ಸಂ|| ವೈಜಯಂತಿಮಾಲ, ಪು.72.

53. ಕತ್ತಾಲ ದಾರಿ ದೂರ: ಸಂ|| ಕೃಷ್ಣಮೂರ್ತಿ ಹನೂರ, ಪು.82—85. 'ಕೆಂಪಮ್ಮ' ಗೀತೆಯಲ್ಲಿ 'ಕಿರುನೆಲ್ಲಿ ಕೆಳಗೆ ಕೊಂಡ' ಎಂಬ ವಿವರ ಬರುತ್ತದೆ — ಹುಟ್ಟಿದಹಳ್ಳಿ : ಸಂ|| ಅರ್ಚಕ. ಬಿ. ರಂಗಸ್ವಾಮಿ, ಪು.93.

54. ಅದೇ ಪು. 112.

55. ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ|| ಬಸವರಾಜ ಕಲ್ಗುಡಿ, ಪು.331,

56. ಆಂಧ್ರ ಜನಪದ ಕಥೆಗಳು : ಸಂ|| ಜೀ. ಶಂ. ಪರಮಶಿವಯ್ಯ, ಪು.159.

57. ನಾಗವರ್ಮ ವಿರಚಿತ ಕರ್ನಾಟಕ ಕಾದಂಬರಿ : ಪು.155.

58· ನಂಜುಂಡಕವಿ ವಿರಚಿತ ರಾಮನಾಥ ಚರಿತ ( ಉತ್ತರಾರ್ಧ ) : ( ಸಂ—3) :
ಪು·336: ಇದೇ ರೀತಿ ದು ಆರ್ಕ್ ಬಾಬರ್ನಾಸಾ, ಚಿತೆಗಾಗಿ ಗಂಧಕ ಮರ ಉಪಯೋಗಿಸು ದನ್ನು ಹೇಳಿದ್ದಾನೆ — ಪ್ರ·ಕಂ·ಇಂ· — ಸಂ—2: ಸಂ॥ ಎಚ್·ಎಲ್' ನಾಗೇಗೌಡ·
ಪು· 297·

59· ವಡ್ಡಗೆರೆ ನಾಗಮ್ಮ : ಸಂ॥ ವೈಜಯಂತಿಮಾಲ, ಪು 71–72·

60· ಜನಪದ ಖಂಡಕಾವ್ಯಗಳು: ಸಂ॥ ಜೀ·ಶಂ·ಪರಮಶಿವಯ್ಯ,ಪು·76

61· ಕತ್ತಾಲ ದಾರಿ ದೂರ : ಸಂ॥ ಕೃಷ್ಣಮೂರ್ತಿ ಹನೂರ,ಪು· 37·

62· ಪು·103·

63· ಹುಟ್ಟಿದ ಹಳ್ಳಿ: ಸಂ॥ಅರ್ಚಕ ಬಿ· ರಂಗಸ್ವಾಮಿ, ಪು·94,ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ॥ ಬಸವರಾಜ ಕಲ್ಗುಡಿ, ಪು· 292·

64· ಉಲ್ಲೇಖ : ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ॥ ಬಸವರಾಜ ಕಲ್ಗುಡಿ ಪು·141·

65· ಜನಪದ ಖಂಡಕಾವ್ಯಗಳು : ಸಂ॥ ಜೀ·ಶಂ·ಪರಮಶಿವಯ್ಯ·ಪು 13–14·

66· ಕತ್ತಾಲದಾರಿ ದೂರ : ಕೃಷ್ಣಮೂರ್ತಿ ಹನೂರ, ಪು 90

67· ಜನಪದ ಖಂಡಕಾವ್ಯಗಳು : ಸಂ॥ ಜೀ·ಶಂ· ಪರಮಶಿವಯ್ಯ,ಪು· 14,25,76, ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ॥ ಬಸವರಾಜ ಕಲ್ಗುಡಿ, ಪು·330

68· ಪ್ರ·ಕಂ·ಇಂ· ಸಂ—4: ಸಂ॥ ಎಚ್·ಎಲ್·ನಾಗೇಗೌಡ· ಪು·248·

69· ಬಯಲು ಸೀಮೆಯ ಲಾವಣಿಗಳು: ಸಂ॥ ಕಾಳೇಗೌಡ ನಾಗವಾರ,ಪು·73–88

70· ಇ·ಸಿ· III 60, ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ· ಶ· 1057·

71· ಶಿವಶರಣೆಯರ ವಚನಗಳು: ಪು· 153·

72· ಬಸವಣ್ಣನವರ ವಚನಗಳು·678·

73. ನಂಜುಂಡಕವಿ ವಿರಚಿತ ರಾಮನಾಥ ಚರಿತ ( ಉತ್ತರಾರ್ಧ ) : (ಸಂ–3) : ಪು. 336 — 337.

74. ಉಂಡೇಶ್ವರ ವಚನ ( ಷಣ್ಮುಖಸ್ವಾಮಿ ) ವ. 138

75. ಕನಕದಾಸರ ಮೋಹನ ತರಂಗಿಣಿ ಸಂಗ್ರಹ: ಪು 27

76. ಕತ್ತಾಲ ದಾರಿ ದೂರ : ಸಂ॥ ಕೃಷ್ಣಮೂರ್ತಿ ಹನೂರ, ಪು. 82–83
'ಕೊಂಡದ ಮಾಸ್ತ್ಯಮ್ಮ' ಹಾಡಿನಲ್ಲಿಯೂ ಇದೇ ರೀತಿ ಬರುತ್ತದೆ:

> ಆಳುದ್ದ ಕೊಂಡಾಕ ಗೇಣುದ್ದ ಮುಚ್ಚಲುಗಲ್ಲು
> ಅಪ್ಪಗೊಡಲಿಗೌಡ ತಗುಸಣ್ಣ
> ಅಪ್ಪಗೊಡಲಿಗೌಡ ತಗುಸಣ್ಣ 1 ಕೆಂಚನೋರ
> ಎಣುಮಗಳೇ ಕೊಂಡ ಮೋಗತೀನಿ,

ಮಹಾಸತಿಪಾಆಚರಣೆ ಒಂದು ಅಧ್ಯಯನ: ಡಾ॥ ಬಸವರಾಜ ಕಲ್ಗುಡಿ, ಪು.299
ಡಾ॥ ಬಸವರಾಜ ಕಲ್ಗುಡಿಯವರು ಹೊದಿಗೆರೆಯ ಮಾಸ್ತಿ 'ದಹನವಾದ ಆಯತಾಕಾರದ ಜಾಗವೆಂದು ಹೇಳುವ ಕೊಂಡ, ಸುತ್ತಲೂ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದೆ ಎಂಬುದನ್ನು ಇಲ್ಲಿ ಸ್ಮರಿಸಬಹುದು. ಅದೇ, ಪು. 187.

77. ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ : ಸಂ–2: ಪು. 658,559

78. ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ॥ ಬಸವರಾಜ ಕಲ್ಗುಡಿ ,ಪು 299

79. ಕತ್ತಾಲ ದಾರಿ ದೂರ : ಸಂ॥ ಕೃಷ್ಣಮೂರ್ತಿ ಹನೂರ, ಪು.37

80. ಪ್ರ.ಕಂ.ಇಂ. ಸಂ–2: ಸಂ॥ ಎಚ್.ಎಲ್ ನಾಗೇಗೌಡ. ಪು.297

81. ಉಂಡೇಶ್ವರ ವಚನ ( ಷಣ್ಮುಖಸ್ವಾಮಿ ) ವ 138.

82. ಕತ್ತಾಲ ದಾರಿ ದೂರ : ಸಂ॥ ಕೃಷ್ಣಮೂರ್ತಿ ಹನೂರ, ಪು.92.

83. ನಂಜುಂಡಕವಿ ವಿರಚಿತ ರಾಮನಾಥ ಚರಿತ ' (ಉತ್ತರಾರ್ಧ ) ( ಸಂ–3) : ಪು.337.

84. ಪ್ರ.ಕಂ.ಇಂ. ಸಂ–2: ಎಚ್.ಎಲ್. ನಾಗೇಗೌಡ. ಪು.461.

85. ಕತ್ತಾಲ ದಾರಿ ದೂರ: ಸಂ॥ ಕೃಷ್ಣಮೂರ್ತಿ ಹನೂರ, ಪು.38, 103: ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ॥ ಬಸವರಾಜ ಕಲ್ಗುಡಿ. ಪು.300

86. ಮಹಾಕವಿ ಕವಿರನ್ನ ವಿರಚಿತಮಪ್ಪ 'ಅಜಿತತೀರ್ಥಂಕರ ಪುರಾಣತಿಲಕಂ : ಪು.10.

87. ನಾಗವರ್ಮ ವಿರಚಿತ ಕರ್ನಾಟಕ ಕಾದಂಬರಿ : ಪು. 155

88. ಕರ್ನಾಟಕದ ವೀರಗಲ್ಲುಗಳು: ಡಾ॥ ಆರ್ ಶೇಷಶಾಸ್ತ್ರಿ. ಪು. 289

89. ಜನಪದ ಖಂಡಕಾವ್ಯಗಳು : ಸಂ॥ ಜೀ. ಶಂ. ಪರಮಶಿವಯ್ಯ. ಪು.76

90 ಜೀವನ ಜೋಕಾಲಿ : ಸಂ॥ ಡಾ॥ ಎಂ.ಎಸ್. ಸುಂಕಾಪುರ. ಪು.88—108.

91. ಮಹಾಸತಿ ಆಚರಣೆ ಒಂದು ಅಧ್ಯಯನ: ಡಾ॥ ಬಸವರಾಜ ಕಲ್ಗುಡಿ ಪು.331.

92. ಇ.ಸಿ. VII 60, ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ. ಶ. 1057

93. ಕೆ.ಅಂಯ್ IV ಮುತ್ತೂರ, ಹಿರೇಕೆರೂರ, ಸು.ಕ್ರಿ. ಶ. 1382.

94. ಅನುಕ್ರಮವಾಗಿ : ಇ.ಸಿ.VI 81 ಅಗ್ರಹಾರಬಾಚಹಳ್ಳಿ, ಕೃಷ್ಣರಾಜಪೇಟೆ, ಸು. 13ನೆಯ ಶತಮಾನ, ಇ.ಸಿ. VIII–II 361, ಬೆನ್ನೂರು, ಸೊರಬ, ಕ್ರಿ. ಶ. 1259 (?) : ಇ.ಸಿ.V–II 21 ಉಂಡಿಗನಾಳಗ್ರಾಮ, ಅರಸಿಕೆರೆ,? : ಇ.ಸಿ.XI 116, ದಾವಣಗೆರೆ ಕ್ರಿ. ಶ. 1397 : ಎಂ.ಎ.ಆರ 1930,72 ಸಾಗರ, ಕ್ರಿ.ಶ. 1582.

95. ಅನುಕ್ರಮವಾಗಿ : ಇ.ಸಿ.VIII–II 78 ಸೇಣಗೆ, ಸಾಗರ,ಕ್ರಿ.ಶ. 1265: ಇ.ಸಿ.VII–I 141 ಬೆಳಗಾಮಿ, ಂಕಾರಿಪುರ,ಕ್ರಿ.ಶ. 1286: ಎಂ.ಎ.ಆರ 1938 ಶಂಕರನಹಳ್ಳಿ, ಅರಸಿಕೆರೆ, 13ನೆಯ ಶತಮಾನ.

96. ಪ್ರ.ಕಂ.ಇಂ — ಸಂ—2: ಎಚ್.ಎಲ್.ನಾಗೇಗೌಡ.ಪು.296.

97. ಜನಪದ ಖಂಡಕಾವ್ಯಗಳು : ಸಂ॥ ಜೀ.ಶಂ.ಪರಮಶಿವಯ್ಯ, ಪು.19: ಲಾವಣಿಗಳು: ಸಂ॥ ಕೆ. ಮರುಳಸಿದ್ಧಪ್ಪ, ಪು. 112: ಆಂಧ್ರ ಜನಪದ ಕಥೆಗಳು: ಸಂ॥ ಜೀ.ಶಂ. ಪರಮಶಿವಯ್ಯ, ಪು.159

98· ಬಸವಣ್ಣನವರ ಟೀಕಿನ ವಚನಗಳು, ವ 680·

99· ಕುಮಾರರಾಮನ ಸಾಂಗತ್ಯಗಳು: ಜೀ·ವರದರಾಜನ್, ಪು· 152·

100· ಜನಪದ ಖಂಡಕಾವ್ಯಗಳು: ಸಂ॥ ಜೀ·ಶಂ· ಪರಮಶಿವಯ್ಯ ಪು·26

101· ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ॥ ಬಸವರಾಜ ಕಲ್ಗುಡಿ·ಪು·359

102· ಕತ್ತಾಲ ದಾರಿ ದೂರ: ಸಂ॥ ಕೃಷ್ಣಮೂರ್ತಿ ಹನೂರ,ಪು·41·

103· ನಂಜುಂಡಕವಿಯ ರಾಮನಾಥಚರಿತ ( ಉತ್ತರಾರ್ಧ ) (ಸಂ–3),ಪು· 337·

104· ಸಂಗಮ ರಾಜಕೀಯ ಸಾಮಾಜಿಕ ವ್ಯವಸ್ಥೆ: ಮೂಲ : ಎನ್· ಸುಬ್ರಮಣಿಯನ್ ಅನು: ನಿರಂಜನ, ಪು 363·

105· ಜೀವನ ಜೋಕಾಲಿ : ಸಂ॥ ಡಾ॥ ಎಂ·ಎಸ್· ಸುಂಕಾಪುರ, ಪು·88–108·

106· ಇ·ಸಿ·III 60 ಬೆಳತೂರು, ಹೆಗ್ಗಡದೇವನಕೋಟೆ,ಕ್ರಿ· ಶ· 1057·

107 ಕತ್ತಾಲ ದಾರಿ ದೂರ: ಸಂ॥ ಕೃಷ್ಣಮೂರ್ತಿ ಹನೂರ, ಪು·93·

108· ಜನಪದ ಖಂಡಕಾವ್ಯಗಳು: ಸಂ॥ ಜೀ·ಶಂ·ಪರಮಶಿವಯ್ಯ, ಪು·19

109· ಬಸವಣ್ಣನವರ ಟೀಕಿನ ವಚನಗಳು : ವ 680·

110· ಪ್ರ·ಕಂ·ಇಂ· ಸಂ–2: ಸಂ॥ ಎಚ್·ಎಲ್· ನಾಗೇಗೌಡ· ಪು·296·

111· ಅದೇ, ಪು· 461·

112· ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ॥ ಬಸವರಾಜ ಕಲ್ಗುಡಿ,ಪು·141·

113· ನಂಜುಂಡಕವಿ ವಿರಚಿತ ರಾಮನಾಥ ಚರಿತ ( ಉತ್ತರಾರ್ಧ ),(ಸಂ–3), ಪು·336·

114· ಜೀವನ ಜೋಕಾಲಿ : ಸಂ॥ ಎಂ·ಎಸ್· ಸುಂಕಾಪುರ,ಪು·88–108·

115· ಕತ್ತಾಲ ದಾರಿ ದೂರ : ಸಂ॥ ಕೃಷ್ಣಮೂರ್ತಿ ಹನೂರ, ಪು·42·

116 ನಂಜುಂಡಕವಿ ವಿರಚಿತ ರಾಮನಾಥ, (ಉತ್ತರಾರ್ಧ ), (ಸಂ–3),ಪು·338·

117· ಎಸ್·ಐ·ಐ· XVIII 413 ಹೆಡಿಯಾಲ, ರಾಣೇಬೆನ್ನೂರು, ಕ್ರಿ·ಶ 1404·

118 ಇ·ಸಿ· VIII - II 499 ಕುಂಬತಿಗ್ರಾಮ ಸೊರಬ, ?

119 ಅದೇ, 36 ಗುಂಜನೂರು, ?

120· ಅದೇ 496 ಕುಪ್ಪೆಗ್ರಾಮ ಕ್ರಿ· ಶ· 1457

121· ಇ·ಸಿ· VII - I 93 ಬೆಳಗಾವಿ, ಶಿಕಾರಿಪುರ, ಕ್ರಿ· ಶ· 1422

122· ಸಿರುಮಣನಾಯಕನ ಸಾಂಗತ್ಯ : ಸಂ॥ ಡಾ॥ ಎಂ·ಎಂ·ಕಲಬುರ್ಗಿ
ಪು 68

123· ಇ·ಸಿ· VIII - II 165, ಹರೂರ, ಸೊರಬ, ಕ್ರಿ·ಶ· 1509(?)

124· ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ॥ ಎಂ·ಎಂ·ಕಲಬುರ್ಗಿ
ಪು·39—40 : ಈ ಮೊದಲು “ಜೀವವಿರುವಾಗಲೇ ಮಣ್ಣನ್ನು ಮುಚ್ಚಿಸಿಕೊಂಡಳು” ಎಂಬ ಅಭಿಪ್ರಾಯವು ‘ಕರ್ನಾಟಕದಲ್ಲಿ ಮಾಸ್ತಿ’ ಎಂಬ ಲೇಖನದಲ್ಲಿ ಪ್ರಕಟಗೊಂಡಿತ್ತು· ಸಾಧನೆ 4 —2, ಪು·121·

125 ಪ್ರಜಾವಾಣಿ, ಬಾನುವಾರ, 10ನೇ ಮೇಲ್ 1981 ಸಾಪ್ತಾಹಿಕ ಪುರವಣಿ, ಪು·4·

126· ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು : ಡಾ॥ ಎಂ·ಎಂ·ಕಲಬುರ್ಗಿ,
ಪು·42

127· ಕರ್ನಾಟಕದ ವೀರಗಲ್ಲುಗಳು: ಡಾ॥ ಆರ್· ಶೇಷಶಾಸ್ತ್ರಿ, ಪು·313·

128· ಅದೇ, ಪು·87

129· ಅದೇ

130· ಪ್ರ·ಕಂ·ಇಂ, ಸಂ—2: ಎಚ್·ಎಲ್·ನಾಗೇಗೌಡ, ಪು·463·

131· ಅದೇ, ಪು·423

132· ಅದೇ, ಪು·298

133· ನಯಸೇನ ವಿರಚಿತ ಧರ್ಮಾಮೃತ, ಪು·93·

134· ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂ–2: ಪ್ರ·ಸಂ : ಕೆ·ವಿ· ಪುಟ್ಟಪ್ಪ, "ಹಿಂದೂ ಸಂಸ್ಕಾರಗಳು" : ಆರ್· ಬಿ· ಪಾಂಡೆ ( ಅನು ) ಎ·ಎಲ್· ಶಿವರುದ್ರಪ್ಪ, ಪು·303·

135· ಇ·ಸಿ· III, 61 ಹೆಬ್ಬಲಗುಪ್ಪೆ, ಹೆಗ್ಗಡದೇವನಕೋಟೆ, ಕ್ರಿ·ಶ· 1088–89

136· ಇ·ಸಿ· II, 172, ಶ್ರವಣಬೆಳಗೊಳ, ಕ್ರಿ· ಶ·ಸು·950·

137· ಇ·ಸಿ· I 43, ಮುಳ್ಳೂರು, ಸೋಮವಾರಪೇಟೆ, ಕ್ರಿ·ಶ· 1077

138· ಅದೇ, 44 ಮುಳ್ಳೂರು, ಕ್ರಿ·ಶ·1077

139· ಇ·ಸಿ· V 112, ಹಳೇಬೀಡು, ಬೇಲೂರು, ಕ್ರಿ·ಶ·1220·

140· ಇ·ಸಿ· IV 9 ಬಾಚಹಳ್ಳಿ, ಕೃಷ್ಣರಾಜಪೇಟೆ, ಕ್ರಿ·ಶ·1257 : ಅದೇ 10 ಬಾಚಹಳ್ಳಿ ಕ್ರಿ· ಶ· 1292·

141· ನಂಜುಂಡಕವಿ ವಿರಚಿತ ರಾಮನಾಥ ಚರಿತ (ಉತ್ತರಾರ್ಧ ) (ಸಂ–3), ಪು·484, 485·

142· ಸಿರುಮಣನಾಯಕನ ಸಾಂಗತ್ಯ, ಪು· 98, 99·

143· ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ|| ಎಂ· ಚಿದಾನಂದಮೂರ್ತಿ, ಪು·45

— 0 —

Chapter-8

## ಅಧ್ಯಾಯ — 8

## 'ಮಾಸ್ತಿಕಲ್ಲುಗಳು ಮತ್ತು ಅವುಗಳ ಪಾಠ'

'ಮಹಾಸತಿ' ಎಂಬುದರ ತದ್ಭವ ರೂಪವೇ 'ಮಾಸ್ತಿ' ಹೀಗಿದ್ದು ಅರ್ಥ ವ್ಯಾಪ್ತಿಯಲ್ಲಿ ಎರಡು ಸಮನಾಗಿಲ್ಲ. ರಾಮಾಯಣ ಮಹಾಭಾರತದ ಸೀತೆ—ದ್ರೌಪದಿಯರನ್ನು, ಕನ್ನಡ ನಾಡಿನ, ಅತ್ತಿಮಬ್ಬೆ—ಶಾಂತಲೆಯರನ್ನು ಮಹಾಸತಿಯರೆಂದು ಗುರುತಿಸುವಂತೆ 'ಮಾಸ್ತಿ'ಯರೆಂದು ಗುರುತಿಸುವಂತಿಲ್ಲ. ಗಂಡನ ಮರಣದ ನಂತರ ಜೀವಂತ ಮರಣವಪ್ಪಿದ್ದ ಸತಿಯನ್ನು ಮಾಸ್ತಿ ಎಂದು ಗುರುತಿಸಲಾಗುತ್ತದೆ. ಮಾಸ್ತಿಯಾದವರೆನ್ನೆಲ್ಲ ಮಹಾಸತಿಯರೆಂದು ಕರೆಯಬಹುದಾದಂತೆ ಮಹಾಸತಿಯರನ್ನೆಲ್ಲ ಮಾಸ್ತಿಯರೆಂದು ಕರೆಯುವಂತಿಲ್ಲ.

ಕರ್ನಾಟಕದಲ್ಲಿ ಮಹಾಸತಿಯರ ಸ್ಮಾರಕವಾಗಿ ಮಾಸ್ತಿಕಲ್ಲುಗಳಿವೆ. ಇವು ಪಾಠ ಮತ್ತು ಶಿಲ್ಪ — ಈ ಎರಡೂ ದೃಷ್ಟಿಗಳಿಂದಲೂ ತುಂಬ ಮಹತ್ವದವುಗಳಾಗಿವೆ. ಕರ್ನಾಟಕದ ಜನತೆ ಸತಿಘಟನೆಗಳನ್ನು ಪಾಠ ಮತ್ತು ಶಿಲ್ಪಗಳಲ್ಲಿ ಕಂಡರಿಸುವ ಪ್ರಯತ್ನವನ್ನು ಮಾಡುತ್ತ ಬಂದಿದ್ದಾರೆ. ಮಾಸ್ತಿಕಲ್ಲುಗಳನ್ನು ನಿರ್ಮಿಸುತ್ತಿದ್ದುದರ ಉದ್ದೇಶಗಳು, ಅವುಗಳನ್ನು ಹಾಕಿ ನಿಲ್ಲಿಸುತ್ತಿದ್ದ ಸ್ಥಳಗಳು, ಅವುಗಳನ್ನು ಹಾಕಿಸುತ್ತಿದ್ದವರು, ಅವುಗಳ ಪಾಠಗಳಲ್ಲಿಯ ವಸ್ತು ಮತ್ತು ನಿರೂಪಣಾ ವಿಧಾನಗಳು, ಅವುಗಳ ಸಾಹಿತ್ಯಕಶೈಲಿ ಇತ್ಯಾದಿಗಳ ಅಧ್ಯಯನ ತುಂಬ ಉಪಯುಕ್ತವಾದುದಾಗಿದೆ. ಮಾಸ್ತಿಕಲ್ಲುಗಳ ಶಿಲ್ಪದ ಅಧ್ಯಯನವಂತೂ ಇವೆಲ್ಲವುಗಳಿಗಿಂತ ಇನ್ನೂ ಹೆಚ್ಚಿನ ಉಪಯುಕ್ತತೆಯನ್ನು ಪಡೆದುದಾಗಿದೆ. ಈಗ ಈ ಅಧ್ಯಾಯದಲ್ಲಿ, ಮಾಸ್ತಿ ಕಲ್ಲುಗಳು ಮತ್ತು ಅವುಗಳ ಪಾಠಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಮುಂದಿನ ಅಧ್ಯಾಯದಲ್ಲಿ ಮಾಸ್ತಿಕಲ್ಲುಗಳ ಶಿಲ್ಪದ ಕುರಿತಾಗಿ ದೀರ್ಘ ಚಿಂತನೆಯನ್ನು ಮಾಡಬಹುದಾಗಿದೆ.

### ಮಾಸ್ತಿಕಲ್ಲುಗಳ ನಿರ್ಮಾಣದ ಉದ್ದೇಶ :

ಮಾಸ್ತಿಕಲ್ಲುಗಳನ್ನು ಯಾವ ಉದ್ದೇಶಗಳಿಂದ ಪ್ರೇರಿತರಾಗಿ ಹಾಕಿಸುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ಹೆಚ್ಚಿನ ವಿವರಣೆ ದೊರಕುವುದಿಲ್ಲ. ಲೌಕಿಕ ಮತ್ತು ಧಾರ್ಮಿಕ ಈ ಎರಡೂ ಉದ್ದೇಶಗಳಿಂದಲೂ ಮಾಸ್ತಿಕಲ್ಲುಗಳನ್ನು ಹಾಕಿಸುತ್ತಿದ್ದರೆಂದು ಹೇಳಲು ಕೆಲವು ಆಧಾರಗಳು ದೊರಕುತ್ತವೆ. ಮಾಸ್ತಿಕಲ್ಲುಗಳನ್ನು ಹಾಕಿಸುತ್ತಿದ್ದವರು ಮಹಾಸತಿಯಾದವಳ ಮೇಲಿನ ಪ್ರೀತಿಯಿಂದಲೋ,

ಅವಳ ಘನತೆ ಜಗತ್ತಿನಲ್ಲಿ ಪ್ರಕಟಗೊಳ್ಳಲೆಂದೋ ಅವುಗಳನ್ನು ಹಾಕಿಸುತ್ತಿದ್ದರು. ಇಂಥ ಉದ್ದೇಶಗಳು ಲೌಕಿಕ ಉದ್ದೇಶಗಳೆನಿಸಿಕೊಳ್ಳುತ್ತವೆ. ಸತಿಹೋದ ಮಹಾಸತಿಯರಿಗೆ ಶ್ರೇಯಸ್ಸು ದೊರೆಯಲೆಂಬ ಹಾರೈಕೆಯ ಹಿನ್ನೆಲೆಯಲ್ಲಿಯೂ ಮಾಸ್ತಿಕಲ್ಲುಗಳನ್ನು ಹಾಕಿಸುತ್ತಿದ್ದು, ಇದು ಧಾರ್ಮಿಕ ಉದ್ದೇಶವೆನಿಸಿಕೊಳ್ಳುತ್ತದೆ.

ದೇಕಬ್ಬೆಯ ಶಾಸನದಲ್ಲಿ, ಆ ಶಾಸನ ನಿರ್ಮಾಣದ ಉದ್ದೇಶವನ್ನು ಶಾಸನಕವಿ ಬಾಯಿಬಿಟ್ಟು ಹೇಳಿದ್ದಾನೆ. ಹೀಗೆ ಇಂಥ ವಿಷಯವನ್ನು ಇಷ್ಟೊಂದು ಸ್ಪಷ್ಟವಾಗಿ ತಿಳಿಸುವ ಶಾಸನ ಮತ್ತೊಂದಿಲ್ಲವೆಂದೇ ಹೇಳಬೇಕು. ದೇಕಬ್ಬೆಯ ತಂದೆ ರವಿಗನು '' ನಿಜಸುತೆಗನು- ರಾಗದಿಂ ಮಣ್ಡಲಕ್ಕೆಲ್ಲಂ ಪಡಿಘನ್ದಮಾಗೆ ಶಿಲಾಸ್ತಂಭ ಶಾಸನಮಾಗೆ ನಟ್ಟಂ '' ಎಂದು ವಾಕ್ಯವೊಂದು ಅಲ್ಲಿ ಬರುತ್ತದೆ.[1] ಈ ವಾಕ್ಯ ರವಿಗ ತನ್ನ ಮಗಳ ಸತಿ ಸ್ಮಾರಕ ನಿಲ್ಲಿಸುವಲ್ಲಿ ಎರಡು ಉದ್ದೇಶಗಳನ್ನಿಟ್ಟುಕೊಂಡಿರುವುದನ್ನು ಸ್ಪಷ್ಟಪಡಿಸುತ್ತದೆ. ಒಂದು, ಮಗಳ ಮೇಲಿನ ಮಮತೆಯಾದರೆ, ಇನ್ನೊಂದು, ಜಗತ್ತಿನಲ್ಲಿ ಅವಳ ಪ್ರತಿರೂಪದ ಶಿಲಾ — ಶಾಸನವೊಂದು ನಿಲ್ಲಬೇಕು ಎಂಬುದಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಮಾಸ್ತಿ ಕಲ್ಲುಗಳನ್ನು ನಿಲ್ಲಿಸಿದವರು ಸಾಮಾನ್ಯವಾಗಿ ಬಂಧುವರ್ಗದವರಾಗಿದ್ದನ್ನು ಸ್ಮರಿಸಿಕೊಂಡರೆ, ಅವು ಕೂಡ ಹೆಚ್ಚಾಗಿ ಪ್ರೀತಿಯ ಪ್ರೇರಣೆಯಿಂದಲೇ ರಚನೆಗೊಂಡವು ಎಂದು ಹೇಳಬಹುದಾಗಿದೆ. ' ಮಂಡಲಕ್ಕೆಲ್ಲಂ ಪಡಿಘಂದಮಾಗೆ' ಅಂದರೆ ತನ್ನ ಬೆಳತೂರು ಮಂಡಲಕ್ಕೆಲ್ಲ, ಅಷ್ಟೇ ಏಕೆ ಭೂಮಂಡಲಕ್ಕೆಲ್ಲ ಪ್ರತಿರೂಪವೆನ್ನುವಂತೆ ಶಿಲಾಸ್ತಂಭ ಶಾಸನವನ್ನು ನೆಟ್ಟನು. ದೇಕಬ್ಬೆಯ ಪ್ರತಿರೂಪ ( ಪಡಿಘನ್ದ ) ವಾಗಿ ಶಿಲಾಸ್ತಂಭಶಾಸನ ನೆಡುವ ಕಲ್ಪನೆ ವೈಭವಯುತವಾದುದು. ದೇಕಬ್ಬೆ ಕೊಂಡದಗ್ನಿಯಲ್ಲಿ ಕರಗಿ ಹೋದರೂ ಅವಳು ತನ್ನ ಪ್ರತಿರೂಪವಾಗಿ ಶಿಲಾಸ್ತಂಭ ಶಾಸನದಲ್ಲಿ ಶಾಶ್ವತವಾದ ಉಸಿರಾಟ ಮಾಡುತ್ತಿದ್ದಾಳೆ. ಅವಳ ತಂದೆ ರವಿಗನ ಉದ್ದೇಶವೂ ಶಾಸನ ಕಲ್ಲ ನಿಲ್ಲಿಸುವಲ್ಲಿ ಇದೇ ಆಗಿತ್ತು ಎಂಬುದನ್ನು ಮರೆಯಬಾರದು. ಇದೇ ರೀತಿ ಮಹಾಸತಿಯರನ್ನು ಕಲ್ಲಿನಲ್ಲಿ ಕಂಡರಿಸಿ, ಅವರನ್ನು ಚಿರಸ್ಥಾಯಿಯಾಗಿಸಲು, ಅವರ ಘನತೆಯನ್ನು ಜನತೆಯಲ್ಲಿ ಪ್ರಕಟಪಡಿಸಲು ಪ್ರಯತ್ನಿಸಿದ್ದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಹೆಡಿಯಾಲ ಶಾಸನವೊಂದು, ಗಂಡ ಮರಣಹೊಂದಲಾಗಿ ಪತ್ನಿ ಮಲಿದೇವಿ ಸಮಾಧಿಮಾಲಕ ಸತಿಹೋದುದನ್ನು ತಿಳಿಸಿ, '' ಮಹಾಸತಿಯ ಪ್ರತುಮೆ (ಪ್ರ) ತಿಷ್ಟೆ ಮಾಡಿಸಿದ ಮಗ

ಮಾದೆಯನಾಯ(ಂ)ಕನು ’’ ಎಂದು ವಿವರಿಸುತ್ತದೆ.[2] ಬೆಳತೂರು ಶಾಸನದಲ್ಲಿ ದೇಕಬ್ಬೆಯ ಪ್ರತಿರೂಪ ಹಿಡಿದಿಡಲು ಪ್ರಯತ್ನಿಸಿದಂತೆ, ಇಲ್ಲಿ ಈ ಮಾಸ್ತಿಕಲ್ಲಿನಲ್ಲಿ ಮಲೆದೇವಿಯ ಪ್ರತಿಮೆ ಪ್ರತಿಷ್ಠೆಗೊಳಿಸಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ. ಇದೇ ರೀತಿ, ವೀರಗಲ್ಲಿನಲ್ಲಿ ‘ಮಾಸ್ತಿಯ ಪ್ರತಿಷ್ಟ’ ಎಂಬ ವಿವರ ಸಿಡೇನೂರು ಶಾಸನದಲ್ಲಿ ಬರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಮೃತನ ಪತ್ನಿಯೊಬ್ಬಳು ಸತಿಹೋಗಿ ಸ್ವರ್ಗಸ್ಥೆಯಾಗಲಾಗಿ, ಅದಕ್ಕಾಗಿ ‘ಮಗ್ಗಿಳ’ ಉಂಟಾಗಲಿ ಎಂದು ಶಾಸನವೊಂದು ಹೇಳುತ್ತದೆ. ಶಾಸನಪಾಠ ಹೀಗಿದೆ: ‘‘ಮನೆವನೆಯ ಬಿಠರಕನು ಸತ್ತಲಿ ಆತನ ಮದಾರ್ಥಂಗಿ ಅಮಿಗುಡಿ ಕೂಡೆ ಸ್ವರ್ಗಸ್ಥೆಯಾದಳು ಇಂತಪುದಕ್ಕೆ ಮಗಳ ಮಹಾಶ್ರೀಶ್ರೀಶ್ರೀ’[4] ಅಮಿಗೂಡ ಸಹಗಮನ ಮಾಡಿ ಸ್ವರ್ಗಸ್ಥಳಾದುದಕ್ಕೆ ‘ಮಂಗಳ ಮಹಾಶ್ರೀಶ್ರಿ’ ಎಂದು ಹೇಳುವುದು, ಸತಿಯ ಮುಂದಿನ ಸ್ವರ್ಗದ ಬದುಕಿಗೆ ಮಂಗಳವನ್ನು ಹಾಡಿದುದೇ ಆಗಿದೆ. ‘‘ಸ್ವರ್ಗಸ್ಥೆಯಾದಳು ಇಂತಯಪುದಕ್ಕೆ ಮಂಗಳ ಮಹಾಶ್ರೀಶ್ರೀ’ ಎಂಬಲ್ಲಿ ಸ್ವರ್ಗಸ್ಥಳಾದುದಕ್ಕೆ ಮಂಗಳ ಎಂಬುದೇ ಇಲ್ಲಿಯ ಧ್ವನಿಯಾಗಿದೆ. ಇನ್ನೊಂದು ಶಾಸನದಲ್ಲಿ ಇಂಥ ವಿಷಯ ಇನ್ನು ಸ್ಪಷ್ಟಗೊಂಡಿರುವುದನ್ನು ಗುರುತಿಸಬಹುದು. ‘‘........ ತಂನ ಪತಿ ಜೊಕ್ಕಗೌಡನ ಕೂಡೆ ಸ್ವರ್ಗಸ್ಥೆಯಾದಲ್ಲಿ....... ಜಗುಡನು (ನಿ) ಲಿಸಿದ ಕಲ್ಲಿಗೆ ಮಂಗಳ ಮಹಾಶ್ರೀಶ್ರೀ’’ ಎಂದು ಆ ಶಾಸನ ತಿಳಿಸುತ್ತದೆ.[5] ಇಲ್ಲಿ ಸಹಗಮನಗೊಂಡ ಮೇಲೆ ಕಲ್ಲು ನಿಲ್ಲಿಸಿದುದು ಸ್ಪಷ್ಟವಿದೆ. ಆ ‘‘ಕಲ್ಲಿಗೆ ಮಂಗಳ’’ ಎಂಬ ಅಪರೂಪದ ವಿವರಣೆ ಬಂದಿದೆ. ಇದೇ ರೀತಿ ಉತ್ತರಾಣಿಹಳ್ಳಿ ಶಾಸನದಲ್ಲಿ ‘‘ಮದವಳಿಗೆ ನಾಗಂಮ ಕೂಡೆ ಸಹಗಮನವಾದಲ್ಲಿ ನಿಲಿಸಿದ ಮಾಸ್ತಿಕಳು ಪ್ರತಿಷ್ಟೆಗೆ ಮಂಗಳ ಮಹಾಶ್ರೀಶ್ರೀಶ್ರೀ’’ ಎಂದು ಹಿರೇಹಾರಕ ಶಾಸನದಲ್ಲಿ, ‘‘ಬೊಮ್ಮಗುಡಿ ಆ ರಾಮಗುಡರ ಕೂಡಿ ಸಹಗಮನ ಮಾಡಿ ರಾಮಗುಡಬೊಮ್ಮಕನುಸ್ವರ್ಗ್ಗವ ಸೂರೆಗೊಂಡರು ಎಂದು ಬರದಶಿಲಾಶಾಸನಕ್ಕೆ ಮಂಗಳಮಹಾಶ್ರೀಶ್ರೀಶ್ರೀ’’ ಎಂದು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ[6] ನಿಲ್ಲಿಸಿದ ಮಾಸ್ತಿಕಲ್ಲಿಗೆ ಮಂಗಳ ಎಂದು ಹೇಳುವ ಅದು ಮಂಗಲ-ಕರವಾಗಿ ಉಳಿದುಕೊಳ್ಳಲಿ ಎಂದು ಬಯಸುವುದೇ ಆಗಿದೆ. ಹೀಗೆ ಕಲ್ಲನಿಟ್ಟು ಸತಿಗೆ ಶ್ರೇಯಸ್ಸು ಬಯಸುವುದು ಸಾಮಾನ್ಯವಾಗಿರಬೇಕೆನಿಸುತ್ತದೆ. ಹಲವು ಮಾಸ್ತಿಕಲ್ಲುಗಳ ಪಾಠದ ಕೊನೆಯಲ್ಲಿ ‘ಮಂಗಳ ಶ್ರೀಶ್ರೀ’ ಎಂದು ಉಲ್ಲೇಖಿತಗೊಂಡಿರುವುದನ್ನು ಈ ಸಂದರ್ಭಗಳಲ್ಲಿ ಸ್ಮರಿಸಬಹುದಾಗಿದೆ.

ಮಾಸ್ತಿಕಲ್ಲುಗಳನ್ನು ಹಾಕಿಸುತ್ತಿದ್ದವರು:

ಮೃತನ ಪತ್ನಿ ಸತಿಹೋಗಲಾದಿ ಅವಳ ನೇರಸಂಬಂಧಿಗಳು ಅಥವಾ ಅವಳ ಮೇಲೆ ಪ್ರೀತಿ, ಅಭಿಮಾನವಿಟ್ಟವರು ಅವಳ ಸ್ಮಾರಕವಾಗಿ ಮಾಸ್ತಿಕಲ್ಲುಗಳನ್ನು ಹಾಕಿಸುತ್ತಿದ್ದರು. ಮಾಸ್ತಿಕಲ್ಲುಗಳ ಪಾಠಗಳಲ್ಲಿ ಈ ಕುರಿತು ಹೆಚ್ಚಿನವಿವರಣೆಗಳೂ ದೊರಕುವುದಿಲ್ಲ. ಕಲ್ಲು ನೆಡುವವರಿಗೆ ತಮ್ಮ ಹೆಸರನ್ನು ಅವುಗಳ ಮೇಲೆ ಹಾಕಿಸುವಲ್ಲಿ ಅಂಥ ಮಹತ್ವವೂ ಕಂಡಿರಲಿಕ್ಕಿಲ್ಲ. ಸತಿಹೋದವಳಿಗೆ ಹಾಗೆ ಕಲ್ಲು ನೆಡುವುದು ಕರ್ತವ್ಯ ಎನ್ನುವ ರೀತಿಯಲ್ಲಿ ಅವುಗಳನ್ನು ಸಹಜವಾಗಿ ನಿಲ್ಲಿಸಿ ಬಿಡುತ್ತಿದ್ದರೆನಿಸುತ್ತದೆ.

ಕೆಲವು ಮಾಸ್ತಿಕಲ್ಲುಗಳಲ್ಲಿ ಅವುಗಳನ್ನು ನಿಲ್ಲಿಸಿದವರ ಕುರಿತಾಗಿ ವಿವರಗಳು ದೊರಕುತ್ತವೆ. ಸತಿಹೋದವಳ ತಂದೆ, ಮಗ, ಅಣ್ಣ, ತಂಗಿ, ಮೈದುನ, ನಾದಿನಿ, ಈ ಮೊದಲಾದ ಅವಳ ನೇರ ಸಂಬಂಧಿಗಳು ಅವಳ ಸ್ಮಾರಕ ಕಲ್ಲನ್ನು ನಿಲ್ಲಿಸಿದ್ದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. 1057 ರ ಬೆಳತೂರ ಶಾಸನದಲ್ಲಿ ದೇಕಬ್ಬೆ ಅನುಗಮನ ಮೂಲಕ ಸತಿಹೋಗಲಾಗಿ ಅವಳ ತಂದೆ ರವಿಗ 'ನಿಜಸುತೆಗನುರಾಗದಿಂ' ಶಾಸನ ಹಾಕಿಸಿದ್ದು ಉಲ್ಲೇಖವಿದೆ.[7] ಮಗಳ ಸ್ಮಾರಕ ನೆಟ್ಟ ರವಿಗನನ್ನು ಶಾಸನದಲ್ಲಿ, ''ಮಣ್ಡಿತಾಶ್ರಯಂ ನುಗುನಾಡ ರಾಘವಂ ಮುನಿವರಸಿಜ್ಞ- ಮಾಚಕದಾವಳಂ ಚಣ್ಡವಿಕ್ರಮಂ ಕುಡಿಯುರವಲ್ಲಭಂ ಕಲಿಕಾಲಕರ್ಣ್ನಮಚ್ಚರಿಪವರಗಣ್ಡಂವನ್ದಿಚಿತ್ತಾಮ (ಣಿ) ಶಿವಪಾದಶೇಖರಂ'' ಎಂದು ಅಪರೂಪವಾಗಿ ಕೀರ್ತಿಸಲಾಗಿದೆ. ಬೊಂಮರಸನು ತುರುಗಳನ್ನು ರಕ್ಷಿಸಲು ಹೋರಾಡಿ ಮರಣಹೊಂದಲಾಗಿ ಅವನ ಪತ್ನಿ ಬಮೆನಾಯಕಿತ್ತಿ 'ತೋಳುಕೈಗೊಟ್ಟು ಸ್ವರ್ಗಸ್ಥೆ'ಯಾಗಲು ಅವರ ಮಗ ಪಿಳ್ಳೆನಾಯಕ ತಂದೆ ತಾಯಿಗಳ ಸ್ಮಾರಕವಾಗಿ ಹೊನ್ನೇಶ್ವರ ಸನ್ನಿಧಿಯಲ್ಲಿ ಕಲ್ಲನ್ನು ನಿಲ್ಲಿಸಿ ಅದರ ಪೂಜೆಗೆ 10 ಕಂಬ ಗದ್ದೆಯನ್ನು ಅಂಜನೇಯ ಗುರುಗಳಿಗೆ ಕೊಟ್ಟನೆಂಬ ಉಲ್ಲೇಖ ಕ್ರಿ.ಶ. 1286 ರ ಶಾಸನವೊಂದರಲ್ಲಿ ಇದೆ.[8] ವೇಳೆವಾಳಿಯಾಗಿ ಗಂಡ ಮರಣಹೊಂದಲಾಗಿ ಮಡದಿ ಬಮ್ಮಕ್ಕ ಸತಿಹೋಗುತ್ತಾಳೆ. ಅವರ ''ಪುತ್ರಮಲ್ಲಿಯಂ ಕಲ್ಲಂ ಮಾಡಿಸಿದ'' ಎಂದು ಕೋಟಿಪೂರು ಶಾಸನವೊಂದು ತಿಳಿಸುತ್ತದೆ. ಮುಲಿದೇವಿಯು ಗಂಡ ಲಿಂಗದೊಳಗಾಗಲು, ಅವಳು ಸಮಾಧಿಪ್ರವೇಶಮಾಡಿಸತಿ ಹೋಗುತ್ತಾಳೆ. ಅವಳ ''ಮಗ ಮಾದೆಯನಾಯ(0)ಕನು ಅವಳ ಸ್ಮಾರಕವಾಗಿ ಮಾಸ್ತಿ ಪ್ರತಿಮೆಯನ್ನು ಪ್ರತಿಷ್ಠಾಪಿಸುವ

ವಿವರ ಹಡಿಯಾಲ ಶಾಸನದಲ್ಲಿದೆ.[10] ಗಂಡ ಬೈಚಪ್ಪನ ಮರಣಾನಂತರ ಸತಿಹೋದ ಬಯಿಚಕ್ಕನಿಗೆ ಅವಳ ಮೈದುನ ( ಗಂಡನ ಸಹೋದರ ) ಬಾಚಪ್ಪ '' ರೂಹ ಬರೆಸಿ ನಿಲ್ಲಿಸಿದ ಕಂಬ '' ದ ಉಲ್ಲೇಖವೊಂದಿದೆ.[11] ಹೆಗ್ಗೆಸಿದ್ಧನೆಂಬವನು ತನ್ನ ತಂಗಿ ತಿಮ್ಮವ್ವನಿಗೆ ಮಾಸ್ತಿಕಲ್ಲನ್ನು ' ಕಡಿಸಿ ' ನಿಲ್ಲಿಸಿದ್ದಾಗಿ ವಿವರವೊಂದು ಶಾಸನದಲ್ಲಿದೆ.[12] ಕ್ರಿ.ಶ. 972 ರ ಬೆನ್ನೂರು ಶಾಸನದಲ್ಲಿ, ಬಿದಿಯಣ್ಣ ಯುದ್ಧದಲ್ಲಿ ಮಡಿಯಲು ಅವನ ಮಡದಿ ಜಕ್ಕಬ್ಬೆ ಸತಿಹೋಗಲು ಅವಳ ತಂಗಿ ಜಾಬೆ ಅವಳಿಗಾಗಿ ಮಾಸ್ತಿಶಿಲೆ ನಿಲ್ಲಿಸಿದ ವಿಷಯವಿದೆ.[13] ಹೀಗೆ ಸತಿಗೆ ತುಂಬ ಹತ್ತಿರದವರು ಅವಳ ಸ್ಮಾರಕಕಲ್ಲನ್ನು ಹಾಕಿಸುತ್ತಿದ್ದುದರ ಕುರಿತಾಗಿ ಕೆಲವು ಉಲ್ಲೇಖಗಳು ದೊರಕುತ್ತವೆ. ಬಹುಶ: ಇವರೆಲ್ಲರು ಕರ್ತವ್ಯದ ಮೂಲಕ, ಪ್ರೀತಿ—ಅಭಿಮಾನಗಳ ಮೂಲಕ ಮಾಸ್ತಿಕಲ್ಲುಗಳನ್ನು ನಿಲ್ಲಿಸಿದ್ದಾರೆಂದೇ ಹೇಳಬೇಕು, ಶವಸಂಸ್ಕಾರಗಳಲ್ಲಿ ನೇರ ಸಂಬಂಧಿಗಳ ಕರ್ತವ್ಯಗಳು ಮುಖ್ಯವೆಂಬುದನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳಬಹುದಾದರೂ, ಹೀಗೆ ಶವ ಸಂಸ್ಕಾರದ ವಿಧಿನಿಯಮವಾಗಿ ಮಾಸ್ತಿಕಲ್ಲುಗಳನ್ನು ಹಾಕಿಸಿದ ಉಲ್ಲೇಖಗಳು ನೇರವಾಗಿ ದೊರಕುವುದಿಲ್ಲವೆಂಬುದನ್ನು ಮರೆಯಬಾರದು.

ಬೆನ್ನೂರು ಶಾಸನದಲ್ಲಿ '' ವೀರಪ್ಪ ಕಾಲಗೆಯ್ದ ಆತನ ಹೆಂಡತಿನಾಕವೆ, ಹಾಯ್ದಳು ಆತನ ಮನೆದೇವರು ಕಿತನಕೇತಯುಭೈರವದೇವರು ಆತನಮಗ ವಿರುಪಯ ಕಲ್ಲನಿಲಿಸಿದನು ಎಂದು ಹೇಳಲಾಗಿದೆ.[14] ವೀರಪ್ಪನ ಪತ್ನಿ ನಾಕವೆ ಸತಿಹೋಗಲಾಗಿ ಆತನ ಮನೆದೇವರು ' ಬಹುಶ: ಗುರುಗಳಾದ ಕಿತನಕೇತಯುಭೈರವದೇವರ ಮಗ ವಿರುಪಯ ಮಾಸ್ತಿಕಲ್ಲನ್ನು ನಿಲ್ಲಿಸಿದ್ದನು. ಇದು ಬಂಧುಗಳ ಬದಲಾಗಿ ಗುರುವಿನ ಮಗ ಮಾಸ್ತಿಶಿಲೆ ನಿಲ್ಲಿಸಿದ್ದಾರೆ.

ಕ್ರಿ.ಶ. 1439 ರ ಶಾಸನವೊಂದರಲ್ಲಿ ' ಮುದವಳಿಗೆ ಭೈರಾಯಿಸಹಗ.ನವ ಮಾಡಿದಳು ಮಹಾದೇವನು ಮಾಡಿದನು ' ಎಂದು ಹೇಳಲಾಗಿದೆ.[15] ಸಹಗಮನ ಮಾಡಿದ ಭೈರಾಯಿಗೆ ಮಹಾದೇವನುಕಲ್ಲು ಮಾಡಿಸಿದ ವಿಷಯ ಇಲ್ಲಿದೆ. ಮಹಾದೇವ ಭೈರಾಯಿಗೆ ನೇರವಾಗಿ ಸಂಬಂಧಪಟ್ಟವನಂತೆ ಕಾಣಿಸುವುದಿಲ್ಲ. ಬಹುಶ: ಸತಿಹೋದವಳ ಮೇಲಿನ ಪ್ರೀತಿ — ಅಭಿಮಾನಗಳಿಂದ ಮಹಾದೇವನೆಂಬವನು ಮಾಸ್ತಿಕಲ್ಲನ್ನು ಹಾಕಿಸಿದಂತಿದೆ. ಇದೇ ರೀತಿ ಬಮ್ಮಸೆಟ್ಟಿಯ ಮಗ ಮೋಚಿದೇವನು ಸ್ತ್ರೀಯರ ಮಾನಹರಣಕ್ಕಾಗಿ ಬಂದ ಕೇತಮಲ್ಲನೊಡನೆ ಹೋರಾಡಿ ಮಡಿಯಲಾಗಿ, ಅವನ ಪತ್ನಿ ವಿಜಯ(ದೇವಿ) ಎಂಬವಳ ಮಹಾಸತಿಯಾಗಲು '' ಬಮ್ಮಗೌಡನ ಮಗ.....

ಗವುಡ ಮಾಡಿಸಿದ ಮದವಳಿಗೆ ಕಲು ನೆಡಿಸಿದು'' ಎಂಬ ವಿವರ ಶಾಸನವೊಂದರಲ್ಲಿ ಬರುತ್ತದೆ.[16] ಇಲ್ಲಿ ಕಲ್ಲುಹಾಕಿಸಿದ ಬಮ್ಮಗೌಡನ ಮಗನು ವೀರನಿಗಾಗಲಿ ಆತನ ಪತ್ನಿಗಾಗಲೀ ಯಾವ ರೀತಿಯಲ್ಲಿಯೂ ಸಂಬಂಧಿಕನಾಗಿಲ್ಲವೆಂಬುದು ಶಾಸನದಿಂದ ತಿಳಿದುಬರುತ್ತದೆ, ಹೀಗೆ ಕೆಲವು ಸಲ ಸತಿಯರ ಘನತೆ ಗೌರವಗಳನ್ನು ಮೆಚ್ಚಿಕೊಂಡವರು ಪ್ರೀತಿಯಿಂದ ಅವರ ಸ್ಮಾರಕ ಕಲ್ಲುಗಳನ್ನು ನಿಲ್ಲಿಸುತ್ತಿದ್ದರೆಂದು ಹೇಳಬಹುದಾಗಿದೆ, 'ವಡ್ಡಗೆರೆ ನಾಗಮ್ಮ' ಗೀತೆಯಲ್ಲಿ, ಸತಿಹೋಗಲಿರುವ ನಾಗಮ್ಮ, ''ಊರೆಲ್ಲ ನನ್ನ ತಾಯಿಯಮ್ಮನ ಬಳಗಾವೆ ನ್ಯಾರನ್ನ ಕಲ್ಲ ಕಡಿಸಿರಿ'' ಎಂದು ಹೇಳುವ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.[17] ಊರಿನಲ್ಲಿ ಇರುವವರೆಲ್ಲರೂ ತಾಯಿಯ ಬಳಗದವರೇ, ಅವರಲ್ಲಿ ಯಾರಾದರೂ ನೇಮವಾದ (ನ್ಯಾರನ್ನ) ಕಲ್ಲ ಕಡಿಸಿರಿ ಎಂದು ನಾಗಮ್ಮ ಕೇಳಿಕೊಳ್ಳುತ್ತಿರುವ ಪ್ರಸಂಗವಿಲ್ಲದೆ, ಈ ಮಾತಿನಿಂದ, ಊರಿನಲ್ಲಿಯ ಯಾರು ಬೇಕಾದವರು ಸತಿಹೋದವಳಿಗಾಗಿ ಮಾಸ್ತಿಕಲ್ಲುಗಳನ್ನು ಹಾಕಿಸಬಹುದಾಗಿತ್ತು ಎನಿಸುತ್ತದೆ.

ಮಾಸ್ತಿಕಲ್ಲುಗಳನ್ನು ನಿಲ್ಲಿಸುತ್ತಿದ್ದ ಸ್ಥಳ :

ಮಾಸ್ತಿಕಲ್ಲುಗಳನ್ನು ಎಲ್ಲಿ ನಿಲ್ಲಿಸುತ್ತಿದ್ದರು ಎಂದು ನಿರ್ದಿಷ್ಟವಾಗಿ ಹೇಳುವುದಕ್ಕೆ ಆಧಾರಗಳ ಕೊರತೆ ಇದೆ. ಇಂದಿನ ಮಾಸ್ತಿಕಲ್ಲುಗಳಿರುವ ಸ್ಥಾನಗಳೇ ಅಂದು ಮಾಸ್ತಿಕಲ್ಲುಗಳ ನೆಟ್ಟ ಸ್ಥಾನಗಳಾಗಿವೆ ಎಂಬುದಾಗಿ ಸಾಮಾನ್ಯ ಅಭಿಪ್ರಾಯವೊಂದನ್ನು ಕೊಡಬಹುದಾಗಿದೆ. ಆದರೆ ಕಲ್ಲುಗಳು ಸ್ಥಾನಾಂತರಗೊಂಡಿರುವ ಸಾಧ್ಯತೆಗಳನ್ನು ಮರೆಯಬಾರದು. ಅಲ್ಲದೆ ಈಗಿದ್ದ ಮಾಸ್ತಿಕಲ್ಲುಗಳ ಸ್ಥಾನಗಳು ಪೂರ್ವದಲ್ಲಿ ಯಾವ ಸ್ವರೂಪದಲ್ಲಿ ಇದ್ದವೆಂದು ಹೇಳುವುದು ಕಷ್ಟಕರವಾದುದೇ ಆಗಿದೆ. ಇಂದು ಸಾಮಾನ್ಯವಾಗಿ ಮಾಸ್ತಿಕಲ್ಲುಗಳು ದೇವಾಲಯಗಳ ಮುಂದೆ, ಕೆರೆಗಳ ಏರಿಯ ಮೇಲೆ, ಹೊಂಡಗಳ ಪಕ್ಕಗಳಲ್ಲಿ, ರಸ್ತೆಗಳ ಪಕ್ಕಗಳಲ್ಲಿ, ಊರ ಹೊರಗೆ ಹಕ್ಕಲುಗಳಲ್ಲಿ — ಹೊಲ ಗದ್ದೆಗಳಲ್ಲಿ ಊರ ಅಗಸೆ ಹತ್ತಿರದಲ್ಲಿ, ಊರಿನ ಬೀದಿಗಳಲ್ಲಿ, ಮಠಗಳಲ್ಲಿ, ಹಿತ್ತಲುಗಳಲ್ಲಿ ಹೀಗೆ ಹಲವು ಸ್ಥಾನಗಳಲ್ಲಿ ಸಿಗುತ್ತವೆ. ಇವುಗಳಲ್ಲಿ ದೇವಾಲಯಗಳ ಮುಂದೆಯೇ ಹೆಚ್ಚು ಮಾಸ್ತಿಕಲ್ಲುಗಳು ಇರುವುದು ಕಂಡು ಬರುತ್ತದೆ. ಈಶ್ವರ ಹನುಮಂತ, ಬಸವಣ್ಣದೇವರ, ಬ್ರಹ್ಮದೇವರ, ಮೈಲಾರಲಿಂಗ, ಪಾರ್ವತಿದೇವಿ,

ಮಾರಮ್ಮ, ಬನಶಂಕರಿ, ದ್ಯಾಮವ್ವ, ಉಡಚಮ್ಮ ಹೀಗೆ ಕರ್ನಾಟಕದ ಹಲವು ದೇವ-ದೇವತೆಯರ ಗುಡಿಗಳು ಮಾಸ್ತಿಕಲ್ಲುಗಳನ್ನುಳ್ಳವಾಗಿವೆ. ಇವುಗಳಲ್ಲಿ ಈಶ್ವರ ದೇವಸ್ಥಾನಗಳ ಮುಂದೆಯೇ ಹೆಚ್ಚು ಮಾಸ್ತಿಕಲ್ಲುಗಳು ಇರುವುದನ್ನು ಗಮನಿಸಬಹುದಾಗಿದೆ. ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕು ಒಂದರಲ್ಲಿಯೇ ಹರೂರ, ಕುಂಬತಿಗ್ರಾಮ, ಕೊಂಡಗಳಲೆ, ಬೆನಕನ ಕೊಂಡ, ಮಂಗಳೂರು, ಕುಪ್ಪೆಗ್ರಾಮ, ಚಿತ್ರಟಹಳ್ಳಿ, ಹಿರೇಕಬ್ಬೂರು, ಬೆನ್ನೂರು, ಹುನವಳ್ಳಿ, ಇಂಡುವಳ್ಳಿ, ಹೆಗ್ಗೋಡು ಈ ಮೊದಲಾದ ಊರುಗಳಲ್ಲಿಯ ಈಶ್ವರ ದೇವಸ್ಥಾನಗಳ ಮುಂದೆ ಮಾಸ್ತಿಕಲ್ಲುಗಳಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಮಾಸ್ತಿಕಲ್ಲುಗಳನ್ನು ಸತಿಹೋದ ಸ್ಥಾನದಲ್ಲಿ ನಿಲ್ಲಿಸುತ್ತಿದ್ದರೆಂಬ ಸಾಮಾನ್ಯವಾದ ತಿಳುವಳಿಕೆಯೊಂದಿದೆ, ಉತ್ತರಾಣಿಹಳ್ಳಿ ಶಾಸನವೊಂದರಲ್ಲಿ ''....... ಆತನ ಮದುವಳಿಗೆ ನಾಗಂಮ್ಮ ಕೂಡೆ ಸಹಗಮನವಾದಲ್ಲಿ ನಿಲಿಸಿದ ಮಾಸ್ತಿಕಳು ಪ್ರತಿಷ್ಟೆಗೆ ಮಂಗಳಮಹಾಶ್ರೀಶ್ರೀ '' ಎಂದು ಹೇಳಲಾಗಿದೆ [18] ಸಹಗಮನವಾದಲ್ಲಿ ಎಂಬುದನ್ನು ಸಹಗಮನ ಮಾಡಿಕೊಂಡ ಸ್ಥಾನದಲ್ಲಿ ಎಂದು ಅರ್ಥೈಸಿದರೆ, ಪ್ರಸ್ತುತ ಪಾಠವುಳ್ಳ ಸ್ಮಾರಕಕಲ್ಲನ್ನು ಸತಿಹೋದ ಸ್ಥಾನದಲ್ಲಿ ನಿಲ್ಲಿಸಿದರೆಂದು ಹೇಳಬಹುದಾಗಿದೆ. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಕವಿಲೆದುರ್ಗದಲ್ಲಿ ಕೆರೆಯ ಸಮೀಪದಲ್ಲಿ ಸಮಾಧಿ ಮೂಲಕ ಸತಿಹೋದವರ ಸ್ಮರಣಾರ್ಥಕ್ಕವಾಗಿ ಸಮಾಧಿಗಳ ಮುಂದೆಯೇ ಮಾಸ್ತಿಕಲ್ಲುಗಳನ್ನು ನಿಲ್ಲಿಸಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ. 17ನೆಯ ಶತಮಾನದ ಉತ್ತರಾರ್ಧದಲ್ಲಿ ವಿಜಾಪೂರ ರಾಜ್ಯಕ್ಕೆ ಸೇರಿದ ರಾಜಪುರಕ್ಕೆ ಭೆಟ್ಟಿಕೊಟ್ಟ ವಿದೇಶಿ ಪ್ರವಾಸಿ 'ಪೀಟರಮುಂಡಿ ಹೀಗೆ ಬರೆದಿದ್ದಾನೆ : '' ಗಂಡನೊಡನೆ ಚಿತೆಯೇರಿದ ಹೆಂಗಸರ ಜ್ಞಾಪಕಾರ್ಥವಾಗಿ ಚಿತೆಯ ಸ್ಥಳದಲ್ಲಿ ಒಂದು ಕಲ್ಲನ್ನು ಇಡುತ್ತಾರೆ. ಬಹುಶಃ ಈ ಕಲ್ಲು 'ಮಾಸ್ತಿಕಲ್ಲು' ಆಗಿರಬೇಕೆನಿಸುತ್ತದೆ. ಆದರೆ ಸತಿಹೋದ ಸ್ಥಾನದಲ್ಲಿಯೇ ಮಾಸ್ತಿಕಲ್ಲು ನಿಲ್ಲಿಸ-ಬೇಕೆಂದೇನೂ ಇದ್ದಂತಿಲ್ಲ. ದೇಕಬ್ಬೆ ಹೆಬ್ಬಲಗುಪ್ಪೆಯಲ್ಲಿ ಸತಿಹೋಗಲಾಗಿ ಅವಳ ತಂದೆ ಅವಳ ಸ್ಮಾರಕ ಕಲ್ಲನ್ನು ಬೆಳತೂರಿನಲ್ಲಿ ನಿಲ್ಲಿಸಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

'ಬೊಮ್ಮನಾಯಕ' ವೀರಮರಣ ಹೊಂದಲಾಗಿ ಅವನ ಪತ್ನಿ 'ಬಮ್ನಾಯಕಿತ್ತಿ' ಸತಿಹೋಗುವ ವಿವರವೊಂದು ಕ್ರಿ.ಶ. 1286 ರ ಶಾಸನವೊಂದರಲ್ಲಿ ಬರುತ್ತದೆ [20] ಡಾ: ಎಂ ಎಂ ಕಲಬುರ್ಗಿ ಅವರು ಈ ಶಾಸನವನ್ನು ವಿವರಿಸುತ್ತ '' ಶ್ರೀ ಹೊಂನೇಶ್ವರ ದೇವರ ಸನ್ನಿಧಿಯಲು

ಬೀರಗಲ್ಲ ನಿಲ್ಸ ಎಂಬ ವಾಕ್ಯ ಬರುವುದನ್ನು ಇಲ್ಲಿ ಗಮನಿಸಬೇಕು" ಎಂದು ಬರೆಯುತ್ತಾರೆ.[21] ಸತಿಹೋದ ವಿಷಯವನ್ನು ತಿಳಿಸುವ ಈ ವೀರಗಲ್ಲು ಶ್ರೀ ಹೊಂನೇಶ್ವರ ದೇವರ ಸನ್ನಿಧಿಯಲ್ಲಿ ನಿಲ್ಲಿಸಿದ್ದು ಸ್ಪಷ್ಟವಿದೆ.

'ವಡ್ಡಗೆರೆ ನಾಗಮ್ಮ' ಜನಪದ ಹಾಡಿನಲ್ಲಿ ಮಾಸ್ತಿಕಲ್ಲನ್ನು ನಿಲ್ಲಿಸುತ್ತಿದ್ದ ಸ್ಥಳದ ಕುರಿತಾಗಿ ಎರಡು ತ್ರಿಪದಿಗಳು ಹೀಗೆ ಬರುತ್ತವೆ:[22]

ಊರಲ್ಲಿ ನನ್ನ ತಾಯಮ್ಮನ ಬಳಗಾವೆ
ನ್ಯಾರನ್ನ ಕಲ್ಲು ಕಡಿಸಿರಿ । ಹೊಸಕೆರೆಯ
ಏರಿಯ ಮೇಲೆ ನಿಲಿಸಿರಿ ॥

ಪಟ್ಣಲ್ಲಿ ನಮ್ಮ ಹೆತ್ತಮ್ಮನ ಬಳಗಾವೆ
ನೆಟ್ಟನ್ನ ಕಲ್ಲ ಕಡಿಸಿರಿ । ಹೊಸಕೆರೆಯ
ಕಟ್ಟೀಯ ಮೇಲೆ ನಿಲಿಸಿರಿ.

ಸತಿಹೋಗಲಿರುವ ನಾಗಮ್ಮ ಹೇಳುವ ಈ ಮೇಲಿನ ಮಾತುಗಳು ತುಂಬ ಮಹತ್ವದವುಗಳಾಗಿವೆ. ನೇರವಾದ ಅಥವಾ ನೆಟ್ಟನೆಯ ಕಲ್ಲನ್ನು ಕಡಿಸಿ ಹೊಸಕೆರೆಯ ಏರಿಯ ಮೇಲೆ, ಕಟ್ಟೆಯ ಮೇಲೆ ನಿಲ್ಲಿಸಬೇಕು ಎನ್ನುವ ಇಲ್ಲಿಯ ನಿರೂಪಣೆಗಳು ಮಾಸ್ತಿಕಲ್ಲುಗಳನ್ನು ಎಲ್ಲಿ ನಿಲ್ಲಿಸಲಾಗುತ್ತಿತ್ತು ಎನ್ನುವ ವಿಷಯದ ಕುರಿತಾಗಿ ವಿವರಣೆಗಳನ್ನು ನೀಡುತ್ತವೆ. ಸಾಮಾನ್ಯವಾಗಿ ದೇವಾಲಯಗಳ ಮುಂದೆ ಅದು ತಪ್ಪಿದರೆ ಕೆರೆಗಳ ಏರಿಯ ಮೇಲೆ, ಹೊಂಡಗಳ ಸಮೀಪದಲ್ಲಿ, ಮಠಗಳಲ್ಲಿ, ಹಿತ್ತಲುಗಳಲ್ಲಿ, ಹೊಲಗದ್ದೆಗಳಲ್ಲಿ ಮಾಸ್ತಿಕಲ್ಲುಗಳನ್ನು ನಿಲ್ಲಿಸುತ್ತಿದ್ದರೆಂದು ಹೇಳಬಹುದಾಗಿದೆ. ಸಾರ್ವಜನಿಕರಿಗೆ ಸಹಜವಾಗಿ ಕಣ್ಣಿಗೆ ಬೀಳುವ ಸ್ಥಾನಗಳಲ್ಲಿ ಇವುಗಳನ್ನು ಹೆಚ್ಚಾಗಿ ನಿಲ್ಲಿಸುತ್ತಿದ್ದಿರಬೇಕು ಎಂದು ಅಭಿಪ್ರಾಯಪಡಬಹುದಾಗಿದೆ.

<u>ಮಾಸ್ತಿಕಲ್ಲುಗಳನ್ನು ನಿಲ್ಲಿಸುತ್ತಿದ್ದ ಸಮಯ:—</u>

ಶಾಸನಗಳಲ್ಲಿ ಮಾಸ್ತಿಕಲ್ಲನ್ನು ನಿಲ್ಲಿಸಿದ ಸಮಯದ ಕುರಿತು ವಿವರಣೆಗಳು ದೊರಕುವುದಿಲ್ಲ. ಸಾಮಾನ್ಯವಾಗಿ ಅವು ಪತಿ ಮಡಿದ ಸಮಯವನ್ನು ಹೇಳಿ ಪತ್ನಿಯು ಸತಿಹೋದಳೆಂದು ತಿಳಿಸಿಬಿಡುತ್ತವೆ. ಕೆಲವು ಶಾಸನಗಳು ಮಾಸ್ತಿಕಲ್ಲನ್ನು ನಿಲ್ಲಿಸಿದ ವಿಷಯ ಹೇಳಿದರೂ

ಅದನ್ನು ಯಾವ ಸಮಯದಲ್ಲಿ ನಿಲ್ಲಿಸಿದರು ಎಂದು ಸ್ಪಷ್ಟಪಡಿಸುವುದಿಲ್ಲ. ಸತಿಘಟನೆಯ ನಂತರದ ಅಲ್ಪಕಾಲದಲ್ಲಿಯೇ ಒಂದು ಒಳ್ಳೆಯ ಮುಹೂರ್ತದಲ್ಲಿ ಅಥವಾ ದಿನದಲ್ಲಿ ಮಾಸ್ತಿ ಕಲ್ಲನ್ನು ನಿಲ್ಲಿಸುತ್ತಿರಬೇಕು ಎಂದು ಸಾಮಾನ್ಯವಾದ ಅಭಿಪ್ರಾಯವೊಂದನ್ನು ತಾಳ ಬಹುದಾಗಿದೆ.

ಕ್ರಿ.ಶ. 1397 ರ ಶಾಸನವೊಂದು ಬೊಮ್ಮಿಗವುಡ ಮರಣಹೊಂದಲಾಗಿ "ಮಹಾಸತಿ ಲಖಮಾಯಿ ಅಗ್ನಿಪ್ರವೇಶ ಮಾಡಿ ಸುರಲೋಕಪ್ರಾಪ್ತ" ರಾದರೆಂದು ತಿಳಿಸಿ, ಇದಾದ "ದಿನ 11ಕ್ಕೆ ಓಸನದ ಹಿರಿಯಗವುಡನ ತಮ್ಮ ಬಯಿಚಗೌಡ ಮಗ ಕೇತಗವುಡ ಕಲ್ಲನಡೆಸಿ ಪ್ರತಿಷ್ಠೆಯ ಮಾಡಿದರು" ಎಂಬುದಾಗಿ ತಿಳಿಸುತ್ತದೆ [23] ಇಲ್ಲಿ ಸತಿಹೋದ ಹನ್ನೊಂದನೆಯ ದಿನಕ್ಕೆ 'ಪತಿ–ಪತ್ನಿಗೆ' ಕಲ್ಲು ನಿಲ್ಲಿಸಿದ್ದು ತಿಳಿದುಬರುತ್ತದೆ. ಡಾ: ಚೆನ್ನಕ್ಕ ಎಲಿಗಾರ ಅವರು "ಹನ್ನೊಂದು ದಿನಗಳಷ್ಟು ತಡಮಾಡಿ ಕಲ್ಲು ನಿಲ್ಲಿಸಿದುದಕ್ಕೆ ಅಂಥ ಒಂದು ಸಂಪ್ರದಾಯ ಇಲ್ಲವೆ ವೈಯಕ್ತಿಕ ವಿಲಂಬ ಕಾರಣವಾಗಿರಬೇಕು" ಎಂದು ಅಭಿಪ್ರಾಯಪಡುತ್ತಾರೆ.[24]

ಸೇಣಿಗೆ ವೀರಗಲ್ಲೊಂದರಲ್ಲಿ ಪತಿ ಬೊಮ್ಮೆಯನಾಯಕನ ಮರಣಾನಂತರ ಪತ್ನಿ 'ಬೊಮ್ಮಕ್ಕ' ಸತಿಹೋದ ಉಲ್ಲೇಖವಿದೆ.[25] ಬೊಮ್ಮೆಯನಾಯಕನು "ಕ್ರೋಧನ ಸಂವತ್ಸರ ಚಯಿತ್ರ ಸುಧಯಕಾದಸಿ ಸೋಮವಾರ ಪೂರ್ವಭಾದ್ರ ನಕ್ಷತ್ರದಂದು" ಮರಣ ಹೊಂದುತ್ತಾನೆ. ಅವನ ತಂಗಿ ಸಿರಿಯಕಬ್ಬೆಯು "ಸ್ವಸ್ತಿಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನು ಮಹಾಮಂಡಳೇಶ್ವರಂ ಮಣ್ಡಳಿಕಗಳಗಂಡಗತ್ತರಿ ವೀರಬೊಮ್ಮರಸರ ವಿಜಯರಾಜ್ಯೋದಯದ ಹನ್ನೆರಡನೆಯ ಸುಕುಲಸಂವತ್ಸರದ ಕಾರ್ತಿಕ ಸುದ್ಧ ತ್ರಯೋದಸೆ ಸುಕ್ರವಾರದಂದು" ಸ್ಮಾರಕ ಕಲ್ಲನ್ನು ನಿಲ್ಲಿಸುತ್ತಾಳೆ. ಈ ವಿಷಯವನ್ನು ವಿವರಿಸುತ್ತ ಡಾ: ಆರ್.ಶೇಷಶಾಸ್ತ್ರಿ ಅವರು, ವೀರನ ಮರಣದ ತೇದಿಯ ವಿವರ ಕ್ರಿ.ಶ. 1265ಕ್ಕೆ ಸರಿಹೊಂದುತ್ತದೆಂದು, ಸಿರಿಯಬ್ಬೆಯು ಕಲ್ಲು ನಿಲ್ಲಿಸಿದ ತೇದಿಯ ವಿವರ ಕ್ರಿ.ಶ. 1269 ಕ್ಕೆ ಸರಿಹೊಂದುತ್ತದೆ ಎಂದು ಅಭಿಪ್ರಾಯಪಟ್ಟು, ವೀರನು ಸತ್ತ ನಾಲ್ಕು ವರ್ಷಗಳ ನಂತರ ವೀರಗಲ್ಲನ್ನು ಹಾಕಿದರೆ ? ಅದೇಕೆ ಅಷ್ಟು ಅವಧಿ ಹಿಡಿಯಿತು ? ಎಂದು ಪ್ರಶ್ನಿಸಿಕೊಳ್ಳುತ್ತಾರೆ. ಮತ್ತೇ ಅವರು ಮುಂದುವರೆದು "ಇದಕ್ಕೆ ಸಮಂಜಸವಾದ ಉತ್ತರ ದೊರೆಯುವುದು ಕಷ್ಟ. ಒಟ್ಟಿನ

ಮೇಲೆ ಬಹುಶಃ ಹೀಗೆ ತೀರ್ಮಾನಕ್ಕೆ ಬರಬಹುದೆಂದು ತೋರುತ್ತದೆ. ಅನುಕೂಲವಿದ್ದವರು ಸಾಮಾನ್ಯವಾಗಿ ಆದಷ್ಟು ಬೇಗ ವೀರಗಲ್ಲನ್ನು ಹಾಕಿಸುತ್ತಿದ್ದರು . ತಮಗೆ ಅನುಕೂಲವಿಲ್ಲದವರು ನಿಧಾನವಾಗಿಯಾದರೂ ಹಾಕಿಸುತ್ತಿದ್ದರು" ಎಂದು ಸಾಧುವಾದ ಅಭಿಪ್ರಾಯವೊಂದನ್ನು ತಾಳುತ್ತಾರೆ [26]

ಸಂಗಮಕಾಲದ ತಮಿಳಿನಲ್ಲಿ ಕಲ್ಲು ನಿಲ್ಲಿಸುವ ಪೂರ್ವದಲ್ಲಿ, ಒಂದು ಬಂಡೆಯಿಂದ ಅಗತ್ಯವಿದ್ದ ಆಕಾರದ ಕಲ್ಲನ್ನು ಕತ್ತರಿಸಿ ತಗೆಯಲು ಒಂದು ಶುಭದಿನವನ್ನು ಆರಿಸಲಾಗುತ್ತಿತೆಂದೂ, ಬಳಿಕ ಆ ಕಲ್ಲನ್ನು ಅದರ ಸ್ಥಾನದಲ್ಲಿ ನೆಡಲು ಏರ್ಪಾಟುಮಾಡಲಾಗುತ್ತಿತ್ತೆಂದೂ, ಅನಂತರ ಆ ಕಲ್ಲಿಗೆ ಸ್ನಾನಮಾಡಿಸಿದ ಮೇಲೆ ಗೊತ್ತಾದ ಸ್ಥಳದಲ್ಲಿ ವಾಸ್ತವವಾಗಿ ಅದನ್ನು ನೆಡುತ್ತಿದ್ದರೆಂದು ತಿಳಿದು ಬರುತ್ತದೆ. ಸತಿಹೋದ ಕಣ್ಣಗಿಯ ವಿಗ್ರಹವನ್ನು ಪ್ರತಿಷ್ಠಾಪಿಸುವ ಮತ್ತು ಆಕೆಗಾಗಿ ದೇವಾಲಯವನ್ನು ಕಟ್ಟುವ ವಿಷಯದಲ್ಲಿ ಕೂಡಾ ಸೆಂಗುವಟ್ಟುವನ್ ಈ ಪದ್ಧತಿಯನ್ನು ಚಾಚೂತಪ್ಪದೇ ಹೇಗೆ ಅನುಸರಿಸಿದ ಎಂಬುದನ್ನು 'ಶಿಲಪ್ಪದಿಕಾರಮ್' ನ 'ವಂಜಿಕ್ಕಾಂಡಮ್' ಸ್ವರ್ಗ ಶೀರ್ಷಿಕೆಗಳು ಸೂಚಿಸುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[27] ಆದರೆ ಕರ್ನಾಟಕದಲ್ಲಿ ಸತಿಸ್ಮಾರಕಗಳನ್ನು ನಿಲ್ಲಿಸುತ್ತಿದ್ದ ಸಮಯ, ಆ ಕಾಲಕ್ಕೆ ನಡೆಯುತ್ತಿದ್ದ ಆಚರಣೆಗಳು ಇತ್ಯಾದಿಗಳ ಕುರಿತಾಗಿ ಇಷ್ಟೊಂದು ವಿವರವಾದ ಮಾಹಿತಿ ನೀಡುವ ಆಕರಗಳಿಲ್ಲವೆಂದೇ ಹೇಳಬೇಕು.

ಮಾಸ್ತಿಕಲ್ಲಿನ ಪರ್ಯಾಯ ಪದಗಳು:

ಶಾಸನಗಳಲ್ಲಿ ಮಾಸ್ತಿಕಲ್ಲುಗಳನ್ನು 'ಕಲ್ಲು' ಎಂದು ಕರೆದಿರುವ ಉಲ್ಲೇಖಗಳಿವೆ, ಬೆನ್ನೂರು, ಕಳೂರು, ಮನೆಮನೆಗ್ರಾಮ, ಜಡ್ಡಿಹಳ್ಳಿ, ಕಿಪಡಿ — ಈ ಮೊದಲಾದ ಶಾಸನಪಾಠಗಳಲ್ಲೆಲ್ಲ ಮಾಸ್ತಿಕಲ್ಲನ್ನು 'ಕಲ್ಲು' ಎಂದೇ ಸಂಬೋಧಿಸಲಾಗಿದೆ.[28] ವೀರಗಲ್ಲುಗಳನ್ನು ಕೂಡ 'ಕಲ್ಲು' ಎಂದೇ ಹಲವು ಶಾಸನಗಳಲ್ಲಿ ಕರೆದಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ. ಇಲ್ಲೆಲ್ಲ 'ಕಲ್ಲು' ಎಂಬುದು ತನ್ನ ವಿಶಾಲಾರ್ಥದಲ್ಲಿ ಬಳಕೆಗೊಳ್ಳದೆ 'ಮಾಸ್ತಿಕಲ್ಲು' 'ವೀರಗಲ್ಲು'

ಎಂಬ ಪರಿಮಿತಾರ್ಥದಲ್ಲಿ ಬಳಕೆಗೊಂಡಿರುವುದು ಗಮನಕ್ಕೆ ಬರುತ್ತದೆ.

ಕೆಲವು ಶಾಸನಗಳಲ್ಲಿ ಮಾಸ್ತಿಕಲ್ಲನ್ನು 'ಮುದವಳಿಗೆ ಕಲು', 'ಶಿಲಾಶಾಸನ', 'ಶಿಲಾಸ್ತಂಭಶಾಸನ', 'ಮಾಸ್ತಿಕಳು', 'ವೀರದಕಂಬ', 'ಕಂಬ' ಎಂದು ಕರೆಯಲಾಗಿದೆ.[29] ಹುಣಸೂರು ಮತ್ತು ಕಣವಿ ಶಾಸನಗಳಲ್ಲಿ ಸತಿಹೋದ ಘಟನೆಯ ವಿವರವಿದ್ದರೂ ಆ ಕಲ್ಲುಗಳನ್ನು ವೀರಗಲು, ಬೀರಗಲ್ಲು ಎಂದು ಉಲ್ಲೇಖಿಸಲಾಗಿದೆ. ಶಾಸನದಲ್ಲಿ ವೀರನಸ್ಥಾನ ಮುಖ್ಯವಾಗಿದ್ದು ಪತ್ನಿಯಸ್ಥಾನ ಅಮುಖ್ಯವಾಗಿದ್ದರೆ, ಆಗ ಆ ಶಾಸನಕಲ್ಲನ್ನು ವೀರಗಲ್ಲು ಅಥವಾ ಬೀರಗಲ್ಲು ಎಂದು ಗುರುತಿಸಲಾಗುತ್ತಿತ್ತು ಎನಿಸುತ್ತದೆ. ಗಂಡ ಸಲ್ಲೇಖನದಿಂದ ಮರಣ ಹೊಂದಲಾಗಿ ಅವನ ಪತ್ನಿ ಮುದ್ದಿಗೌಂಡಿ ಸಹಗಮನವಾಡಿಕೊಳ್ಳುತ್ತಾಳೆ. ಅವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲನ್ನು 'ನಿಶಿತಿಯಕಲ್ಲು' ಎಂದೇ ಕರೆದಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ[31] ಇಲ್ಲಿ ಪಾಠದಲ್ಲಾಗಲೀ, ಶಿಲ್ಪದಲ್ಲಾಗಲೀ ಪತಿಯ ಸಲ್ಲೇಖನ ಮರಣಮುಖ್ಯವಾಗಿದೆ ಎಂಬುದನ್ನು ಗಮನಿಸಬೇಕು ( ಚಿತ್ರ –67)

ಮಾಸ್ತಿಕಲ್ಲಿನ ಪಾಠ:

ಮಾಸ್ತಿಕಲ್ಲಿನ ಶಾಸನಗಳು ಮುಖ್ಯವಾಗಿ ಸತಿಹೋದ ಘಟನೆಗಳನ್ನು ನಿರೂಪಿಸುವ ಉದ್ದೇಶವಿಟ್ಟುಕೊಂಡಿವೆ. ಅವುಗಳನ್ನು ಬರೆದವರು ಸಾಮಾನ್ಯವಾಗಿ ಕವಿಗಳಾಗಿರಲಿಲ್ಲ. ಕ್ರಿ.ಶ. 1057 ರ ದೇಕಬ್ಬೆಯ ಶಾಸನವನ್ನು ಬರೆದವನು ಮಾತ್ರ ಉತನ್ನತವಾದ ಕಾವ್ಯಶಕ್ತಿಯನ್ನು ಪಡೆದವನಾಗಿದ್ದನೆನಿಸುತ್ತದೆ.[32] ಆ ಶಾಸನದ ಕೊನೆಯಲ್ಲಿ, ''ಮರುಪರಚಕ್ರಂ ದ್ವಿಜರೊಳ್ ಕರ್ಣಮರ್ಯೆಯುಲ್ಲೆನಿಪ ಕುರಿಪಿನಾದಿತ್ಯಂ ಸನ್ದರಕೆಯುವಗಾದಮಲ್ಲಂ ಜರ್ಥದ ಕವಿರಾಜಬಾನ್ಧವಂ ಬರೆದನಿದಂ'' ಎಂದು ಹೇಳಲಾಗಿದೆ. 'ಕವಿರಾಜಬಾನ್ಧವ'ನು ಶಾಸನದ ಕವಿಯಾದರೆ, ಅದನ್ನು ಕಲ್ಲಿನಲ್ಲಿ ಕೆತ್ತಿದ ರುವಾರಿ ( = ರೂಪಾಕಾರಿ ) ಸಿಂಗಾಚಾರಿಯಾಗಿದ್ದಾನೆ. ಶಾಸನದಲ್ಲಿ ರೂವಾರಿಯನ್ನು ''ಕಣ್ದರಿಸಿದಂ ಮುನಿವರ ಸಿಂಗಾಚರಿಯುಂ ಮಚ್ಚರಿಪರಗಣಾದ್ರಚಾರಿಯು'' ಎಂದು ವಿಶೇಷವಾಗಿ ಬಣ್ಣಿಸಿದೆ. ಹೀಗೆ ಇಷ್ಟೊಂದು ಸ್ಪಷ್ಟವಾಗಿ ಶಾಸನವನ್ನು ಬರೆದ ಕೃತಿಕಾರನ ಮತ್ತು ಶಾಸನವನ್ನು ಕತ್ತಿದ ಶಿಲ್ಪಿಯ ಹೆಸರನ್ನು ಸೂಚಿಸಿದ ಮತ್ತೊಂದು ಮಾಸ್ತಿಕಲ್ಲು ಕರ್ನಾಟಕದಲ್ಲಿ ಇಲ್ಲವೆಂದೇ ಹೇಳಬೇಕು.

ಕ್ರಿ.ಶ. 1420 ರ ಕಿಪಡಿ ಶಾಸನದಲ್ಲಿ ''ಯೀಸಾಸನವ ಬರದವನಂ ಕಯುರವಿರಜ್ಯನು ಕಲವಮಾಡಿದಾತಹರಿಯಮಕೊಪದ ದುಗೋಜ'' ಎಂದು ಉಲ್ಲೇಖಿಸಲಾಗಿದೆ.[33] ಇಲ್ಲಿ ಶಾಸನವನ್ನು ಬರೆದವನು 'ಕಯುರವಿರಜ್ಯ'ನೆಂಬುದು ಸ್ಪಷ್ಟವಿದೆ. 'ಕಲವಮಾಡಿದಾತ' ದುಗೋಜ' ಎಂದಿದೆ. 'ದುಗೋಜನು' 'ಶಾಸನಪಾಠ ಕೆತ್ತಿದವನೋ, ಶಿಲ್ಪ ಕೆತ್ತಿದವನೋ ಸ್ಪಷ್ಟವಾಗುವುದಿಲ್ಲ ಬಹುಶ: ಶಿಲ್ಪಕೆತ್ತಿದವನೇ ಆಗಿರಬೇಕೆನಿಸುತ್ತದೆ. ಹುಣಸೂರ ಶಾಸನವೊಂದು ರಾಮಯ್ಯನಯು ಮಾಸ್ತಿಯಾದುದನ್ನು ಹೇಳಿ, 'ಬರದಾತ ಕಟಿಸಿಯು ವೀರೋಜ' ಎಂದುತಿಳಿಸಿದೆ.[34] ಜಡ್ಡಿಹಳ್ಳಿ ಶಾಸನದಲ್ಲಿ ''ಯೀಕಲ್ಲಗೆಯುದವನು ಬೋನೋಜನು'' ಎಂದು ಹೇಳಿದರೆ, ಬೆನ್ನೂರು ಶಾಸನದಲ್ಲಿ'' ಎರ್ರಿಗಾರಿಯು ಓಜಂ ಬಿಸಗೆಯ್ದ'' ಎಂದು ಹೇಳಲಾಗಿದೆ.[35] ಈ ಶಾಸನಗಳಲ್ಲಿಯು 'ಗೆಯ್ಯ' ಎಂಬಪದ 'ಕೆತ್ತು' ಎಂಬುದನ್ನೇ ಹೇಳುತ್ತದೆ. ಕಾರಣ ಬೋನೋಜ ಮತ್ತು ಎರ್ರಿಗಾರಿಯು ಓಜ ಇವರು ಪಾಠವನ್ನು ಮಾಸ್ತಿಕಲ್ಲಿನಲ್ಲಿ ಕೆತ್ತಿದವರಾಗಿರಬೇಕೆನಿಸುತ್ತದೆ. ಈ ರೀತಿಯಾಗಿ ಪಾಠ ರಚಿಸಿದವರ ಮತ್ತು ಅದನ್ನು ಕಲ್ಲಿನಲ್ಲಿ ಕೆತ್ತಿದವರ ಕುರಿತಾಗಿ ಕೆಲವು ಉಲ್ಲೇಖಗಳು ದೊರಕುವುದನ್ನು ಕಾಣುತ್ತೇವೆ.

ಮಾಸ್ತಿಕಲ್ಲಿನ ವಸ್ತು ಮುಖ್ಯವಾಗಿ ಸತಿಘಟನೆಯನ್ನು ಕುರಿತಾಗಿರುವಂಥದ್ದು, ಅದನ್ನು ವಿವರವಾಗಿ ಹಿಡಿದಿಡುವಲ್ಲಿ ಕೃತಿಕಾರನಿಗೆ ವಿಶೇಷಗಮನವಿದ್ದಂತಿಲ್ಲ. ಮೃತನ ಪತ್ನಿ ಸತಿಯಾದವಳೆಂದೋ, ಮಹಾಸತಿಯಾದವಳೆಂದೊ ಸಹಗಮನ ಮಾಡಿಕೊಂಡಳೆಂದೋ ಸಹಜವಾಗಿ ಶಾಸನಕವಿ ತಿಳಿಸಿಬಿಡುತ್ತಾನೆ. ಕೆಲವೊಮ್ಮೆ ಸತಿಹೋದ ಪ್ರಸಂಗವನ್ನು ಅವನು ಶಾಸನಗಳಲ್ಲಿ, ''ಬೊಂಮಗೌಡರು ತಾಉ ತಂಮ ಸಖಿಯರು ಸಹಶಿವಪಾದಕ್ಕೆ ಸಂದರು'' 'ಬಯಿಚಗೌಡ ಬುಳಿಗೊಂಡಿ ಯಿಬ್ಬರು ದೇವರ ಪಾದಕೆ ಸಂದರಾಗಿ'' 'ಕಮಿಯು ಬೊಗೌಡ. ಮುದವಳಿಗೆ ಲಾಖಯಿ.ಹೆಗ್ಗಡಿ ಸುರ್ರಗೊಡದು ಲಿಂಗದ ಒಳಗಾದಳು'' 'ಆತನ ಸತಿ ಬೊಂಮಿಗೊಂಡಿ ವೀರಸ್ವರ್ಗಸ್ಥೆಯಾದಳು' ಜಕ್ಕಬ್ಬೆ ಒಡಸತ್ತು ಸುರಲೋಕಕೆಯ್ದಿದ, .... 'ಗೂಡಿ ತಂನ ಪತಿ ಚೊಕ್ಕಗೌಡನ ಕೂಡೆ ಸ್ವರ್ಗಸ್ಥೆಯಾದಲ್ಲಿ', '' ಆ ಬೊಂಮಗೌಡನಕೂಡೆ ಸಮಾಧಿಯನು ಕುಳಿದಳು'', '' ಹಯಾರಅಂಮಗೂಡನಬಯಿರಮಗೂಡಿತಂಮ ಸ್ತ್ರೀಯರು ಸಹಸಂಗತಿಯಿಡಿದರು'' ''...... ಇತನ ಸತಿಕೂಡೆ ಹೋದಳು'' '' ಬೊಂಮ್ಮಗೂಡ ಸ್ವರ್ಗ್ಗಸ್ತನಾದಲ್ಲಿ ಆತನ

ಮದವಳಿಗೆ ಬೊಮ್ಮಿಗುಡಿ ಸಮದಿಕುಳಿತುಸ್ವರ್ಗಕೆಸಂದಳು ” ‘‘ ಬೊಮ್ಮಕ್ಕಬೊಮ್ಮಯ್ಯ ನಾಯಕನ ಕೂಡೆ ಕಿಚ್ಚಪರಯದದು ” ‘‘ ಯಿಂಗುಡಿ ಅಗ್ನಿಪ್ರವೇಶವನು ಮಾಡಿದಳು ” ಎಂಬುದಾಗಿ ಚಿತ್ರಿಸಿದ್ದಾನೆ[36] ಇನ್ನು ಕೆಲವು ಶಾಸನಗಳಲ್ಲಿ ವಿಶೇಷವೆನ್ನುವಂತೆ, ‘ಸಹಾನು-ಭೂತಿಯುಂ ಪೊಂದೆ” ‘ ಪುರುಷಬ್ರತ ” ‘ ತೋಳಕಯ್ಕೊಟ ” ಎಂಬ ಪದಗಳು ಸತಿ-ಹೋದುದನ್ನು ತಿಳಿಸಲು ಸಮಾನಪದಗಳಾಗಿ ಬಳಕೆಗೊಂಡಿರುವುದನ್ನು ಕಾಣುತ್ತೇವೆ.[37] ಹೀಗೆ ಶಾಸನಗಳಲ್ಲಿ ಸತಿಘಟನೆಯು ಸಂಕ್ಷಿಪ್ತವಾಗಿ ಚಿತ್ರಣಗೊಂಡದ್ದು ಗಮನಕ್ಕೆ ಬರುತ್ತದೆ.

ಕೆಲವು ಮಾಸ್ತಿಕಲ್ಲುಗಳ ಪಾಠಗಳಲ್ಲಿ ಒಂದು ಬಗೆಯ ನಿರೂಪಣಾ ತಂತ್ರವನ್ನು ಗುರುತಿಸಲು ಸಾಧ್ಯವಿದೆ. ಮೊದಲಿಗೆ ಮಂಗಳಶ್ಲೋಕದಿಂದ ಶಾಸನ ಆರಂಭಗೊಳ್ಳುತ್ತದೆ. ನಂತರ ಅರಸನನ್ನು ತಿಳಿಸಿ, ಕಾಲದ ಸೂಚನೆಯನ್ನು ಕೊಡಲಾಗುತ್ತದೆ ಅನಂತರ ಪತಿ ಮಡಿದುದನ್ನು ಪತ್ನಿ ಸತಿಹೋದುದನ್ನು ತಿಳಿಸಿ ಶ್ರೀಕಾರ ಹಾಕಿಯೋ, ಮಂಗಲ ಹೇಳಿಯೋ ಪಾಠವನ್ನು ಮುಗಿಸಲಾಗುತ್ತದೆ. ಉದಾಹರಣೆಗಾಗಿ ಕ್ರಿ.ಶ. 1431 ರ ಕಾನಲೆ ಶಾಸನವನ್ನು ಇಲ್ಲಿ ನೋಡಬಹುದಾಗಿದೆ.[38]

‘‘ ನಮಸ್ತುಂಗಶಿರಶ್ಚುಂಬಿಚಂದ್ರಚಾಮರತಾರವೇತ್ರಯಿಲೋಕ್ಯನಗರಾರಂಭಮೂಲಸ್ತಂಭಾಯಶಂಭವೇ ಸ್ವಸ್ತಿಶ್ರೀಮನ್ಮಹಾರಾಜಾಧಿರಾಜರಾಜಪರಮೇಸ್ವಶ್ರೀ ವೀರಪ್ರತಾಪದೇವರಾಯ ಮಹಾರಾಯರು ವಿಜೆಯನಗರಿಯಲು ಸುಕರಾಜ್ಯಂಗೈಯುತ್ತಿದ ಕಾಲದಲು ಶಕವ 1354ನೆಯ ವಿರೋಧಿಕೃತ ಸಂ ಶ್ರಾವಣಬ 30ಮಂ ಚಂದ್ರಗುತ್ತಿಗೆಸಲುವ... ಯರ್ವಮಹಳ್ಳಿಯರ.. ಯ ಬೊಮ್ಮಗುಡರು ಸ್ವರ್ಗಸ್ತರಾದರು ಅವರಮದವಳಿಗೆ ಬೊಮ್ಮಿಗುಡಿ .... ಯಿ ಕೂಡೆ ಸಹಗಮನವ ಮಾಡಿದರುಶ್ರೀಶ್ರೀಶ್ರೀಶ್ರೀಶ್ರೀ ”

ಇಲ್ಲಿ ಶೈವಶಾಸನಗಳನುಸಾರವಾಗಿ ‘‘ ನಮಸ್ತುಂಗ...... ಶಂಭವೇ ” ಎಂಬ ಮಂಗಳಶ್ಲೋಕದಿಂದ ಶಾಸನ ಪ್ರಾರಂಭಗೊಂಡಿದೆ. ನಂತರ ವಿಜಯನಗರದಲ್ಲಿ ‘‘ ವೀರಪ್ರತಾಪ ದೇವರಾಯ ಮಹಾರಾಯರ ” ಆಳ್ವಿಕೆ ಇರುವುದನ್ನು ಹೇಳಲಾಗಿದೆ. ಕಾಲವನ್ನು ‘‘ ಶಕವ 1354ನೆಯ ವಿರೋಧಿಕ್ರತುಸಂಶ್ರಾವಣಬ30ಮಂ ಎಂದು ತಿಳಿಸಿಕೊಡಲಾಗಿದೆ. ಅನಂತರದಲ್ಲಿ,

ಬೊಮ್ಮಗೌಡರು ಮರಣಹೊಂದಿದ್ದನ್ನು ಅವರ ಪತ್ನಿ ಬೊಮ್ಮಿಗೌಡಿ ಸಹಗಮನ ಮಾಡಿ ಕೊಂಡಿದ್ದನ್ನು ವಿವರಿಸಲಾಗಿದೆ. ಕೊನೆಗೆ ಶ್ರೀಕಾರದಿಂದ ಶಾಸನವನ್ನು ಮುಕ್ತಾಯ ಗೊಳಿಸಲಾಗಿದೆ. ತೀರಕೆಲವು ಶಾಸನಗಳ ಕೊನೆಯಲ್ಲಿ ಶಾಸನಕರ್ತೃವಿನ, ರೂವಾರಿಯ ಹೆಸರನ್ನು ಮಾತ್ರ ತಿಳಿಸಿಕೊಡಲಾಗಿರುತ್ತದೆ — ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಕೆಲವು ಸಲ ಮಾಸ್ತಿಕಲ್ಲಿನ ಪಾಠಗಳ ಪ್ರಾರಂಭಕ್ಕೆ ಮಂಗಳ ಶ್ಲೋಕದ ಬದಲಾಗಿ 'ಶ್ರೀಶ್ರೀ ಶ್ರೀ' —, 'ಸ್ವಸ್ತಿ' — 'ಸ್ವಸ್ತಿಶ್ರೀ' — ಎಂದು ಮಂಗಳ ವಾಚಕ ಗಳನ್ನು ಮಾತ್ರ ಹೇಳಲಾಗಿರುತ್ತದೆ. ಹಲವು ಶಾಸನಗಳಿಗೆ ಇವುಗಳನ್ನು ಹೇಳಿಲ್ಲ. ಮಂಗಳ ಶ್ಲೋಕದ ನಂತರದಲ್ಲಿ ಒಮ್ಮೊಮ್ಮೆ ಶಾಸನದಲ್ಲಿ ನೇರವಾಗಿ ಕಾಲವನ್ನೇ ತಿಳಿಸಿ ಅನಂತರದಲ್ಲಿ ಅರಸನನ್ನು ಹೇಳಲಾಗಿರುತ್ತದೆ, ಇದಕ್ಕಾಗಿ ಮರೂರ ಶಾಸನವನ್ನು ಇಲ್ಲಿ ಗಮನಿಸಬಹುದು, '' ನಮಸ್ತುಂಗ ಶಿರಶ್ಚುಂಬಿಚಂದ್ರಚಾಮರಚಾರವೆ..... '' ಎಂಬ ಮಂಗಳ ಶ್ಲೋಕವನ್ನು ಹೇಳಿ, '' ಸಕವರುಷ 1332 ವಿರೋಧಿ ಸಂವತ್ಸರದ ಪಾಲ್ಗುಣಸುದ್ಧ 7 '' ಎಂದು ತಿಳಿಸಿ ಆ ಕಾಲಕ್ಕೆ 'ದೇವರಾಯ' ಆಳುತ್ತಿದ್ದನೆಂದು ಶಾಸನದಲ್ಲಿ ಹೇಳಲಾಗಿದೆ.[39] ಒಮ್ಮೊಮ್ಮೆ ಶಾಸನಗಳು ನೇರವಾಗಿ ಕಾಲವನ್ನು ಸೂಚಿಸಿಯೇ ಪ್ರಾರಂಭಗೊಳ್ಳುವುದು ಉಂಟು [40] ಕೆಲವೊಮ್ಮೆ '' ಅರಿರಾಯ ವಿಭಾಡ ಭಾಷೆಗೆತಪ್ಪುವರಾಯರಗಂಡ ವೀರಹರಿಹರರಾಯ ಪ್ರಿಥ್ವೀರಾಜ್ಯವನಾಳುತ್ತಿರುವಲ್ಲಿ '' ಎಂದು ಅರಸನ ಆಳ್ವಿಕೆಯನ್ನು ಸೂಚಿಸುತ್ತಲೇ ಮಾಸ್ತಿ ಕಲ್ಲುಗಳ ಪಾಠಗಳು ಪ್ರಾರಂಭಗೊಂಡಿರುವುದನ್ನು ಕಾಣಬಹುದಾಗಿದೆ [41] ಹೀಗೆ ಮಾಸ್ತಿ ಕಲ್ಲಿನ ನಿರೂಪಣೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಕಂಡುಕೊಂಡರೂ ಅವುಗಳ ವಿಧಾನದಲ್ಲಿ ಒಂದು ಬಗೆಯ ಏಕತೆ ಕಂಡುಬರುತ್ತದೆ.

ಮಾಸ್ತಿಕಲ್ಲಿನ ಹಲವು ಪಾಠಗಳ ಮುಕ್ತಾಯದ ಹಂತದಲ್ಲಿ 'ಸ್ವರ್ಗದ' ಚಿತ್ರ ಕೊಟ್ಟಿರುವುದನ್ನು ಗಮನಿಸಬಹುದಾಗಿದೆ. ಸಾಮಾನ್ಯವಾಗಿ ಈ ವಿಷಯವನ್ನು ಶಾಸನ ಗಳು '' ಜಿಂಮಾಯಿ ಸಹಗಮನವಮಾಡಿ ಸ್ವರ್ಗಪ್ರಾಪ್ತಿಆದಳು '', '' ಮಾಡಿಗೊಂಡನ ಸತಿ ತೆಂಯಿಗುಡಿಯಿಬ್ಬರು ಸ್ವರ್ಗಸ್ತರಾದರು '' '' ಅಮಿಗುಡಿ ಕೂಡೆ ಸ್ವರ್ಗಸ್ತೆಯಾದಳು '' '' ಚಿಕ್ಕಗುಡಿ ಅವರ ಕೂಡೆ ಸಮಾಧಿಯನು ಪೊಕ್ಕು ಸ್ವರ್ಗಸ್ಥರಾದರು '' '' ಬೆನೂರ

ಕುಂಬಾರ್ರ ಮಹಬಳದೇವನ ಮಗ ಬೊಂಮುಂದಿರ ಆತನ ಸೊಸೆ ಚಂಡವೆ ಇಂತುವರಿಬರು ಸ್ವರ್ಗ್ಗ ವನೆಯ್ದಿದರು" ಎಂದು ಚಿತ್ರಿಸುತ್ತವೆ.[42] ಇಲ್ಲಿ ಪತ್ನಿ ಮೃತನಾದ ಗಂಡನ ನಂತರ ಸತ್ತು ಸ್ವರ್ಗಪಡೆದ ಕಲ್ಪನೆ ಇದೆ. ಕೆಲವು ಸಲ ಸತಿ 'ವೀರಸ್ವರ್ಗ' ಪಡೆದುದನ್ನು "ಬೊಮ್ಮಗೌಡಿ ಆ ರಾಮಗೌಡರ ಕೂಡಿ ಸಹಗಮನ ಮಾಡಿ ರಾಮಗೌಡ ಬೊಮ್ಮಕನೂ ಸ್ವರ್ಗವ ಸೂರೆಗೊಂಡರು" "...... ಜಕ್ಕಿಬಿಂತುವ್ವೆ ಕಲ್ಲ ನಿರಿಸುವಲ್ಲಿ ಕೂಡೆ ಸತ್ತು ಸ್ವರ್ಗ್ಗವಂ ಸೂರೆಗೊಂಡಳು" ಎಂದು ಮನೋಹರವಾಗಿ ಚಿತ್ರಿಸಿವೆ.[44] ಇಲ್ಲಿ ಸ್ವರ್ಗ ಸೂರೆಗೊಳ್ಳುವ ಕಲ್ಪನೆ ತುಂಬ ಉನ್ನತವಾಗಿದೆ. ಇನ್ನು ಹಲವು ಶಾಸನಗಳಲ್ಲಿ ಸತಿ ಸುರಲೋಕಪ್ರಾಪ್ತಳಾದಳೆಂದು ಹೇಳಲಾಗಿದೆ.[45] ಹೆಗ್ಗೋಡು, ಕುಂಬತಿಗ್ರಾಮ, ಬೆಳತೂರು ಶಾಸನಗಳಲ್ಲಿ ಸತಿ 'ದೇವಲೋಕಕ್ಕೆ ಹೊದುದ್ದನ್ನು ಹೇಳಲಾಗಿದೆ.[46] ಕ್ರಿ.ಶ. 1228 ರಶಾಸನವೊಂದರಲ್ಲಿ "ಬೊಂಮಕ್ಕನು ಸಹಗಮನವನು ಮಾಡಿ ದಂಪತಿಗಳು ಸಹಿತ ದ್ರುವಲೋಕಪ್ರಾಪ್ತರಾದರು" ಎಂದು ಬಣ್ಣಿಸಲಾಗಿದೆ.[47]

ಶೈವ ಶಾಸನಗಳ ಕೊನೆಯ ಹಂತದಲ್ಲಿ ಸತಿ 'ಶಿವಪಾದಕ್ಕೆ ಸಂದ' ಳೆಂದು ಕೂಡಿದರು ಶಿವಪದವಂ' ಎಂದು 'ಲಿಂಗದೊಳಗಾದಳು' ಎಂದು ಹೇಳಲಾಗಿದೆ.[48] ಹೆಗ್ಗೋಡು ಮತ್ತು ದುಗೂರ ಶಾಸನಗಳಲ್ಲಿ ಸತಿ ವೈಕುಂಠ ಪ್ರಾಪ್ತಳಾದುದನ್ನು ಹೇಳಲಾಗಿದೆ.[49] ಜೈನ ಶಾಸನವೊಂದರಲ್ಲಿ, ಗಂಡ ಸನ್ಯಾಸ ಮರಣಹೊಂದಲಾಗಿ ಅವನ ಪತ್ನಿ 'ಜೆಂನಕ್ಕ' ಸಹಗಮನದಿಂದ ಸ್ವರ್ಗಸ್ಥಳಾದಳೆಂದು ಉಲ್ಲೇಖಿಸಲಾಗಿದೆ.[50] ಪತ್ನಿ ಗಂಡನ ಮರಣದ ನಂತರ ಸತಿಹೋಗುವುದ ರಿಂದ ಸ್ವರ್ಗಲೋಕ — ದೇವಲೋಕ — ಸುರಲೋಕ — ಶಿವಪಾದ — ವೈಕುಂಠ ಪಡೆಯುತ್ತಾಳೆಂಬ ವಿಷಯದ ಹಿನ್ನೆಲೆಯಲ್ಲಿ ಮಾಸ್ತಿಕಲ್ಲಿನ ಪಾಠಗಳ ಕೊನೆಯ ಹಂತ ಸ್ವರ್ಗಕಲ್ಪನೆಯಿಂದ ಕೂಡಿದುದಾಗಿದೆ. ಮಾಸ್ತಿಕಲ್ಲಿನ ಶಿಲ್ಪದಲ್ಲಿ ಮೇಲಿನ ಹಂತದಲ್ಲಿ ಸ್ವರ್ಗದ ಚಿತ್ರಗಳನ್ನು ಬಿಡಿಸಿರುವು ದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.

ವೀರಗಲ್ಲುಗಳ ಪಾಠಗಳಲ್ಲಿ ಸತಿಘಟನೆಯ ವಿವರವಿದ್ದರೆ, ವೀರನ ಸ್ಥಾನ ಮುಖ್ಯ ವಾಗಿದ್ದು ಅವನ ಪತ್ನಿಯ ಸ್ಥಾನ ಅಮುಖ್ಯವಾಗಿರುತ್ತದೆ. ಈ ದೃಷ್ಟಿಯಿಂದ ಹರಿತಾಳು, ಕುಪ್ಪಟೂರು ಶಾಸನಗಳನ್ನು ಉದಾಹರಿಸಬಹುದಾಗಿದೆ.[51] ಈ ಶಾಸನಗಳಲ್ಲಿ ವೀರನ ಚಿತ್ರಣಕ್ಕೆ ಪ್ರಾಮುಖ್ಯತೆ ಇದೆ. ಹರಿತಾಳಿನ ಶಾಸನದಲ್ಲಿ, ಬೇಡರ ಪಡೆಯನ್ನು ಎದುರಿಸಿದ ತಿರಿಕಿಗೌಡರನ್ನು

ಶಾಸನದಲ್ಲಿ ಈ ರೀತಿ ಚಿತ್ರಿಸಲಾಗಿದೆ : '' ಬೊಂಮ್ಮದೇವಗೌಡರ ತಮ್ಮ ತಿರಿಕಗೌಡರು ಆಳು ಕುದುರೆಯನು ಕೂಡಿಕೊಂಡು ಹೋಗಿ ವೀರರಣಿಡೆಯರ..... ಮುಖವಾಗಿ ನಾವು ಆಡಿದ ಭಾಶೆಗೆ ತಪ್ಪುವರಲ್ಲ ಶ್ರೀ ವೀರಪ್ರತಾಪಹರಿಹರಮಹಾರಾ.. ರುಶ್ರೀಮನ್ಮಹಾ ಪ್ರಧಾನಗುಂಡಪದಂಣಾಯಕರು ಮೂವರ ರಾಯರುಗಂಡನೆಂಬ ಬಿರಿದನು ಕೊಟ್ಟುಯಿದ್ದಾರು ನಂಮ ಬಿರಿದುಪಾಡು ಎಹಗೆ ಉಳಿದುದು ಆ ಓಹಾದಿರಾಯ ಬೇಡರ ದಳವಂ ಮುರ್ರಿಯಲಿಕ್ಕವೆನು ಎಂದುಪಚ್ಚರಿಸಿ ಹೋಗಿ ಶಕವರುಶ 1129ನೆಯ ಸರ್ವ್ವಜಿತ ಸಂವತ್ಸರದ ಮಾಘಶು 10 ಆದಿವಾರದಲೂ ತಿರಿಕಗೌಡರು ಹರಿಗೆ ಕತ್ತಿಗೆಯ್ದು ತೆಗೆದುಕೊಂಡ ದಳವಂ ಮುರ್ರಿಯಲಿಕ್ಕಿ ಪರದಳವಂ ತೆತ್ತದರ್ರಿದು ಹೊಡದು ಹೊಡಕುಮಾಡಿನಾನಾಸನಾನಾಯಕರಂ ಕೊಂಡು ತಾನು ಸ್ವರ್ಗ್ಗಸ್ತನಾದನು''. ಇಷ್ಟನ್ನು ವಿವರಿಸಿದ ಮೇಲೆ '' ತಿರಿಕಿಗೌಡರ ಮಡದಳಿಗೆ ಬೊಂಮ್ಮಯಕ್ಕನು ಸಹಗಮನವನು ಮಾಡಿ ದಂಪತಿಗಳು ಸಹಿತ ದ್ರುವಲೋಕ ಪ್ರಾಪ್ತರಾದರು'', ಎಂದು ಶಾಸನ ಹೇಳುತ್ತದೆ. ಇಲ್ಲಿ ವೀರನ ಕಾರ್ಯಾಚರಣೆಯನ್ನು ದೀರ್ಘವಾಗಿ ಚಿತ್ರಿಸಿದ ಶಾಸನವು ಪತ್ನಿಯ ಸಹಗಮನವನ್ನು ಕೇವಲ ಒಂದು ವಾಕ್ಯದಲ್ಲಿ ಹೇಳಿಬಿಟ್ಟಿರುವುದನ್ನು ಗಮನಿಸಬಹುದಾಗಿದೆ. ಇದೇ ರೀತಿ ಕುಪ್ಪಟೂರು ಶಾಸನವು ತಮ್ಮುಗ '' ತಾನಡಗಿದ ಸತಿಗೂಡಿ ಶಿವನಪದಪಂಕಜದೊಳು'' ಎಂದು ಸಂಕ್ಷಿಪ್ತದಲ್ಲಿ ಸಹಗಮನದ ಸೂಚನೆಯನ್ನು ಕೊಟ್ಟು, ತನ್ನ ಇಡೀ ಬರವಣಿಗೆಯನ್ನೆಲ್ಲ ವೀರನಿಗಾಗಿ ಮೀಸಲಾಗಿಟ್ಟಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. '' ಸುರಪದವಬಯಸಿ ತಮ್ಮುಗ ಧುರದೊಳು ಖಂಡೆಯದಲರಿನೃಪಾಲರ ಶಿರಗಳ ತರ್ರಿದೊಟ್ಟುತ ರಣಭೂತವ ಕರೆದು—ಣಲಿಕ್ಕುತಲೇ ಶಿವಸಂನ್ನಿಧಿಗೈದಿದ'' ಎಂದು, '' ವೀರಪ್ರತಾಪ ರಣರಂಗಧೀರ ಸಿಂಗಣಸುರಿತ್ರಾಣಂ. ಂಗಭೂವರನಾತ್ಮಸಂಭವ ಹರಿಹರನಭುಜಪ್ರತಾಪ ಕಾತಿಗವಳ್ಳಿಯ ಕಾಳಗವುಡರ ಸುತತಮ್ಮಗೌಡನು ರಣರಂಗದಲಿ ವೈರಿಗಳ ಗೆಲ್ದು.. .. ಸಂನಿಧಿಗೈದಿದ'' ಎಂದು ಶಾಸನವು ವೀರ ತಮ್ಮುಗನನ್ನು ಸ್ತುತಿಸಿ ಕೃತಾರ್ಥವಾಗಿದೆ. ಕೆಲವೊಮ್ಮೆ ಗಂಡ ವೀರನಾಗಿರದಿದ್ದರೂ ಸಮಾಜದಲ್ಲಿ ಉನ್ನತ ಸ್ಥಾನಹೊಂದಿದವನಾಗಿದ್ದು ಮರಣಹೊಂದಿದರೆ, ಅವನನ್ನು ಶಾಸನದಲ್ಲಿ ಚಿತ್ರಿಸುವಾಗ ಅವನೊಡನೆ ಸತಿಹೋದ ಅವನ ಪತ್ನಿಗಿಂತಲೂ ಪ್ರಮುಖವಾಗಿ ಚಿತ್ರಿಸುವುದನ್ನು ಕಾಣುತ್ತೇವೆ. ಬೆಳಗಾವಿ ಶಾಸನದಲ್ಲಿ ಬುಳ್ಳಿದೇವನ ಜಂಗಮರೂಪತ್ವ, ಸಚ್ಚಾರಿತ್ರ್ಯ, ವಿದ್ಯಾಶಕ್ತಿ ಮೊದಲಾದವುಗಳನ್ನು ಉನ್ನತವಾಗಿ ಚಿತ್ರಿಸಿದ ಮೇಲೆ ಅವನ ಸುರಲೋಕ ಯಾತ್ರೆ ತಿಳಿಸಿ, ಅನಂತರ ಕೇವಲ ಒಂದೇ ವಾಕ್ಯದಲ್ಲಿ ಅವನ ಮೂವರು ಪತ್ನಿಯರು ಸತಿಹೋದುದನ್ನು ತಿಳಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ[52]



ಕೆಲವು ಮಾಸ್ತಿಕಲ್ಲುಗಳ ಪಾಠಗಳು ತೀರಸಂಕ್ಷಿಪ್ತ ಮತ್ತು ನೇರ ನಿರೂಪಣೆಯುಳ್ಳವಾಗಿವೆ. ಒಂದು ವಾಕ್ಯ ಅಥವಾ ಎರಡು ವಾಕ್ಯಗಳವರೆಗೆ ಅವುಗಳ ಬರವಣಿಗೆಯು ಮಿತಿ ಇದೆ. ಸಂಡದ ಶಾಸನವೊಂದು '' ಚಿಕ್ಕಗೌಡನಮಗ ನಾಗಪ್ಪನು ಸ್ವರ್ಗಸ್ತನಾದ ಆತನ ಮದವಳಿಗೆ ತಂಗಿಗುಡಿ ಸಹಗಮನವ ಮಾಡಿದಳು '' ಎಂದು ಹೇಳುತ್ತದೆ.[53] ಇಲ್ಲಿ ನಾಗಪ್ಪನ ಮರಣ, ಅವನ ಪತ್ನಿಯ ಸಹಗಮನ ಈ ಎರಡು ಮುಖ್ಯ ವಿಷಯಗಳನ್ನು ಮಾತ್ರ ಶಾಸನದಲ್ಲಿ ಕಂಡರಿಸಲಾಗಿದೆ. ಮಾದಕಹಳ್ಳಿ ಶಾಸನದಲ್ಲಿ ' ಜಯಸಂವತ್ಸರದಲು ಮಾದಗೌಡನ ಮಗ ಗುಳಿಗನ ಮದವಳಿಗೆರು ಸತಿಯಾದರು '' ಎಂದು ತಿಳಿಸಲಾಗಿದೆ.[54] ಗುಳಿಗನ ಪತ್ನಿಯರು ಸತಿಹೋದುದು ಇಲ್ಲಿದೆ. ಈ ಶಾಸನದಲ್ಲಿ ಗಂಡನ ಮರಣವನ್ನು ತಿಳಿಸಿಲ್ಲದಿರುವುದನ್ನು ಗಮನಿಸಬೇಕು, ಇದೇ ರೀತಿ ಕುಣಗನಹಳ್ಳಿ ಶಾಸನವು ಕಾಡ ಗಂಡ ತಿಮ್ಮಲಾಪಾಮಣನ ಮರಣ ತಿಳಿಸದೇ ಪತ್ನಿ ' ಮುಂಚಾಯಿ 'ಯು ಸತಿಹೋದುದನ್ನು ತಿಳಿಸುತ್ತದೆ.[55] ಇನ್ನೊಂದು ಶಾಸನವು '' ವಿಸುಸಂವತ್ಸರ ಚಯಿತ್ರಸು 7 ಸೋಮವುಕುಂಬಸಿಯ ಬೇಡರನಾಯಕನು ಆತನ ಮದವಳಿಗೆಬೊಂಮಾಯಿಸ್ವರ್ಗಸ್ತರಾದರು '' ಎಂದು ಹೇಳುತ್ತದೆ[56] ಉದ್ರಿಗ್ರಾಮದ ಶಾಸನವಂತೂ ಕೇವಲ ಸತಿಹೋದವಳ ಹೆಸರನ್ನು ' ಉರವನಾಕಿತಿ ' ಎಂದು ತಿಳಿಸಿಬಿಡುತ್ತದೆ.[57] ಈ ಶಾಸನಗಳು ಮುಖ್ಯವಾಗಿ ಸತಿಘಟನೆಯನ್ನು ತೀರ ಸಂಕ್ಷಿಪ್ತದಲ್ಲಿ ತಿಳಿಸಿಬಿಡುವ ಉದ್ದೇಶವನ್ನು ಮಾತ್ರಹೊಂದಿದಂತಿದೆ.

ಮಾಸ್ತಿಕಲ್ಲಿನ ಸಾಹಿತ್ಯ : ಸಾಹಿತ್ಯ ದೃಷ್ಟಿಯಿಂದ ಮಾಸ್ತಿಕಲ್ಲುಗಳನ್ನು ಅಭ್ಯಸಿಸಲು ಹೊರಟವರಿಗೆ ತುಂಬ ನಿರಾಸೆಯೇ ಉಂಟಾಗುತ್ತದೆ. ಅವು ಮುಖ್ಯವಾಗಿ ಸಾಹಿತ್ಯದೃಷ್ಟಿಯಿಂದ ರಚಿಸಿದವುಗಳೇ ಅಲ್ಲ. ಅವು ಸತಿಹೋದ ಘಟನೆಗಳನ್ನು ವರದಿಮಾಡುವ ಉದ್ದೇಶವನ್ನು ಮಾತ್ರ ಹೊಂದಿದಂತಿವೆ. ಇದರಿಂದಾಗಿ ಅವು ಗದ್ಯದಲ್ಲಿ ರಚನೆಗೊಂಡ ಆಡುಮಾತಿನ ತುಣುಕುಗಳಾಗಿವೆ. '' ಬಹುಶಃ ಸ್ತ್ರೀಬಗ್ಗೆ ಸಮಾಜದಲ್ಲಿರುವ ಉಪೇಕ್ಷಾಭಾವವೇ ಇದಕ್ಕೆ ಕಾರಣವಾಗಿರಬೇಕು '' ಎಂದು ಡಾ: ಎಂ.ಎಂ.ಕಲಬುರ್ಗಿ ಅವರು ಸಂಭಾವ್ಯವಾದ ಊಹೆ ಮಾಡಿದ್ದನ್ನು ಇದೇ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.[58]

ಶಾಸನವೊಂದರಲ್ಲಿ ಸತಿಹೋದವಳನ್ನು '' ಶ್ರೀಮತಿಗೆ ಧರಿಣಿಗೆ ವಾಗ್ದೇವಿಗೆ ರತಿರಂಭೆಗೆ ಕೊಸ್ತಿಗೆ ಸಮಾನ ' ಳೆಂದು ಗೌರವಿಸಲಾಗಿದೆ.[59] ಸತಿಯನ್ನು ಲಕ್ಷ್ಮಿ, ಭೂದೇವಿ,

ಸರಸ್ವತಿ, ರತಿ ಮತ್ತು ಕಂತಿಯರಿಗೆ ಹೋಲಿಸಿರುವ ಇಲ್ಲಿಯ ಚಿತ್ರ ಸುಂದರವಾಗಿದೆ. ಇದೇ ರೀತಿ ಇನ್ನೊಂದು ಶಾಸನದಲ್ಲಿ ಸತಿಯನ್ನು '' ಶಿವಪಾದಶೇಖರೆ'', '' ಶಿವಕಥಾಳಾಪೆ'' ಎಂದು ಬಣ್ಣಿಸಲಾಗಿದೆ.[60] ಕ್ರಿ.ಶ. 1445 ರ ಶಾಸನದಲ್ಲಿ '' ಬೊಮ್ಮರಸಗೌಡನ್ನೈದಿದ ದೇವಪದಮಂ ಆತನರ್ಧಾಂಗಿಬಲುಚಕ್ಕ ಭೂತಳದೊಳಗುಳ್ಳ ಯುವತಿಯರ ಸಿರೋಮಣಿ ಸಹಗಮನಾತರಮಂ ಮಾಡಿ ಕೂಡಿದರು ಶಿವಪದಮಂ'' ಎಂದು ಹೇಳಲಾಗಿದೆ.[61] ಇಲ್ಲಿ '' ಭೂತಳದೊಳಗುಳ್ಳಯುವತಿಯರ ಸಿರೋಮಣಿ'' ಎಂದು ಸತಿ ಬಲುಚಕ್ಕಳನ್ನು ಕಾವ್ಯಾತ್ಮಕವಾಗಿ ಚಿತ್ರಿಸಲಾಗಿರುವುದು ಗಮನಕ್ಕೆ ಬರುತ್ತದೆ. ಇನ್ನೊಂದು ಶಾಸನದಲ್ಲಿ '' ಮದುವರಸನಾಯ್ಕರು ಸ್ವರ್ಗಸ್ಥನಾದಲ್ಲಿ ಆತನ ಸತಿ ಬುಳ್ಳರಸಿ ಕಂನಾಯಿಗಳು ಗಂಡನ ವಿಜಯಶ್ರೀಯನೆಯ್ದಿ ಸುರಲೋಕಪ್ರಾಪ್ತರಾದರು'' ಎಂದು ಹೇಳಲಾಗಿದೆ.[62] ಇಲ್ಲಿ ಸತಿಹೋಗುವುದನ್ನು ' ಗಂಡನ ವಿಜಯಶ್ರೀಯನೆಯ್ದಿ' ಎಂದು ಚಿತ್ರಿಸುವ ಬಗೆ ತುಂಬ ಹೊಸದಾಗಿಯೂ, ಸಾಹಿತ್ಯಕವಾಗಿಯೂ ಇರುವುದನ್ನು ಕಾಣುತ್ತೇವೆ. ಹೀಗೆ ತೀರ ಕೆಲವು ಮಾಸ್ತಿಕಲ್ಲಿನ ಶಾಸನಗಳಲ್ಲಿ ಮಾತ್ರ ಒಂದು ಪದ ಅಥವಾ ವಾಕ್ಯ ಸಾಹಿತ್ಯದ ವ್ಯಾಪ್ತಿಯಲ್ಲಿ ಬಳಕೆಗೊಂಡನ್ನು ಕಾಣುತ್ತೇವೆ.

ಬೆಳತೂರು ಶಾಸನ ಸಾಹಿತ್ಯ ದೃಷ್ಟಿಯಿಂದ ಅಪೂರ್ವವಾದುದು.[63] ಅದು ಅಕ್ಕರ, ಲಲಿತವೃತ್ತ, ಕಂದ ಪದ್ಯಗಳ ಹಾಸರ ಬೇಸಿನಿಂದ ದೇಕಬ್ಬೆಯ ಅನುಗಮನವನ್ನು ಸಮರ್ಥವಾಗಿ ಚಿತ್ರಿಸಿದೆ. 10–11ನೆಯ ಶತಮಾನಗಳ ಚಂಪುವಿನ ಪ್ರೌಢತೆ ಆ ಬರವಣಿಗೆಯಲ್ಲಿ ಎದ್ದುಕಾಣುತ್ತದೆ. ದೇಕಬ್ಬೆಯ ತವರುಮನೆಯ ಮತ್ತು ಅವಳ ಗಂಡನ ಮನೆಯ ವರ್ಣನೆಗೆ ಶಾಸನದ ಬಹುಭಾಗ ವಿನಿಯೋಗವಾಗಿರುವುದು ಸೂಕ್ತವಾದುದೇ ಆಗಿದೆ. ಅವಳು ಸತಿ ಹೋದ ದಿವ್ಯತೆಗೆ ಹಿನ್ನೆಲೆಯ ಭವ್ಯತೆ ಕಾಣಿಸಿಕೊಂಡು ವಸ್ತುವಿನ ನಿರೂಪಣೆಯಲ್ಲಿ ಒಂದು ವಿಧದ ಐಕ್ಯತೆ ಸಾಧಿಸಿದಂತಾಗಿದೆ ದೇಕಬ್ಬೆಯ ತಂದೆ ರವಿಗನನ್ನು ಶಾಸನವು ಹೀಗೆ ಬಣ್ಣಿಸುತ್ತದೆ: '' ಕುಡಿಯರವಲ್ಲಭಂ ಕುಡಿಯರಾಭರಣಂ ನುಗುನಾಡರಾಯನೆನ್ನಿಪ್ಪ ಕಲಿಕಾಲಕರ್ಣನ ವಿನೋದದ ಚಾಗದ ಬೀರದಾಪ್ಪಣೀಗಡಿನ ನಿಕೃಷ್ಟನಿಗ್ರಹಣ ನಿಕೃತ್ಯನಿರಾಚರಣೇಟವೀಟರಂ ಕಡುಜಡರೆನ್ನು ಪೋಲಿಪರೆ ಧನ್ಯನೆನಿಪ್ಪವಜೊಗ್ರಗನ್ಯನ'' ಇಲ್ಲಿ ರವಿಗನನ್ನು ' ಕುಡಿಯರ–ವಲ್ಲಭ', ' ಕುಡಿಯರಾಭರಣ', ' ನುಗುನಾಡರಾಯ' ಎಂದು ಹೇಳುವ ರೀತಿ ಸೊಗಸನ್ನು

ಬೀರಿದೆ. ಅವನು ವಿನೋಧಪ್ರಿಯನು, ತ್ಯಾಗಿಯೂ ಆಗಿದ್ದವನು, ಅಷ್ಟೇ ಅಲ್ಲ, ಅವನು ಸಮರ್ಥನಾದ ವೀರನಾಗಿದ್ದವನು. ಕೊನೆಗೆ ಶಾಸನ ಕವಿಯು ಅವನ ಔನ್ನತ್ಯವನ್ನು ಹೊಗಳುತ್ತ " ಎನುತ್ತ ಪೋಲಿಪರೆ ಧನ್ಯನೆನಿಪ್ಪ ಮಹೋಗ್ರನನ್ಯನ " ಎಂದು ವಿಸ್ಮಯ ಪಡುತ್ತಾನೆ. ಇಂಥವನ ಕೀರ್ತಿ ಪ್ರಚಾರಗೊಂಡುದನ್ನು ಕವಿ ಇನ್ನು ಸಮರ್ಥವಾಗಿ "ಪರ್ವಿ ಬಳೆದುದು ಕುಡಿಯರವಲ್ಲಭನ ಕೀರ್ತಿಲತೆ ಕೋಮಳದಿಂ " ಎಂದು ಚಿತ್ರಿಸುತ್ತಾನೆ. ಇಲ್ಲಿಯ ಒಂದೊಂದು ಪದಗಳು ತುಂಬ ಅರ್ಥವಂತಿಕೆಯನ್ನು ಪಡೆದುವಾಗಿವೆ. ಕಡಿಯರ—ವಲ್ಲಭನ ಕೀರ್ತಿ ಎಂಬ ಲತೆ ಕೋಮಳದಿಂದ ಹಬ್ಬಿ ಬೆಳೆದುಕೊಂಡುದು ಎನ್ನುವ ಚಿತ್ರ ಅಮೋಘವಾದುದು 'ಕೀರ್ತಿಲತೆ' ಎನ್ನುವ ಇಲ್ಲಿಯ 'ರೂಪಕ' ಸಂದರ್ಭಕ್ಕೆ ಉತ್ಕೃಷ್ಟ—ವಾದುದಾಗಿದೆ. ರವಿಗನ ಪತ್ನಿ ಜೊನ್ನಕಬ್ಬೆಯೂ ಸಾಮಾನ್ಯಳಲ್ಲ. " ನಿರುಪಮ ಸೀಳದಿಂ ಗುಣದಿನುತ್ತಮದಾನದಿನಾತ್ಮಭಕ್ತಿಯಿಂ ಗಿರಿಸುತೆರಂಭೆ ಮೇನಕೆಸರಸ್ವತಿರುಗ್ಮಿಣಿ ಸತ್ಯಭಾಮೆಯೊಳೆ ದೊರೆಯನಲ್ಲದೀಗಡಿನ ದುಷ್ಟ ಕನಿಷ್ಟ ದುಶೀಳ ದುರ್ಗುಣಾಧರೆಯನೆನ್ತು ಪೋಲ್ಪರೊ ನಿರ್ಮ್ಮಳ ಚಿತ್ತದಪೊನ್ನಕಬ್ಬೆಯಂ " ಎಂದು ಅವಳ ಅಸಾಮಾನ್ಯವ್ಯಕ್ತಿತ್ವವನ್ನು ಕವಿ ತುಂಬ ಹೃದಯದಿಂದ ಕೊಂಡಾಡಿದ್ದಾನೆ. ಶೀಲ ಗುಣ ದಾನ, ಭಕ್ತಿಗಳಿಂದ ಅವಳು ಪಾರ್ವತಿ, ರಂಭೆ, ಮೇನಕೆ, ಸರಸ್ವತಿ, ರುಕ್ಮಿಣಿ, ಸತ್ಯಭಾಮೆ ಈ ಮೊದಲಾದ ಅಲೌಕಿಕ ದಿವ್ಯ ವ್ಯಕ್ತಿತ್ವಗಳಿಗೆ ಸಮನಾಗದೇ ಹೆಚ್ಚಾಗಿದ್ದಾಳೆ. ಇಂಥವಳಿಗೆ ಭೂಮಂಡಲದ ದುಷ್ಟ, ಕನಿಷ್ಟ, ದು:ಶೀಲ, ದುರ್ಗುಣಗಳ ಸ್ತ್ರೀಯರು ಸರಿದೊರೆಯಾಗಬಲ್ಲರೆಂಬುದು ದೂರದ ಮಾತಾಗಿರುವುದು ಸಹಜವೇ ಆಗಿದೆ. ಇಂಥ ರವಿಗ ಪೊನ್ನಕಬ್ಬೆಯರ ಶ್ರೇಷ್ಠ ದಾಂಪತ್ಯ ಜೀವನದಲ್ಲಿ ಬೆಳತೂರು ಶಾಸನದ ನಾಯಕಿ ದೇಕಬ್ಬೆಯು ಮಗಳಾಗಿ ಹುಟ್ಟುತ್ತಾಳೆ. ಅವಳು ಹುಟ್ಟಿ ಬೆಳೆದ ಸೊಬಗನ್ನು ಕವಿ ಚಿತ್ರಿಸದೆ ಮುಖ್ಯ ಘಟನೆಗೆ ಬರುವ ಉದ್ದೇಶದಿಂದ, 'ದೇಕಬ್ಬೆಯಂ ನವಿಲೆನಾಡಧಿಪತಿ ಕುರುವನ್ದಗುಲದ ಪೆರ್ಮೆಯುಮಾತನೀತಂಗೀಯೆ " ಎಂದು ದೇಕಬ್ಬೆಯನ್ನು ಇನ್ನೊಬ್ಬ ಉನ್ನತ ವ್ಯಕ್ತಿತ್ವದ ನವಿಲೆನಾಡಧಿಪತಿ ಪೆರ್ಮಲನ 'ಏಚನಿಗೆ ಕೊಟ್ಟು ವಿವಾಹಮಾಡಿದ್ದನ್ನು ತಿಳಿಸಿಬಿಡುತ್ತಾನೆ. ಶಾಸನದ ಮುಂದಿನ ವಾಕ್ಯವು " ವಾರಿಜಾನನೆ ವಿನಯಚಿತ್ತಾಮಣಿ ಪತಿ ಹಿತೆಯೆಡಗೂಡಿ ಸುಖದಿನಿರ್ದ್ದ ಎಂಬ ಪದಗಳು ಒಂದರ ಮುಂದೊಂದು ಸಾಂಗವಾಗಿ ಬಂದು ಪರಿಸ್ಥಿತಿಯ ಗಂಭೀರ — ಪ್ರಶಾಂತತೆ — ಒಳ್ಪುಗಳನ್ನು ಉನ್ನತವಾಗಿ ಹಿಡಿದಿಡುವಲ್ಲಿ ಸಾಫಲ್ಯ

ಸಾಧಿಸಿವೆ. ಇನ್ನು ಶಾಸನದ ಮುಂದಿನ ಭಾಗದಲ್ಲಿ ಕಾರ್ಮೋಡ ಕವಿಯುತ್ತದೆ. ಶಾಸನದ ಅರ್ಧಭಾಗದವರೆಗೆ ನುಗುನಾಡು — ನವಿಲೆನಾಡುಗಳಲ್ಲಿಯ ಸೌಖ್ಯ — ವೈಭವಗಳ ಚಿತ್ರಣದಲ್ಲಿಯೇ ಕವಿಯ ಕಾವ್ಯಶಕ್ತಿ ವಿಲೀಸಲಾಗಿದ್ದುದು, ಇನ್ನು ಶಾಸನದ ಮುಂದಿನ ಅರ್ಧಭಾಗದಲ್ಲೆಲ್ಲ ನುಗುನಾಡು — ನವಿಲೆನಾಡಿನ ಭಯ, ವಿಸ್ಮಯ, ಕರುಣೆಗಳ ಸಮ್ಮಿಶ್ರ ಸ್ಥಿತಿಯ ಚಿತ್ರಣಕ್ಕೆ ಮುಡಿಪುಗೊಳ್ಳುತ್ತದೆ. ಶಾಸನದ ಮೊದಲರ್ಧಭಾಗ ಸೌಖ್ಯವಾಗಿದ್ದರೆ, ಉಳಿದರ್ಧ ಭಾಗ ಅಸೌಖ್ಯವಾಗಿದೆ.

ದೇಕಬ್ಬೆಯ ಪತಿ 'ಏಚನನ್ನು ತಲಕಾಡಲ್ಲಿ ' ಉಯ್ಯು ' ಕೊಲ್ಲಲಾಗುತ್ತದೆ. ಕವಿ ಈ ದುರಂತದ ಮುಂದಿನ ಭಾಗವನ್ನು ಕಂದ ಪದ್ಯಗಳ ಉಸಿರಿನಲ್ಲಿ ಎಡಬಿಡದೇ ಹೀಗೆ ಚಿತ್ರಿಸುತ್ತಾನೆ:

ಕಲಿಕಾಲವೇಳನೆನಿಸಿದ
ಕಲಿಚಾಗಿಯುನಿರಿದುಕೊಂಡರೆಂಬುದ ಮಾತಂ
ಲಲಿತಾಂಗಿ ಕೇಳ್ದು ರವಿಗನ
ಕುಲದೀಪಕಿ ಸಾಯಲೆಂದು ಕೊಂಡಕೆ ನಡೆದಳ್ ॥

ತಂದೆಯುಮಬ್ಬೆಯುಮೊಡನೆಯೇ
ಬಂಧುಗಳುಂ ಬಂದು ಮಗಳೆ ಸಾಯದೆ ಮಾಣ್ ನೀ
ನೆಂದೆಲ್ಲಂ ಕಾಲ್ವಿಡಿದಡ
ನಿಂದಿತದೇಕಬ್ಬೆ ಮುನಿದು ಬಗ್ಗಿಸಿ ನುಡಿದಳ್ ॥

ನುಗುನಾಡಧಿಪತಿ ರವಿಗನ
ಮಗಳಾಗಿಯುಮಂತೆ ನವಿಲೆನಾಡಧಿಪತಿಗಾಂ
ನೆಗಳೆ ಸತಿಯಾಗಿ ಬಾಳ್ದುದು
ಬಗೆದಪೆನ್ ಕೊಟ್ಟಕೊಂಡ ಮನೆಯಶಮುಳಿಯಲ್ ॥

ಎಂದು ಪರಿಚ್ಛೇದಿಸಿ ನಯ
ದಿಂದಂ ದೇವಂಗೆ ತೋಂಟ ಖಂಡದ ಮಣ್ಣಂ
ನಂದಾದೀವಿಗೆಗಿತ್ತರ
ವಿಂದಾನನೆ ಸಲೆ ನಿವೇದ್ಯಕೆಂದನುನಯದಿಂ ॥

ಮಡದಿ ಸಲೆಗೇಳೆ ಗಳ್ದಯ
ಪಡುವಣ ಕಡೆಯಲ್ಲಿ ತೆಂಕಲಂದೊಗ್ಗಳ ಬಿದೆಯಂ
ಕಡುಗೂರ್ತುಗೊಟ್ಟ ನುಗುನಾ
ಡೊಡೆಯನ ಕುಲಪುತ್ರಿ ಪೆಳ್ಟ ಮತ್ತಂ ಮತ್ತಂ 11

ಇಲ್ಲಿ ಶಾಸನ ನಾಯಕಿಯ ಚಿತ್ರಣ ಸಮರ್ಥವಾಗಿ ಮೂಡಿ ಬಂದಿದೆ. ಕಲಿಕಾಲವೇಳನೆನಿಸಿದ, ಕಲಿಯಾಗಿಯಾಗಿದ್ದ ತನ್ನ ಗಂಡನನ್ನು ಕೊಂದುದನ್ನು ' ಲಲಿತಾಂಗಿ ' ಕೇಳಿ ' ರವಿಗನ ಕುಲದೀಪಕಿ ' ಸಾಯಲಿಕ್ಕಾಗಿ ಕೊಂಡಕ್ಕೆ ಹೊರಟೇ ಬಿಡುತ್ತಾಳೆ. ಘನ ವ್ಯಕ್ತಿತ್ವ ಹೊಂದಿದ ಪತಿ ಮತ್ತು ಇತರ ಚಿತ್ರಗಳೊಡನೆ ಅಸಾಮಾನ್ಯ ವ್ಯಕ್ತಿತ್ವಹೊಂದಿದ ಪತ್ನಿ — ಮಗಳ ಚಿತ್ರಣವೂ ಒಟ್ಟಾಗಿ ಚಿತ್ರಿಸುವಲ್ಲಿ ಕಂದ ಪದ್ಯ ಇಲ್ಲಿ ಸಾರ್ಥಕ್ಯ ಸಾಧಿಸಿದೆ. ಈ ಪದ್ಯ ಭಾಗದಲ್ಲಿಯ ' ಇರಿದು ' ಎಂಬ ಪದದ ಕ್ರೂರತೆ ಮತ್ತು ' ಲಲಿತಾಂಗಿ ' ಎಂಬ ವಿಶೇಷಣದ ಕೋಮಲತೆ ಒಟ್ಟಾಗಿ ಬಂದು ಪ್ರಸಂಗದ ಗಂಭೀರತೆಯನ್ನು ಹೆಚ್ಚಿಸುತ್ತವೆ. ಮುಂದಿನ ಕಂದ ದೇಕಬ್ಬೆಯ ತಂದೆ-ತಾಯಿಗಳ ಕರುಣಾಜನಕ ಸ್ಥಿತಿಯನ್ನು ತಿಳಿಸುತ್ತದೆ. ಮಗಳು ಕೊಂಡಕ್ಕೆ ಹೋಗಲಿರುವ ಸುದ್ದಿ ಅವರಿಗೆ ಸಿಡಿಲಾಗಿ ಪರಿಣಮಿಸಿದೆ. ಅವರು ಬಂಧುಗಳು ಮೊದಲ್ಗೊಂಡು ಬಂದು ಮಗಳನ್ನು ಸತಿಹೋಗದಂತೆ ಕೇಳಿಕೊಳ್ಳುತ್ತಾರೆ. ದೇಕಬ್ಬೆ ಸತಿಹೋಗುವ ತನ್ನ ನಿರ್ಧಾರವನ್ನು ಬದಲಿಸುವುದಿಲ್ಲ. ಈ ಪದ್ಯದಲ್ಲಿಯ '' ಮಗಳೆ ಸಾಯದೆ ಮಾಣ್ ನೀನೆಲ್ಲಂ ಕಾಲ್ವಿಡಿದಪೆ '' ಎನ್ನುವ ಮಾತು ತಂದೆ — ತಾಯಿಗಳ ದುಃಖದ ಉಗ್ರತೆಯನ್ನು ತಿಳಿಸುತ್ತದೆ. ಅಲ್ಲದೆ ಇದರಿಂದ ತಂದೆ-ತಾಯಿಗಳು ಮೊದಲು ದೇಕಬ್ಬೆಯನ್ನು ಸತಿಯಾಗದಂತೆ ಮನವೊಲಿಸಲು ಮತ್ತೆ ಮತ್ತೆ ಪ್ರಯತ್ನಿಸಿರಬೇಕೆಂದೂ, ಅದಕ್ಕೆ ಅವಳು ಒಪ್ಪದಿದ್ದಾಗ ಕೊನೆಗೆ ಅವರು ಕಾಲ್ವಿಡಿದು ಕೇಳಿಕೊಂಡಿರಬೇಕೆಂದೂ, ತಿಳಿಯಲು ಶಕ್ಯವಿದೆ. ಬಹುಶಃ ಅವರು ' ಬೇಡ 'ವೆನ್ನುವುದು, ಆಕೆ ' ಬೇಕು ' ವೆನ್ನುವುದು ದೀರ್ಘಕಾಲದವರೆಗೆ ನಡೆದಿರಬೇಕು. ಕೊನೆಗೆ ಮಗಳ ಕಾಲನ್ನು ತಂದೆ-ತಾಯಿಗಳು ಹಿಡಿಯುವವರೆಗೂ ಈ ಪ್ರಸಂಗದ ಅತಿರೇಕತೆ ಬೆಳೆದುಕೊಂಡಿತೆನಿಸುತ್ತದೆ. ಆಗ ಮಗಳಿಗೆ ತಂದೆ-ತಾಯಿಗಳ ಈ ಕಾರ್ಯ ಸರಿಬಾರದೇ ಹೋಗಿ, ಅವರ ಮೇಲೆಯೇ ಸಿಟ್ಟುಗೊಂಡು ತನ್ನ ವಾದಕ್ಕೆ ಮತ್ತೆ ಸಮರ್ಥನೆಯನ್ನು ಕೊಡುತ್ತಾಳೆ. ನುಗುನಾಡಧಿಪತಿ ರವಿಗನ ಮಗಳಾಗಿ, ನವಿಲೆನಾಡಧಿಪತಿ

ಏಚನಿಗೆ ಪತ್ನಿಯಾಗಿ ಈಗ ಸತಿಹೋಗದೆ 'ಕೊಟ್ಟ — ಕೊಂಡ 'ಮನೆಯ ಕೀರ್ತಿ ಅಳಿಸಲು ಬರುಕಬೇಕೇ ಎನ್ನುವ ದೇಕಬ್ಬೆಯ ಮಾತುಗಳು ತಂದೆ–ತಾಯಿಗಳನ್ನು ನಿರುತ್ತರಗೊಳಿಸಿತೆನಿಸುತ್ತದೆ. [illegible] ಹೀಗೆ ತಂದೆ–ತಾಯಿಗಳ ವಾತ್ಸಲ್ಯದಿಂದ ಬಿಡಿಸಿ ಕೊಂಡ ದೇಕಬ್ಬೆ ' ನಯದಿಂದ ' ದೇವರಿಗೆ ದಾನ ಬಿಟ್ಟು, ನೆರೆದವರಿಗೆ ದಾನ ಮಾಡಿ ಕೊನೆಗೆ '' ದೇವರದೇವಂಗಳ್ಗೆಯುಂ ಕಯ್ಯುಗಿದುರಿವುರಿಯುಂ ಪೊಕ್ಕು '' ಸತಿಹೋಗುತ್ತಾಳೆ. ಆಗ ಶಾಸನಕವಿ '' ಕವಿರಾಜಬಾನ್ಧವನು '' ಅವಳ ಗುಣಗಾನವನ್ನು ಲಲಿತ ವೃತ್ತದಲ್ಲಿ ಅತ್ಯಂತ ಸಮರ್ಥವಾಗಿ ಮಾಡಿ ತನ್ನ ಪಾಲಿನ ಕರ್ತವ್ಯವನ್ನು ಮುಗಿಸುತ್ತಾನೆ:

> ಶ್ರೀರಮಣಿಗೌರಿಸಬಿಧಾರಿಣಿಯು ಪುತ್ರಿರತಿಭೂರಮಣಿಯನ್ದ ಸರೂಪವರ್ತ್ತಿಯೊಳ್ಪ್ಪ
> ದಾರೆ ಜಯಧಾರೆ ಜಸಧಾರೆನಯಧಾರೆಭಯಹಾರೆಪತಿಭಕ್ತೆಧೃತಿಶಕ್ತೆಯೆನೆ ಸಂದೀ
> ವೀರನಿಧಿಯುಂಚಲದವಾರಿನಿಧಿಯುಂಗುಣದಚಾರುನಿಧಿಯುಂನೆಗರ್ದ್ದದೇಕಲೆಯನಿನ್ತೀ
> ನಾರಿಜನರನ್ನಮನದಾರೊ ಮರ್ರೆವರ ಸಕಳಧಾರಣಿಯೊಳಿನ್ತುವರಕಾನ್ತೆದೊರೆಯಾವಳ್ ॥

ಇಲ್ಲಿ ದೇಕಬ್ಬೆಯ ಸಾವಿಗೆ ಕವಿಹೃದಯ ಕರಗಿದೆ, ಸತಿಹೋದ ದೇಕಬ್ಬೆಯ ಸ್ವರೂಪ ಜಗದ ಮಾನವ ಸ್ವರೂಪವಲ್ಲ, ಅವಳು 'ಶ್ರೀರಮಣಿ ಗೌರಿಸಬಿಧಾರಿಣಿಯು ಪುತ್ರಿರತಿ ಭೂರಮಣಿಯು' ಅಂದದವಳು. ಕವಿ ಹೃದಯದಲ್ಲಿ ಅವಳು ಸತ್ತು ಆಗಲೇ ದೇವತೆಯಾಗಿ ಬಿಟ್ಟಿದ್ದಾಳೆ. ಅವಳ ಗುಣಗಳನ್ನು ಒಂದೊಂದಾಗಿ ಅತ್ಯಂತ ಸುಂದರವಾಗಿ, '' ಬಾದಾರೆ, ಜಯಧಾರೆ ಜಸಧಾರೆ, ನಯಧಾರೆ, ಭಯಹಾರೆ, ಪತಿಭಕ್ತೆ, ಧೃತಿಶಕ್ತೆ '' ಎಂದು ಎತ್ತಿಸಾರಿದ್ದಾನೆ. ಇಲ್ಲಿ ' ರ ' ಕಾರ ಮೇಲಿಂದ ಮೇಲೆ ಬಂದು ವಾಕ್ಯದ, ಅಷ್ಟೇ ಏಕೆ ಇಡೀ ಪದ್ಯದ ಸೌಂದರ್ಯವನ್ನು ಹೆಚ್ಚಿಸಿದೆ ಕವಿಮನ ಅಷ್ಟಕ್ಕೆ ತೃಪ್ತಿಗೊಳ್ಳದೇ '' ಸಂದಿವೀರನಿಧಿಯುಂ ಚಲದ ವಾರಿನಿಧಿಯುಂ ಗುಣದ ಚಾರುನಿಧಿಯುಂ '' ಎಂದು ಮತ್ತು ಅವಳನ್ನು ಕೊಂಡಾಡುತ್ತದೆ. ಇಲ್ಲಿ ' ನಿಧಿ ' ಎಂಬುದು ಉತ್ಕೃಷ್ಟವಾಗಿ ಬಳಕೆಗೊಂಡದ್ದಲ್ಲದೆ, ಮೇಲಿಂದ ಮೇಲೆ ಬಂದು ಪದ್ಯದ ಮೆರಗನ್ನು ಹೆಚ್ಚಿಸಿದೆ. ಪದ್ಯದ ಕೊನೆಯ ಪಾದದಲ್ಲಿಯ '' ನಾರಿಜನರನ್ನಮನದಾರೊ ಮರ್ರೆವರ '' '' ಸಕಳಧಾರಣಿ — ಯೊಳಿನ್ತುವರಕಾನ್ತೆದೊರೆಯಾವಳ್ '' ಎನ್ನುವ ಮಾತುಗಳಂತೂ ಸಹೃದಯನಲ್ಲಿ ಯಾವತ್ತೂ ಗುಣಗುಣಿಸುತ್ತ ಉಳಿಯುವವುಗಳಾಗಿವೆ. ಹೀಗೆ ದೇಕಬ್ಬೆಯ ಸತಿ ಚಿತ್ರವು ಕಾವ್ಯದ ಸೊಬಗಿನಿಂದ ಕೂಡಿಕೊಂಡು ಶಾಸನ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನ ಪಡೆದಿದೆ ಎಂದು ಹೇಳಬಹುದಾಗಿದೆ.

— 0 —



<u>ಅಡಿಟಿಪ್ಪಣಿಗಳು:</u>

1. ಇ.ಸಿ. III, 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057
2. ಎಸ್.ಆಂಡ್.ಆಂಡ್. XVIII 413 ಹೆಡಿಂಗ್ಲಾಲ, ರಾಣೆಬೆನ್ನೂರ, ಕ್ರಿ.ಶ. 1404.
3. ಎಸ್.ಆಂಡ್.ಆಂಡ್. XX 356 ಸಿದ್ದೇನೂರು, ಹಿರೇಕೆರೂರು, ಸು. 13–14ನೆಯ ಶತಮಾನ.
4. ಇ.ಸಿ. VIII-II, 26 ಮನೆಮನೆಗ್ರಾಮ, ಸೊರಬ, ಕ್ರಿ.ಶ. 1411
5. ಅದೇ 25 ಮನೆಮನೆಗ್ರಾಮ ಕ್ರಿ.ಶ. 1391.
6. ಅನುಕ್ರಮವಾಗಿ: ಇ.ಸಿ. VII-I, 72 ಉತ್ತರಾಣಿಹಳ್ಳಿ, ಶಿಕಾರಿಪುರ, ಕ್ರಿ.ಶ. 1051: ಅದೇ 37 ಹಿರೇಜಾರಕ, ಕ್ರಿ.ಶ. 1417.
7. ಇ.ಸಿ. III 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057
8. ಇ.ಸಿ. VII- 61 ಹಾರೋಬೆನವಳ್ಳಿ, ಶಿವಮೊಗ್ಗ, ಕ್ರಿ.ಶ. 1286
9. ಇ.ಸಿ. VI 66 ಕೋಟೆಪುರ, ಚಿಕ್ಕಮಗಳೂರು, ಕ್ರಿ.ಶ. 1089.
10. ಎಸ್.ಆಂಡ್.ಆಂಡ್. XVIII 413 ಹೆಡಿಂಗ್ಲಾಲ, ರಾಣೇಬೆನ್ನೂರು, ಕ್ರಿ.ಶ. 1404.
11. ಎಂ.ಎ.ಆರ್. 1947–56, 18 ಅರುಹನಹಳ್ಳಿ, ಮಳವಳ್ಳಿ, ಕ್ರಿ.ಶ. 1362.
12. ಎಂ.ಎ.ಆರ್. 1931, 204, ವಿಡಗೋಡು, ನಗರ, ಕ್ರಿ.ಶ. 1434.
13. ಇ.ಸಿ. VIII-II, 457 ಬೆನ್ನೂರು, ಸೊರಬ, ಕ್ರಿ.ಶ. 1972.
14. ಅದೇ, 361 ಬೆನ್ನೂರು, ಕ್ರಿ.ಶ.ಸು. 1259
15. ಅದೇ 338 ಕುಣಿತೆಪ್ಪ, ಕ್ರಿ. ಶ. 1439
16. ಎಂ.ಎ.ಆರ್, 1928, 88
17. ವಡ್ಡಗೆರೆನಾಗಮ್ಮ: ಸಂ11 ವೈಜಂಯಂತಿಮಾಲ, ಪು 81

18. ಇ.ಸಿ.VII-I 72 ಉತ್ತರಾಣಿಹಳ್ಳಿ, ಶಿಕಾರಿಪುರ, ಕ್ರಿ. ಶ.1051

19. ಪ್ರವಾಸಿ ಕಂಡ ಇಂಡಿಯಾ, ಸಂ—4: ಎಚ್ ಎಲ್.ನಾಗೇಗೌಡ, ಪು. 345

20. ಇ.ಸಿ.VII- 61 ಹಾರೋಬೆಣವಳ್ಳಿ, ಶಿವಮೊಗ್ಗ, ಕ್ರಿ.ಶ.1286

21. ಸಮಾಧಿ—ಬಲಿದಾನ — ವೀರಮರಣ ಸ್ಮಾರಕಗಳು: ಡಾ: ಎಂ.ಎಂ.ಕಲಬುರ್ಗಿ, ಪು.41

22. ವಡ್ಡಗೆರೆ ನಾಗಮ್ಮ : ಸಂ॥ ವೈಜಯಂತಿಮಾಲ, ಪು.81

23. ಇ.ಸಿ.XI, 116 ಮಾಸನ, ದಾವಣಗೆರೆ, ಕ್ರಿ.ಶ. 1397

24. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ : ಡಾ॥ ಚೆನ್ನಕ್ಕ ಎಲಿಗಾರ, ಪು.445.

25. ಇ.ಸಿ.VIII-II 78, ಸೇಣಗೆ, ಸಾಗರ ಕ್ರಿ.ಶ.1265

26 ಕರ್ನಾಟಕದ ವೀರಗಲ್ಲುಗಳು: ಡಾ॥ ಆರ್ ಶೇಷಶಾಸ್ತ್ರಿ, ಪು.99

27. ವಿವರಕ್ಕಾಗಿ ನೋಡಿ : ಸಂಗಮ ರಾಜಕೀಯ ಸಾಮಾಜಿಕ ವ್ಯವಸ್ಥೆ: ಮೂಲ: ಎನ್.ಸುಬ್ರಮಣಿಯನ್ ಅನು: ನಿರಂಜನ, ಪು. 155—156

28. ಅನುಕ್ರಮವಾಗಿ: ಇ.ಸಿ.VIII-II 361 ಬಿಸೂರ್ನರು, ಸೊರಬ, ಕ್ರಿ.ಶ. ಸು.1259, ಅದೇ, 25 ಕಳೂರು, ನಗರ, ಕ್ರಿ.ಶ. 1425 : ಅದೇ 25 ಮುನೆಮುನೆಗ್ರಾಮ, ಸೊರಬ, ಕ್ರಿ.ಶ. 1391: ಅದೇ 214 ಜಡ್ಡಿಹಳ್ಳಿ, ?: ಅದೇ, 74, ಕಿಪಡಿ ನಗರ, ಕ್ರಿ.ಶ. 1420

29. ಎಂ.ಎ.ಆರ್. 1928, 88: ಇ.ಸಿ.VII-I 37 ಹಿರೇಹಾರಕ, ಶಿಕಾರಿಪುರ, ಕ್ರಿ.ಶ. 1417 : ಇ.ಸಿ. III 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ.1057 : ಇ.ಸಿ. VII-I 72 ಉತ್ತರಾಣಿಹಳ್ಳಿ, ಶಿಕಾರಿಪುರ, ಕ್ರಿ.ಶ.1051: ಎಮ್.ಎ.ಆರ್.1938, ಶಂಕರನಹಳ್ಳಿ, ಅರಸಿಕೆರೆ, ಕೆ.ಆಂಧ್ರ. V 116, ಬಿಡಕಣಿ, ಸಿದ್ದಾಪುರ, ? : ಬಸವಣ್ಣನವರ ಟೀಕಿನ ವಚನದಲ್ಲಿ, 'ನಾಗವ್ವ' ಜನಪದ ಖಂಡಕಾವ್ಯದಲ್ಲಿ 'ಸತಿಕಲ್ಲು' ಉಲ್ಲೇಖವಿದ್ದರೂ ಶಾಸನಗಳಲ್ಲಿ ಎಲ್ಲಿಯೂ ಸತಿಕಲ್ಲು ಎಂಬ ಪದಪ್ರಯೋಗವಿಲ್ಲದಿರುವುದನ್ನು ಗಮನಿಸಬೇಕು. (ಬಸವಣ್ಣನವರ ಟೀಕಿನ ವಚನಗಳು, ವ.680: ಜನಪದ ಖಂಡಕಾವ್ಯಗಳು: ಸಂ॥ ಜೀ.ಶಂ.ಪರಮಶಿವಯ್ಯ, ಪು.26)

30. ಅನುಕ್ರಮವಾಗಿ: ಇ.ಸಿ. VIII-II 47 ಹುಣಸೂರು, ಸಾಗರ, ?:
ಎಸ್.ಐ.ಐ. XVIII 276 ಕಣವಿ, ಗದಗ, ಕ್ರಿ.ಶ.1407.

31. ಇ.ಸಿ. VIII-II 106 ಹಿರೇಆವಲಿಗ್ರಾಮ, ಸೊರಬ, ಕ್ರಿ.ಶ.1376

32. ಇ.ಸಿ. III, 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ.1057

33. ಇ.ಸಿ. VIII-II 74 ಕಿಪಡಿ, ಸಾಗರ, ಕ್ರಿ.ಶ.1420.

34. ಅದೇ, 47 ಹುಣೂರು, ?

35. ಅದೇ, 214 ಜಡ್ಡಹಳ್ಳಿ, ಸೊರಬ, ? : ಅದೇ, 457 ಬೆನ್ನೂರು, ಕ್ರಿ.ಶ.972.

36. ಅನುಕ್ರಮವಾಗಿ: ಇ.ಸಿ. VIII-II 458 ಬೆನ್ನೂರು, ಸೊರಬ, ? :
ಅದೇ, 544 ಇಂಡುವಳ್ಳಿ, ? : ಅದೇ 524 ಕವಡಿಗ್ರಾಮ, ಕ್ರಿ.ಶ. 1465.
ಅದೇ 558 ಕೊಂಡಗಳಲೆ, ? : ಅದೇ, 457 ಬೆನ್ನೂರು, ಕ್ರಿ.ಶ 972:
ಅದೇ 25 ಮುನೆಮುನೆಗ್ರಾಮ, ಕ್ರಿ.ಶ.1391: ಅದೇ 482 ದೂದೂರ. ? :
ಅದೇ 165 [illegible] ಹರೂರು, ಕ್ರಿ.ಶ.ಸು.1509 : ಅದೇ, 78 ನೇಣಗೆ, ಸಾಗರ.
ಕ್ರಿ.ಶ. 1265: ಅದೇ 467 ಮುಂಗಳೂರು, ಸೊರಬ, ಕ್ರಿ.ಶ. 1412

37 ಅನುಕ್ರಮವಾಗಿ: ಎಂ.ಎ.ಆರ್.1925, 83: ಇ.ಸಿ. VII 32 ಹುತ್ತ್ರಗ್ರಾಮ
ಶಿವಮೊಗ್ಗ, ಕ್ರಿ.ಶ. 1134 (?) : ಇ.ಸಿ. III, 103 ಪುರ, ಮಂಡ್ಯ. ಕ್ರಿ.ಶ.1417

38. ಇ.ಸಿ. VIII-II 51 ಕಾನಲೆ, ಸಾಗರ, ಕ್ರಿ.ಶ.1431

39. ಅದೇ 8 ಮರೂರು, ಸಾಗರ, ಕ್ರಿ.ಶ. 1410.

40. ಅದೇ, 497 ಕುಂಬತಿಗ್ರಾಮ, ಸೊರಬ, ಕ್ರಿ.ಶ.1432.

41. ಅದೇ, 483 ದುಗೂರು, ಕ್ರಿ.ಶ.1388.

42. ಕ್ರಮವಾಗಿ : ಎಸ್.ಐ.ಐ. XVIII 409 ಇಟಗಿ, ರಾಣೆಬೆನ್ನೂರು, 14ನೆಯ
ಶತಮಾನ : ಇ.ಸಿ. VIII-II 559 ಕೊಂಡಗಳಲೆ, ಸೊರಬ, ಕ್ರಿ.ಶ. 1448 :
ಅದೇ 26 ಮುನೆಮುನೆಗ್ರಾಮ, ಕ್ರಿ. ಶ. 1411 : ಅದೇ 36 ಗುಂಜನೂರು, ? :
ಅದೇ, 461 ಬೆನ್ನೂರು, ಕ್ರಿ. ಶ. 1423.

43. ಇ.ಸಿ. VIII-II 74, ಕಿಪಡಿ, ಸಾಗರ, ಕ್ರಿ.ಶ. 1420: ಅದೇ, 558 ಕೊಂಡಗಳಲೆ, ಸೊರಬ, ?

44. ಇ.ಸಿ. VII-I 37 ಹಿರೇಹಾರಕ, ಶಿಕಾರಿಪುರ, ಕ್ರಿ.ಶ. 1417. ಅದೇ, 38, ಹಿರೇಹಾರಕ, ಕ್ರಿ. ಶ. 1191.

45. ಕ್ರಮವಾಗಿ: ಇ.ಸಿ. VI 66 ಕೋಟೆಪುರ, ಚಿಕ್ಕಮಗಳೂರು, ಕ್ರಿ.ಶ. 1089 : ಇ.ಸಿ. VII -I 252 ಬಂದಳಿಕೆ, ಶಿಕಾರಿಪುರ, ಕ್ರಿ.ಶ. 1416: ಅದೇ 239 ಬಂದಳಿಕೆ ಕ್ರಿ.ಶ. 1447 : ಎಮ್.ಎ.ಆರ್. 1925, 83.

46. ಇ ಸಿ. VIII-II 566 ಹೆಗ್ಗೋಡು, ಸೊರಬ, ಕ್ರಿ.ಶ. 1451: ಅದೇ 497 ಕುಂಬತಿಗ್ರಾಮ, ಕ್ರಿ.ಶ. 1432: ಇ.ಸಿ. III 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ. 1057.

47. ಇ.ಸಿ. VIII-II, 29 ಹರಿತಾಳು, ನಗರ, ಕ್ರಿ.ಶ. 1228.

48. ಅದೇ, 458 ಬಿಸ್ಲೂರು, ಸೊರಬ, ?: ಅದೇ, 495 ಕುಪ್ಪೇಗ್ರಾಮ, ಕ್ರಿ.ಶ. 1445 : ಅದೇ, 524 ಕವಡಿಗ್ರಾಮ, ಕ್ರಿ.ಶ. 1465.

49. ಅದೇ 565 ಹೆಗ್ಗೋಡು, ಕ್ರಿ.ಶ. 1424 : ಅದೇ 483 ದುಗೂರು, ಕ್ರಿ.ಶ. 1388

50. ಅದೇ, 104 ಹಿರೇಆವಲಿಗ್ರಾಮ, ಕ್ರಿ.ಶ. 1354

51. ಕ್ರಮವಾಗಿ : ಇ.ಸಿ. VIII-II, 29 ಹರಿತಾಳು, ನಗರ, ಕ್ರಿ.ಶ. 1228: ಅದೇ, 259 ಕುಪ್ಪಟೂರು, ಸೊರಬ.?

52. ಇ.ಸಿ. VII-I 93 ಬೆಗಾವಿ, ಶಿಕಾರಿಪುರ, ಕ್ರಿ.ಶ. 1422.

53. ಅದೇ, 303 ಸಂಡದ, ಕ್ರಿ.ಶ. 1401.

54. ಇ.ಸಿ. IV 70, ಮಾದಕಹಳ್ಳಿ, ಚಾಮರಾಜನಗರ, 16ನೆಂಯ ಶತಮಾನ.

55. ಇ.ಸಿ. III, 210 ಕುಣಗನಹಳ್ಳಿ, ಗುಂಡುಲ್ಪೇಟೆ, ಕ್ರಿ.ಶ. 1439

56. ಇ.ಸಿ. VIII-II 92 ಕುಂಸಿಗ್ರಾಮ, ಸೊರಬ.?

57. ಅದೇ, 150 ಉದ್ರಿಗ್ರಾಮ ?

58. ಸಮಾಧಿ — ಬಲಿದಾನ — ವೀರಮರಣಸ್ಮಾರಕಗಳು: ಡಾ|| ಎಂ.ಎಂ.ಕಲಬುರ್ಗಿ. ಪು.50.

59. ಎಮ್.ಎ.ಆರ್. 1947–56, 17 ಅರುಹನಹಳ್ಳಿ, ಕ್ರಿ.ಶ. 1368.

60. ಇ.ಸಿ.IV 87 ದೇವರಹಳ್ಳಿ, ನಾಗಮಂಗಲ, ಕ್ರಿ.ಶ. 1181.

61. ಇ.ಸಿ.VIII–II 495 ಕುಪ್ಪೇಗ್ರಾಮ, ಸೊರಬ, ಕ್ರಿ.ಶ. 1445.

62. ಇ.ಸಿ.VII–I 239 ಬಂದಲಿಕೆ, ಶಿಕಾರಿಪುರ, ಕ್ರಿ.ಶ.1447.

63. ಇ.ಸಿ.III, 60 ಬೆಳತೂರು, ಹೆಗ್ಗಡದೇವನಕೋಟೆ, ಕ್ರಿ.ಶ.1057

— 0 —

## ಅಧ್ಯಾಯ – 9

Chapter-9

## ಮಾಸ್ತಿಕಲ್ಲುಗಳ ಶಿಲ್ಪ

ಭಾರತೀಯ ಶಿಲ್ಪ ವ್ಯಾಪ್ತಿಯಲ್ಲಿ ಕರ್ನಾಟಕದ ಶಿಲ್ಪ ಪ್ರಮುಖವಾದುದು. ಕರ್ನಾಟಕದ ದೇವಾಲಯಗಳಲ್ಲಿ, ವೀರಗಲ್ಲು, ಮಾಸ್ತಿಕಲ್ಲು, ನಿಶಿಧಿಗಲ್ಲುಗಳಂಥ ಸ್ಮಾರಕಗಳಲ್ಲಿ ಅದು ವಿಶೇಷ ರೀತಿಯಲ್ಲಿ ಬೆಳೆದುಬಂದಿದೆ. ಈ ಸ್ಮಾರಕಗಳಲ್ಲಿ ಶಿಲ್ಪದೃಷ್ಟಿಯಿಂದ ವೀರಗಲ್ಲುಗಳಿಗೆ ಪ್ರಮುಖಸ್ಥಾನ, ನಂತರದ ಸ್ಥಾನ ಮಾಸ್ತಿಕಲ್ಲುಗಳಿಗೆ. "ಸ್ತ್ರೀ ವಿಗ್ರಹಗಳಿಗೆ ಪ್ರಸಿದ್ಧವಾಗಿರುವ ಕನ್ನಡ ನಾಡಿನಲ್ಲಿ ಮಾಸ್ತಿ ವಿಗ್ರಹಗಳು ಅಷ್ಟು ಸುಂದರವಾಗಿಲ್ಲದಿರುವುದು ಆಶ್ಚರ್ಯವೇ ಸರಿ"[1]

ಮಾಸ್ತಿಕಲ್ಲುಗಳ ಶಿಲ್ಪದ ಉದ್ದೇಶ ಮುಖ್ಯವಾಗಿ ಸತಿಹೋದುದನ್ನು ಮಾತ್ರ ಪ್ರಕಟಪಡಿಸುವುದಾಗಿದೆ. ಈ ಉದ್ದೇಶ ಹೊಂದಿದ ಈ ಶಿಲ್ಪ ಸಹಜವಾಗಿ ಸೌಂದರ್ಯದಿಂದ ದೂರ ಸರಿಯಿತು. ಮಾಸ್ತಿಕಲ್ಲಿನ ಶಿಲ್ಪಿಗೆ ಸತಿಯನ್ನು ಮಾತ್ರ ಕಲ್ಲಿನಲ್ಲಿ ಕಂಡರಿಸುವ ಮಿತಿಯೂ ಇದ್ದಿರಬೇಕು. ಹಾಗೂ ಸತಿ ಹೋದವಳ ಪ್ರಾತಿನಿಧಿಕ ರೂಪವೊಂದನ್ನು ಕಲ್ಲಿನಲ್ಲಿ ಕಂಡರಿಸಿದರೆ ಸಾಕು ಎನ್ನುವ ಮಟ್ಟಿಗೆ ಈ ಸ್ಮಾರಕ ಕುರಿತಾಗಿ ಜನರ ಭಾವನೆಯೂ ಇದ್ದಿರಬೇಕು. ಹೀಗಾಗಿ ಅಪೂರ್ವವಾದ ಸತಿಘಟನೆಯ ಇನ್ನುಳಿದ ಯಾವ ಆಯಾಮಗಳೂ ಮಾಸ್ತಿಕಲ್ಲಿನಲ್ಲಿ ಕಾಣಿಸದೇ ಹೋದವು. ಬಹುಶಃ ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗಿದ್ದ ಗೌಣ ಸ್ಥಾನವೂ ಇದಕ್ಕೆ ಕಾರಣವಾಗಿರಬೇಕು.

ಮಾಸ್ತಿಕಲ್ಲಿನ ಶಿಲ್ಪದಲ್ಲಿ ಕಾಣಿಸಿಕೊಂಡ 'ಎತ್ತಿದ ಕೈ ಚಿತ್ರ'ದ ಸಾಂಕೇತಿಕತೆ ಅದರ ಸೌಂದರ್ಯದ ಅಭಿವ್ಯಕ್ತಿಗೆ ಮಾರಕವಾಯಿತೆನ್ನಬೇಕು. ಸತಿಘಟನೆಯನ್ನು ಶಿಲ್ಪದಲ್ಲಿ ಕಂಡರಿಸುವಾಗ ಸತಿಯ ಎತ್ತಿದ ಕೈಯನ್ನು ಸಾಮಾನ್ಯವಾಗಿ ಚಿತ್ರಿಸುವ ಕ್ರಮ ಬೆಳೆದುಕೊಂಡು ಬಂದಿತು. ಮುಂದಿನ ತಲೆಮಾರಿನ ಶಿಲ್ಪಿಗಳಿಗೆ ಸತಿಶಿಲ್ಪ ಬಿಡಿಸುವಾಗ ಅವರ ಮುಂದೆ ಈ ಸಿದ್ಧ ಶಿಲ್ಪದ ಮಾದರಿಯೇ ಉಳಿದುಕೊಂಡಿತು. ಹೀಗಾಗಿ ಸತಿಘಟನೆಯನ್ನು ಚಿತ್ರಿಸುವಾಗ ಅವರ ಕಲಾಕೌಶಲ್ಯದ ಅಭಿವ್ಯಕ್ತಿಗೆ ಸಹಜವಾಗಿಯೆ ಬಂಧನವುಂಟಾಗಿ ಮಾಸ್ತಿಕಲ್ಲಿನ ಶಿಲ್ಪಗಳೆಲ್ಲ ಹೆಚ್ಚು ಕಡಿಮೆ ಒಂದರ ಪ್ರತಿ ಇನ್ನೊಂದು ಎನ್ನುವ ರೀತಿಯಲ್ಲಿ ನಿರ್ಮಾಣಗೊಂಡವು. ಶಿಲ್ಪಿಗೆ ಮಾಸ್ತಿಕಲ್ಲನ್ನು ಬಿಡಿಸುವಲ್ಲಿ ಇವಾವೂ ಮಿತಿಗಳಿರದಿದ್ದರೆ ಆಗ ಶಿಲ್ಪದ ಸೌಂದರ್ಯವೇ ಬೇರೆಯಾಗುತ್ತಿತ್ತು.

ಮೃತನ ಪತ್ನಿ ಸತಿಯಾಗಲು ಹೊರಟುದು ಮೊದಲ್ಗೊಂಡು ಸ್ವರ್ಗ ಪಡೆದುದನ್ನು ತಿಳಿಸುವ ವರೆಗೆ ಮಾಸ್ತಿಕಲ್ಲಿನ ಹಂತಗಳಲ್ಲಿ ಶಿಲ್ಪ ಬಿಡಿಸಿದ್ದರೆ ಸತಿ ಘಟನೆಯ ಅಪೂರ್ವ ಚಿತ್ರಣ ದೊರಕಿದಂತಾಗುತ್ತಿತ್ತು. ಆಗ ಅಂಥ ಚಿತ್ರಣದಲ್ಲಿ ಸಹಜವಾಗಿಯೇ ಶಿಲ್ಪದ ವೈವಿಧ್ಯತೆ ಕಾಣಿಸಿಕೊಳ್ಳುತ್ತಿತ್ತು.

ಮಾಸ್ತಿಕಲ್ಲಿನ ಶಿಲ್ಪಿಗಳಲ್ಲಿ ಕೆಲವರು ಸ್ವತಂತ್ರ ಮನೋಧರ್ಮದವರಾಗಿದ್ದು, ಸತಿಘಟನೆಗಳನ್ನು ತಾವು ಕಂಡಂತೆ ಕಲ್ಲಿನಲ್ಲಿ ಕಂಡರಿಸಲು ಪ್ರಯತ್ನಿಸಿದ್ದಾರೆ. ಮೃತನ ಪತ್ನಿ ಸತಿಹೋದ ಬಗೆ, ಅವಳ ಗಂಡ ಮಡಿದ ಕಾರಣ, ಅವರು ಸತಿ ಹೋಗುವಾಗ ಆಚರಿಸುತ್ತಿದ್ದ ರೀತಿ–ನೀತಿಗಳು ಇವೆಲ್ಲವುಗಳನ್ನು ಅವರು ಶಿಲ್ಪದ ಮೂಲಕ ಬಿಡಿಸಲು ವಿಶೇಷ ಪ್ರಯತ್ನಿಸಿದ್ದಾರೆ. ಅವರ ಈ ಪ್ರಯತ್ನದಿಂದಾಗಿ ಮಾಸ್ತಿಕಲ್ಲಿನ ಶಿಲ್ಪದಲ್ಲಿ ತಕ್ಕಮಟ್ಟಿಗೆ ವೈವಿಧ್ಯತೆ ಕಾಣಿಸಿಕೊಂಡಿತು, ಸತಿಘಟನೆಯ ಕೆಲವು ನೈಜ ಚಿತ್ರಗಳು ಶಿಲ್ಪದಲ್ಲಿ ಒಡಮೂಡಿದವು. ಹೀಗಾಗಿ ಮಾಸ್ತಿಕಲ್ಲುಗಳು ಬದುಕಿಗೆ ತೀರ ಹತ್ತಿರದವುಗಳಾದವು. ಈಗ ಮಾಸ್ತಿ ಶಿಲ್ಪದ ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ಮುಖ್ಯ ಸಂಗತಿಗಳನ್ನು ಗುರುತಿಸಿಕೊಂಡು, ಅವುಗಳನ್ನು ಒಂದೊಂದಾಗಿ ವಿವರಿಸಬಹುದಾಗಿದೆ. 1. ಮಾಸ್ತಿಕಲ್ಲಿನ ಶಿಲ್ಪಿಗಳು, 2. ಅಪೂರ್ವ ಮಾಸ್ತಿ ಶಿಲ್ಪಗಳು, 3. ಪತಿಯ ಮರಣ ಕಾರಣವನ್ನು ಅಭಿವ್ಯಕ್ತಿಸುವ ಮಾಸ್ತಿಶಿಲ್ಪ, 4. ಸೌಭಾಗ್ಯ ಚಿಹ್ನೆಗಳು, 5. ಮಾಸ್ತಿ ಶಿಲ್ಪಗಳ ವರ್ಗೀಕರಣ, 6. ತೋಳ್ಗೈಕಂಬದ ಸಾಂಕೇತಿಕತೆ.

**1. ಮಾಸ್ತಿಕಲ್ಲಿನ ಶಿಲ್ಪಿಗಳು :**

ಮಾಸ್ತಿಕಲ್ಲಿನ ಶಿಲ್ಪಿಗಳ ಹೆಸರನ್ನು ಎರಡು ಶಾಸನಗಳಲ್ಲಿ ತಿಳಿಸಿಕೊಡಲಾಗಿದೆ. ಕ್ರಿ.ಶ.1425ರ ಕಳೂರು ಶಾಸನದಲ್ಲಿ ಕಾಮಾಯಿ ಸಹಗಮನ ಮಾಡಲಾಗಿ, ''ಕಾಮಾಯಿ ಕಲು ವಿರೂಪೋಜ ಮಾಡಿದ ಕಲ್ಲು'' ಎಂದು ಹೇಳಲಾಗಿದೆ.[2] ಇಲ್ಲಿ ವಿರೂಪೋಜನು ಕಲ್ಲನ್ನು ಮಾಡಿದನು ಎಂದರೆ, ಕಲ್ಲಿನಲ್ಲಿ ಶಿಲ್ಪ ಬಿಡಿಸಿದನು ಎಂದೇ ಅರ್ಥಮಾಡಿಕೊಳ್ಳಬೇಕು. ಅಲ್ಲದೆ, 'ಕಾಮಾಯಿಕಲು' ಎಂಬ ಅಪರೂಪದ ಪದ ಪ್ರಯೋಗ ಇಲ್ಲಿದೆ. ಗಂಡನ ಮರಣಾನಂತರ ಇಲ್ಲಿ ಕಾಮಾಯಿ ಸತಿಹೋಗಿದ್ದಾಳೆ. ಅವಳ ವಿಗ್ರಹವನ್ನು ಕಲ್ಲಿನಲ್ಲಿ ವಿರೂಪೋಜ ಕಂಡರಿಸಿದ್ದಾನೆ. ಅದು 'ಕಾಮಾಯಿಕಲು' ಎನಿಸಿಕೊಂಡಿದೆ. ಹೀಗೆ ಶಾಸನದಲ್ಲಿ, ಸತಿ

ಹೋದವಳ ಹೆಸರಿನಿಂದ ಮಾಸ್ತಿಕಲ್ಲನ್ನು ಕರೆದ ಮತ್ತೊಂದು ಉಲ್ಲೇಖ ನಮಗೆ ತಿಳಿದಮಟ್ಟಿಗೆ ಇಲ್ಲವೇ ಇಲ್ಲ. ಸಂಡದ ಶಾಸನವೊಂದರಲ್ಲಿ, ಮಾಸ್ತಿಕಲ್ಲು ಮಾಡಿದ್ದನ್ನು "ಈ ಪ್ರತಿಷ್ಟೆಯನು ಕೋಟಿಯರಾಜನಾಗರಾಜ ಮಾಡಿದ ಪ್ರತಿಷ್ಟೆ" ಎಂದು ಹೇಳಲಾಗಿದೆ.[3] ಇಲ್ಲಿ 'ಕೋಟಿಯರಾಜ', 'ನಾಗರಾಜ' ಎಂದು ಇಬ್ಬರು ಶಿಲ್ಪಿಗಳ ಹೆಸರನ್ನು ಸೂಚಿಸಲಾಗಿದೆ. "ಕೆಲವೊಮ್ಮೆ ಇಬ್ಬರು ಶಿಲ್ಪಿಗಳು ಸೇರಿ ಒಂದು ವೀರಗಲ್ಲನ್ನು ಮಾಡುತ್ತಿದ್ದ ನಿದರ್ಶನಗಳೂ ದೊರೆಯುತ್ತವೆ. ಶಿಕಾರಿಪುರ ತಾಲೂಕಿನ ಸಂಡ ತಂಬ ಗ್ರಾಮದ ಕ್ರಿ.ಶ.1402ರ ವೀರಗಲ್ಲನ್ನು "ಕೋಟಿಯರಾಜ" ಮತ್ತು "ನಾಗರಾಜ" ಎಂಬುವರು ಮಾಡಿದಂತೆ ತೋರುತ್ತದೆ. ಈ ನಿದರ್ಶನದಿಂದ ಈ ರೀತಿಯ ಅಭಿಪ್ರಾಯಕ್ಕೆ ಬರಬಹುದು. ಪರಿಣತನಾದ ಶಿಲ್ಪಿ ತನ್ನ ವಿದ್ಯೆಯನ್ನು ಶಿಷ್ಯನಿಗೆ ಕಲಿಸುವಲ್ಲಿ ಅವನಿಂದ ನೆರವನ್ನು ಪಡೆದು, ತನ್ನ ಶಿಷ್ಯನ ಹೆಸರನ್ನು ಉಲ್ಲೇಖಿಸಿರಬೇಕು ಅಥವಾ ಇಬ್ಬರು ನುರಿತ ಶಿಲ್ಪಿಗಳು ಸೇರಿ ಈ ವೀರಗಲ್ಲಿನ ಶಿಲ್ಪವನ್ನು ಕಡೆದಿರಬಹುದು"[4] ಎಂದು ಡಾ ಆರ್.ಶೇಷಶಾಸ್ತ್ರಿ ಹೇಳಿರುವುದನ್ನು ಒಪ್ಪಬಹುದಾಗಿದೆ. ಆದರೆ ಅವರು ಹೇಳುವಂತೆ ಇದು 'ವೀರಗಲ್ಲು' ಎಂಬುದನ್ನು ಒಪ್ಪುವಂತಿಲ್ಲ. ಇದು ಮುಖ್ಯವಾಗಿ ಮಾಸ್ತಿಕಲ್ಲಾಗಿದೆ. (ಚಿತ್ರ–68) ಸತಿ ಬಲಗೈ ಎತ್ತಿ ನಿಂತ ವಿಗ್ರಹ ಇದಾಗಿದೆ. ಸತಿಯ ತೋಳಿನಲ್ಲಿ, ಮುಂಗೈಯಲ್ಲಿ ಬಳೆಗಳಿವೆ. ಕೊರಳಲ್ಲಿ ಮುತ್ತಿನ ಹಾರವನ್ನು ಉದ್ದವಾಗಿ ಇಳಿಬಿಡಲಾಗಿದೆ. ಭುಜದ ಮೇಲೆ ಮುತ್ತಿನ ಸರಗಳಿವೆ. ತಲೆಗೂದಲನ್ನು ಸುಂದರವಾಗಿ ಬಿಡಿಸಿ, ಹೂವಿನ ದಂಡೆ ಕಟ್ಟಲಾಗಿದೆ. ಸತಿಯು ಎಡಗೈಯನ್ನು ಓರೆಮಾಡಿಕೊಂಡು 'ಗಿಂಡಿ' ಹಿಡಿದುಕೊಂಡು ನಿಂತಿರುವ ಭಂಗಿ ಸುಂದರವಾಗಿದೆ. ಸತಿಯ ಎಡಗಾಲಿನ ಪಾದ ಮುಂದಕ್ಕೆ ಚಾಚಿದ್ದರೆ, ಬಲಗಾಲಿನ ಪಾದ ಬಲಭಾಗದೆಡೆಗೆ ಚಾಚಿಕೊಂಡಿರುವುದು ವಿಶೇಷವಾಗಿದೆ. ಸತಿಯ ಕಾಲುಗಳ ಬಲಭಾಗದಲ್ಲಿ ಬಿಲ್ಲುಬಾಣಗಳನ್ನು ತೋರಿಸಲಾಗಿದೆ. ಅವಳು ಎತ್ತಿದ ಕೈ ನೇರಕ್ಕೆ ಮೇಲ್ಭಾಗದಲ್ಲಿ ಅತೀ ಚಿಕ್ಕದಾಗಿ, ವೀರ ಕೈ ಮುಗಿದುಕುಳಿತುಕೊಂಡಿದ್ದಾನೆ. ಈ ಕಲ್ಲಿನ ಶಿಲ್ಪದಲ್ಲಿ ವೀರನಿಗೆ ಪ್ರಾಮುಖ್ಯತೆ ಇರದೆ ಸತಿಗೆ ಪ್ರಾಮುಖ್ಯತೆ ಇದ್ದುದು ಸಹಜವಾಗಿ ಗೋಚರಿಸುತ್ತದೆ.

ಈ ಶಾಸನ ಪಾಠದಲ್ಲಿ ಇನ್ನೊಂದು ವಿಶೇಷವಿದೆ. ಶಿಲ್ಪದ ದೃಷ್ಟಿಯಿಂದ ಈ ಕಲ್ಲು ಮಾಸ್ತಿಕಲ್ಲಾಗಿದ್ದರೂ ಪಾಠದಲ್ಲಿ ಎಲ್ಲಿಯೂ ಸತಿಹೋದ ಕುರಿತಾಗಿ ಉಲ್ಲೇಖವಿಲ್ಲ. ಅದರ ಪೂರ್ಣಪಾಠಹೀಗಿದೆ : "ಸ್ವಸ್ತಿಶ್ರೀಜಯಾಭ್ಯುದಯಶಕವರುಷ 1324 ಚಿತ್ರಭಾನು ಸಂವತ್ಸರದ ಮಾಘ ಸು 6 ಅಕಂಪೆಯನಾಯ್ಕನು ಆತನ ಮಗ ಸಿಂಗೆಯನಾಯ್ಕನು ತಂದೆ

ಮಕ್ಕಳು ಯಿಬ್ಬರು ಸ್ವರ್ಗಸ್ಥರಾದರು 1 ಯಿ ಶಿಲಾ ಪ್ರತಿಷ್ಠೆಯನು ಆ ಕಂಪೆಯ ನಾಯ್ಕನ ಹಿ(ಬ)ಯ್ರ್ಯಮಗ ಕಾಟಿಯನಾಯ್ಕ ಮಾಡಿಸಿದನು ಯಿಾ ಪ್ರತಿಷ್ಟೆಯನು ಕೋಟಿಯೋಜ ನಾಗೋಜ ಮಾಡಿದ ಪ್ರತಿಷ್ಟೆ ಮಂಗಳ ಮಹಾಶ್ರೀ ಶ್ರೀ ಶ್ರೀ". ಇಲ್ಲಿ ಕಂಪೆಯನಾಯ್ಕ ಮತ್ತು ಆತನ ಮಗ ಸಿಂಗೆಯನಾಯ್ಕ ಇವರಿಬ್ಬರೂ ಮರಣ ಹೊಂದಿದ ಮೇಲೆ ಕಂಪೆಯನಾಯ್ಕನ ಹಿರಿಯಮಗ ಕಾಟೆಯನಾಯ್ಕನು ಪ್ರತಿಷ್ಟೆ ಮಾಡಿಸಿದನೆಂದು ಹೇಳಲಾಗಿದೆ. ಅನಂತರ ಅದನ್ನು ಶಿಲ್ಪವಾಗಿ ಬಿಡಿಸಿದವರು "ಕೋಟಿಯೋಜ ನಾಗೋಜ" ಎಂದು ಹೇಳಿ ಮಂಗಳ ಹೇಳಲಾಗಿದೆ. ಮೃತನ ಪತ್ನಿಯೊಬ್ಬಳು ಸತಿ ಹೋದುದನ್ನು ಈ ಕಲ್ಲಿನ ಶಿಲ್ಪದಿಂದ ಮಾತ್ರ ತಿಳಿದುಬರುತ್ತದೆ. ಕಲ್ಲಿನಲ್ಲಿ ಹಿರಿಯಮಗ ಕಾಟಿಯನಾಯ್ಕ ಪ್ರತಿಷ್ಠೆ ಮಾಡಿಸಿದ್ದು ಅಥವಾ 'ಕೋಟಿಯೋಜನಾಗೋಜ' ಪ್ರತಿಷ್ಠೆ ಮಾಡಿದ್ದು ಸತಿಯ ರೂಪವೆಂಬುದನ್ನು ಮರೆಯಬಾರದು. ಈಕೆ ಕೆಂಪನಾಯ್ಕನ ಹೆಂಡತಿಯೇ ಆಗಿರಬೇಕು. ಮಗ ಸಿಂಗನಾಯಕ ಬಹುಶಃ ಅವಿವಾಹಿತನಾಗಿರಬೇಕು.

2. <u>ಅಪೂರ್ವ ಮಾಸ್ತಿಶಿಲ್ಪಗಳು :</u>

ಈಗ ಶಿಲ್ಪಗಳ ವಿಶೇಷ ಪ್ರಯತ್ನದಿಂದ ವೈವಿಧ್ಯತೆ ಮತ್ತು ಸೌಂದರ್ಯವನ್ನು ಪಡೆದ ಕೆಲವು ಮಾಸ್ತಿಶಿಲ್ಪಗಳನ್ನು ಗಮನಿಸಬಹುದಾಗಿದೆ. ಧಾರವಾಡ ಜಿಲ್ಲೆಯ ಹಿರೇಕೆರೂರ ತಾಲೂಕಿನ ರಟ್ಟಿಹಳ್ಳಿಯಲ್ಲಿರುವ ವೀರಗಲ್ಲೊಂದರ ಕೆಳಗಿನ ಹಂತದಲ್ಲಿ ಸತಿ ಹೋಗುವುದರ ಅಪೂರ್ವ ದೃಶ್ಯವಿದೆ. ಈ ಶಿಲ್ಪ ಸೇವುಣರಾಮಚಂದ್ರನ ಕಾಲದ್ದಾಗಿದೆ. ಸೇವುಣರ ವೀರ ಹೊಯ್ಸಳರೊಡನೆ ಹೋರಾಡಿ ಮಡಿಯಲಾಗಿ ಅವನ ಏಳುಜನ ಪತ್ನಿಯರು ಸತಿಹೋಗುತ್ತಾರೆ.[4(ಅ)] ಅದನ್ನು ಶಿಲ್ಪದಲ್ಲಿ ಕಂಡರಿಸಲು ಶಿಲ್ಪಿ ಯಶಸ್ಸು ಸಾಧಿಸಿದ್ದಾನೆ. ಸತಿಯರ ಕೊಂಡಗಳು ಅವುಗಳಿಂದ ಉರಿದೇಳುತ್ತಿರುವ ಜ್ವಾಲೆಗಳು, ಅವುಗಳಲ್ಲಿ ಹಾರಿಕೊಳ್ಳಲು ನಿಂತುಕೊಂಡಿರುವ ಸತಿಯರು ಈ ಎಲ್ಲ ಸೂಕ್ಷ್ಮಗಳನ್ನು ಶಿಲ್ಪಿ ಸಮರ್ಥವಾಗಿ ಚಿತ್ರಿಸಿದ್ದಾನೆ ಇಲ್ಲಿ ಸತಿಯರು ಕೊಂಡದಲ್ಲಿ ಹಾರಿಕೊಳ್ಳಲು ಅನುಕೂಲವಾಗುವಂತೆ ವೇದಿಕೆಗಳನ್ನು ನಿರ್ಮಿಸಲಾಗಿದೆ. ಅವುಗಳ ಮೇಲೆ ನಿಂತುಕೊಂಡ ಸ್ತ್ರೀಯರು ಅತ್ಯಂತ ವಿನಯಭಾವದಿಂದ ಕೈಮುಗಿದುಕೊಂಡು ಕೊಂಡಗಳಲ್ಲಿ ಹಾರುವ ಸಿದ್ಧತೆಯಲ್ಲಿದ್ದಾರೆ. ಇಲ್ಲಿ ಸತಿಯರು ಬೇರೆ ಬೇರೆ ಕೊಂಡಗಳಲ್ಲಿ ಬಿದ್ದು ಸತಿಹೋಗಲು ನಿಂತಿರುವುದನ್ನು ಕಾಣುತ್ತೇವೆ. ಶಿಲ್ಪಿ ಸಾಧ್ಯವಾದ ಮಟ್ಟಿಗೆ ವೀರನ ಪತ್ನಿಯರಿಗೆ ಅವರವರ ಕೊಂಡಗಳಿದ್ದುದನ್ನು ತೋರಿಸಲು ಪ್ರಯತ್ನಿಸಿದ್ದಾನೆ. ಈ ಶಿಲ್ಪದಲ್ಲಿ

ಇನ್ನೂ ಒಂದು ವಿಶೇಷತೆಯನ್ನು ಗುರುತಿಸಬಹುದಾಗಿದೆ. ವೀರಣ ಅರುಜನ ಪತ್ನಿಯರು ಕೊಂಡದಲ್ಲಿ ಬೀಳುವ ಕ್ಷಣದಲ್ಲಿದ್ದಂತೆ ತೋರಿಸಲಾಗಿದ್ದರೆ ಇನ್ನೊಬ್ಬಳು ಈಗಾಗಲೇ ಚಿತೆಯಲ್ಲಿ ಕೈಮುಗಿದುಕೊಂಡು ಕುಳಿತಿರುವಂತೆ ತೋರಿಸಲಾಗಿದೆ. ಬಹುಶ: ಈ ಸತಿ ವೀರನೊಂದಿಗೆ ದಹನ ಮಾಡಿಕೊಂಡಿರಬೇಕೆಂದು ತೋರುತ್ತದೆ. (ಚಿತ್ರ — 69)

ಮೃತ ವೀರನೊಂದಿಗೆ ಅವನ ಪತ್ನಿ ಚಿತೆಯಲ್ಲಿ ದಹನಗೊಂಡುದ್ದನ್ನು ಬಳ್ಳಿಗಾವೆಯ ವೀರಗಲ್ಲಿನ ಶಿಲ್ಪವೊಂದು ಅತ್ಯಂತ ಸುಂದರವಾಗಿ ಅಭಿವ್ಯಕ್ತಿಸುತ್ತದೆ. ಪತಿ-ಪತ್ನಿಯರಿಬ್ಬರನ್ನೂ ಒಳಗುಮಾಡಿಕೊಂಡು ಭಯಂಕರವಾಗಿ ಅಗ್ನಿ ಉರಿದೇಳುತ್ತಿದೆ. ಚಿತಾಗ್ನಿಯ ಎರಡೂ ಪಕ್ಕಗಳಲ್ಲಿ ಒಟ್ಟು ಆರುಜನ ಸಿಂಗರಿಸಿಕೊಂಡ ಸುಮಂಗಲೆಯರು ಎಡಗೈಯಲ್ಲಿ ಬಟ್ಟಲು ಹಿಡಿದುಕೊಂಡು ಬಲಗೈಯಿಂದ ಅಕ್ಷತೆ ಹಾಕಿ ಸತಿಯನ್ನು ಹರಸುವಂತೆ ನಿಂತುಕೊಂಡಿದ್ದಾರೆ. ಅವರ ಮುಂದೆ 'ಸತಿ' ಅವರಿಗೆ ಕೊಟ್ಟು ಹೋದ ಬಾಗಿನದ ಮೊರಗಳು ಹರವಿಕೊಂಡಿವೆ. ಇಲ್ಲಿಯ ಈ ಸತಿಯ ದಹನಕ್ರಿಯೆ ಅತ್ಯಂತ ಉನ್ನತವಾಗಿದೆ. (ಚಿತ್ರ—4), ರಟ್ಟಿಹಳ್ಳಿಯ ಶಿಲ್ಪದ ಚಿತಾಗ್ನಿ ಕುಂಡದ್ದಾಗಿದ್ದರೆ ಇಲ್ಲಿಯ ಚಿತಾಗ್ನಿ ನೆಲದ ಮೇಲೆ ರಚಿಸಿದ್ದಾಗಿದೆ. ಅಲ್ಲಿಯದು ಸತಿಹೋಗುವ ಪೂರ್ವದ ದೃಶ್ಯವಾಗಿದ್ದರೆ, ಇಲ್ಲಿಯದು ಸತಿಹೋದ ದೃಶ್ಯವಾಗಿದೆ. ಅಲ್ಲಿಯದು ಸತಿಯರು 'ಕೈಮುಗಿಯುವ', 'ಹಾರುವ' ಈ ಮೊದಲಾದ ಅವರ ಕ್ರಿಯೆಗಳನ್ನು ತೋರಿಸುವುದಾಗಿದ್ದರೆ, ಇಲ್ಲಿಯದು ಸುಮಂಗಲೆಯರು 'ಬಾಗಿನದ ಮೊರಗಳನ್ನು ಸ್ವೀಕರಿಸಿದ', 'ಅಕ್ಷತೆ ಹಾಕುವ' ಈ ಮೊದಲಾದ ಆಚರಣೆಗಳನ್ನು ತೋರಿಸುವುದಾಗಿದೆ. ಈ ಎರಡೂ ಶಿಲ್ಪಗಳು ಶಿಲ್ಪಿಗಳ ಸೂಕ್ಷ್ಮ ಗ್ರಹಿಕೆಯನ್ನು, ವಾಸ್ತವಿಕ ಘಟನೆಯೊಂದಿಗಿನ ಅವರ ತಾದಾತ್ಮ್ಯವನ್ನು ಅವರ ಶಿಲ್ಪ ನಿರ್ಮಾಣಶಕ್ತಿಯನ್ನು ಅಭಿವ್ಯಕ್ತಿಗೊಳಿಸುವವುಗಳಾಗಿವೆ.

ಕಾಯ್ಕಿಣಿಯ ವೀರಗಲ್ಲೊಂದರಲ್ಲಿ, ಮೃತವೀರನ ಪತ್ನಿಯೊಬ್ಬಳು ಸತಿ ಹೋಗುವ ವಿವರಗಳನ್ನು ತೋರಿಸಲಾಗಿದೆ. ಅಗ್ನಿಯು ತನ್ನ ನಾಲಗೆ ಚಾಚಿ ಉರಿಯುತ್ತಿರುವಂತೆಯೂ, ಅದನ್ನು ಪ್ರವೇಶಿಸಲು ಸತಿ ಕೈಮುಗಿದು ನಿಂತುಕೊಂಡಿರುವಂತೆಯೂ ಶಿಲ್ಪದ ವಿವರಗಳಿವೆ. ಸತಿಯು ಅಗ್ನಿಯಲ್ಲಿ ಹಾರಿಕೊಳ್ಳುವ ಪೂರ್ವದ ಕ್ಷಣಾರ್ಧದ ದೃಶ್ಯ ಇದಾಗಿದೆ. ಮೃತನ ಪತ್ನಿಗೆ ಉರಿ ಪ್ರವೇಶಿಸಲು ಇದ್ದ ಆತುರತೆಯ ಭಾವವನ್ನು ಎದ್ದು ಕಾಣುವಂತೆ ಬಿಡಿಸಲಾಗಿದೆ.

ಡಾ.ಎಂ.ಎಂ.ಕಲಬುರ್ಗಿ ಅವರು ಸಂಗ್ರಹಿಸಿ ಪ್ರಕಟಿಸಿರುವ ನೆರೆಯ ಸೊಲ್ಲಾಪುರ ಜಿಲ್ಲೆಯ ಮಾಳಸಿರಸ ತಾಲೂಕಿನ ಬಾವಡೀಗ್ರಾಮದ ವೀರಗಲ್ಲಿನ ಶಿಲ್ಪ ಸಹಗಮನದ ಅಪರೂಪ ವಿವರಗಳನ್ನು ಕೊಡುತ್ತದೆ.[5] ಅದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಿದರೆ ಅತಿವ್ಯಾಪ್ತಿಯಾಗಲಿಕ್ಕಿಲ್ಲವೆಂದು ಕೊಂಡಿದ್ದೇವೆ. ಒಟ್ಟು ಆ ಶಿಲ್ಪದಲ್ಲಿ ನಾಲ್ಕು ಹಂತಗಳಿವೆ. ಕೆಳಗಿನ ಹಂತದಲ್ಲಿ ನೆಲದ ಮೇಲೆ ಚಿತೆ ನಿರ್ಮಿಸಲಾಗಿದೆ. ಅದನ್ನು ಸುತ್ತಲೂ ಹೂವಿನಹಾರಗಳಿಂದ ಅಲಂಕರಿಸಲಾಗಿದೆ. ಅದರ ಮೇಲೆ ಮೃತನನ್ನು ಮೇಲಕ್ಕೆ ಮುಖ ಮಾಡಿಸಿ ಮಲಗಿಸಲಾಗಿದೆ. ಆ ಚಿತೆಯನ್ನು ಮೃತನ ಪತ್ನಿ ಸತಿಹೋಗಲು ಏರುತ್ತಿದ್ದಂತೆ ತೋರಿಸಲಾಗಿದೆ. ಅವಳು ಎಡಗಾಲನ್ನು ನೆಲದ ಮೇಲೆ ಇಟ್ಟು, ಬಲಗಾಲಿನಿಂದ ಚಿತಾವೇದಿಕೆಯನ್ನು ಒತ್ತಿ ಊರಿ ಮೇಲಕ್ಕೆ ಹತ್ತುತ್ತಿರುವ ದೃಶ್ಯ ಅತ್ಯಂತ ಉತ್ಕೃಷ್ಟವಾದುದಾಗಿದೆ. ಶಿಲ್ಪದ ವಿವರಗಳು ಸಹಗಮನದ ಚಿತೆಗೆ ಇನ್ನೂ ಅಗ್ನಿ ತಗುಲದಿರುವುದನ್ನು ಧ್ವನಿಸುತ್ತವೆ. ಮೃತ ಪತಿಯೊಡನೆ ಪತ್ನಿ ಚಿತೆಯಲ್ಲಿ ಕುಳಿತುಕೊಂಡ ಮೇಲೆ ಅಗ್ನಿ ಸ್ಪರ್ಶ ಮಾಡಿ ಸತಿ ಆಚರಣೆ ಜರುಗಿಸುತ್ತಿದ್ದುದರ ಸೂಚನೆ ಇಲ್ಲಿ ಇದ್ದಂತಿದೆ.(ಚಿತ್ರ—70)

ಕಲ್ಲನ್ನು ಕಂಬದಂತೆ ಕಂಡರಿಸಿ, ಆದರಿಂದ ಬಲಗೈ ಎತ್ತಿ ತೋರಿಸಿರುವ ಕವಿಟೆ—ದುರ್ಗದ ಮಾಸ್ತಿಕಲ್ಲಿನ ಶಿಲ್ಪ ವಿಶೇಷ ಗಮನಸೆಳೆಯುತ್ತದೆ. (ಚಿತ್ರ — 71) ಕಂಬದ ಮೇಲೆಯೇ ಶಿಲ್ಪದ ಹಂತಗಳನ್ನು ಬಿಡಿಸಿರುವ ಶಿಲ್ಪಿಯ ಪ್ರಯತ್ನ ಮೆಚ್ಚುವಂಥದಾಗಿದೆ. ಕೆಳಹಂತದಲ್ಲಿ, ಸತಿಯು ಚಿತೆಯ ಮೇಲೆ ಮಲಗಿದ್ದಾಳೆ. ಅವಳು ತನ್ನ ಮುಖ ಮೇಲಕ್ಕೆ ಮಾಡಿ, ಕಾಲುಗಳನ್ನು ನೇರವಾಗಿ ಚಾಚಿ, ಬಲಗೈಯನ್ನು ನಡುವಿನ ಮೇಲೆ ಇಟ್ಟುಕೊಂಡು ಮಲಗಿರುವ ಭಂಗಿ ಅತ್ಯಂತ ಸೊಗಸಾಗಿದೆ. ಅವಳ ಮುಖದಲ್ಲಿ ಪ್ರಶಾಂತಭಾವ ತಾನೇ ತಾನಾಗಿ ತೇಲಾಡುತ್ತಿದೆ. ಬಹುಶಃ ಗಂಡನ ಮರಣವನ್ನು ಕೇಳಿದ ಪತ್ನಿ ಇರಲಿಚ್ಛಿಸದೆ ಅನುಗಮನವಮೂಲಕ ಸತಿಹೋಗಲು, ಕೊರಡುಗಳಿಂದ ಚಿತಾವೇದಿಕೆಯನ್ನು ನಿರ್ಮಿಸಿಕೊಂಡು ಅದರ ಮೇಲೆ ಮಲಗಿ ಅಗ್ನಿಸ್ಪರ್ಶಕ್ಕಾಗಿ ಶಾಂತ ಚಿತ್ತದಿಂದ ಕಾಯುತ್ತಿದ್ದಾಳೆನಿಸುತ್ತದೆ. ಇದೇ ಹಂತದಲ್ಲಿ, ಪತಿ—ಪತ್ನಿ ಕೈಮುಗಿದು ನಿಂತುಕೊಂಡಂತೆ ವಿಗ್ರಹಗಳನ್ನು ಬಿಡಿಸಿರುವುದು ಕುತೂಹಲಕರವಾಗಿದೆ. ಇಲ್ಲಿ ಹೆಂಡತಿಯು ಗಂಡನೊಡನೆ ಕೂಡಿಕೊಂಡು ನಿಂತಿರುವಂತೆ ಶಿಲ್ಪ ಬಿಡಿಸಲು ಪ್ರತಿಯತ್ನಿಸಿದ್ದಾನೋ, ಅಥವಾ ಪ್ರತಿಷ್ಠಿತ ಸ್ತ್ರೀಯೊಬ್ಬಳು ಸತಿ ಹೋಗುವಾಗ ಅವಳ ದಾಸ—ದಾಸಿಯರು (ಅವರಿಬ್ಬರೂ ಪತಿ—ಪತ್ನಿಯರಾಗಿದ್ದುಕೊಂಡವರು) ಅವಳೊಡನೆ ಮರಣ ಹೊಂದಿದ್ದನ್ನು ಈ ವಿಗ್ರಹಗಳ ಮೂಲಕ ಅಭಿವ್ಯಕ್ತಿಸಲು ಪ್ರಯತ್ನಿಸಿದ್ದಾನೋ ತಿಳಿಯದು. ಮೇಲಿನ ಹಂತದಲ್ಲಿ ಸತಿಯು

ನಿತಂಬ ಊರಿ ಕಾಲುಗಳನ್ನು ಮಡಿಚಿಕೊಂಡು ಲಿಂಗದೆಡೆಗೆ ಕೈಮುಗಿದುಕೊಂಡು ಕುಳಿತಿರುವ ಭಂಗಿ ವೈಶಿಷ್ಟ್ಯಪೂರ್ಣವಾಗಿದೆ. ಅವಳು ಮುಖ ಮೇಲಕ್ಕೆ ಮಾಡಿಕೊಂಡು ನೇರಕ್ಕೆ ಲಿಂಗವನ್ನು ಸ್ವಲ್ಪ ಎತ್ತರಭಾಗದಲ್ಲಿ ಕಂಡರಿಸಲಾಗಿದೆ. ಅದನ್ನು ಪೂಜಿಸುವ ಅರ್ಚಕನೊಬ್ಬ ಕೈಯಲ್ಲಿ ಗಂಟೆ, ಧೂಪಾರತಿ ಹಿಡಿದುಕೊಂಡು ನಿಂತಿದ್ದಾನೆ. ಅವನ ಜುಟ್ಟನ್ನು ದುಂಡಗಾಗಿ ಕಟ್ಟಲಾಗಿದೆ. ಕುಳಿತ ಸತಿ ಹಾಗೂ ಅರ್ಚಕನ ನಡುವೆ ಕತ್ತಿ ಬಿಡಿಸಿರುವುದು ವಿಶೇಷ ಗಮನಿಸುವಂಥದ್ದಾಗಿದೆ. ಬಹುಶಃ ಪತ್ನಿ ಪತಿಯು ಶವದೊಡನೆ ಸತಿಹೋಗಲು ಸಾಧ್ಯವಾಗದ್ದಕ್ಕೆ ಅವನ ಕತ್ತಿಯೊಡನೆಯೆ ಚಿತೆಯಲ್ಲಿ ಮಲಗಿ ಸತಿಹೋಗಿರಬೇಕು. ಅನುಗಮನ ಕಾಲಕ್ಕೆ ಪತಿಯು ಯಾವುದಾದರೊಂದು ವಸ್ತುವಿನೊಡನೆ ಪತ್ನಿ ಸತಿ ಹೋಗುತ್ತಿದ್ದುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಈ ಮಾಸ್ತಿಕಲ್ಲಿನೊಡನೆಯೇ ಇರುವ ಇನ್ನೊಂದು ಮಾಸ್ತಿಕಲ್ಲು ಪತಿಯೊಡನೆ ಇಬ್ಬರು ಸತಿಯರು ಅಕ್ಕಪಕ್ಕದಲ್ಲಿ ಕುಳಿತುಕೊಂಡು ಸತಿ ಹೋದುದನ್ನು ತಿಳಿಸುವುದಾಗಿದೆ. ಇಲ್ಲಿಯೂ ಕಲ್ಲನ್ನೇ ಕಡೆದು ಕಂಬದ ಆಕಾರಕ್ಕೆ ತರಲಾಗಿದೆ. ಎತ್ತಿದ ಬಲಗೈಯನ್ನು ಕಂಬದಿಂದ ಬಿಡಿಸಿತೋರಿಸಲಾಗಿದೆ. ಈ ತೋಳಗೈಗಾಗಿ ಎಷ್ಟು ಬೇಕೋ ಅಷ್ಟು ಕಲ್ಲನ್ನು ಕಂಬದ ಮಗ್ಗುಲಿನಲ್ಲಿ ಬಿಡಿಸಿಕೊಂಡಿರುವ ರೀತಿ ವಿಶೇಷವಾಗಿದೆ. ಕಂಬದ ಮಧ್ಯಭಾಗದಲ್ಲಿ ಚಿತೆಯ ಮೇಲೆ ಕೈಮುಗಿದು ಕುಳಿತ ಪತಿಯನ್ನು ತೋರಿಸಲಾಗಿದೆ. ಅವನ ಎಡ-ಬಲಗಳಲ್ಲಿ ಅವನ ಇಬ್ಬರು ಪತ್ನಿಯರು ಕುಳಿತಿದ್ದಾರೆ. ಅವರ ಒಂದೊಂದು ಕೈಗಳು ಪತಿಯ ಮೊಳಕಾಲುಗಳನ್ನು ಹಿಡಿದುಕೊಂಡಂತೆ ಬಿಡಿಸಲಾಗಿದೆ. ಪತ್ನಿಯರು ಗಂಡನೊಡನೆ ಕುಳಿತಿರುವ ಇಲ್ಲಿಯ ರೀತಿ ತುಂಬ ವೈಶಿಷ್ಟ್ಯಪೂರ್ಣವಾಗಿದೆ, ಬಲದ ಪತ್ನಿ ಬಲಗಾಲನ್ನು ಮಡಿಚಿಕೊಂಡು ಕುಳಿತ್ತಿದ್ದರೂ ಎಡಗಾಲನ್ನು ಬಾಗಿಸಿ ನಿಂತುಕೊಂಡಂತೆ ಕಾಣುತ್ತಾಳೆ. ಅದೇ ರೀತಿ ಎಡದ ಪತ್ನಿ ಎಡಗಾಲನ್ನು ಮಡಿಚಿಕೊಂಡು ಕುಳಿತ್ತಿದ್ದರೂ ಬಲಗಾಲ ಮೇಲೆ ಭಾರಹಾಕಿ ನಿಂತುಕೊಂಡಂತೆ ಕಾಣುತ್ತಾಳೆ. ಇಲ್ಲಿ ಶಿಲ್ಪಿ ಬಹುಶಃ ಅವರು ಸತಿಹೋದ ಬಗೆಯನ್ನು ಇದ್ದಕ್ಕೆ ಇದ್ದ ಹಾಗೆಯೇ ಚಿತ್ರಿಸಲು ಪ್ರಯತ್ನಪಟ್ಟಿದ್ದಾನೆನಿಸುತ್ತದೆ. ಪತಿಯ ಶವವನ್ನು ಚಿತೆಯ ಮೇಲೆ ಕೂಡಿಸಿಕೊಂಡು ಸತಿಹೋದ ಅಪೂರ್ವ ದೃಶ್ಯ ಇದಾಗಿರಬೇಕು. ಚಿತೆಯ ಮೇಲೆ ಶವ ಕೂಡಿಸಿಕೊಂಡು ಸತಿ ಹೋಗುವಾಗಿನ ಅಡೆತಡೆಗಳು ಮತ್ತು ಅದನ್ನು ನೇರವಾಗಿ ಶಿಲ್ಪದಲ್ಲಿ ಕಂಡರಿಸುವಾಗಿನ ಅನಾನುಕೂಲತೆಗಳು ಈ ಶಿಲ್ಪದಲ್ಲಿ ಎದ್ದು ಕಾಣುವಂತಿವೆ.

ಸಸ್ತಾಪುರದ ಮಾಸ್ತಿಕಲ್ಲು ಶಿಲ್ಪದ ದೃಷ್ಟಿಯಿಂದ ಮುಖ್ಯವಾದುದು. ಕಲ್ಲಿನ ಕೇಂದ್ರಭಾಗದಿಂದಲೇ ಕಲ್ಲಿನ ಮೇಲ್ತುದಿಯವರೆಗೂ ಕಂಬವನ್ನು ಬಿಡಿಸಿ ತೋರಿಸಿರುವುದು ತುಂಬ ಸುಂದರವಾಗಿದೆ. ಕಂಬದಿಂದ ಬಲಭಾಗಕ್ಕೆ ಹೊರಟ ಎತ್ತಿದ ತೋಳಗೈ ಚಿತ್ರವಿದೆ. ಕಂಬದ ಕೆಳಗೆ ಹೊಂದಿಕೊಂಡು ಪತಿ–ಪತ್ನಿಯರ ಸಮಾಧಿಯನ್ನು ತೋರಿಸಲಾಗಿದೆ. ನೆಲವನ್ನು ಆಳವಾಗಿ ತೋಡಿದ್ದನ್ನು, ಆಗದ ಮಣ್ಣು ಗುಂಡಿಯ ಸುತ್ತ ಬಿದ್ದದ್ದನ್ನು ಶಿಲ್ಪದಲ್ಲಿ ತೋರಿಸಿದ ಶಿಲ್ಪಿಯ ಪ್ರತಿಭೆ ಮೆಚ್ಚುವಂಥದಾಗಿದೆ. ಆಗದ ಕುಂಡದಲ್ಲಿ ಮೃತ ಪತಿಯೊಡನೆ ಪತ್ನಿ ಜೊತೆಯಾಗಿ ಮಲಗಿದ್ದಾಳೆ. ಅಲ್ಲಿಯೂ ಅವಳು ಬಲಗೈಯನ್ನು ಎತ್ತಿ ಹಿಡಿದಿರುವಂತೆ ಕಂಡರಿಸುವಲ್ಲಿ ಶಿಲ್ಪಿ ಮರೆತಿಲ್ಲ. ತೋಡಿದ ಗುಂಡಿಯಲ್ಲಿ ಗಂಡನ ಶವದೊಡನೆ ಪತ್ನಿ ಮಲಗಿಕೊಂಡು ಮಣ್ಣುಮುಚ್ಚಿಸಿಕೊಳ್ಳುವ ಸಿದ್ಧತೆಯಲ್ಲಿರುವುದು ಈ ಶಿಲ್ಪದಿಂದ ಸ್ಪಷ್ಟಗೊಳ್ಳುತ್ತದೆ. ಈ ಸಮಾಧಿಯ ಮೇಲೆ ಕಂಬದ ಎಡಭಾಗದಲ್ಲಿ ಕುದುರೆಯ ಮೇಲೆ ಕುಳಿತುಕೊಂಡಿರುವ ಸತಿಯ ಚಿತ್ರ ಅತ್ಯಪೂರ್ವವಾಗಿದೆ. ಕುದುರೆಯು ನಡೆದು ಹೋಗುತ್ತಿರುವ ಭಂಗಿಯಲ್ಲಿದೆ. ಅದರ ಮೇಲೆ ಕುಳಿತ ಸತಿಯು ತನ್ನ ಎರಡೂ ಕೈಗಳನ್ನು ವಿಲಾಸದಿಂದ ಎತ್ತಿ ಹಿಡಿದಿದ್ದಾಳೆ. ಅವಳು ತುಂಬ ಉಲ್ಲಾಸದಲ್ಲಿದ್ದಾಳೆ. ಅವಳ ಎಡ–ಬಲಗಳಲ್ಲಿ ಹಾರುತ್ತಿರುವ ದೇವತೆಯರನ್ನು ತೋರಿಸಲಾಗಿದೆ. ಈ ಶಿಲ್ಪದ ಅಭಿವ್ಯಕ್ತಿ ಇದೇ ಎಂದು ಹೇಳುವುದು ಕಷ್ಟವಾದರೂ ಎರಡು ರೀತಿಯಲ್ಲಿ ಇದನ್ನು ಅರ್ಥೈಸಿಕೊಳ್ಳಲು ಸಾಧ್ಯವಿದೆ. ಮೊದಲನೆಯದಾಗಿ, ಮೃತನ ಪತ್ನಿ ಸತಿಹೋಗಲು ಕುದುರೆಯ ಮೇಲೆ ಸಮಾಧಿ ಸ್ಥಳಕ್ಕೆ ಮೆರವಣಿಗೆಯಲ್ಲಿ ಹೊರಟಿದ್ದಾಳೆಂದು ಹೇಳಬಹುದಾಗಿದೆ. ಎರಡನೆಯದಾಗಿ, ಪತಿಯ ಶವದೊಡನೆ ಸಮಾಧಿಗೊಂಡ ಪತ್ನಿ ಕುದುರೆಯ ಮೇಲೆ ದೇವಲೋಕಕ್ಕೆ ಹೋಗುವ ಮಾರ್ಗ ಮಧ್ಯದಲ್ಲಿದ್ದಾಳೆಂದು ಹೇಳಬಹುದಾಗಿದೆ. ಕುದುರೆಯ ಮೇಲೆ ಸತಿ ಕುಳಿತುಕೊಂಡು ಮೆರವಣಿಗೆ ತಗೆದುಕೊಳ್ಳುತ್ತಿದ್ದುದನ್ನು ಇಬ್ನ್–ಬತೂತಾ, ಸೀಜರ್ ಫ್ರೆಡೆರಿಕ್, ಪಿಯತ್ರೊದೆಲ್ಲಾವಲ್ಲಿ —ಈ ಮೊದಲಾದ ವಿದೇಶಿ ಪ್ರವಾಸಿಗಳು ಉಲ್ಲೇಖಿಸುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[6] ಸತಿಯು ಕುದುರೆಯ ಮೇಲೆ ಕುಳಿತುಕೊಂಡು ದೇವಲೋಕಕ್ಕೆ ಹೋಗುವ ಚಿತ್ರ ಹೊಸತೆನಿಸಿದರೂ 'ಮಹಾಸತಿ ಕಾಟವ್ವ' ಜನಪದ ಗೀತೆಯಲ್ಲಿಯೂ ಇಂಥದೇ ವಿವರಣೆಯೊಂದು ಕಾಣಿಸಿಕೊಳ್ಳುವುದನ್ನು ಗಮನಿಸಬಹುದಾಗಿದೆ. ಕಾಟವ್ವ ಸತಿಹೋದ ಮೇಲೆ ಪದ್ಯವೊಂದು ಹೀಗೆ ಬರುತ್ತದೆ[7]:

ಅಗಲನ್ನು ಕೊಂಡಾಕ ಜಗುಲಿ ಮುಚ್ಚಲುಗಲ್ಲು
ರೇವಣ್ಣನೆಂಬೊ ಕುದರೀಯು
ರೇವಣ್ಣನೆಂಬೊ ಕುದರೀಯು । ಏರಿಕಂಡು
ಪೋದಾಳೆ ಕಾಟವ್ವ ಸಿವನರಮನಿಗೆ ॥

ಇಲ್ಲಿ ಕಾಟವ್ವ 'ರೇವಣ್ಣ' ಎಂಬ ಕುದುರೆಯನ್ನೇರಿಕೊಂಡು ಶಿವನಲ್ಲಿಗೆ ಹೋಗುವ ಚಿತ್ರವಿದೆ. ಸಸ್ತಾಪುರದ ಮಾಸ್ತಿಕಲ್ಲಿನ ಶಿಲ್ಪದಲ್ಲಿಯೂ ಕುದುರೆಯ ಮೇಲೆ ಕುಳಿತ ಸತಿಚಿತ್ರದ ಮೇಲಿನ ಹಂತದಲ್ಲಿ ಶಿವಲಿಂಗ — ನಂದಿಗಳೊಡನೆ ಪತಿ—ಪತ್ನಿಯರು ಕೈ ಮುಗಿದು ಕುಳಿತುಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. (ಚಿತ್ರ—62).

ಕವಿಲೆದುರ್ಗದ ಮಾಸ್ತಿಕಲ್ಲೊಂದು ಅಪರೂಪದ ಶಿಲ್ಪವನ್ನು ಒಳಗೊಂಡಿದೆ. (ಚಿತ್ರ—63). ಕಲ್ಲನ್ನು ಕಂಬದ ಆಕಾರದಲ್ಲಿ ಕಂಡರಿಸಲಾಗಿದೆ. ಕಂಬದ ಬಲಕ್ಕೆ ಬಲಗೈ ಎತ್ತಿದ್ದನ್ನು ಬಿಡಿಸಿತೋರಿಸಲಾಗಿದೆ. ಕಂಬದಿಂದ ತೋಳುಗೈ ಬಿಡಿಸುವಲ್ಲಿ ಶಿಲ್ಪಿಯ ಅಪೂರ್ವ ಕಲಾಚಾತುರ್ಯ ಅಭಿವ್ಯಕ್ತಗೊಂಡಿದೆ. ಸತಿಯ ಬಗಲಿನ ಕೆಳಭಾಗ, ಅವಳ ಭುಜದ ಭಾಗ ಶಿಲ್ಪದಲ್ಲಿ ತೋರಿಸಿರುವುದು ಅತೀ ಸ್ವಾರಸ್ಯಪೂರ್ಣವಾಗಿದೆ. ಅದೇ ತೋಳುಗೈ ಕೆಳಗೆ ವೀರಭಂಗಿಯಲ್ಲಿ ನಿಂತ ಸಿಂಹವೊಂದನ್ನು ಕಂಡರಿಸಲಾಗಿದೆ. ಕಂಬದ ಮೇಲೆಯೇ ಸಹಗಮನದ ಹಂತಗಳನ್ನು ಶಿಲ್ಪಿ ಬಿಡಿಸಿದ್ದಾನೆ. ಕೆಳಗಿನ ಹಂತದಲ್ಲಿ ಮೃತಪತಿಯ ಶವವನ್ನು ಮೇಲಕ್ಕೆ ಮುಖ ಮಾಡಿಸಿ ಮಲಗಿಸಲಾಗಿದೆ. ಅವನ ಮೊಳಕಾಲಿನ ಹತ್ತಿರದಲ್ಲಿ ಅವನ ಪತ್ನಿ ನಿಂತುಕೊಂಡಿದ್ದಾಳೆ. ಅವಳ ಎಡಗೈ ಹೊಟ್ಟೆಯನ್ನು ಬಾಚಿಕೊಂಡಿದ್ದರೆ ಬಲಗೈ ಎತ್ತಿಹಿಡಿಯಲಾಗಿದೆ. ಬಲಗೈಯಲ್ಲಿ ಹೂವನ್ನು ಹಿಡಿದಿರಿಸಲಾಗಿದೆ. ಪತ್ನಿಯು ಮೃತಪತಿಯನ್ನು ನೋಡುತ್ತ ನಿಂತ ಭಂಗಿ ಆಕರ್ಷಿಸುವಂಥದ್ದಾಗಿದೆ. ಬಹುಶಃ ಈ ಶಿಲ್ಪದ ಮೂಲಕ ಶಿಲ್ಪಿ ಸಮಾಧಿ ಪ್ರವೇಶವಿಧಾನವನ್ನು ಸೂಚಿಸಿದಂತಿದೆ. ಮೃತಪತಿಯನ್ನು ಕಾಣುತ್ತ ನಿಂತ ಸತಿಯ ಭಂಗಿ ಇದೆಂದು ಮಾತ್ರ ಅರ್ಥೈಸಿದರೆ, ಇಲ್ಲಿಯ ಶಿಲ್ಪದ ವಿವರಕ್ಕೆ ಸಾಲದೆನಿಸುತ್ತದೆ. ಪತಿ ಮತ್ತು ಸತಿಯರನ್ನು ಕಲ್ಲಿನಲ್ಲಿ ಸ್ವಲ್ಪ ಆಳದಲ್ಲಿ ಕಂಡರಿಸಲಾಗಿರುವುದನ್ನು ಗಮನಿಸಬಹುದಾಗಿದೆ. ಪತಿ ಮಲಗಿದ ಭಾಗಕ್ಕೆ, ಸತಿ ನಿಂತ ಭಾಗಕ್ಕೆ ಈ ಮಾತು ಅನ್ವಯಿಸುತ್ತದೆ. ಆದರೆ ಅಲ್ಲಿಯೇ ಎದೆಯಿಂದ ಮೇಲ್ಭಾಗ ಎತ್ತರವಾಗಿ ಬಿಡಿಸಲಾಗಿರುವುದನ್ನು ನಿರೀಕ್ಷಿಸಬಹುದಾಗಿದೆ. ಒಟ್ಟಿನಲ್ಲಿ ಅಗೆದ ನೆಲದಲ್ಲಿ ಪತಿಯ ಶವವನ್ನು ಮಲಗಿಸಲಾಗಿದೆ ಎಂದೂ, ಅವನೊಡನೆ ಸತಿ ಹೋಗಲು ಆನ ಪತ್ನಿ ಬಲಗೈ ಎತ್ತಿ ನಿಂತು

ಕೊಂಡಿದ್ದಾಳೆ ಎಂದೂ ಈ ಶಿಲ್ಪದ ಕುರಿತಾಗಿ ಅಭಿಪ್ರಾಯ ಪಡಬಹುದಾಗಿದೆ. ವಿದೇಶಿ ಪ್ರವಾಸಿ ದುಆರ್ತೆ ಬಾರ್ಬೋಸಾ, ಗಂಡನ ಶವದೊಡನೆ ಆಳವಾದ ಗುಂಡಿಯಲ್ಲಿ ಪತ್ನಿ ನಿಂತು ಮಣ್ಣು ಮುಚ್ಚಿಸಿಕೊಂಡು ಸತಿಹೋಗುತ್ತಿದ್ದರೆಂದು ಉಲ್ಲೇಖಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[8]

ಕಮಲಾಪುರ ಮ್ಯೂಸಿಯಂನಲ್ಲಿರುವ ಮಾಸ್ತಿಕಲ್ಲು ತುಂಬ ಹೊಸ ವಿಷಯವನ್ನು ಪ್ರತಿಪಾದಿಸುವಂತಿದೆ. (ಚಿತ್ರ-72). ಇದನ್ನು ಆರ್. ಶೇಷಶಾಸ್ತ್ರಿ ಅವರು 'ವೀರಗಲ್ಲು' ಎಂದು ಹೇಗೆ ಕರೆದಿರುವರೋ ಗೊತ್ತಾಗುವುದಿಲ್ಲ.[9] ಕಲ್ಲಿನ ಎಡಭಾಗದಲ್ಲಿ ಕಂಬವಿದ್ದು, ಅದರಿಂದ ಹೊರಟ ತೋಳಗೈಯನ್ನು ಬಿಡಿಸಲಾಗಿದೆ. ಪತಿಯು ದಿಂಬಿಗೆ ಆನಿಸಿಕೊಂಡು ತಲೆಯ ಹಿಂದೆ ಕೈ ಇಟ್ಟು ಬಲಭಾಗದಲ್ಲಿ ಕುಳಿತುಕೊಂಡಿರುವುದು ವಿಶೇಷವಾಗಿದೆ. ಅವನು ತನ್ನ ಬಲಗೈಯನ್ನು ಮುಂದೆ ಚಾಚಿ ಅಂಗೈಯನ್ನು ಸತಿಗೆ ತೋರಿಸುವಂತೆ ಹಿಡಿದುಕೊಂಡಿದ್ದಾನೆ. ಸತಿಯು ಅವನ ಮುಂದೆ ನಿಂತು ಕೈಮಾಡಿ ಏನೋ ಹೇಳುತ್ತಿರುವಂತಿದೆ. ಪತ್ನಿಯು, ಏನನ್ನೋ ಹೇಳುತ್ತಿರುವಂತೆ ತೋರುತ್ತದೆ. ಪತಿ ಅಂಗೈ ತೋರಿಸಿ ಕೇಳುತ್ತಿರುವುದನ್ನು ನೋಡಿದರೆ ತಾನು ಮರಣಹೊಂದಿದ ಮೇಲೆ ಪತ್ನಿ ಸತಿ ಹೋಗಬೇಕು ಎಂಬುದರ ಕುರಿತಾಗಿ ಗಂಡನು ಹೆಂಡತಿಯಿಂದ ವಚನ ಕೇಳುತ್ತಿದ್ದಾನೆಂದೂ, ಅದಕ್ಕವಳು ಒಪ್ಪಿಗೆಯನ್ನು ಸೂಚಿಸುತ್ತಿದ್ದಾಳೆಂದೂ ಈ ಶಿಲ್ಪದ ಬಗ್ಗೆ ಹೇಳಬಹುದಾಗಿದೆ. ವಿಜಯನಗರದ ಅರಸರ ಸ್ತ್ರೀಯರನ್ನು ಕುರಿತು ಹೇಳುತ್ತ ನಿಕೊಲೊ — ದೆ — ಕೊಂತಿ ಎಂಬ ವಿದೇಶಿ ಪ್ರವಾಸಿ "ಎರಡು ಮೂರು ಸಾವಿರ ಹೆಂಡತಿಯರು ರಾಜನು ಸತ್ತಾಗ ತಮ್ಮ ಆತ್ಮಸಂತೋಷದಿಂದ ಚಿತೆಯೊಳಗೆ ಬಿದ್ದು ಪ್ರಾಣತ್ಯಾಗ ಮಾಡುತ್ತೇವೆಂಬ ವಾಗ್ದಾನ ಮಾಡಿ ರಾಜನ ಕೈಹಿಡಿದಿರುತ್ತಾರೆ" —ಎಂದು ಉಲ್ಲೇಖಿಸಿರುವ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ.[10] ಕೈಹಿಡಿದ ಗಂಡನ ಮರಣಾನಂತರ ಪತ್ನಿಯರು ಸತಿಹೋಗುವುದರ ಕುರಿತಾಗಿ ವಚನ ಕೊಡುವ ಸೂಚನೆ ಇಲ್ಲಿದೆ. ಜನಪದ ಹಾಡಿನಲ್ಲಿ ಪದ್ಯವೊಂದು ಹೀಗೆ ಬರುತ್ತದೆ :[11]

" ದಂಡೀಗ್ ಹೋಗುತೇನ್ ಗಿಂಡೀಲ್ ಉದಕತಾರೇ
ಬಂದೇಯುತ್ತಾರೇ ಕುದುರೀಗೆ ॥ ಯಾಲು ಹೆಣ್ಣೇ
ನಂಬ್ಯಾಗಿ ಕೊಡೇ ಬಲಗೈಲಿ ॥ "

ಈ ಪದ್ಯವನ್ನು ವಿವರಿಸುತ್ತ ಡಾ. ಎಲ್. ಆರ್. ಹೆಗಡೆ ಅವರು " ದಂಡಿಗೆ ಹೋಗಲು ಹೊರಟ ನಲ್ಲನೊಬ್ಬನು ಹೆಂಡತಿಯ ಹತ್ತಿರ " ತನಗೆ ನಿಷ್ಠಳಾಗಿಯೇ ಇರುವೆನೆಂದು ಬಲಗೈ

ಯಲ್ಲಿ ನಂಬಿಗೆ ಕೊಡು(ಭಾಷೆ ಕೊಡು)" ಎಂದು ಕೇಳುತ್ತಾನೆ" ಎಂದು ಬರೆಯುತ್ತಾರೆ.[12] ಇಲ್ಲಿ 'ನಂಬುಗೆ ಕೊಡೇ ಬಲಗೈಲಿ' (ನಿಷ್ಠೆಯಾಗಿ) —ಎಂಬುದನ್ನು ದಂಡಿಗೆ ಹೋಗುವ ಗಂಡನು ತನಗೆ ಮರಣವಾದರೆ ಹೆಂಡತಿ ಸತಿಹೋಗಬೇಕು ಎಂಬುದರ ಕುರಿತಾಗಿ ವಚನ ಕೇಳುತ್ತಿದ್ದಾನೆ ಎಂದು ವಿಸ್ತರಿಸಿಕೊಳ್ಳಲು ಅವಕಾಶವಿದೆ ಎನಿಸುತ್ತದೆ. ಈ ಎಲ್ಲ ವಿವರಗಳ ಹಿನ್ನೆಲೆಯಲ್ಲಿ ಕಮಲಾಪುರದ ಮಾಸ್ತಿಕಲ್ಲಿನ ಶಿಲ್ಪ ವಚನ ಕೇಳುತ್ತಿರುವ ಪತಿಯನ್ನೂ, ಅದಕ್ಕೆ ಉತ್ತರಿಸುತ್ತಿರುವ ಸತಿಯನ್ನೂ ಅಭಿವ್ಯಕ್ತಿಸಲು ಪ್ರಯತ್ನಿಸುತ್ತಿದೆ ಎಂದು ಅಭಿಪ್ರಾಯ ಪಡಬಹುದಾಗಿದೆ. ಹೀಗಿದ್ದಾಗಲೂ, "ಈ ಶಿಲ್ಪದ ಭಾವ ಈ ರೀತಿಯೇ ಇರಬೇಕು ಎಂಬುದಾಗಿ ವ್ಯಾಖ್ಯಾನಿಸುವುದು ಕಷ್ಟ. ಆದರೂ ಶಿಲ್ಪಿ ಈ ಮೂಲಕ ಏನನ್ನೋ ಹೇಳಲು ಪ್ರಯತ್ನಿಸಿದ್ದಾನೆ ಎಂಬುದು ವೇದ್ಯವಾಗುತ್ತದೆ" ಎಂದು ಹೇಳಿರುವ ವಿದ್ವಾಂಸರ ಮಾತು ಹಾಗೇ ಉಳಿದುಕೊಳ್ಳುತ್ತದೆ.[13]

ಕ್ರಿ.ಶ. 1088–89ರ ಹೆಬ್ಬಲಗುಪ್ಪೆ ಶಾಸನಕಲ್ಲಿನ ಶಿಲ್ಪ ವಿಶೇಷ ಲಕ್ಷಿಸುವಂಥದ್ದಾಗಿದೆ.[14] (ಇದರ ಕುರಿತು ಹಿಂದೆ ದೀರ್ಘವಾಗಿ ವಿವರಿಸಲಾಗಿದೆ.) ಈ ಕಲ್ಲು ಸು.3 ಫೂಟು ಅಗಲ 4 ಫೂಟು ಉದ್ದವಿದೆ. ಕಲ್ಲಿನ ಎಡ–ಬಲದ ಎರಡೂ ಭಾಗಗಳು ಮೇಲಿನಿಂದ ಕೆಳಗೆ ಶಾಸನದ ಬರವಣಿಗೆಗೆ ಮೀಸಲಾಗಿವೆ. ಕಲ್ಲಿನ ಮಧ್ಯಭಾಗದಲ್ಲಿ ಶಿಲ್ಪದ ಮೂರು ಹಂತಗಳಿವೆ. ಮೊದಲನೆಯ ಹಂತದ ಎಡಭಾಗದಲ್ಲಿ ವೀರನವಲಾಕ್ಷಿ ಹೋರಾಡುತ್ತಿದ್ದಾನೆ. ಅವನನ್ನು ಇನ್ನಿಬ್ಬರು ಆಯುಧ ಧಾರಿಗಳು ಇರಿಯುತ್ತಿದ್ದಾರೆ. ಈ ಹೋರಾಟದ ಬಲಭಾಗದಲ್ಲಿ ನವಲಾಕ್ಷಿರಾಜನ ಪತ್ನಿ ಎತ್ತರ ಪ್ರದೇಶದಿಂದ ಹಾರಿಕೊಳ್ಳುವ ಭಂಗಿಯಲ್ಲಿ ನಿಂತಿದ್ದಾಳೆ. ಅವಳ ಪಾದಗಳೆರಡೂ ಆಳಪ್ರದೇಶದೆಡೆಗೇ ಮುಖ ಮಾಡಿರುವುದನ್ನು ಗಮನಿಸಬಹುದಾಗಿದೆ. ಅವಳ ಬಲಗೈ ಹೊಟ್ಟೆಯೆಡೆಗೆ ಚಾಚಿ ಕೊಂಡಿದ್ದು ಕೂಡ ಅವಳು ಹಾರಿಕೊಳ್ಳುವ ಸ್ಥಿತಿಯಲ್ಲಿದ್ದುದನ್ನು ಸೂಚಿಸುತ್ತದೆ. ಈ ಕಲ್ಲಿನ ಶಿಲ್ಪಿ ನವಿಲಾಕ್ಷಿರಾಜನ ಸತಿಯು 'ಕಮ್ಮಾರಿವುಯ್ಯ' ಪತಿ ಹೋದುದನ್ನು ಅತ್ಯಂತ ಸಮರ್ಥವಾಗಿ ಚಿತ್ರಿಸಿದ್ದಾನೆಂದು ಹೇಳಬಹುದಾಗಿದೆ. (ಚಿತ್ರ—52).

ಡಾ. ಚಿದಾನಂದಮೂರ್ತಿ ಅವರು ಸಂಗ್ರಹಿಸಿ ಪ್ರಕಟಿಸಿದ ಚನ್ನಗಿರಿ ತಾಲೂಕಿನ ( ) ಬೊಮ್ಮೇನಹಳ್ಳಿಯ ಮಾಸ್ತಿಕಲ್ಲಿನ ಶಿಲ್ಪಗಳು ಅತ್ಯಂತ ಸುಂದರವಾಗಿವೆ. (ಚಿತ್ರ—73, 74). ಅವುಗಳ ಕುರಿತು ವಿದ್ವಾಂಸರು ಹೇಳುವ ಮಾತುಗಳು ಹೀಗಿವೆ: "ಅಕಿತ್ತರದ ಇವು ಅತ್ಯಂತ ಕಲಾತ್ಮಕವಾಗಿವೆ. ಒಂದರಲ್ಲಿ 'ಮಾಸ್ತ್ಯಮ್ಮ' ಮೊಳಕಾಲಿನ ವರೆಗೆ ದೊಡ್ಡ ಹಾರವನ್ನು

ಧರಿಸಿದ್ದಾಳೆ. ಕೊರಳ ತುಂಬ ಬೇರೆ ಬೇರೆ ಹಾರಗಳಿವೆ. ಬಲಗೈಯಲ್ಲಿ ಕಮಲದ ಹೂವು ಹಿಡಿದಿದ್ದಾಳೆ. ಕೈತುಂಬ ಬಳೆಗಳಿವೆ, ಕಾಲಲ್ಲಿ ಅಂದುಗೆ ಇದೆ. ಸರ್ವಾಲಂಕಾರ ಭೂಷಿತೆಯಾದ ಇವಳ ಪಕ್ಕದಲ್ಲಿ ಚಿಕ್ಕದಾಗಿ ಅವಳ ಗಂಡ ವೀರ ನಿಂತಿದ್ದಾನೆ. ಅವನಿಗಿಂತ ಅವಳೇ ಮುಖ್ಯ ಎಂಬುದು ಶಿಲ್ಪದಿಂದಲೇ ಎದ್ದು ಕಾಣುತ್ತದೆ. ಇನ್ನು ಉಳಿದ ನಾಲ್ಕಾರು ಮಾಸ್ತಿಕಲ್ಲುಗಳೂ ಹೀಗೇ ಇವೆ; ಇಳಿಸಿದ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿವೆ. ಒಂದರಲ್ಲಿ ಕೆಳಗಡೆ ಅತ್ತ ಇತ್ತ ವೀಳ್ಯದೆಲೆಗಳ ಮಧ್ಯೆ ತೆಂಗಿನಕಾಯಿಟ್ಟಿರುವ ಪೂರ್ಣ ಕಲಶಗಳಿವೆ. ಈ ಮಾಸ್ತಿಗಲ್ಲುಗಳ ವಿಶೇಷವೇನೆಂದರೆ ಕಲ್ಲಿನ ಹಿಂಭಾಗದಲ್ಲಿ ಮಾಸ್ತಿಯ ಹೆರಳನ್ನು ಉದ್ದಕ್ಕೂ ಬಿಡಿಸಿರುವುದು. ಹೆರಳಿಗೆ ಕೇದಗೆಯನ್ನು ಹೆಣೆದು ಕೊನೆಗೆ ಕುಚ್ಚು ಕಟ್ಟಿರುವ ರೀತಿ ಮನಮೋಹಕವಾಗಿದೆ. ಇಂತಹ ಶಿಲ್ಪ, ನನಗೆ ತಿಳಿದ ಮಟ್ಟಿಗೆ, ಕರ್ನಾಟಕದಲ್ಲಿ ಮತ್ತೊಂದಿಲ್ಲ."[15] ಈ ಮಾಸ್ತಿಕಲ್ಲುಗಳಲ್ಲಿ ಸ್ವತಂತ್ರವಾಗಿ ಎದ್ದು ಬರುವಂತೆ ಸತಿವಿಗ್ರಹಗಳನ್ನು ಬಿಡಿಸಲಾಗಿದೆ. ಇವುಗಳಲ್ಲಿ ಸುಮಾರು ಆರು ಅಡಿ ಎತ್ತರದ ಮಾಸ್ತಿ ಶಿಲ್ಪ ಅತೀ ಸುಂದರವಾಗಿದೆ. ಈ ಶಿಲ್ಪದ ಬಾಯಿ, ಮೂಗು, ಕಣ್ಣು, ಹುಬ್ಬು, ಕಪೋಲಗಳನ್ನು ನಯಗಾರಿಕೆಯಿಂದ ಅತ್ಯಂತ ಸುಂದರವಾಗಿ ಬಿಡಿಸಲಾಗಿದೆ. ಈ ಕಲ್ಲಿನ ಸಮೀಪದಲ್ಲಿಯೇ ಜೊತೆಯಾಗಿ ಇನ್ನೆರಡು ಮಾಸ್ತಿಕಲ್ಲುಗಳಿವೆ. ಅವುಗಳಲ್ಲಿಯ ಸತಿ ವಿಗ್ರಹದ ಕೆತ್ತನೆಯೂ ತುಂಬ ಆಕರ್ಷಕವಾಗಿದೆ. ಸಾಮಾನ್ಯವಾಗಿ ಸತಿ ಶಿಲ್ಪವನ್ನು ಕಂಡರಿಸುವಾಗ ಶಿಲ್ಪಿಗಳು ಸತಿಯ ಎದುರುಭಾಗವನ್ನು ಕಲ್ಲಿನಲ್ಲಿ ಬಿಡಿಸುತ್ತಾರೆ. ಆದರೆ ಇಲ್ಲಿ ಶಿಲ್ಪಿ ಸತಿಯರ ಎದುರುಭಾಗವನ್ನಷ್ಟೇ ಅಲ್ಲದೆ ಅವರ ಹಿಂಭಾಗವನ್ನೂ ಕಡೆದಿಡಲು ಪ್ರಯತ್ನಿಸಿದ್ದಾನೆ. ಸತಿಯರ ಭುಜ, ಬೆನ್ನು, ನಡು ಹಾಗೂ ಅವರ ಉದ್ದವಾದ ಹೆರಳು — ಇವುಗಳನ್ನು ಶಿಲ್ಪಿ ಚಿತ್ರಿಸಲು ಪ್ರಯತ್ನಿಸಿರುವುದು ಸ್ತುತ್ಯವಾದುದೇ ಆಗಿದೆ. ಬಹುಶಃ ಈ ಎರಡೂ ಕಲ್ಲಿನ ಶಿಲ್ಪಿ ಒಬ್ಬನೇ ಆಗಿರಬೇಕೆನಿಸುತ್ತದೆ. ಇದೇ ರೀತಿಯ ಶಿಲ್ಪವೊಂದನ್ನು ಬಿಡಿಸುವ ಪ್ರಯತ್ನ ಅರಸೀಕೆರೆ ತಾಲೂಕಿನ ಉಂಡಿಗನಾಳು ಗ್ರಾಮದ ಮಾಸ್ತಿಕಲ್ಲಿನಲ್ಲಾಗಿದೆ. ಆ ಕಲ್ಲಿನ ಹಿಂಭಾಗದಲ್ಲಿ ಉದ್ದನೆಯ ಹೆರಳಿನ ಅಪೂರ್ಣ ಕೆತ್ತನೆಯನ್ನು ಗುರುತಿಸಬಹುದಾಗಿದೆ. ಈ ಕಲ್ಲಿನಲ್ಲಿಯ ಮಹಾಸತಿಯು "ರಾಮಜಜೀಯಮಗಳು" ಎಂದು ಶಾಸನದಿಂದ ತಿಳಿದುಬರುತ್ತದೆ.[16] (ಚಿತ್ರ—75).

ಕರ್ನಾಟಕದಲ್ಲಿಯೇ ಅಪರೂಪದ ಮಾಸ್ತಿಶಿಲ್ಪ ಹೊನ್ನಾವರ ಭಾಗಕ್ಕೆ ಸೇರಿದ ಮೂರಕಟ್ಟೆಯಲ್ಲಿದೆ. (ಚಿತ್ರ—76). ಸು. 1 ಫೂಟು ಎತ್ತರದ ಕಲ್ಲನ್ನು ಮಾಸ್ತಿಗೊಂಬೆಯಂತೆ ಕಂಡರಿಸಿದ್ದನ್ನು ಕಾಣುತ್ತೇವೆ. ಒಂದೇ ಕಲ್ಲಿನಲ್ಲಿ ಹಿಂದ–ಮುಂದ ಹೊಂದಿಕೊಂಡಂತೆ ಸುಂದರ

ವಾಗಿರುವ ಇಬ್ಬರು ಮಾಸ್ತಿಯರನ್ನು ಶಿಲ್ಪಿ ನಿರ್ಮಿಸಿದ್ದು ವಿಶೇಷವಾಗಿದೆ. ಬಲಗೈ ಟೊಂಕದ ಮೇಲ್ಭಾಗದವರೆಗೂ ಇಳಿಬಿಟ್ಟು, ಮುಂದಿನ ಕೈಭಾಗ ಚಾಚಿಕೊಂಡು, ಮುಷ್ಟಿಕಟ್ಟಿಕೊಂಡಂತೆ ಚಿತ್ರಿಸಲಾಗಿದೆ. ಎಡಗೈಯನ್ನೂ ಇಳಿಬಿಟ್ಟು ಟೊಂಕಿನೆಡೆಗೆ ಬೆರಳುಗಳು ಮುಖಮಾಡಿ ಮುಷ್ಟಿ ಕಟ್ಟಿದಂತಿದೆ. ತಲೆಗೂದಲು, ದಂಡೆ ಸುಂದರವಾಗಿ ಬಿಡಿಸಲಾಗಿದೆ. ಟೊಂಕದ ಕೆಳಗೆ ಲಂಗ ತೊಟ್ಟಂತೆ ಚಿತ್ರಿಸಲಾಗಿದೆ. ಮುಂದಿನ ಮಾಸ್ತಿಶಿಲ್ಪದಷ್ಟು ಅದಕ್ಕೆ ಹೊಂದಿ ಹಿಂದಿರುವ ಮಾಸ್ತಿಶಿಲ್ಪ ಸ್ಪಷ್ಟವಾಗಿಲ್ಲ. ಹಿಂದಿನ ಮಾಸ್ತಿಶಿಲ್ಪದ ಮುಖ, ಕೈ, ಕಾಲು ಪೂರ್ಣವಾಗಿ ಗಮನಿಸಲು ಶಕ್ಯವಾಗದಿದ್ದರೂ ಇದೊಂದು ಬೇರೆ ಮಾಸ್ತಿ ಚಿತ್ರವೆಂಬಂತೆ ಶಿಲ್ಪಿ ಚಿತ್ರಿಸಿದ್ದು, ಆತನ ವಿಶೇಷ ಕಲೆಗಾರಿಕೆಯಾಗಿದೆ. ಈ ಶಿಲ್ಪದ ಮೇಲೆ ಈ ಪ್ರದೇಶದಲ್ಲಿ ದಟ್ಟವಾಗಿ ಬೆಳೆದುನಿಂತ ಮಾಸ್ತಿಗೊಂಬೆಗಳ ಪ್ರಭಾವವಿದೆಯೆಂಬುದನ್ನು ಮತ್ತು ಈ ಶಿಲ್ಪದ ರಚನೆ ತೀರ ಇತ್ತೀಚಿನದೆಂದು ಸರಳವಾಗಿ ಊಹಿಸಬಹುದಾಗಿದೆ. ಈ ಮಾಸ್ತಿಯನ್ನು 'ಮೂರಕಟ್ಟಿಮಾಸ್ತಿ' ಎಂದೇ ಜನ ಕರೆಯುತ್ತಾರೆ.

ಗಂಡನ ಶವದೊಂದಿಗೆ ಪತ್ನಿಗೆ ಸಹಗಮನಗೊಳ್ಳಲು ಸಾಧ್ಯವಾಗದಿದ್ದರೆ ಅವಳು ಅವನ ಯಾವುದಾದರೂ ವಸ್ತುವಿನೊಡನೆ ಅಥವಾ ಅದೂ ಇಲ್ಲದೆ ಅನುಗಮನ ಆಚರಿಸುತ್ತಿದ್ದಳು. ಈ ಬಗೆಯ ಸತಿಘಟನೆಯನ್ನು ಶಿಲ್ಪದ ಮೂಲಕ ಅಭಿವ್ಯಕ್ತಿಸಲು ಒಬ್ಬಬ್ಬರು ಶಿಲ್ಪಿಗಳು ಪ್ರಯತ್ನಿಸಿದ್ದಾರೆ. ಬಹುಶಃ ಅನುಗಮನ ಮೂಲಕ ಸತಿಹೋದ ಸಂದರ್ಭವನ್ನು ಕಂಡರಿಸುವಾಗ ಸಹಗಮನ ಸಂದರ್ಭದ ಕಂಡರಣೆಯನ್ನೇ ಅನುಸರಿಸುತ್ತ ಬಂದಂತೆ ಕಾಣುತ್ತದೆ. ಹೀಗಿರುವುದರಿಂದ ಅನುಗಮನದ ಶಿಲ್ಪ ಮತ್ತು ಸಹಗಮನದ ಶಿಲ್ಪಗಳನ್ನು ಇಂದು ಬೇರೆಯಾಗಿ ಗುರುತಿಸಲು ಸಾಧ್ಯವಾಗುತ್ತಿಲ್ಲ. ಸಹಗಮನ, ಅನುಗಮನದ ಉದ್ದೇಶಗಳೆರಡೂ ಒಂದೇಯಾಗಿರುವುದರಿಂದಲೂ ಜನತೆಯಲ್ಲಿ ಇವೆರಡರಲ್ಲಿಯ ವ್ಯತ್ಯಾಸದ ಕುರಿತಾಗಿ ಸ್ಪಷ್ಟ ತಿಳುವಳಿಕೆಯಿರದಿದ್ದರಿಂದಲೂ ಇವುಗಳನ್ನು ಅಭಿವ್ಯಕ್ತಿಸುವ ಶಿಲ್ಪದಲ್ಲಿಯೂ ವ್ಯತ್ಯಾಸ ಕಂಡುಕೊಳ್ಳದೇ ಹೋಯಿತು. ಇದೇ ರೀತಿ ಮಾಸ್ತಿಕಲ್ಲಿನ ಪಾಠವನ್ನು ನಿರೂಪಿಸುವಲ್ಲಿಯೂ ಅನುಗಮನ, ಸಹಗಮನದ ಭಿನ್ನ ಪಾಠಗಳು ಬೆಳೆದು ಬರಲಿಲ್ಲವೆಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಸತಿ ಘಟನೆಯನ್ನು ಚಿತ್ರಿಸಿದ ಶಿಲ್ಪಿಗಾಗಲಿ, ಶಿಲ್ಪಕ್ಕೆ ಕಾರಣನಾದ ಕರ್ತೃವಿಗಾಗಲಿ ಇವೆರಡರ ಮಧ್ಯದ ಸೂಕ್ಷ್ಮತೆ ಅಷ್ಟೊಂದು ಗಣನೆಗೆ ಬಾರದೇ ಹೋಯಿತೆನ್ನಬೇಕು. ಹೀಗಿದ್ದಾಗಲೂ ಶಿಗ್ಗಾಂವ ತಾಲೂಕಿನ ಕುಂದೂರು, ಮದೂರ ತಾಲೂಕಿನ ಚಾಮನಹಳ್ಳಿ —ಈ ಊರುಗಳಲ್ಲಿಯ ಮಾಸ್ತಿಕಲ್ಲಿನ ಶಿಲ್ಪಗಳು ಅನುಗಮನದ ಚಿತ್ರಣಗಳನ್ನು ಕೊಟ್ಟಿರುವುದು ವಿಶೇಷ ಲಕ್ಷಿಸುವಂಥದ್ದಾಗಿದೆ.

ಕುಂದೂರಿನ ಮಾಸ್ತಿಕಲ್ಲಿನಲ್ಲಿ ಎಡಭಾಗದಲ್ಲಿ ಕಂಬದ ಚಿತ್ರವಿದ್ದು, ಅದರಿಂದ ಎತ್ತಿದ ಬಲಗೈ ಹೊರಟಂತೆ ತೋರಿಸಲಾಗಿದೆ. ಈ ಕಂಬದ ಬಲಭಾಗದಲ್ಲಿ ಪತ್ನಿ ಕೈಮುಗಿದು ಕುಳಿತುಕೊಂಡಿದ್ದಾಳೆ. ಅವಳ ಪಕ್ಕದಲ್ಲಿ, ಕತ್ತಿ ಇದೆ. ಕಲ್ಲಿನ ಮೇಲೆ ಸೂರ್ಯ–ಚಂದ್ರರನ್ನು ಬಿಡಿಸಲಾಗಿದೆ. ಈ ಶಿಲ್ಪದ ವಿವರಗಳಿಂದ ವೀರನೊಬ್ಬ ಯಾವುದೋ ಹೋರಾಟದಲ್ಲಿ ಮಡಿದಿದ್ದಾನೆ ಎಂದೂ, ಅವನ ಪತ್ನಿ ಅವನ ಗುರುತಿನ ಕತ್ತಿಯೊಡನೆ ಸತಿಹೋಗಿದ್ದಾಳೆ ಎಂದೂ ಹೇಳಬಹುದಾಗಿದೆ. ಈ ಅನುಗಮನ ಘಟನೆಯನ್ನು ತನ್ನ ಬದುಕಿನಲ್ಲಿ ಕಂಡ ಶಿಲ್ಪಿಯೊಬ್ಬ ಅದನ್ನು ತನ್ನ ಪರಿಮಿತಿಯಲ್ಲಿ ಈ ಕಲ್ಲಿನಲ್ಲಿ ಕಂಡರಿಸಲು ಪ್ರಯತ್ನಿಸಿದ್ದಾನೆಂದು ಅಭಿಪ್ರಾಯ ಪಡಬಹುದಾಗಿದೆ.

ಚಾಮನಹಳ್ಳಿಯ ಮಾಸ್ತಿಕಲ್ಲಿನ ಶಿಲ್ಪವು ಅನುಗಮನವನ್ನು ಅಭಿವ್ಯಕ್ತಿಸುತ್ತಿದ್ದರೂ ಕುಂದೂರಿನ ಮಾಸ್ತಿಕಲ್ಲಿನ ಶಿಲ್ಪದಿಂದ ಭಿನ್ನವಾಗಿದೆ. ಈ ಕಲ್ಲಿನ ಎಡಭಾಗದಲ್ಲಿ ಕಂಬವಿದೆ. ಕಂಬದಿಂದ ಹೊರಟ ಎತ್ತಿದ ತೋಳಗೈಯನ್ನೂ ತೋರಿಸಲಾಗಿದೆ. ಹೆಬ್ಬೆರಳು ಮತ್ತು ತೋರುಬೆರಳಿನ ಮಧ್ಯೆ ಲಿಂಬೆಹಣ್ಣನ್ನು ಬಿಡಿಸಲಾಗಿದೆ. ಈ ಲಿಂಬೆಹಣ್ಣು ಬೆರಳುಗಳ ಮಧ್ಯೆ ಇದ್ದಂತೆ ತೋರಿಸಿದ್ದರೂ ಅದು ಬೆರಳುಗಳಿಗೆ ಹತ್ತದಂತೆ ಅಂತರದಲ್ಲಿ ಕಂಡರಿಸಿರುವುದು ಮೋಹಕವಾಗಿದೆ. ಈ ಎತ್ತಿದ ತೋಳಿನ ಮೇಲೆ ವಿಶೇಷವೆನ್ನುವಂತೆ ಈ ಶಿಲ್ಪದಲ್ಲಿಯ ಎತ್ತಿದ ತೋಳಗೈ ಕಂಬವು ಸತಿಹೋದ ಸ್ತ್ರೀಯನ್ನು ಪ್ರತಿನಿಧಿಸುತ್ತದೆ. ಅವಳು ತನ್ನ ಗಂಡನ ಕತ್ತಿಯೊಡನೆ ಸತಿಹೋಗಿರುವುದನ್ನು ಸೂಚಿಸಲು ಶಿಲ್ಪಿ ಕಂಬದ ಬಲಭಾಗಕ್ಕೆ ತೋಳಿನ ಕೆಳಭಾಗದಲ್ಲಿ ಕತ್ತಿಯನ್ನು ಚಿತ್ರಿಸಿದ್ದಾನೆ. ಕುಂದೂರಿನ ಮಾಸ್ತಿಶಿಲ್ಪದಲ್ಲಿ ತೋಳಗೈ ಕಂಬದೊಡನೆ, ಪತ್ನಿ ಹಾಗೂ ಪತಿಯ ಕತ್ತಿ ಇರುವುದನ್ನು ಕಂಡರೆ, ಈ ಶಿಲ್ಪದಲ್ಲಿ ತೋಳಗೈ ಕಂಬದೊಡನೆ ಮಾತ್ರ ಪತಿಯ ಕತ್ತಿ ಇರುವುದನ್ನು ಕಾಣುತ್ತೇವೆ. ಕುಂದೂರಿನ ಮಾಸ್ತಿ ಶಿಲ್ಪ ಚಾಮನಹಳ್ಳಿಯ ಮಾಸ್ತಿ ಶಿಲ್ಪಕ್ಕಿಂತಲೂ ವಿವರಣಾತ್ಮಕವಾಗಿದೆ. ಚಾಮನಹಳ್ಳಿ ಶಿಲ್ಪದಲ್ಲಿಯ ಗಂಡನಿಗೆ ಬದಲು ಅವನ ಪ್ರತೀಕವಾಗಿರುವ ಕತ್ತಿಯನ್ನು ಕೆತ್ತಿರುವರೆಂದು ತಿಳಿದುಕೊಂಡರೆ ಈ ಮಾಸ್ತಿಕಲ್ಲಿನ ಅಭಿವ್ಯಕ್ತಿಯೇ ಬೇರೆಯಾಗಿ ನಿಲ್ಲುತ್ತದೆ. ಅಂದರೆ ಶಿಲ್ಪಿ ಗಂಡನ ಪ್ರತೀಕವಾಗಿ ಕತ್ತಿಯನ್ನು ಬಿಡಿಸಿದ್ದಾನೆಂದೂ, ಸಹಗಮನದಿಂದ ಸತಿಹೋದ ಅವನ ಪತ್ನಿಯ ಪ್ರತೀಕವಾಗಿ ತೋಳಗೈ ಕಂಬ ಚಿತ್ರಿಸಿದ್ದಾನೆಂದೂ ಇಟ್ಟುಕೊಂಡರೆ, ಇದು ಅನುಗಮನಕ್ಕೆ ಬದಲು ಸಹಗಮನವನ್ನು ಧ್ವನಿಸುವ ಶಿಲ್ಪವಾಗಿ ಪರಿಣಮಿಸುತ್ತದೆ.

ಹಾಸನ ಜಿಲ್ಲೆಯ ಚೌಡನಹಳ್ಳಿ ಮಾಸ್ತಿಶಿಲ್ಪವು ಮೃತನ ಪತ್ನಿ ಸತಿಹೋಗುವ ಪೂರ್ವದಲ್ಲಿ ಮೆರವಣಿಗೆ ತೆಗೆದುಕೊಂಡದ್ದನ್ನು, ಅವಳು ಸತಿಹೋದುದರಿಂದ ಗಂಡನೊಡನೆ ಕೂಡಿಕೊಂಡದ್ದನ್ನೂ ಅವರಿಬ್ಬರೂ ಕೂಡಿ ದೇವಲೋಕದ ಸಾನಿಧ್ಯ ಪಡೆದು ಕೃತಾರ್ಥರಾದುದನ್ನೂ ತಿಳಿಸುತ್ತದೆ.(ಚಿತ್ರ-60). ಸತಿಘಟನೆಯ ಇಂಥ ವಿವರಗಳನ್ನು ನೀಡುವ ಶಿಲ್ಪ ಅಪರೂಪವೆಂದೇ ಹೇಳಬೇಕು. ಸು.10 ಫೂಟು ಎತ್ತರದ ಕಲ್ಲಿನಲ್ಲಿ, ಎಡಭಾಗದಲ್ಲಿ ಕಂಬದ ರಚನೆ ಇದೆ. ಆ ಕಂಬದಿಂದ ಹೊರಟ ಎತ್ತಿದ ತೋಳಗೈಯನ್ನು ತೋರಿಸಲಾಗಿದೆ. ಈ ಕಂಬ ಮತ್ತು ಎತ್ತಿದ ಕೈ ಚಿತ್ರ ಕಲ್ಲಿನ ಅರ್ಧಕ್ಕಿಂತಲೂ ಹೆಚ್ಚಿನ ಭಾಗವನ್ನು ಆಕ್ರಮಿಸಿಕೊಂಡಿದೆ. ಈ ಕಲ್ಲಿನಲ್ಲಿ ಒಟ್ಟು ಮೂರು ಭಾಗಗಳನ್ನು ಗುರುತಿಸಲಾಗಿದೆ. ಎರಡನೆಯ ಭಾಗ ಉಳಿದೆರಡು ಭಾಗಗಳಿಗಿಂತಲೂ ದೊಡ್ಡದಾಗಿದೆ. ಮೊದಲನೆಯ ಭಾಗದಲ್ಲಿ ಸತಿ ಕುದುರೆಯ ಮೇಲೆ ಕುಳಿತುಕೊಂಡು ತನ್ನೆರಡೂ ಕೈಗಳನ್ನು ಉಲ್ಲಾಸದಿಂದ ಎತ್ತಿದ್ದಾಳೆ. ಅವಳು ಎಡಗೈಯಲ್ಲಿ ಲಿಂಬೆ ಹಣ್ಣನ್ನು ಹಿಡಿದಿದ್ದಾಳೆ. ಕುದುರೆಯು ಒಳ್ಳೆಯ ಠೀವಿಯಿಂದ ನಡೆಯುತ್ತಿದ್ದಂತೆ ಚಿತ್ರಿಸಲಾಗಿದೆ. ಇದು ಬಹುಶಃ ಮೃತನ ಪತ್ನಿ ಕುದುರೆಯ ಮೇಲೆ ಕುಳಿತುಕೊಂಡು ಸತಿ ಹೋಗುವ ಪೂರ್ವದಲ್ಲಿ ಮೆರವಣಿಗೆ ತೆಗೆದುಕೊಂಡದ್ದನ್ನು ಸೂಚಿಸುತ್ತಿರುವಂತಿದೆ. ಎರಡನೆಯ ಭಾಗದಲ್ಲಿ ಸತಿಹೋದವಳು ತನ್ನ ಗಂಡನೊಡನೆ ನಿಂತುಕೊಂಡಿದ್ದಾಳೆ. ಅವಳು ಸಂತೋಷದಿಂದ ತನ್ನ ಬಲಗೈಯನ್ನು ಗಂಡನ ಹೆಗಲಮೇಲೆ ಹಾಕಿದ್ದಾಳೆ. ಪತಿಯು ಬಲಗೈಯಲ್ಲಿ ಕಿರುಗತ್ತಿಯನ್ನು ಎತ್ತಿ ಹಿಡಿದು, ಎಡಗೈಯಿಂದ ತನ್ನ ಪತ್ನಿಯ ಹೆಗಲನ್ನು ಬಳಸಿಕೊಂಡಿದ್ದಾನೆ. ಶಿಲ್ಪಿ ಇವರಿಬ್ಬರು ನಿಂತುಕೊಂಡ ಭಂಗಿಯನ್ನು ಚಿತ್ರಿಸುವಲ್ಲಿ ಅಪೂರ್ವವಾದ ಸೊಗಸನ್ನು ಮೆರೆದಿದ್ದಾನೆ. ಗಂಡ — ಹೆಂಡಿರು ಅನ್ಯೋನ್ಯವಾಗಿ ನಗುನಗುತ್ತ ಒಬ್ಬರನ್ನೊಬ್ಬರು ಬಳಸಿಕೊಂಡು ನಿಂತಿರುವ ಭಾವ ಆಕರ್ಷಿಸುತ್ತದೆ. ಪತಿ ಹಿಡಿದ ಕಿರುಗತ್ತಿ ಅವನು ವೀರನೆಂಬುದನ್ನು ಧ್ವನಿಸುತ್ತದೆ. ಬಹುಶಃ ಹೋರಾಟವೊಂದರಲ್ಲಿ ಪತಿ ಮಡಿದಿರಬೇಕು. ಅದನ್ನು ಕೇಳಿದ ಅವನ ಪತ್ನಿ ಕುದುರೆಯ ಮೇಲೆ ಮೆರವಣಿಗೆಗೊಂಡು ಸತಿಹೋಗಿರಬೇಕು. ಹಾಗೆ ಸತಿಹೋದವಳು ವೀರನನ್ನು ಮತ್ತೆ ಪಡೆದು ಉಲ್ಲಾಸದಿಂದ ಇರುವಂತೆ ಇಲ್ಲಿ ಈ ಎರಡನೆಯ ಭಾಗದಲ್ಲಿ ಬಿಡಿಸಲು ಪ್ರಯತ್ನಿಸಿದಂತಿದೆ. ಮೂರನೆಯ ಭಾಗದಲ್ಲಿ ನಡುವೆ ಕಳಸವಿದೆ. ಕಳಸದ ಬಲಭಾಗದಲ್ಲಿ ಇಬ್ಬರು ಸ್ತ್ರೀಯರು ಕಳಸಕ್ಕೆ ಅಕ್ಷತೆ ಹಾಕುತ್ತ ನಿಂತುಕೊಂಡಿದ್ದಾರೆ. ಈ ಶಿಲ್ಪ ಪತಿ-ಪತ್ನಿಯರಿಬ್ಬರೂ ದೈವ ಸಾನಿಧ್ಯ ಪಡೆದುದನ್ನು ಸೂಚಿಸುತ್ತದೆ. ಹೀಗೆ ಸತಿಹೋಗುವ ಪೂರ್ವದ ಘಟನಾವಳಿಗಳಿಂದ ಮೊದಲ್ಗೊಂಡು ಸತಿಹೋದ ನಂತರದಲ್ಲಿ ದೊರಕಬಹುದಾದ ಸ್ವರ್ಗ ಕಲ್ಪನೆಯ ವರೆಗೂ ಇರುವ ಅಪೂರ್ವವಾದ ವಿವರಗಳನ್ನು ಈ ಮಾಸ್ತಿಕಲ್ಲಿನ ಶಿಲ್ಪ ಹಿಡಿದಿಡಲು ಪ್ರಯತ್ನಿಸಿರುವುದು ಸ್ತುತ್ಯವಾಗಿದೆ.

3. <u>ಪತಿಯ ಮರಣ ಕಾರಣವನ್ನು ಅಭಿವ್ಯಕ್ತಿಸುವ ಮಾಸ್ತಿಶಿಲ್ಪ :</u>

ಸತಿಹೋದವಳ ಪತಿ ಮರಣಹೊಂದಿದ ಕಾರಣವನ್ನು ಕೆಲವು ಶಿಲ್ಪಗಳು ಅಭಿವ್ಯಕ್ತಿಸುತ್ತವೆ. ಅವನು ಸಹಜ ಮರಣ, ದುರ್ಮರಣ ಅಥವಾ ವೀರಮರಣ —ಈ ಯಾವ ವಿಧದಲ್ಲಿ ಮರಣ ಹೊಂದಿದ್ದರೂ ಶಿಲ್ಪ ಸಾಮಾನ್ಯವಾಗಿ ಅದನ್ನು ತಿಳಿಯಪಡಿಸುತ್ತದೆ. ಇವುಗಳಲ್ಲಿ ವೀರ ಮರಣದ ಶಿಲ್ಪ ಆ ಘಟನೆಯನ್ನು ತುಂಬ ಸುಂದರವಾಗಿ ನಿರೂಪಿಸುತ್ತದೆ ಎಂದು ಹೇಳಬಹುದಾಗಿದೆ.

(ಅ) <u>ವೀರಮರಣ :</u> ಸತಿಯ ಗಂಡ ವೀರಮರಣ ಹೊಂದಿದುದನ್ನು ತಿಳಿಸುವ ಶಿಲ್ಪಗಳು ಹಲವು ವಿಧಗಳಲ್ಲಿ ದೊರಕುತ್ತವೆ. ವೀರರ ಹೋರಾಟದ ಚಿತ್ರಣಗಳುಳ್ಳ ಶಿಲ್ಪಗಳು, ಸಂಖ್ಯೆಯ ದೃಷ್ಟಿಯಿಂದ ಹೆಚ್ಚಾಗಿವೆ. ಮತ್ತು ಅವು ವಿಷಯವನ್ನು ತುಂಬ ಉನ್ನತವಾದ ರೀತಿಯಲ್ಲಿ ಅಭಿವ್ಯಕ್ತಿಸುತ್ತವೆ. ಈ ಬಗೆಯ ಶಿಲ್ಪವಲ್ಲದೆ, ಪತಿ ಆಯುಧ ಹಿಡಿದಿರುವುದು, ಸತಿಯೇ ಆಯುಧ ಹಿಡಿದಿರುವುದು ಅಥವಾ ಅವಳ ಸಂಕೇತವಾದ ಎತ್ತಿದ ತೋಳಿಗೆ ಕಂಬ ಆಯುಧ ಹೊಂದಿರುವುದು —ಇತ್ಯಾದಿ ಬಗೆಯ ಶಿಲ್ಪಗಳೆಲ್ಲ ಸತಿಯ ಗಂಡನ ವೀರಮರಣವನ್ನು ಸೂಚಿಸುತ್ತವೆ. ಈಗ, ಗಂಡ ಹೋರಾಟದಲ್ಲಿ ಮಡಿದುದನ್ನು ತಿಳಿಸುವ ಕೆಲವು ಮುಖ್ಯ ಶಿಲ್ಪಗಳನ್ನು ನೋಡಬಹುದು.

ಗುಂಡ್ಲುಪೇಟೆ ತಾಲೂಕಿನ ಕುಣಗನಹಳ್ಳಿಯಲ್ಲಿಯ ಎರಡು ಶಿಲ್ಪಗಳು ವೀರರ ಹೋರಾಟವನ್ನು ಸುಂದರವಾಗಿ ಚಿತ್ರಿಸುತ್ತವೆ. ಒಂದು ಕಲ್ಲಿನ ಕೆಳಹಂತದಲ್ಲಿ ಎರಡು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಒಂದು ಭಾಗದಲ್ಲಿ ವೀರ ಕತ್ತಿ—ಢಾಲುಗಳನ್ನು ಹಿಡಿದು ಹೋರಾಡುತ್ತಿದ್ದಾನೆ. ಇನ್ನೊಂದು ಭಾಗದಲ್ಲಿ ಇನ್ನೊಬ್ಬ ವೀರ ಬಿಲ್ಲುಬಾಣಗಳನ್ನು ಹಿಡಿದುಕೊಂಡು ಹೋರಾಡುತ್ತಿದ್ದಾನೆ. ಇವರಿಬ್ಬರನ್ನೂ ಅಪ್ಸರೆಯರು ಬೇರೆ ಬೇರೆಯಾಗಿಯೇ ಮೇಲಿನ ಹಂತದಲ್ಲಿ ಒಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ಮಡಿದ ವೀರರು ತಮ್ಮ ತಮ್ಮ ಸತಿಯರೊಂದಿಗೆ ಲಿಂಗದ ಸಾನಿಧ್ಯದಲ್ಲಿದ್ದಾರೆ. (ಚಿತ್ರ—55). ಇನ್ನೊಂದು ವೀರಗಲ್ಲಿನಲ್ಲಿ ಕುದುರೆಯ ಮೇಲೆ ಕುಳಿತ ಯೋಧನೊಬ್ಬ ತನ್ನ ಆಯುಧದಿಂದ ವೀರನನ್ನು ಇರಿಯುತ್ತಿದ್ದಾನೆ. ವೀರ ಬಿಲ್ಲಿನ ಹೆದೆ ಏರಿಸಿ ಕುದುರೆಯ ಕುತ್ತಿಗೆಗೆ ಗುರಿ ಇಟ್ಟು ಹೊಡೆಯುವ ಸಿದ್ಧತೆಯಲ್ಲಿದ್ದಾನೆ. ಇಲ್ಲಿ ಶಿಲ್ಪಿ ಹೋರಾಟದ ಉತ್ಕೃಷ್ಟ ಚಿತ್ರವೊಂದನ್ನು ಕೊಟ್ಟಿದ್ದಾನೆಂದೇ ಹೇಳಬೇಕು. ತನ್ನನ್ನು ಕುದುರೆಯ ಮೇಲೆ ಕುಳಿತು ಎದುರಿಸುತ್ತಿರುವವನನ್ನು ಕೆಳಗಿಳಿಸಲೆಂದು ವೀರ ಕುದುರೆಯನ್ನು

ಮೊದಲು ಕೊಲ್ಲಲು ಸನ್ನದ್ಧನಾಗಿದ್ದಾನೆ. ಅಷ್ಟರಲ್ಲಿಯೇ ಕುದುರೆಯ ಮೇಲಿನ ಯೋಧ ತನ್ನ ಉದ್ದನೆಯ ಆಯುಧವೊಂದರಿಂದ ವೀರನ ಎದೆಗೆ ಇರಿದೇ ಬಿಟ್ಟಿದ್ದಾನೆ. ನೆಲದ ಮೇಲೆ ನಿಂತ ವೀರನು ಕುದುರೆಯ ಮೇಲಿನ ಯೋಧನನ್ನು ಎದುರಿಸುವಲ್ಲಿ ಅಸಹಾಯಕನಾಗಿ ಸೋತು ಹೋಗಿದ್ದಾನೆ. ಹೀಗೆ ಹೋರಾಟದಲ್ಲಿ ಮಡಿದ ಈ ವೀರ ಕೊನೆಯ ಹಂತದಲ್ಲಿ ಸತಿಹೋದ ತನ್ನ ಪತ್ನಿಯೊಂದಿಗೆ ಲಿಂಗದ ಸಾನಿಧ್ಯ ಪಡೆದಿದ್ದಾನೆ. ಈ ಎಲ್ಲ ಭಾವಗಳನ್ನು ಶಿಲ್ಪಿ ಸಮರ್ಥವಾಗಿ ಇಲ್ಲಿ ಬಿಡಿಸಿದ್ದಾನೆ. (ಚಿತ್ರ-56).

ನಗರ ತಾಲೂಕಿನ ಹರಿತಾಳು ಗ್ರಾಮದ ವೀರಗಲ್ಲೊಂದು ಐದು ಭಾಗಗಳನ್ನು ಒಳಗೊಂಡಿದೆ. ಅದರಲ್ಲಿ ಕೆಳಗಿನ ಎರಡು ಭಾಗಗಳು ವೀರನ ಹೋರಾಟದ ಚಿತ್ರಣಕ್ಕೆ ಮೀಸಲಾಗಿವೆ. ಮೊದಲನೆಯ ಭಾಗದಲ್ಲಿ ನೆಲದ ಮೇಲಿನ ಹೋರಾಟವಿದ್ದರೆ, ಎರಡನೆಯ ಭಾಗದಲ್ಲಿ ಕುದುರೆಯ ಮೇಲಿನ ಹೋರಾಟವಿದೆ. ಈ ಎರಡೂ ಹೋರಾಟ ಚಿತ್ರಗಳನ್ನು ಶಿಲ್ಪಿ ತನ್ನ ಮಿತಿಯಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ. ಮೂರನೆಯ ಭಾಗದಲ್ಲಿ ಮಡಿದ ವೀರ ತನ್ನ ಪತ್ನಿಯೊಂದಿಗೆ ದೇವಲೋಕಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ವಿಮಾನದಲ್ಲಿದ್ದಾನೆ. ಕೊನೆಯ ಹಂತದಲ್ಲಿ ಅವನೂ ಪತ್ನಿಯೂ ಕೈಮುಗಿದುಕೊಂಡು ಶಿವಲೋಕದಲ್ಲಿದ್ದಾರೆ. ಇಲ್ಲಿ ಮಡಿದ ವೀರ ತಿರಿಕಗುಡನೆಂದೂ ಸತಿಹೋದ ಅವನ ಪತ್ನಿ ಬೊಂಮಯಕ್ಕನೆಂದೂ ಶಾಸನದಿಂದ ತಿಳಿದು ಬರುತ್ತದೆ.[17]

ಹೊನ್ನಾಳಿ ತಾಲೂಕಿನ ಚಿಕ್ಕ ಹಾಲಿವಾಣದಲ್ಲಿ ಹೋರಾಟದ ಶಿಲ್ಪವನ್ನೊಳಗೊಂಡ ವೀರಗಲ್ಲುಗಳು ನಾಲ್ಕು ಇವೆ. ಈ ನಾಲ್ಕು ಕಲ್ಲುಗಳ ಕೆಳಭಾಗದಲ್ಲಿ ವೀರರರು ಕುದುರೆಯ ಮೇಲೆ ಕುಳಿತು ಹೋರಾಟ ಮಾಡುವ ದೃಶ್ಯಗಳು ಅತೀ ಸುಂದರವಾಗಿವೆ. ಯುದ್ಧಭೂಮಿಯಲ್ಲಿ ಕುದುರೆಗಳು ನೆಗೆದು ನಿಂತುಕೊಂಡ, ಓಡುತ್ತಿರುವ ಭಂಗಿಗಳು ಅತ್ಯಂತ ಮನಮೋಹಕವಾಗಿವೆ. ಮೂರನೆಯ ವೀರಗಲ್ಲಿನ ಈ ಭಾಗವಂತೂ ಇನ್ನೂ ವಿಶೇಷವಾದ ವಿಷಯವನ್ನು ಒಳಗೊಂಡಿದೆ. ಈ ಭಾಗದ ಎಡಬದಿಯಲ್ಲಿ ಮೇಲೆ ಕೆಳಗೆ ಎರಡು ಚಿಕ್ಕದಾಗಿ ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಕೆಳಗಿನ ಭಾಗದಲ್ಲಿ ವೀರನು ವಾದ್ಯ ಊದುತ್ತಿರುವ ವಾದ್ಯಗಾರನೊಡನೆ ಇದ್ದಾನೆ. ಮೇಲಿನ ಭಾಗದಲ್ಲಿ ಅವನು ವಾದ್ಯ ಬಾರಿಸುವವರೊಡನೆ ಮತ್ತು ನಾಟ್ಯ ಮಾಡುವವರ ಜೊತೆಗೆ ಇದ್ದಾನೆ. ಬಹುಶಃ ಈ ಶಿಲ್ಪ ವೀರನು ಯುದ್ಧ ಭೂಮಿಗೆ ಊದುವ-ಬಾರಿಸುವ, ನಾಟ್ಯಮಾಡುವ

ನಡಗರದೊಂದಿಗೆ ಹೋದುದನ್ನು ಸೂಚಿಸುತ್ತಿರಬೇಕು. ಈ ಕಲ್ಲುಗಳ ಕೊನೆಯ ಹಂತದಲ್ಲಿ ವೀರರು ತಮ್ಮ ಸತಿಹೋದ ಪತ್ನಿಯರೊಂದಿಗಿರುವುದನ್ನು ಶಿಲ್ಪಿ ತೋರಿಸಲು ಮರೆತಿಲ್ಲ. (ಚಿತ್ರ—57, 58)

ಪತಿ ತುರುಗಾಳಗದಲ್ಲಿ ಮಡಿದುದನ್ನು ಕೊಂಡಗಳಲೆಯ ಶಿಲ್ಪವೊಂದು ತಿಳಿಸುತ್ತದೆ. ಆಕಳುಗಳನ್ನು ಕದ್ದೊಯ್ಯುತ್ತಿರುವ ದೃಶ್ಯವನ್ನು ಸುಂದರವಾಗಿ ಬಿಡಿಸಲಾಗಿದೆ. ಆಕಳುಗಳು ಹೆದರಿಕೊಂಡು ನಿಂತ ಭಂಗಿಗಳು ಆಕರ್ಷಣೀಯವಾಗಿವೆ. ದನಗಳನ್ನು ಹೊಡೆದುಕೊಂಡು ಹೋಗುವವರೊಡನೆ ಇಬ್ಬರು ವೀರರು ಹೋರಾಡುತ್ತಿದ್ದಾರೆ. ಇಬ್ಬರಲ್ಲಿ ಒಬ್ಬ ವೀರ ಕುದುರೆಯ ಮೇಲೆ ಕುಳಿತುಹೋರಾಡುವ ಪರಾಕ್ರಮ ತುಂಬ ಸುಂದರವಾಗಿದೆ. ಈ ಕಲ್ಲಿನ ಪಾಠದಿಂದ ಹೋರಾಡುವ ವೀರರು ಮಾದಿಗೌಡ ಮತ್ತು ಸೂರಪ್ಪ ಎಂಬ ತಂದೆ—ಮಕ್ಕಳೆಂದು ತಿಳಿದು ಬರುತ್ತದೆ. ಇವರಿಬ್ಬರೂ ವೀರಮರಣ ಹೊಂದಿದಾಗ ಮಾದಿಗೌಡನ ಪತ್ನಿ ತಾಯಿಗೌಡಿ ಸತಿ ಹೋಗುತ್ತಾಳೆ.[18] ಈ ಮೂವರ ಚಿತ್ರಗಳನ್ನೂ ಲಿಂಗದ ಸಾನಿಧ್ಯದಲ್ಲಿ ಕೊನೆಯ ಹಂತದಲ್ಲಿ ಕಂಡರಿಸಲಾಗಿದೆ. ಈ ಕಲ್ಲಿನ ಪಾಠ ಮತ್ತು ಶಿಲ್ಪಗಳೆರಡೂ ಕಲಾತ್ಮಕ ಅಭಿವ್ಯಕ್ತಿ ಪಡೆದುಕೊಂಡು ಘಟನಾವಳಿಗಳನ್ನು ಸಮರ್ಥವಾಗಿ ಹಿಡಿದಿಟ್ಟುಕೊಂಡಿವೆ ಎಂದು ಹೇಳಬಹುದಾಗಿದೆ.

ಬಿನಕನಕೊಂಡದ ಮಾಸ್ತಿಕಲ್ಲಿನ ಶಿಲ್ಪವೊಂದು ಕೆಳಭಾಗದಲ್ಲಿ ಹೋರಾಟದ ಚಿತ್ರವನ್ನು ಒಳಗೊಂಡಿದೆ.(ಚಿತ್ರ—53). ಈ ಕಲ್ಲಿನ ಪಾಠವು ಮಾತ್ರ "ಮುಳುಗುಂದದ ನರಲೋಕ(ವೀರ) ಜಗದಾಳ ಬೊಮ್ಮಿದೇವ ಜಂಗುಳಿ ಮುಂನೆಯರಗಂಡಗೆ (ಎ) ಕಟಿಗ ಜಟಿಯನಾಯಕನು ತನ ಹೆಂಡತಿ ಸಹಿತ ಯಿಬರುಂ ಪೊಡೆಯಂಗೆ ಕೊಟ್ಟ ಭಾಸೆಗೆ ತಲೆಗೊಟ್ಟರು" ಎಂದು ಹೇಳುತ್ತದೆ.[19] ಇಲ್ಲಿ ಒಡೆಯನಿಗೆ ಕೊಟ್ಟ ಭಾಷೆ ಎಂಥದೆಂಬುದು ಸ್ಪಷ್ಟವಾಗುವುದಿಲ್ಲ. ಪಾಠವನ್ನು ಮಾತ್ರ ಗ್ರಹಿಸಿದರೆ ಬಹುಶ: ಪತಿ—ಪತ್ನಿಯರಿಬ್ಬರೂ ಕೂಡಿಯೇ ಕೊಟ್ಟು ಭಾಷೆಗೆ ತಲೆಕೊಟ್ಟು ಸತ್ತರೆಂದು ಅರ್ಥ ಹೊರಡುತ್ತದೆ. ಆದರೆ ಇದು ಮಾಸ್ತಿಕಲ್ಲಾಗಿದೆ. ಕಟಿಗ ಜಟಿಯನಾಯಕನ ಹೊಟ್ಟೆಯ ಕೇಂದ್ರಭಾಗವನ್ನು ಎರಡೂ ಪಕ್ಕಗಳಲ್ಲಿ ಇಬ್ಬರಂತೆ ನಿಂತ ಆಯುಧಧಾರಿಗಳು ಒಮ್ಮೆಲೇ ಇರಿಯುತ್ತಿರುವಂತೆ ಈ ಕಲ್ಲಿನ ಕೆಳಭಾಗದಲ್ಲಿ ಬಿಡಿಸಲಾಗಿದೆ. ನಾಯಕನೂ ತನ್ನ ಕೈಯಲ್ಲಿ ಆಯುಧ ಹಿಡಿದುಕೊಂಡು ಹೋರಾಡುವ ಭಂಗಿಯಲ್ಲಿದ್ದಾನೆ. ಇಲ್ಲಿಯ ಪಾಠದಲ್ಲಿ ಪತ್ನಿ ತಲೆಗೊಟ್ಟುದನ್ನು ತೋರಿಸಿಲ್ಲ. ಈ ಕಾರಣದಿಂದಾಗಿ ಇದು ನಾಯಕನ ಹೋರಾಟ ಮರಣವನ್ನೇ ಸೂಚಿಸುವುದಾಗಿದೆ—ಎನಿಸುತ್ತದೆ. ಹೀಗೆ ಹೋರಾಟದಲ್ಲಿ ಮಡಿದ ಕಟಿಗಜಟಿಯನಾಯಕನಿಗಾಗಿ ಅವನ ಪತ್ನಿ

ಸತಿ ಹೋಗಿದ್ದಾಳೆ. ಅದನ್ನು ಸೂಚಿಸಲೆಂದೇ ಕಲ್ಲಿನ ಬಲಕ್ಕೆ ಕೈ ಎತ್ತಿದ್ದನ್ನು ಬಿಡಿಸಿ ತೋರಿಸಲಾಗಿದೆ. ( ಒಟ್ಟು ಈ ಕಲ್ಲಿನ ಪಾಠ ಮತ್ತು ಶಿಲ್ಪದ ಆಧಾರಗಳಿಂದ, ಕಟಿಗಚಟಯ ನಾಯಕ ಒಡೆಯನ ವೇಳೆವಾಳಿಯಾಗಿ ಮಡಿದಿದ್ದಾನೆಂದೂ, ಅವನ ಪತ್ನಿ ಅವನೊಡನೆ ಸತಿ ಹೋಗಿದ್ದಾಳೆಂದೂ ಅಭಿಪ್ರಾಯ ಪಡಬಹುದಾಗಿದೆ.

ಹೆಗ್ಗಡದೇವನಕೋಟೆ ತಾಲೂಕಿನ ಹೆಬ್ಬಲಗುಪ್ಪೆಯಲ್ಲಿರುವ ವೀರಗಲ್ಲು, ಸೊರಬ ತಾಲೂಕಿನ ಹರೂರಿನಲ್ಲಿರುವ ಮಾಸ್ತಿಕಲ್ಲು —ಈ ಎರಡೂ ಕಲ್ಲಿನ ಶಿಲ್ಪಗಳು ತುಂಬ ಮಹತ್ವದವುಗಳಾಗಿವೆ. ಹೆಬ್ಬಲಗುಪ್ಪೆಯ ವೀರಗಲ್ಲಿನ ಪಾಠದಲ್ಲಿ ಪತಿ ಮಡಿದುದನ್ನು " ಪೆರ್ವ್ವ ಯಲ ಅಳಗಿಯ ತೋಳಂ ಆತನ ಮಗಂ ನವಲಾಷಿರಾಜ ಸತ್ತುಡೆ " ಎಂದು ಹೇಳಿ ಆತನ ಪತ್ನಿ ಸತಿಹೋದಳೆಂದು ತಿಳಿಸಲಾಗಿದೆ.[20] ಇಲ್ಲಿ 'ನವಲಾಷಿರಾಜ ಸತ್ತುಡೆ' ಎಂದು ಮಾತ್ರ ಉಲ್ಲೇಖ ಬರುತ್ತದೇ ಹೊರತಾಗಿ ಮಡಿದ ಕಾರಣದ ವಿವರ ದೊರಕುವುದಿಲ್ಲ. ಆದರೆ ಈ ಕೊರತೆಯನ್ನು ಕಲ್ಲಿನ ಶಿಲ್ಪ ತುಂಬುತ್ತದೆ.(ಚಿತ್ರ—52). ಕಲ್ಲಿನ ಮೊದಲನೆಯ ಹಂತದಲ್ಲಿ ನವಲಾಷಿರಾಜ ಬಲಗೈಯಲ್ಲಿ ಕಿರುಗತ್ತಿಯನ್ನು ಹಿಡಿದುಕೊಂಡು ಇಬ್ಬರು ಯೋಧರನ್ನು ಎದುರಿಸಿ ಹೋರಾಡುತ್ತಿದ್ದಾನೆ. ಅವನ ಎದೆಯ ಪಕ್ಕದ ಭಾಗಕ್ಕೆ ಆ ಇಬ್ಬರು ಯೋಧರು ಉದ್ದನೆಯ ಆಯುಧದಿಂದ ಇರಿಯುತ್ತಿದ್ದಾರೆ. ಅದನ್ನು ನವಲಾಷಿರಾಜ ಗಮನಕ್ಕೆ ತಗೆದುಕೊಳ್ಳದೆ ಅವರನ್ನು ಇರಿಯಲು ಮುನ್ನುಗ್ಗುತ್ತಿದ್ದಾನೆ. ಎರಡನೆಯ ಹಂತದಲ್ಲಿ ದೇವತಾಸ್ತ್ರೀಯರು ಯುದ್ಧದಲ್ಲಿ ಮಡಿದ ಅವನನ್ನು ವಾದ್ಯಗಳ ಸಮೇತ ಕುಣಿಯುತ್ತ ಒಳ್ಳೆಯ ಉತ್ಸಾಹದಿಂದ ಒಯ್ಯುತ್ತಿದ್ದಾರೆ. ಈ ಶಿಲ್ಪದಿಂದ 'ನವಲಾಷಿರಾಜ' ಸತ್ತುಡೆ " ಎಂಬ ಪಾಠಕ್ಕೆ ಹೆಚ್ಚಿನ ವಿವರಣೆ ದೊರಕಿದಂತಾಗುತ್ತದೆ. ನವಲಾಷಿರಾಜ ಹೋರಾಟದಲ್ಲಿ ತೊಡಗಿದ್ದಾಗ ಅವನನ್ನು ಇಬ್ಬರು ಯೋಧರು ಕೂಡಿ ಇರಿದು ಕೊಂದಿದ್ದಾರೆಂದು ಅರ್ಥೈಯಿಸಿಕೊಳ್ಳಬಹುದಾಗಿದೆ.

ಹರೂರ ಶಾಸನವು " ಹರಿಗಾರ ಅಂಮುಗುಡನ ಬಯಿರವಗುಡಿ ತಂಮ ಸ್ತ್ರೀಯರು ಸಹಸಂಗತಿಯಾಡಿದರು " ಎಂದು ಹೇಳುತ್ತದೆ.[21] ಇಲ್ಲಿ ಅಂಮುಗುಡನ ಪತ್ನಿ ಬಯಿರವಗುಡಿಯ ಸಹಗಮನದ ಉಲ್ಲೇಖವಿದೆ. ಆದರೆ ಪತಿಯ ಮರಣದ ಸ್ಪಷ್ಟ ಉಲ್ಲೇಖವಿಲ್ಲ. 'ಸಹಸಂಗತಿಯಾಡಿದರು' ಎಂಬಲ್ಲಿಯೇ ಪತಿ—ಸತಿ ಕೂಡಿ ಹೋದರು ಎಂಬ ಸೂಚನೆಯನ್ನು ಕಾಣುತ್ತೇವೆ. ಆದರೆ ಈ ಕಲ್ಲಿನ ಶಿಲ್ಪದಲ್ಲಿ ಪತಿಯ ಮರಣದ ಕಾರಣ ಮತ್ತು ಮರಣದ ರೀತಿಗಳು ಸ್ಪಷ್ಟವಾಗಿ ಚಿತ್ರಣಗೊಂಡಿವೆ.(ಚಿತ್ರ—8). ಈ ಕಲ್ಲಿನಲ್ಲಿ ಒಟ್ಟು ಮೂರು ಭಾಗಗಳಿವೆ. ಮೊದಲನೆಯ-

ಭಾಗದಲ್ಲಿ ಹೋರಾಟದ ಚಿತ್ರಣವಿದೆ. ವೀರ ಬಿಲ್ಲಿಗೆ ಬಾಣಹೂಡಿ ಎದುರಾಳಿಗಳೊಡನೆ ಹೋರಾಡುವ ಭಂಗಿ ಸುಂದರವಾಗಿದೆ. ಎರಡನೆಯ ಭಾಗದಲ್ಲಿಯೂ ಬಿಲ್ಲುಬಾಣಗಳ ಸಮೇತ ಹೋರಾಟ ಮುಂದುವರೆದಿದೆ. ಇಲ್ಲಿ ಒಬ್ಬ ಯೋಧನು ವೀರನನ್ನು ಕತ್ತಿಯಿಂದ ಇರಿಯುತ್ತಿದ್ದಾನೆ. ಮೂರನೆಯ ಭಾಗದಲ್ಲಿ ಕಂಬವಿದ್ದು, ಅದರಿಂದ ಎತ್ತಿದ ತೋಳಗೈಯನ್ನು ಬಿಡಿಸಿತೋರಿಸಲಾಗಿದೆ. ತೋಳಿನ ಮೇಲ್ಭಾಗದಲ್ಲಿ ಪತಿ-ಪತ್ನಿಯರು ಕೈಮುಗಿದು ಕುಳಿತುಕೊಂಡಿದ್ದಾರೆ. ಈ ಕಲ್ಲು ಶಿಲ್ಪದ ದೃಷ್ಟಿಯಿಂದ ಮಾಸ್ತಿಕಲ್ಲೂ, ವೀರಗಲ್ಲೂ ಆಗಿರುವುದು ವಿಶೇಷವಾಗಿದೆ. ಪಾಠದಲ್ಲಿ ಪತಿಯ ನಿಧನದ ಕಾರಣ ಸ್ಪಷ್ಟವಿಲ್ಲದಿದ್ದರೂ ಶಿಲ್ಪದಲ್ಲಿ ಮಾತ್ರ ಅವನು ವೀರಮರಣ ಹೊಂದಿದ್ದನ್ನು ಎರಡು ಭಾಗಗಳಲ್ಲಿ ಚಿತ್ರಿಸಿದ್ದು ಇನ್ನೂ ವಿಶೇಷವಾಗಿದೆ. ಒಟ್ಟಿನಲ್ಲಿ ಸತಿ ಹೋದ ಬಯಿರವಗುಡಿಯ ಪತಿಯನ್ನು ಹೋರಾಟದಲ್ಲಿ ಕತ್ತಿಯಿಂದ ಇರಿದು ಕೊಂದದ್ದನ್ನು ಶಿಲ್ಪ ಧ್ವನಿಸುತ್ತದೆ ಎಂದು ಹೇಳಬಹುದಾಗಿದೆ.

ಕಾನಮಡಗು(ಕೂಡ್ಲಿಗೆ), ಯರಬಳ್ಳಿ(ಹಿರಿಯೂರು), ಮಾದಾಪುರ(ಚಾಮರಾಜನಗರ), ಷಂಡದ (ಶಿಕಾರಿಪುರ) ಕುಂದೂರ (ಶಿಗ್ಗಾಂವ), ಕಿತ್ತೂರು ಮತ್ತು ಶಿವಮೊಗ್ಗಗಳಲ್ಲಿಯ ವಸ್ತುಸಂಗ್ರಹಾಲಯಗಳು, ಬೆಂಗಳೂರಿನ ಬೇಲೇಶ್ವರ ದೇವಸ್ಥಾನ, ಉಪ್ಪಿನಗೋಳಿಕೆ (ಹೊನ್ನಾವರ), ಎರೆಯೂರು (ಗುಂಡ್ಲುಪೇಟೆ), ಕೆಳದಿ(ಸಾಗರ), ನಿಡಗುಂದಿ(ಶಿಗ್ಗಾಂವ) —ಈ ಮೊದಲಾದೆಡೆಗಳಲ್ಲಿ ವೀರ ಆಯುಧಹೊಂದಿರುವ ಶಿಲ್ಪಗಳಿವೆ. ವೀರನ ಜೊತೆಗೆ ಸತಿ ಅಥವಾ ಅವಳ ಸಾಂಕೇತಿಕತೆಯಾದ ಎತ್ತಿದ ತೋಳಗೈ ಕಂಬವನ್ನು ಕಂಡರಿಸಲಾಗಿದೆ. ಕಾನಮಡಗುವಿನಲ್ಲಿಯ ಕಲ್ಲಿನಲ್ಲಿ ಸತಿ ಬಲಗೈ ಎತ್ತಿ ನಿಂತಿದ್ದಾಳೆ. ಅವಳ ಮೇಲ್ಭಾಗದ ಬಲಕ್ಕೆ ವೀರ ಕೈಮುಗಿದು ಚಿಕ್ಕದಾಗಿ ಕುಳಿತಿದ್ದಾನೆ. ಅವನ ಪಕ್ಕದಲ್ಲಿ ಬಿಲ್ಲು ಮತ್ತು ಎರಡು ಬಾಣಗಳನ್ನು ಚಿತ್ರಿಸಲಾಗಿದೆ. (ಚಿತ್ರ—77). ಯರಬಳ್ಳಿಯ ಶಿಲ್ಪದಲ್ಲಿ ಪತಿ ಬಿಲ್ಲುಬಾಣ ಹಿಡಿದುಕೊಂಡು ಪತ್ನಿಯೊಂದಿಗೆ ನಿಂತಿದ್ದಾನೆ.(ಚಿತ್ರ—78). ಮಾದಾಪುರ ಶಿಲ್ಪದಲ್ಲಿ ಪತಿ ತನ್ನ ಪತ್ನಿಯರೊಂದಿಗೆ ನಿಂತಿದ್ದಾನೆ. ಅವನ ಮೇಲ್ಭಾಗದಲ್ಲಿ ಕತ್ತಿಯನ್ನು ತೂಗುಬಿಡಲಾಗಿದೆ.(ಚಿತ್ರ—79). ಸಂಡದ ಗ್ರಾಮದ ಒಂದು ಮಾಸ್ತಿಕಲ್ಲಿನಲ್ಲಿ ಸತಿವಿಗ್ರಹದ ಬಲಭಾಗದಲ್ಲಿ ಬಿಲ್ಲು ಮತ್ತು ಮೂರು ಬಾಣಗಳನ್ನು ತೋರಿಸಲಾಗಿದೆ. ಅವಳ ಭುಜದ ಮೇಲ್ಭಾಗದಲ್ಲಿ ಪತಿ ಚಿಕ್ಕದಾಗಿ ಕುಳಿತಿದ್ದಾನೆ. ಆತನ ಪಕ್ಕದಲ್ಲಿ ಕತ್ತಿಯೊಂದನ್ನು ತೋರಿಸಲಾಗಿದೆ.(ಚಿತ್ರ—68). ಇನ್ನೊಂದು ಮಾಸ್ತಿಶಿಲ್ಪವು ಹೆಚ್ಚಾಗಿ ಇದನ್ನೇ

ಹೋಲುವುದಾಗಿದ್ದು ಇಲ್ಲಿಯೇ ಇದೆ. (ಚಿತ್ರ–80). ನಿಡಗುಂದಿ ಮಾಸ್ತಿಶಿಲ್ಪದಲ್ಲಿ ವೀರ ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ಬಿಲ್ಲು ಹಿಡಿದುಕೊಂಡು ನಿಂತಿದ್ದಾನೆ. ಉಪ್ಪಿನಗೋಳಿಯ ಮಾಸ್ತಿಗುಡಿಯಲ್ಲಿಯ ವೀರ ಕೈಯಲ್ಲಿ ಆಯುಧ ಹಿಡಿದುಕೊಂಡು ಪತ್ನಿಯೊಂದಿಗೆ ನಿಂತುಕೊಂಡಿದ್ದಾನೆ. ಅವನ ನಡುವಿನಲ್ಲಿ ಕಿರುಗತ್ತಿಯೊಂದು ತೂಗುತ್ತಿದೆ. (ಚಿತ್ರ–81). ಕೆಳದಿಯ ಮಾಸ್ತಿಕಲ್ಲಿನ ಮೇಲ್ಭಾಗದಲ್ಲಿ ಪತಿ–ಪತ್ನಿಯರು ಕುಳಿತಿದ್ದು ಅವರ ಮಧ್ಯದಲ್ಲಿ ಕತ್ತಿಯನ್ನು ತೋರಿಸಲಾಗಿದೆ. ಎರೆಯೂರಿನ ಮಾಸ್ತಿಶಿಲ್ಪದಲ್ಲಿ ಪತಿ ಆಯುಧದೊಂದಿಗೆ ಇದ್ದಾನೆ. —ಈ ಎಲ್ಲ ಶಿಲ್ಪಗಳು ಮಹಾಸತಿಯರ ಗಂಡಂದಿರು ಹೋರಾಟದಲ್ಲಿ ಮರಣ ಹೊಂದಿದ್ದನ್ನು ಸ್ಪಷ್ಟಗೊಳಿಸುತ್ತವೆ. ಅಷ್ಟೇ ಅಲ್ಲ, ಮಾದಾಪುರದಂಥ ಶಿಲ್ಪಗಳು ಇನ್ನೂ ಹೆಚ್ಚಿನ ವಿವರಗಳನ್ನೂ ಒದಗಿಸುತ್ತವೆ. ಈ ಕಲ್ಲಿನ ಪಾಠದಲ್ಲಿ ''ಜಯಸಂವತ್ಸರದಲು ಮಾದಗೌಡ್ನ ಮಗ ಗುಳಿಗನ ಮದವಳಿಗೆರು ಸತಿಯಾದರು'' ಎಂದು ಹೇಳಲಾಗಿದೆ.[22] ಶಿಲ್ಪದಲ್ಲಿ ಗುಳಿಗನ ಆರು ಜನ ಪತ್ನಿಯರು ಸತಿಯಾದುದನ್ನು ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ಗುಳಿಗನೊಡನೆ ಆರು ಜನ ಪತ್ನಿಯರು ನಿಂತುಕೊಂಡಿದ್ದಾರೆ. ಇಲ್ಲಿ ನಾಲ್ವರನ್ನು ಅತೀ ಚಿಕ್ಕದಾಗಿ ಕಂಡರಿಸಲಾಗಿದೆ. ಮೇಲ್ಭಾಗದಲ್ಲಿ ವೀರನೊಡನೆ ನಾಲ್ಕು ಜನ ಪತ್ನಿಯರು ನಿಂತುಕೊಂಡಿದ್ದಾರೆ. ಇಲ್ಲಿ ಇಬ್ಬರನ್ನು ಅತೀ ಚಿಕ್ಕದಾಗಿ ತೋರಿಸಲಾಗಿದೆ.

ಶಿಗ್ಗಾಂವ ತಾಲೂಕಿನ ಕುಂದೂರಿನಲ್ಲಿರುವ ಎರಡು ಮಾಸ್ತಿಶಿಲ್ಪಗಳು ವೀರನ ಚಿತ್ರಗಳನ್ನು ಹೊಂದಿಲ್ಲದಿರುವುದು ಗಮನಿಸಬಹುದಾಗಿದೆ. ಅವು ವೀರನ ಕತ್ತಿಗಳನ್ನು ಮಾತ್ರ ಹೊಂದಿವೆ. ಒಂದು ಸ್ಮಾರಕ ಶಿಲೆಯಲ್ಲಿ ಎತ್ತಿದ ಬಲಗೈ ಕಂಬದ ಚಿತ್ರವಿದ್ದು, ಅದರ ಬಲಭಾಗದಲ್ಲಿ ಕೈಮುಗಿದ ಸತಿ ಕುಳಿತಿದ್ದು ಆಕೆಯ ಪಕ್ಕದಲ್ಲಿ ಕತ್ತಿಯನ್ನು ಕಂಡರಿಸಲಾಗಿದೆ. ಇನ್ನೊಂದು ಮಾಸ್ತಿಕಲ್ಲಿನಲ್ಲಿಯೂ ಎತ್ತಿದ ತೋಳುಗೈ ಕಂಬವಿದ್ದು ಸತಿಯು ಅದರ ಬಲಭಾಗದಲ್ಲಿ ಕುಳಿತಿದ್ದಾಳೆ. ಅವಳ ಎಡ–ಬಲಗಳಲ್ಲಿ ಕತ್ತಿಗಳೆರಡನ್ನು ಚಿತ್ರಿಸಲಾಗಿದೆ. ಮುದ್ದೂರ ತಾಲೂಕಿನ ಚಾಮನಹಳ್ಳಿಯ ಮಾಸ್ತಿಶಿಲ್ಪದಲ್ಲಿ ಎತ್ತಿದ ತೋಳಗೈ ಕಂಬವಿದ್ದು, ತೋಳಿನ ಕೆಳಭಾಗದಲ್ಲಿ ಕತ್ತಿಯನ್ನು ತೋರಿಸಲಾಗಿದೆ. ಈ ಬಗೆಯ ಶಿಲ್ಪಗಳೂ ಸತಿಯ ಗಂಡನ ವೀರಮರಣವನ್ನು ಸೂಚಿಸುತ್ತವೆ ಎಂದು ಬೇರೆ ಹೇಳಬೇಕಾಗಿಲ್ಲ.

(ಆ) <u>ಬೇಟೆ ಮರಣ :</u> ಚಿತ್ರದುರ್ಗ ಜಿಲ್ಲೆಯ ಸಿರಿಗೆರೆ ಹೋಬಳಿಯ ಗಜಗಟ್ಟಿಗ್ರಾಮದ ಹೊಂಡದ ಬಳಿಯಲ್ಲಿ ಮಾಸ್ತಿಗುಡಿಯೊಂದಿದೆ. ಅಲ್ಲಿ 'ಕೆಂಚವ್ವ', 'ಕಾಮವ್ವ' ಮಹಾಸತಿಯರ ಕಲ್ಲೊಂದಿದೆ. ಈ ಕಲ್ಲಿನ ಮೇಲ್ಭಾಗದಲ್ಲಿ ಇಬ್ಬರು ವೀರರು ಬಿಲ್ಲು ಹಿಡಿದುಕೊಂಡು

ಹುಲಿಯೊಡನೆ ಹೋರಾಡುತ್ತಿದ್ದಾರೆ. ಈ ಸ್ಮಾರಕ ಶಿಲ್ಪವನ್ನು ಗಮನಿಸಿದರೆ, ಇಬ್ಬರು ವೀರರು ಹುಲಿಯೊಂದಿಗೆ ಹೋರಾಡಿ ಮಡಿದಿರಬೇಕೆಂದೂ, ಅವರ ಸತಿಯರಿಬ್ಬರು ಸತಿಹೋಗಿರಬೇಕೆಂದೂ ಹೇಳಬಹುದಾಗಿದೆ. ಅಲ್ಲದೆ ಅಲ್ಲಿಯ ಜನಪದ ಕಥೆಯೂ ಈ ಮಾತನ್ನು ಸಮರ್ಥಿಸುತ್ತದೆ. ಗಾದ್ರಿಪಾಲ್ನಾಯಕ ಮತ್ತು ಚಿನ್ನಪಾಲ್ನಾಯಕ ಇವರಿಬ್ಬರು ಅಣ್ಣ-ತಮ್ಮಂದಿರರು ಹುಲಿಯೊಡನೆ ಹೋರಾಡಿ ಮಡಿಯಲಾಗಿ ಅವರ ಪತ್ನಿಯರು ಇದನ್ನು ಕೇಳಿ ಅನುಗಮನ ಮೂಲಕ ಸತಿಹೋದರೆಂದು ಆ ಜನಪದ ಕಥೆ ಹೇಳುತ್ತದೆ.[23] ಗುಂಡ್ಲುಪೇಟೆಯ ಎರೆಯೂರಿನ ಶಿಲ್ಪವೊಂದರಲ್ಲಿ ಹುಲಿಯು ಪುರುಷನೊಬ್ಬನ ಮೇಲೆ ಎರಗಿದೆ. ಬಹುಶಃ ಈ ಶಿಲ್ಪವು ಹುಲಿಯ ಆಕ್ರಮಣಕ್ಕೆ ಬಲಿಯಾದ ವ್ಯಕ್ತಿಯೊಬ್ಬನನ್ನು ಚಿತ್ರಿಸುವಂತಿದೆ. ಹೀಗೆ ಮರಣಗೊಂಡವನೊಡನೆ ಅವನ ಪತ್ನಿಯರಿಬ್ಬರು ಸತಿಹೋಗಿದ್ದಾರೆ. ತೀರ್ಥಹಳ್ಳಿಯ ಕವಲೆದುರ್ಗದ ಮಾಸ್ತಿ ಶಿಲ್ಪವೊಂದರಲ್ಲಿ ತೋಳಗೈ ಕೆಳಗೆ ವೀರಾವೇಶದಿಂದ ನಿಂತ ಸಿಂಹವೊಂದಿದೆ. (ಚಿತ್ರ-63). ಈ ಶಿಲ್ಪವನ್ನು ಗಮನಿಸಿದರೆ, ಬಹುಶಃ ಸತಿಹೋದವಳ ಗಂಡ ಸಿಂಹದ ಆಕ್ರಮಣಕ್ಕೆ ತುತ್ತಾಗಿ ಮರಣಹೊಂದಿರಬೇಕೆನಿಸುತ್ತದೆ. ಇದೇ ರೀತಿ ಸೊರಬ ತಾಲೂಕಿನ ಕುಂಟಗಳಲೆಯ ಮಾಸ್ತಿಶಿಲ್ಪವೊಂದರಲ್ಲಿ ಪ್ರಾಣಿಗೆ ಬಲಿಯಾಗುತ್ತಿರುವ ಪತಿಯ ಚಿತ್ರವನ್ನು ತೋರಿಸಲಾಗಿದೆ. ಹೀಗೆ ಮಹಾಸತಿಯರ ಪತಿಯಂದಿರರು ಕಾಡುಪ್ರಾಣಿಗಳೊಡನೆ ಹೋರಾಡಿಯೋ ಅಥವಾ ಅವುಗಳ ಹಿಡಿತಕ್ಕೆ ಬಲಿಯಾಗಿಯೋ ಮರಣಗೊಂಡುದ್ದನ್ನು ಕಾಣಬಹುದಾಗಿದೆ.

(ಇ) <u>ದುರ್ಮರಣ :</u> ಕುಂಬತಿಗ್ರಾಮ(ಸೊರಬ), ಕುಬಟೂರು(ಸೊರಬ), ಯರಬಳ್ಳಿ(ಹಿರಿಯೂರು ಈ ಗ್ರಾಮದ ಸ್ಮಾರಕಶಿಲ್ಪಗಳಲ್ಲಿ ಹಾವಿನ ಚಿತ್ರವಿರುವುದು ವಿಶೇಷವಾಗಿದೆ. ಬಹುಶಃ ಗಂಡನು ಹಾವು ಕಡಿದು ಮಡಿದುದ್ದನ್ನೂ, ಆಗ ಅವನ ಪತ್ನಿ ಸತಿಹೋದುದ್ದನ್ನೂ ಸೂಚಿಸಲು ಇಂಥ ವಿಶೇಷ ನಿರೂಪಣೆಯನ್ನು ಶಿಲ್ಪಿ ಶಿಲ್ಪದಲ್ಲಿ ತಂದಿರಬೇಕೆನಿಸುತ್ತದೆ. ದುನೂರಿನ ಶಾಸನವೊಂದರಲ್ಲಿ ಸತಿಹೋದ ಮದ್ದನಕೇತಿಯ ಪತಿ ದೇವನಾಯಕನು ಹಾವು ಕಡಿದು ಸತ್ತುದ್ದನ್ನು ತಿಳಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[24] ಕುಬಟೂರಿನ ಸ್ಮಾರಕ ಶಿಲ್ಪದಲ್ಲಿ ಎಡಭಾಗದಲ್ಲಿ ಎತ್ತಿದ ತೋಳಗೈ ಚಿತ್ರವಿದೆ. ತೋಳಿನ ಮೇಲ್ಭಾಗದಲ್ಲಿ ಪತ್ನಿ ಕುಳಿತಿದ್ದಾಳೆ. ಎತ್ತಿದ ಅಂಗೈ ಪಕ್ಕದಲ್ಲಿ ಹಾವಿನ ಚಿತ್ರವನ್ನು ಕಂಡರಿಸಲಾಗಿದೆ. ಕುಂಬತಿಗ್ರಾಮದ ಶಿಲ್ಪದಲ್ಲಿ ಪತಿ ಬಲಭಾಗದಲ್ಲಿ ನಿಂತುಕೊಂಡಿದ್ದಾನೆ. ಅವನ ಎಡಗೈಯಲ್ಲಿ ಕತ್ತಿ ಹಾಗೂ ನಡುವಿನಲ್ಲಿ ಕಿರುಗತ್ತಿಗಳಿವೆ. ಅಲ್ಲದೆ, ಅವನು ಬಲಗೈಯನ್ನು ಎತ್ತಿ ಕತ್ತಿ ತೂರಾಡುವಂತೆ ಹಿಡಿದಿದ್ದಾನೆ. ಅವನ ಕೊರಳಲ್ಲಿಯ ಆಭರಣಗಳನ್ನು ಮತ್ತು ಹಣೆಯ ಮೇಲಿನ ನಾಮಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಈತನ

ಎಡಭಾಗದಲ್ಲಿ ಬಲಗೈ ಎತ್ತಿಕೊಂಡು ಸತಿ ನಿಂತಿದ್ದಾಳೆ. ಅವಳ ತಲೆಯ ಹಿಂದೆ ಸುಂದರವಾಗಿ ಪ್ರಭಾವಳಿಯನ್ನು ತೋರಿಸಲಾಗಿದೆ. ಅವಳು ಎಡಗೈಯಲ್ಲಿ ಗಿಂಡಿಯನ್ನು ಹಿಡಿದುಕೊಂಡು ನಿಂತಿದ್ದಾಳೆ. ಗಂಡನ ಸಮೀಪದಲ್ಲಿ ಹಾವಿನ ಚಿತ್ರವನ್ನು ಬಿಡಿಸಿರುವುದು ಇಲ್ಲಿಯ ವಿಶೇಷವಾಗಿದೆ. (ಚಿತ್ರ-82). ಇದೇ ರೀತಿ ಯರಬಳ್ಳಿಯ ಶಿಲ್ಪದಲ್ಲಿಯೂ ಪತಿಯ ಪಕ್ಕದಲ್ಲಿ ಹಾವು ಇರುವುದನ್ನು ಕಾಣಬಹುದಾಗಿದೆ. ಈತನು ಮರಣಹೊಂದಲಾಗಿ ಈತನ ಇಬ್ಬರು ಪತ್ನಿಯರು ಸತಿಹೋದಂತೆ ಶಿಲ್ಪದಲ್ಲಿ ತೋರಿಸಲಾಗಿದೆ. (ಚಿತ್ರ-83). ಹೀಗೆ ಹಾವಿನ ಚಿತ್ರವನ್ನೊಳಗೊಂಡ ಈ ಸ್ಮಾರಕ ಕಲ್ಲುಗಳು ಹಾವು ಕಡಿದು ಮರಣ ಹೊಂದಿದ ಗಂಡನನ್ನು ತಿಳಿಸುವವುಗಳಾಗಿವೆ, ಎಂದು ಅಭಿಪ್ರಾಯ ಪಡಬಹುದಾಗಿದೆ. ಆದರೆ ಇಲ್ಲಿಯ ಪುರುಷವಿಗ್ರಹಗಳು ವೀರರಂತೆ ಆಯುಧಗಳನ್ನು ಹಿಡಿದಿರುವುದು ಕುತೂಹಲಕರವಾಗಿದೆ.

(ಈ) ಜೈನಸಮಾಧಿ ಮರಣ : ನಿಷಿಧಿಗಲ್ಲುಗಳ ಶಿಲ್ಪಗಳಲ್ಲಿ ಮೃತನ ಪತ್ನಿಯರು ಸಹಗಮನಗೊಂಡ ವಿವರಗಳು ಕಾಣಸಿಕೊಳ್ಳುತ್ತವೆ. ಇಂಥ ಶಿಲ್ಪಗಳು ಗಂಡನ ಸನ್ಯಸನ ಮರಣವನ್ನು ತಿಳಿಸುವವುಗಳಾಗಿರುತ್ತವೆ. ಪತಿ ಸನ್ಯಾಸನ ಮರಣ ಹೊಂದಿದ್ದರೂ ಪತ್ನಿಯರು ಮಾತ್ರ ಜೈನ ಧರ್ಮಕ್ಕೆ ವಿರುದ್ಧವಾದ ಸತಿ ಮರಣವನ್ನು ಪಡೆದುಕೊಳ್ಳುತ್ತಿದ್ದರೆಂಬುದು ಇವುಗಳಿಂದ ತಿಳಿದು ಬರುತ್ತದೆ. ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯಲ್ಲಿರುವ ಬಾಳೂರಿನ ನಿಷಿಧಿಗಲ್ಲು ಹಾಗೂ ಸೊರಬ ತಾಲೂಕಿನ ಹಿರೇಆವಲಿಗ್ರಾಮದಲ್ಲಿರುವ ಎರಡು ನಿಷಿಧಿಗಲ್ಲುಗಳು ಪತಿ ಸನ್ಯಾಸನ ಮರಣ ಹೊಂದಿದ್ದನ್ನು ಚಿತ್ರಿಸುತ್ತವೆ. ಬಾಳೂರಿನ ಶಿಲ್ಪದ ವಿವರ ಹೀಗಿದೆ: ಕಲ್ಲಿನಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಉಪದೇಶ ಕೊಡುತ್ತಿರುವ ಮುನಿ ಇದ್ದಾನೆ. ಅವನ ಮುಂದೆ ಪುಸ್ತಕ ಹೊತ್ತ ಪೀಠವಿದೆ. ಅವನ ಮುಂದೆ ಪತಿ ಕೈಮುಗಿದು ಕುಳಿತಿದ್ದಾನೆ. ಅವನ ಬಲಭಾಗದಲ್ಲಿ ತೀರ್ಥಂಕರರು ನಿಂತಿರುವ ಚಿತ್ರವಿದೆ. ಪತಿಯ ಪಕ್ಕದಲ್ಲಿ ಸತಿ ಕೈಮುಗಿದುಕೊಂಡು ನಿಂತಿದ್ದಾಳೆ. (ಚಿತ್ರ-59) ಈ ಶಿಲ್ಪದಿಂದ ವ್ಯಕ್ತಿಯೊರ್ವನು ನಿಷಿಧಿ ಮರಣಹೊಂದಿರುವುದು ಸ್ಪಷ್ಟಗೊಳ್ಳುತ್ತದೆ. ಹಾಗೂ ಬಲಗೈ ಎತ್ತಿ ನಿಂತ ಅವನ ಪತ್ನಿ ಸತಿ ಹೋದವಳೆಂದೂ ತಿಳಿದು ಬರುತ್ತದೆ. ಈ ಕಲ್ಲ ಮೇಲಿನ ಪಾಠದಲ್ಲಿ ನಿಷಿಧಿ ಮರಣಗೊಂಡವನು ಮುದುಡಗೌಡನೆಂದೂ, ಮಾಸ್ತಿಯಾದವಳು ಅವನ ಪತ್ನಿ ಎಂದೂ ಹೇಳಲಾಗಿದೆ.[25]

ಹಿರೇಆವಲಿಗ್ರಾಮದಲ್ಲಿರುವ ನಿಷಿಧಿಗಲ್ಲಿನ ಮೇಲ್ಭಾಗದಲ್ಲಿ ಮಾತ್ರ ಶಿಲ್ಪವನ್ನು ಬಿಡಿಸಲಾಗಿರುವುದು ವಿಶೇಷವಾಗಿದೆ.(ಚಿತ್ರ-67). ಕೆಳಗಿನ ಭಾಗವನ್ನು ಸಂಪೂರ್ಣವಾಗಿ ಪಾಠಕ್ಕಾಗಿ ಬಳಸಿಕೊಳ್ಳಲಾಗಿದೆ. ಈ ಸ್ಮಾರಕ ಶಿಲೆಯ ಎಡಭಾಗದಲ್ಲಿ ಉಪದೇಶಿಸುವ ಮುನಿ ಕುಳಿತುಕೊಂಡಿ

ದ್ದಾನೆ. ಆತನ ಮುಂದೆ ಪ್ರಶಾಂತಭಾವದ ತೀರ್ಥಂಕರರ ವಿಗ್ರಹವಿದೆ. ಅವರ ಪಕ್ಕಕ್ಕೆ ಅವರೆಡೆಗೆ ಕೈಮುಗಿದುಕೊಂಡು ಪತಿ-ಪತ್ನಿಯರು ಕುಳಿತಿದ್ದಾರೆ. ಪತಿ ಶಿಲ್ಪವನ್ನು ದೊಡ್ಡದಾಗಿಯೂ ಪತ್ನಿಯ ಶಿಲ್ಪವನ್ನು ಚಿಕ್ಕದಾಗಿಯೂ ಬಿಡಿಸಲಾಗಿದೆ. ಮೇಲೆ ಸೂರ್ಯಚಂದ್ರರನ್ನು ಕಂಡರಿಸಲಾಗಿದೆ. ಈ ಶಿಲ್ಪವು ತೀರ್ಥಂಕರರ ಸಾನಿಧ್ಯವನ್ನು ಮತ್ತು ಮುನಿಯಿಂದ ಉಪದೇಶ ಪಡೆಯುವ ಸ್ಥಿತಿಯನ್ನು ಒಂದೇ ಭಾಗದಲ್ಲಿ ಒಟ್ಟಿಗೆ ಚಿತ್ರಿಸಿರುವುದು ಬಹುಮುಖ್ಯವೆನಿಸುತ್ತದೆ. ಈ ಸ್ಮಾರಕದ ಪಾಠದಲ್ಲಿ "ಬೇಚಿಗೌಂಡನು ವೀರಬುಕ್ಕರಾಯನ ರಾಜ್ಯಾಭ್ಯುದಯದಂದು ಪಂಚನಮಸ್ಕಾರದಿಂ ಮುಡಿಪಿ ಸ್ವರ್ಗಸ್ಥನಾದನು ಆತನ ಕಿರಿಯವಳವಳಿಗೆ ಆ ಮುದ್ದಿಗೌಂಡಿ ಸಹಗಮನದಿಂದ ಇಬ್ಬರು ಮುಕ್ತಿಪ್ರಾಪ್ತರಾದರು" ಎಂದು ಹೇಳಲಾಗಿದೆ.[26] ಗಂಡ ಬೇಚಿಗೌಂಡ ಸನ್ಯಾಸನ ಮರಣ ಹೊಂದಿದರೆ, ಪತ್ನಿ ಮುದ್ದಿಗೌಂಡಿ ಸಹಗಮನ ಮೂಲಕ ಮರಣ ಹೊಂದಿರುವುದು ಈ ಪಾಠದಲ್ಲಿ ಸ್ಪಷ್ಟವಿದೆ. ಇಲ್ಲಿಯ ಇನ್ನೊಂದು ನಿಷಿಧಿಗಲ್ಲಿನ ಶಿಲ್ಪದ ವಿವರ ಹೀಗಿದೆ: ಈ ಸ್ಮಾರಕ ಶಿಲೆಯಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಉಪದೇಶಿಸುವ ಮುನಿ ಹಾಗೂ ಅವನ ಮುಂದೆ ಪುಸ್ತಕಹೊತ್ತ ಪೀಠ ಇದೆ. ಪೀಠದ ಬಲಭಾಗದಲ್ಲಿ ಮುನಿಯೆಡೆಗೆ ಕೈಮುಗಿದುಕೊಂಡು ಪತಿ-ಪತ್ನಿಯರು ಕುಳಿತುಕೊಂಡಿದ್ದಾರೆ. ಮೇಲ್ಭಾಗದ ಮಧ್ಯದಲ್ಲಿ ಧ್ಯಾನಮಗ್ನನಾಗಿ ಕುಳಿತುಕೊಂಡ ತೀರ್ಥಂಕರರ ವಿಗ್ರಹವಿದೆ. ಅವರ ಎಡಕ್ಕೆ ಉಪದೇಶಿಸುವ ಮುನಿ ಹಾಗೂ ಅವರ ಬಲಕ್ಕೆ ತೀರ್ಥಂಕರರೆಡೆಗೆ ಕೈಮುಗಿದುಕೊಂಡು ಕುಳಿತ ಪತಿ-ಪತ್ನಿಯರಿದ್ದಾರೆ. ಮೇಲೆ ಸೂರ್ಯ-ಚಂದ್ರರನ್ನು ಬಿಡಿಸಲಾಗಿದೆ.(ಚಿತ್ರ-84). ಈ ಸ್ಮಾರಕದ ಪಾಠವು "ಸಿರಿಯಮಗವುಡನ ಸುಪುತ್ರ ಮಲಗವುಡನು ಸಂನ್ಯಾಸನ ಸಮಾಧಿಯಿಂ ಮುಡಿಪಿ ಸ್ವರ್ಗಸ್ತನಾದನು ಆತನ ಅರ್ಧಾಂಗಿ ಚಿಂನಕ್ಕನು ಸಹಗಮನದಿಂ ಸ್ವರ್ಗಸ್ತೆಯಾದಳು" ಎಂದು ವಿವರಿಸುತ್ತದೆ.[27] ಅಂದರೆ 'ಮಲಗವುಡನು' ಸನ್ಯಾಸನ ಮರಣ ಹೊಂದಿದಾಗಿ ಅವನ ಪತ್ನಿ 'ಚಿಂನಕ್ಕ' ನು ಸಹಗಮನ ಮರಣ ಹೊಂದಿರುವುದು ಈ ಶಾಸನದಿಂದ ತಿಳಿದುಬರುತ್ತದೆ. ಹೀಗೆ ಗಂಡ ಧಾರ್ಮಿಕ ಬಲಿದಾನ ಮಾಡಿಕೊಂಡಾಗಲೂ ಪತ್ನಿ ಸಹಗಮನ ಆಚರಿಸುವುದು ಕಂಡುಬರುತ್ತದೆ.

(ಉ) <u>ಸಹಜ ಮರಣ :</u> ಪತಿ ಸಹಜಮರಣ ಹೊಂದಿದ ಕುರಿತಾಗಿಯೂ ಮಾಸ್ತಿಕಲ್ಲಿನ ಶಿಲ್ಪ ವಿವರಣೆಗಳನ್ನು ನೀಡುತ್ತದೆ. ಪತಿ ಸಹಜಮರಣಗೊಂಡಿದ್ದರೆ ಅವನ ಶಿಲ್ಪ ಚಿಕ್ಕದಾಗಿಯೂ, ಸತಿಹೋದ ಪತ್ನಿಯ ಶಿಲ್ಪ ದೊಡ್ಡದಾಗಿಯೂ ಇರುತ್ತದೆ. ಬ್ಯಾಡಗಿ ತಾಲೂಕಿನ ಅಂಗ್ರಗಟ್ಟಿ, ಸಾಗರ ತಾಲೂಕಿನ ಮಲ್ಲಂದೂರು, ರಾಣಿಬೆನ್ನೂರು ತಾಲೂಕಿನ ಹಿಡಿಯಾಲ, ಹೊನ್ನಾಳಿ ತಾಲೂಕಿನ ಸೊರಟೂರು, ಕೊಳ್ಳೇಗಾಲ ತಾಲೂಕಿನ ಮುಡಿಗೊಂಡ ಈ ಮೊದಲಾದ ಗ್ರಾಮ

ಗಳಲ್ಲಿಯ ಶಿಲ್ಪಗಳನ್ನು ಇಲ್ಲಿ ಸ್ಮರಿಸಬಹುದಾಗಿದೆ. ಈ ಸ್ಮಾರಕ ಶಿಲೆಗಳಲ್ಲಿ ಸತಿಯರನ್ನು ದೊಡ್ಡದಾಗಿಯೂ, ಪತಿಯರನ್ನು ಪಕ್ಕದಲ್ಲಿಯೋ, ಎತ್ತಿದ ತೋಳುಗಳ ಮೇಲೆಯೋ, ಅವಳ ಮುಖದ ಪಕ್ಕದಲ್ಲಿಯೋ ಅತೀ ಚಿಕ್ಕದಾಗಿಯೂ ಕಂಡರಿಸಲಾಗಿದೆ. ಹೆಮ್ಮಾಲದ ಮಾಸ್ತಿಕಲ್ಲಿನ ಪಾಠದಲ್ಲಿಯೂ " ನಾಂಯಕರ ಮಗ ಹೆ. ಯಮಾಲದರಾಮೆ.. ಯಕರು ಲಿಂಗದೊ.. ದಲ್ಲಿ ಆತನ ಅರ್ಧಾಂಗಿ ಮಲದೇವಿ ನಡಸಮಾಧಿಯನು ಹೊಕ್ಕು ದೇವರೊ. ಗಾ.. ಗಿ" ಎಂದು ಹೇಳಲಾಗಿದೆ.[28] ಇಲ್ಲಿ ಸತಿಹೋದ ಮಲದೇವಿಯ ಗಂಡನ ಸಾವು ಸಹಜ ವಾದುದಾಗಿದೆ. ಈ ಸ್ಮಾರಕ ಶಿಲೆಯಲ್ಲಿ ಮಲದೇವಿಯ ವಿಗ್ರಹವನ್ನು ದೊಡ್ಡದಾಗಿ ಚಿತ್ರಿಸ ಲಾಗಿದೆ. ಅವಳ ಎಡಭುಜದ ಮೇಲೆ ಪತಿ ಚಿಕ್ಕದಾಗಿ ಕುಳಿತಿದ್ದಾನೆ. ಅವನೊಡನೆ ಮಲದೇವಿಯ ಚಿಕ್ಕವಿಗ್ರಹವನ್ನೂ ತೋರಿಸಲಾಗಿದೆ. ಹೀಗೆ ಸತಿಯ ಪತಿ ಸಹಜ ಮರಣ ಹೊಂದಿದ್ದನ್ನು ಸ್ಮಾರಕ ಶಿಲ್ಪಗಳು ಸೂಚ್ಯವಾಗಿ ತಿಳಿಸವುದನ್ನು ಗ್ರಹಿಸಬಹುದಾಗಿದೆ.

(4) ಸೌಭಾಗ್ಯ ಚಿಹ್ನೆಗಳು :

ಮಾಸ್ತಿಕಲ್ಲಿನಲ್ಲಿಯ ಸತಿವಿಗ್ರಹವು ಸಾಮಾನ್ಯವಾಗಿ ಬಳೆ, ಕಂಕಣ, ಓಲೆ, ತಾಳಿ, ಹೂವಿನ ದಂಡೆಗಳಿಂದ ಅಲಂಕೃತಗೊಂಡಿರುತ್ತದೆ. ಎತ್ತಿದ ಕೈ ಕಂಬದ ಚಿತ್ರವಿದ್ದರೆ ಬಳೆ, ತೋಳ್ಬಳೆಗಳನ್ನು ತಪ್ಪದೇ ತೋರಿಸಲಾಗಿರುತ್ತದೆ. ಕೆಲವು ಸಲ ಅಂಥವುಗಳಿಗೆ ಕಂಕಣವನ್ನು ತೊಡಿಸಲಾಗಿರುತ್ತದೆ. ಕುಷ್ಟಗಿ ತಾಲೂಕಿನ ಮಾಸ್ತ್ಯವ್ವನಿಗೆ ಈಗಲೂ ಹೂವಿನ ದಂಡೆ, ತಾಳಿಗಳಿಂದ ಅಲಂಕರಿಸುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಸಾಗರ ತಾಲೂಕಿನ ಮಲ್ಲಂದೂರ ದಂಥ ಊರುಗಳಲ್ಲಿ ಮಾಸ್ತಿಗೆ ಬೆಂಡಿನಿಂದ ಮಾಡಿದ ಬಾಸಿಂಗವನ್ನು ತೊಡಿಸಲಾಗುವುದು ಇನ್ನೂ ವಿಶೇಷವಾದುದು. (ಚಿತ್ರ—85). ಕೆಲವು ಸಲ ಸತಿಯು ಕೈಯಲ್ಲಿ ಹೂವು, ಕನ್ನಡಿ, ನೀರಿನ ಗಿಂಡಿ, ಲಿಂಬೆಹಣ್ಣು ಈ ಮೊದಲಾದವುಗಳನ್ನು ಹಿಡಿದಿರುವಂತೆ ಶಿಲ್ಪ ಬಿಡಿಸಲಾಗಿರುತ್ತದೆ.[29] ಚನ್ನಗಿರಿ ತಾಲೂಕಿನ ಬೊಮ್ಮನಹಳ್ಳಿಯ ಮಾಸ್ತಿಶಿಲ್ಪವೊಂದರಲ್ಲಿ ಕೆಳಗಡೆ ಅತ್ತ—ಇತ್ತ ಎಲೆಗಳ ಮಧ್ಯ ತೆಂಗಿನ ಕಾಯಿ ಇಟ್ಟಿರುವ ಪೂರ್ಣ ಕಲಶಗಳಿವೆ. ಜನಪದ ಹಾಡುಗಳಲ್ಲಿ ಸತಿಯರು ಸಿಂಗರಿಸಿಕೊಂಡು, ಲಿಂಬೆಹಣ್ಣು, ಬಾಳೆಹಣ್ಣುಗಳನ್ನು ಅಂಬರಕ್ಕೇರಿಸುವ ವರ್ಣನೆಗಳು ಬಂದಿರುವು ದನ್ನೂ, ರಾಮನಾಥ ಚರಿತದಂಥ ಕಾವ್ಯದಲ್ಲಿ ಸತಿಯರು ಅಲಂಕರಿಸಿಕೊಂಡಿರುವ ಬಗೆಯನ್ನು ವರ್ಣಿಸಿರುವುದನ್ನೂ, ಪಿಯತ್ರೊ ದೆಲ್ಲಾವಲ್ಲಿ, ಸೀಜರ್ ಫ್ರೆಡರಿಕ್—ಈ ಮೊದಲಾದ ವಿದೇಶಿ ಪ್ರವಾಸಿಗರು ಸತಿ ಕನ್ನಡಿ, ಲಿಂಗೆಹಣ್ಣುಗಳನ್ನು ಹಿಡಿದುಕೊಂಡು ಮದುವೆಯಂಥ ಮೆರವಣಿಗೆ

ಯಲ್ಲಿ ಹೋಗುವುದನ್ನು ಉಲ್ಲೇಖಿಸಿರುವುದನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.[30]

ಮೃತನ ಪತ್ನಿ ಸೌಭಾಗ್ಯವತಿಯಾಗಿಯೇ ಸತಿಹೋಗುವುದನ್ನು ಆಚರಿಸುತ್ತಿದ್ದುದರಿಂದ ಸಹಜವಾಗಿಯೇ ಅವಳ ಸ್ಮಾರಕ ಶಿಲ್ಪವೂ ಬಳೆ, ಕಂಕಣ, ಓಲೆ, ತಾಳಿ, ಹೂವಿನದಂಡೆಗಳಿಂದ ಕೂಡಿಕೊಂಡು ರಚನೆಗೊಳ್ಳುತ್ತಿತ್ತು. ಜೊತೆಗೆ ಮಂಗಲ ವಸ್ತುಗಳಾದ ತೆಂಗು, ಕಳಸ, ನಿರ್ಮಲ ನೀರನ್ನು ಹೊಂದಿದ ಗಿಂಡಿ ಇತ್ಯಾದಿಗಳೂ ಕೆಲವೊಮ್ಮೆ ಸತಿ ಶಿಲ್ಪದಲ್ಲಿ ಕಾಣಿಸಿಕೊಳ್ಳುತ್ತಿದ್ದವು. ಹೀಗೆ ಸೌಭಾಗ್ಯ ಮತ್ತು ಮಂಗಲ ಸಂಕೇತಗಳ ಈ ವಸ್ತುಗಳ ಚಿತ್ರಣ ಮಾಸ್ತಿಶಿಲ್ಪದಲ್ಲಿ ಕಾಣಿಸಿಕೊಂಡದ್ದು ಸಹಜವೆನಿಸುತ್ತದೆ. ಮೃತನ ಪತ್ನಿ ಸತಿಹೋಗುತ್ತಿದ್ದುದು ಸಾಯುವುದಕ್ಕಾಗಿಯಲ್ಲ; ಅವಳು ಇನ್ನೊಂದು ಲೋಕದಲ್ಲಿರುವ ತನ್ನ ಗಂಡನನ್ನು ಪಡೆಯುವುದಕ್ಕಾಗಿ. ಈ ಕಲ್ಪನೆಯ ಹಿನ್ನೆಲೆಯಲ್ಲಿ ಅವಳು ಸೌಭಾಗ್ಯವತಿಯಂತೆಯೇ ಸಿಂಗರಿಸಿಕೊಂಡು ಸತಿ ಆಚರಣೆಯನ್ನು ಪೂರೈಸುತ್ತಿದ್ದಳು. ಮೃತನ ಪತ್ನಿ ಮುತ್ತೈದೆತನವನ್ನು ಕಳೆದುಕೊಂಡರೂ ಸತಿಹೋದ ಅವಳು ಮುತ್ತೈದೆಯಾಗಿಯೇ ಜನಮನದಲ್ಲಿ ಉಳಿದುಕೊಂಡದ್ದನ್ನು ಈಗಲೂ ಗುರುತಿಸಬಹುದಾಗಿದೆ. ಜನಪದ ಹಾಡು ಒಂದರಲ್ಲಿ ಪದ್ಯವೊಂದು ಹೀಗೆ ಬರುತ್ತದೆ:[31]

ಮುತ್ತೈದೆ ನೆನೆದಾರೆ ತಪ್ಪಿಲ್ಲ ತಡೆಯಿಲ್ಲ
ಸರ್ಪಕಚ್ಚಿದರೆ ಇಸುವಿಲ್ಲ । ವಡ್ಡೀಗೆರೆಯ
ಮುತ್ತೈದೆ ನಮ್ಮಕ್ಕ ದಯವಿರಲಿ ॥

ಇಲ್ಲಿ ಮತ್ತ್ಯ
ಇಲ್ಲಿ ಮೃತನ ಪತ್ನಿ ನಾಗಮ್ಮ ಸತಿಹೋದವಳಿದ್ದು, ಅವಳನ್ನು 'ಮುತ್ತೈದೆ' ಎಂದೇ ಕಂಡುಕೊಳ್ಳುವ ಜನಭಾವ ಪ್ರಾರ್ಥನಾರೂಪದಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣುತ್ತೇವೆ.

ಮಾಸ್ತಿಶಿಲ್ಪದಲ್ಲಿ ಕಾಣಿಸಿಕೊಳ್ಳುವ ಕನ್ನಡಿ, ಲಿಂಬೆಹಣ್ಣುಗಳ ಚಿತ್ರಗಳು ಕುತೂಹಲ ಕೆರಳಿಸುತ್ತವೆ. ಸತಿ ಕನ್ನಡಿ ಹಿಡಿದಿರುವ ಕಾರಣವನ್ನು ಹೀಗೆ ವಿವರಿಸಬಹುದಾಗಿದೆ: ಮೃತನ ಪತ್ನಿ ಸೌಭಾಗ್ಯ ಸಂಕೇತಗಳಿಂದಲೂ, ಮಂಗಲ ಮತ್ತು ಅಲಂಕಾರ ವಸ್ತುಗಳಿಂದಲೂ ಸುಂದರವಾಗಿ ಸಿಂಗರಿಸಿಕೊಂಡು ಸತಿಯಾಗಲು ಹೋಗುತ್ತಿದ್ದಳು. ಆಗ ಅವಳಿಗೆ ತನ್ನ ಮಂಗಲ ಮತ್ತು ಅಲಂಕಾರ ರೂಪವನ್ನು ನೋಡಿಕೊಳ್ಳುವ ಸಾಮಗ್ರಿಯೊಂದರ ಅವಶ್ಯಕತೆ ಇತ್ತು. ಆದರಿಂದಾಗಿ ಅವಳು ಸತಿಹೋಗುವಾಗ ಕನ್ನಡಿಯನ್ನು ಉಪಯೋಗಿಸುತ್ತಿದ್ದಳೆಂದು ಹೇಳಬಹುದಾಗಿದೆ. ಈ ವಿವರಣೆಯನ್ನು ಸಮರ್ಥಿಸಲು ಸತಿ ಕನ್ನಡಿ ನೋಡುತ್ತಿರುವಂತೆಯೇ ಬಿಡಿಸಲಾಗಿರುವ ಮಾಸ್ತಿ ಶಿಲ್ಪಗಳು ಸಿಗುತ್ತವೆ. (ಚಿತ್ರ — 86).

ಮಾಸ್ತಿಶಿಲ್ಪಗಳಲ್ಲಿ ಹೆಚ್ಚಾಗಿ ಲಿಂಬೆಹಣ್ಣನ್ನು ತೋರಿಸಲಾಗಿರುತ್ತದೆ. "ಅವಳ ಆ ಅಂಗೈಯಲ್ಲಿದ್ದುದು ಲಿಂಬಿಹಣ್ಣೆಂದು ಕನ್ನಡ ಕಾವ್ಯಗಳು, ಇಕ್ಕೇರಿಯಲ್ಲಿ ಸತಿಹೋದ ಒಬ್ಬಳು ಒಂದು ಕೈಯಲ್ಲಿ ಲಿಂಬೆ, ಇನ್ನೊಂದು ಕೈಯಲ್ಲಿ ಕನ್ನಡಿ ಹಿಡಿದಿದ್ದಳೆಂದು ಪಿಯುಟ್ರಡೆಲ್ಲವಲ್ಲಿ ಹೇಳುವುದರಿಂದ ಕೆಲವರು ಭಾವಿಸಿರುವಂತೆ ಅವಳ ಕೈಯಲ್ಲಿದ್ದುದು ಮಾದಲಹಣ್ಣಲ್ಲ, ಲಿಂಬೆಹಣ್ಣು."[32] ಸತಿ ಬಲಗೈಯಲ್ಲಿಯೋ, ಎಡಗೈಯಲ್ಲಿಯೋ ಅಥವಾ ಎರಡೂ ಕೈಯಲ್ಲಿಯೋ ಲಿಂಬೆ ಹಣ್ಣನ್ನು ಹಿಡಿದುಕೊಂಡಿರುವಂತೆ ಚಿತ್ರಿಸಲಾಗಿರುತ್ತದೆ.[33] ಕೈಬೆರಳುಗಳ ಮಧ್ಯ, ಹೆಬ್ಬೆರಳು ಮತ್ತು ತೋರುಬೆರಳುಗಳ ಮಧ್ಯ ಸಾಮಾನ್ಯವಾಗಿ ಅದನ್ನು ಕಡಿರಿಸುವ ಪ್ರಯತ್ನ ಮಾಡಲಾಗಿರುತ್ತದೆ. ಕೆಲವೊಮ್ಮೆ ಸತಿಯು ಮುಷ್ಠಿಯಲ್ಲಿ ಅದನ್ನು ಹಿಡಿದಿರುವಂತೆಯೂ ತೋರಿಸಲಾಗಿರುತ್ತದೆ.[34] ಎತ್ತಿದ ತೋಳುಗೈ ಕಂಬದ ಸತಿ ಶಿಲ್ಪವಿದ್ದರೆ ಸಾಮಾನ್ಯವಾಗಿ ಅದು ಹೆಬ್ಬೆರಳು ಮತ್ತು ತೋರಬೆರಳಿನ ಮಧ್ಯ ಕಾಣಿಸಿಕೊಳ್ಳುತ್ತದೆ. ಚೌಡನಹಳ್ಳಿ ಮಾಸ್ತಿಶಿಲ್ಪದಲ್ಲಿ ಲಿಂಬಿಹಣ್ಣು ಕೈಯಲ್ಲಿರದೆ ಎತ್ತಿದ ಕೈ ಪಕ್ಕದಲ್ಲಿರುವುದನ್ನು ಕಾಣುತ್ತೇವೆ. (ಚಿತ್ರ—60). ಈ ಶಿಲ್ಪದಿಂದ ಮಾಸ್ತಿಕಲ್ಲಿನಲ್ಲಿ ಲಿಂಬೆ ಹಣ್ಣಿಗಿರುವ ಮಹತ್ವದ ಅರಿವಾಗುತ್ತದೆ.

ಲಿಂಬೆಹಣ್ಣು ಮಂಗಲ ವಸ್ತುವೇನೂ ಅಲ್ಲ. ಆದರೆ ಅಮಂಗಲ ನಿವಾರಣೆಯಲ್ಲಿ ಅದರ ಪ್ರಾಮುಖ್ಯತೆ ಬಹಳವಿದೆ. ಈ ಕಾರಣದಿಂದಾಗಿ ಅದು ಜನಪದರ ಹಲವಾರು ವಿಧಿಕ್ರಿಯೆಗಳಲ್ಲಿ ಬಳಕೆಗೊಳ್ಳುವುದನ್ನು ಕಾಣುತ್ತೇವೆ. ಡಾ.ಎಂ.ಚಿದಾನಂದಮೂರ್ತಿ ಅವರು ಈ ವಿಷಯವನ್ನು ನಿರೂಪಿಸುತ್ತ ಹೀಗೆ ಬರೆಯುತ್ತಾರೆ : "ಮಾಸ್ತಿಶಿಲ್ಪಗಳಲ್ಲಿ ಕೆತ್ತಿರುವ ನಿಂಬೆಹಣ್ಣಿನ ಸಾಂಕೇತಿಕ ಅರ್ಥವೇನೆಂಬುದಕ್ಕೆ ಇನ್ನೂ ಸ್ಪಷ್ಟ ವಿವರಣೆಯು ದೊರಕಿಲ್ಲ, ಶಿವತತ್ವ ಚಿಂತಾಮಣಿ ಇತ್ಯಾದಿ ಕೃತಿಗಳಲ್ಲಿ ಮದುವೆ ಮಂಟಪಕ್ಕೆ ಹೋಗುವಾಗ ವರ ಕೈಯಲ್ಲಿ ನಿಂಬಿಹಣ್ಣು ಹಿಡಿದಿರುತ್ತಿದ್ದನೆಂಬ ಉಲ್ಲೇಖಗಳು ದೊರಕುತ್ತವೆ. ಮದುವೆ ಸಮಾರಂಭಗಳಲ್ಲಿ ನಿಂಬೆಹಣ್ಣಿಗೆ ವಿಶಿಷ್ಟಸ್ಥಾನವಿತ್ತೆಂಬುದು ಸ್ಪಷ್ಟ. (ಈಗಲೂ ಉಂಟು). ರಿಚುಯಲ್ಸ್‌ಗಳ ದೃಷ್ಟಿಯಿಂದ ಹೇಳುವುದಾದರೆ ತೆಂಗಿನಕಾಯಿ, ವೀಳ್ಯದೆಲೆ, ಅಕ್ಕಿ, ಅಡಕೆಗಳಂತೆ ನಿಂಬೆ ಮಂಗಳದ್ರವ್ಯವೇನೂ ಅಲ್ಲ, ಹಾಗೆಂದ ತಕ್ಷಣ ಅದು ಅಮಂಗಳದ್ರವ್ಯವೇನೂ ಆಗಬೇಕಿಲ್ಲ. ಆದರೂ ಅದರ ಮುಖ್ಯ ಪಾತ್ರವಿರುವುದು ಅಮಂಗಳ ನಿವಾರಣೆಯ ರಿಚುಯಲ್ಲ್‌ಗಳಲ್ಲಿ (ತಾಂತ್ರಿಕ ಪೂಜೆಗಳಲ್ಲಿ ಅದಕ್ಕೆ ಮಹತ್ವವುಂಟು). ಬಹುಶಃ ಅಮಂಗಳ ನಿವಾರಕವಾಗಿ ಮದುವೆ ಗಂಡು ಹಿಡಿದಿರುತ್ತಿದ್ದ ನಿಂಬೆಹಣ್ಣನ್ನೇ (ಸ್ವರ್ಗದಲ್ಲಿರುವ) ಗಂಡನ ಬಳಿಗೆ ಹೋಗುತ್ತೇನೆಂದು ನಂಬಿರುತ್ತಿದ್ದ ಸರ್ವಾಭರಣ ಭೂಷಿತೆಯಾದ ಮಾಸ್ತಿಯು

ತನ್ನ ಕೈಯಲ್ಲಿ ಹಿಡಿದು ಚಿತೆಯ ಬಳಿಗೆ ಹೋಗುತ್ತಿದ್ದಳು. ಅದನ್ನೇ ಶಿಲ್ಪದಲ್ಲಿ ಕೆತ್ತಿರುವಂತೆ ತೋರುತ್ತದೆ.[35] ಮೃತನ ಪತ್ನಿ ಸತಿಹೋಗಿ ಗಂಡನನ್ನು ಪಡೆಯಲಿರುವುದರಿಂದ, ಈ ಆಚರಣೆಯೂ ಮದುವೆಯಂಥದ್ದೇ ಆಗಿದೆ. ಆ ಕಾರಣದಿಂದಾಗಿ ಮದುವೆಯಲ್ಲಿ ಬಹುಶಃ ಅವುಗಳ ನಿವಾರಣೆಗೆ ಲಿಂಬೆಹಣ್ಣನ್ನು ಉಪಯೋಗಿಸುವಂತೆ ಸತಿವಿಧಿಯಲ್ಲಿಯೂ ಅದನ್ನು ಉಪಯೋಗಿಸುತ್ತಿರಬೇಕು. ವಿದ್ವಾಂಸರು ಹೇಳುವಂತೆ, ಅದನ್ನೇ ಶಿಲ್ಪದಲ್ಲಿ ಕೆತ್ತಿರುವಂತೆ ತೋರುತ್ತದೆ.

(5) <u>ಮಾಸ್ತಿ ಶಿಲ್ಪಗಳ ವರ್ಗೀಕರಣ :</u>

ಮಾಸ್ತಿಕಲ್ಲುಗಳನ್ನು ಶಿಲ್ಪದ ದೃಷ್ಟಿಯಿಂದ ಈ ರೀತಿ ವರ್ಗೀಕರಿಸಬಹುದಾಗಿದೆ. (ಅ) ಮಾಸ್ತಿಕಲ್ಲುಗಳಲ್ಲಿ ಗೌಣವಾಗಿರುವ ಪತಿಯ ಶಿಲ್ಪ, (ಆ) ವೀರಗಲ್ಲುಗಳಲ್ಲಿ ಗೌಣವಾಗಿರುವ ಸತಿಯ ಶಿಲ್ಪ, (ಇ) ಸತಿ-ಪತಿ ಸ್ಥಾನ ಸಮಾನವುಳ್ಳ ಸ್ಮಾರಕಶಿಲ್ಪ, (ಈ) ಸ್ವತಂತ್ರ ಮಾಸ್ತಿ ಶಿಲ್ಪ, (ಉ) ಎತ್ತಿದ ತೋಳುಗೈ ಕಂಬದ ಶಿಲ್ಪ, (ಊ) ಎತ್ತಿದ ತೋಳುಗೈ ಶಿಲ್ಪ, (ಋ) ಮಾಸ್ತಿಸ್ಮಾರಕ ಸ್ತಂಭ. ಈಗ ಇವುಗಳನ್ನು ಒಂದೊಂದಾಗಿ ವಿವರಿಸಬಹುದಾಗಿದೆ.

**(ಅ) ಮಾಸ್ತಿಕಲ್ಲುಗಳಲ್ಲಿ ಗೌಣವಾಗಿರುವ ಪತಿಯ ಶಿಲ್ಪ :** ಮೃತನ ಪತ್ನಿ ಸತಿಹೋದುದನ್ನು ಶಿಲೆಯಲ್ಲಿ ಅಭಿವ್ಯಕ್ತಿಸುವಾಗ ಸಾಮಾನ್ಯವಾಗಿ ಕೈಎತ್ತಿಕೊಂಡು ನಿಂತ ಸ್ತ್ರೀ ವಿಗ್ರಹಗಳನ್ನು ಚಿತ್ರಿಸುವ ಪರಿಪಾಠ ಬೆಳೆದುಬಂದದ್ದನ್ನು ಕಾಣುತ್ತೇವೆ. ಇಂಥ ಶಿಲ್ಪಗಳು ಸತಿಯನ್ನು ಮಾತ್ರ ಮುಖ್ಯವಾಗಿಟ್ಟುಕೊಂಡಿರುತ್ತವೆ. ಸೌಭಾಗ್ಯ ಸೂಚಕಗಳಾದ ಬಳೆ, ತಾಳಿ, ಓಲೆ ಹೂವಿನ ಅಥವಾ ಕೇದಗೆಯ ದಂಡೆ ತುರು ಇತ್ಯಾದಿಗಳನ್ನು ಅವಳಿಗೆ ತೊಡಿಸಲಾಗಿರುತ್ತದೆ.[36] ಅಲ್ಲದೆ, ಅವಳಿಗೆ ಅಲಂಕಾರದ ವಸ್ತುಗಳಾದ ಕೊರಳ ಹಾರ, ಬೈತಲೆಸರ, ಕಾಲಿನ ಅಂದುಗೆ, ನಡುವಿನ ಹಾರ, ತೋಳ್ಬಳೆ, ಕಡಗ ಇವುಗಳನ್ನು ತೊಡಿಸಲಾಗಿರುತ್ತದೆ. ಇಂಥ ವಿಗ್ರಹದ ಸಮೀಪದಲ್ಲಿ, ಕಲ್ಲಿನ ಯಾವುದಾದರೂ ಮೂಲೆಯಲ್ಲಿ ಅಥವಾ ಅವಳ ಪಕ್ಕದಲ್ಲಿ ಚಿಕ್ಕದಾಗಿ ಪತಿ ವಿಗ್ರಹವನ್ನು ಬಿಡಿಸಲಾಗಿರುತ್ತದೆ. ಅವನು ವೀರನಾಗಿದ್ದು ಹೋರಾಟದಲ್ಲಿ ಮಡಿದವನಾಗಿದ್ದರೆ ಆದರ ಗುರುತಿಗಾಗಿ ಅವನೊಡನೆ ಆಯುಧವನ್ನು ಬಿಡಿಸಲಾಗಿರುತ್ತದೆ. ಈ ಶಿಲ್ಪದಲ್ಲಿ ಪತಿ ಸ್ಥಾನ ಅಮುಖ್ಯವಾಗಿರುತ್ತದೆ; ಎಂದು ಬೇರೆ ಹೇಳಬೇಕಾಗಿಲ್ಲ.

ಕೂಡ್ಲಿಗಿ ತಾಲೂಕಿನ ಕಾನಮಡಗು ಗ್ರಾಮದ ಮಾಸ್ತಿಶಿಲ್ಪದಲ್ಲಿ ಮಾಸ್ತಿ ವಿಗ್ರಹವನ್ನು ಎದ್ದುಬರುವಂತೆ ಸುಂದರವಾಗಿ ಬಿಡಿಸಲಾಗಿದೆ. ಸತಿ ಬಲಗೈ ಎತ್ತಿಕೊಂಡು

ನಿಂತಿದ್ದಾಳೆ. ಅವಳ ತಲೆಯು ಮೇಲೆ ಕೇದಗೆಯು ದಂಡೆಯನ್ನು ತೋರಿಸಲಾಗಿದೆ ಅವಳಿಗೆ ಕೊರಳಲ್ಲಿ ಉದ್ದನೆಯ ಹಾರವನ್ನು ಇಳಿಬಿಡಲಾಗಿದೆ. ಸತಿಯು ಎಡಗೈಯನ್ನು ಬಳುಕಿದಂತೆ ಇಳಿಬಿಟ್ಟ ರೀತಿ ಮನೋಹರವಾಗಿದೆ. ಈ ಎಡಗೈಯು ಹೆಬ್ಬೆರಳು ಮತ್ತು ತೋರಬೆರಳಿನ ಮಧ್ಯ ಲಂಬಿಹಣ್ಣು ಇದೆ, ಈ ಸತಿಯು ಮೇಲ್ಭಾಗದ ಬಲಕ್ಕೆ ವೀರ ಕೈಮುಗಿದುಕೊಂಡು ಕುಳಿತಿದ್ದಾನೆ. ಅವನ ಪಕ್ಕದಲ್ಲಿ ಬಿಲ್ಲುಬಾಣಗಳನ್ನು ತೋರಿಸಲಾಗಿದೆ. ವೀರನ ಪಕ್ಕದಲ್ಲಿ ಸತಿ ಕೈಮುಗಿದುಕೊಂಡು ಕುಳಿತಿದ್ದಾಳೆ (ಚಿತ್ರ—40). ಶಿಕಾರಿಪುರ ತಾಲೂಕಿನ ಸಂಡದ ಗ್ರಾಮದಲ್ಲಿಯ ಮೂರು ಮಾಸ್ತಿ ವಿಗ್ರಹಗಳು ಅತ್ಯಂತ ಸುಂದರವಾಗಿವೆ. (ಚಿತ್ರ—68, 80, 87). ಒಂದು ಮಾಸ್ತಿಶಿಲ್ಪದಲ್ಲಿ ಸತಿಯು ಎಡಗೈ ಇಳಿಬಿಟ್ಟು ಕೈಯಲ್ಲಿ ನೀರಿನ ಗಿಂಡಿಯನ್ನು ಹಿಡಿದುಕೊಂಡಿದ್ದಾಳೆ. ಅವಳ ತಲೆಯು ಕೂದಲನ್ನು ಚೆನ್ನಾಗಿ ಬಾಚಿ ಕಟ್ಟಲಾಗಿದೆ. ಕೊರಳಲ್ಲಿ ಹಾರವನ್ನು ಸುಂದರವಾಗಿ ಇಳಿಬಿಡಲಾಗಿದೆ. ಬಲಗೈ ಎತ್ತಿ ಪ್ರಶಾಂತ ಭಾವದಿಂದ ನಿಂತ ಈ ಮಾಸ್ತಿ ವಿಗ್ರಹ ಮನಸೆಳೆಯುತ್ತದೆ. ಇವಳ ಬಲಭಾಗದಲ್ಲಿ ಬಿಲ್ಲು ಬಾಣಗಳಿವೆ ಮೇಲ್ಭಾಗದ ಮೂಲೆಯೊಂದರಲ್ಲಿ ಕಿರುಗತ್ತಿಯೊಡನೆ ವೀರ ಕೈಮುಗಿದು ಕುಳಿತುಕೊಂಡಿದ್ದಾನೆ. ಬಹುಶಃ ಈ ಶಿಲ್ಪ ಸತಿಯು ಅನುಗಮನ ಸೂಚಿಸುತ್ತಿರಬೇಕೆನಿಸುತ್ತದೆ. ಈ ಸ್ಮಾರಕ ಶಿಲೆಯು ಶಾಸನದಲ್ಲಿ “ಕಂಪೆಯನಾಯ್ಕನು ಆತನ ಮಗ ಸಿಂಗೆಯನಾಯ್ಕನು ತಂದೆ ಮಕ್ಕಳು ಯಿಬ್ಬರು ಸ್ವರ್ಗ್ಗಸ್ಥರಾದರು। ಯಿೂ ಶಿಲಾಪ್ರತಿಷ್ಟೆಯನು ಆ ಕಂಪೆಯನಾಯ್ಕನಹಿ(ಬ)ರ್ಯ್ಯಮಗ ಕಾಟಿಯನಾಯ್ಕ ಮಾಡಿಸಿದನು” ಎಂದು ಹೇಳಲಾಗಿದೆ.[37] ಇಲ್ಲಿಯ ಶಿಲ್ಪದ ಮೂಲಕ ತಂದೆ—ಮಗ ಸ್ವರ್ಗಸ್ಥರಾದುದು ಹೋರಾಟಮರಣ ಮೂಲಕ ಎಂದು ಹೇಳಬಹುದಾಗಿದೆ. ಹೀಗೆ ಮರಣ ಹೊಂದಲಾಗಿ ಇವರಿಬ್ಬರಲ್ಲಿ ಒಬ್ಬನ ಪತ್ನಿ ಪತಿಯು ಕುರುಹಾದ ಬಿಲ್ಲುಬಾಣಗಳ ಸಮೇತ ಸತಿಹೋಗಿರಬೇಕು ಆಗ ಅವಳ ಪ್ರತಿಷ್ಠೆಯನ್ನು ಕಾಟಿಯನಾಯ್ಕನು ಮಾಡಿಸಿದನೆಂದು ಹೇಳಬಹುದಾಗಿದೆ. ಇನ್ನೊಂದು ಪ್ರತ್ಯೇಕ ಶಿಲ್ಪ ಹೆಚ್ಚುಕಡಿಮೆ ಇದೇ ರೀತಿ ಇದ್ದರೂ ಬಿಲ್ಲು ಬಾಣಗಳ ಪಕ್ಕದಲ್ಲಿಯೇ ವೀರಕೈಮುಗಿದು ಕುಳಿತಿರುವುದನ್ನು ಬಿಡಿಸಲಾಗಿದೆ. ಈ ಸತಿ ಕಾಲುಗಳಲ್ಲಿ ಪಾದರಕೆಗಳನ್ನು ಹಾಕಿಕೊಂಡಿರುವುದು ಅಪರೂಪದ ಉಲ್ಲೇಖವಾಗಿದೆ. ಇದೇ ರೀತಿ ಇದೇ ಊರಿನ ಗೌಡರ ಹಿತ್ತಲಿನಲ್ಲಿರುವ ಮಾಸ್ತಿ ವಿಗ್ರಹವೊಂದರ ಕಾಲುಗಳಲ್ಲಿ ಪಾದರಕ್ಷೆಗಳಿರುವುದನ್ನು ಗುರುತಿಸಬಹುದಾಗಿದೆ. ಇನ್ನೊಂದು ಮಾಸ್ತಿ ವಿಗ್ರಹವು ಬಲಗೈ ಎತ್ತಿ, ಎಡಗೈಯನ್ನು ಬಳುಕಿದಂತೆ ಇಳಿಬಿಟ್ಟು ನಿಂತಿರುವುದನ್ನು ಕಾಣುತ್ತೇವೆ. ಈ ಸ್ಮಾರಕಶಿಲೆಯ ಮೂಲೆಯಲ್ಲಿ ಪತಿ ಕೈಮುಗಿದು ಕುಳಿತುಕೊಂಡಿದ್ದಾನೆ. ಬಿಲ್ಲು ಬಾಣ ಇತ್ಯಾದಿ ಆಯುಧಗಳನ್ನು ಕೆತ್ತಿದಿರುವುದ

–ರಿಂದ ಬಹುಶ: ಈ ಸತಿಯು ಪತಿ ಸಹಜಮರಣ ಹೊಂದಿದವನಾಗಿರಬೇಕೆನಿಸುತ್ತದೆ.

ಚನ್ನಗಿರಿ ತಾಲೂಕಿನ ಬೊಮ್ಮನಹಳ್ಳಿ ಮಾಸ್ತಿವಿಗ್ರಹಗಳು ಕಲಾತ್ಮಕವಾಗಿವೆ. ಒಂದು ಮಾಸ್ತಿವಿಗ್ರಹದಲ್ಲಿ, ಸತಿಯು ಬಲಗೈ ಎತ್ತಿಕೊಂಡು ಎಡಗೈ ಇಳಿಬಿಟ್ಟು ಲಿಂಬೆಹಣ್ಣು ಹಿಡಿದುಕೊಂಡಿದ್ದಾಳೆ. ಅವಳಿಗೆ ಕೊರಳಲ್ಲಿ ಆಭರಣಗಳನ್ನು, ಮುಂಗೈ ಮತ್ತು ತೋಳುಗಳಲ್ಲಿ ಬಳೆಗಳನ್ನು ತೊಡಿಸಲಾಗಿದೆ. ಅವಳು ತೊಟ್ಟ ಲಂಗದ ನಿರಿಗೆಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಈ ಸತಿವಿಗ್ರಹದ ಪಕ್ಕದಲ್ಲಿ ವೀರಬಿಲ್ಲಿನ ಹೆದೆ ಏರಿಸಿ ಚಿಕ್ಕದಾಗಿ ನಿಂತುಕೊಂಡಿರುವಂತೆ ತೋರಿಸಲಾಗಿದೆ. ಇಲ್ಲಿರುವ ಇನ್ನೊಂದು ಮಾಸ್ತಿಶಿಲ್ಪದಲ್ಲಿಯ ಸತಿಯು ಕೊರಳಲ್ಲಿರುವ ಹಾರ ಮೊಳಕಾಲಿನ ಕೆಳ ಭಾಗದವರೆಗೂ ವ್ಯಾಪಿಸಿಕೊಂಡಂತೆ ಬಿಡಿಸಲಾಗಿರುವುದು ತುಂಬ ಸುಂದರವಾಗಿದೆ.(ಚಿತ್ರ–73).

ಶಿವಮೊಗ್ಗದ ವಸ್ತು ಸಂಗ್ರಹಾಲಯದಲ್ಲಿರುವ ಮಾಸ್ತಿವಿಗ್ರಹವೊಂದು ಶಿಲೆಯಲ್ಲಿ ಎದ್ದು ಬರುವಂತೆ ತೋರುತ್ತದೆ. ಅವಳ ತಲೆಗೆ ಕೇದಗೆಯನ್ನು ಅಚ್ಚುಕಟ್ಟಾದ ರೀತಿಯಲ್ಲಿ ಬಿಡಿಸಲಾಗಿದೆ. ಸತಿಯು ಎಡಗೈ ಇಳಿಬಿಟ್ಟು ಗಿಂಡಿಯನ್ನು ಹಿಡಿದುಕೊಂಡಿದ್ದಾಳೆ. ಈ ಸ್ಮಾರಕ ಶಿಲೆಯ ಮೂಲೆಯಲ್ಲಿ ವೀರನು ಕತ್ತಿಯೊಂದಿಗೆ ಕೈಮುಗಿದು ಕುಳಿತುಕೊಂಡಿದ್ದಾನೆ. (ಚಿತ್ರ–88). ಈ ವಸ್ತುಸಂಗ್ರಹಾಲಯದಲ್ಲಿ ಇಂಥ ಹಲವು ಮಾಸ್ತಿ ವಿಗ್ರಹಗಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಇಲ್ಲಿಮಾಸ್ತಿ ಶಿಲ್ಪವೊಂದು ವಿಶೇಷ ಗಮನ ಸೆಳೆಯುವಂಥದ್ದಿದೆ. ಪತಿಮಧ್ಯದಲ್ಲಿ ಕೈಮುಗಿದುಕುಳಿತುಕೊಂಡಿದ್ದಾನೆ. ಅವನ ಎಡ–ಬಲ ಪಕ್ಕಗಳಲ್ಲಿ ಸತಿಯರು, ಕೈ ಎತ್ತಿಕೊಂಡು ನಿಂತಿದ್ದಾರೆ. ಒಬ್ಬಳು ಎಡಗೈ ಎತ್ತಿದರೆ ಇನ್ನೊಬ್ಬಳು ಬಲಗೈ ಎತ್ತಿದ್ದಾಳೆ.– ಈ ಸತಿಯರು ತುರುಬು ಕಟ್ಟಿಕೊಂಡಿರುವ ರೀತಿ, ಕೇದಗೆಯ ಗರಿಗಳನ್ನು ತಲೆಗೆ ಅಲಂಕರಿಸಿಕೊಂಡಿರುವ ರೀತಿ ಮನೋಹರವಾಗಿವೆ. ಈ ಸತಿಯರು ಹರ್ಷಭಾವದಿಂದ ನಗುನಗುತ್ತ ನಿಂತಿರುವಂತೆ ಶಿಲ್ಪಿ ಕಂಡರಿಸಲು ಪ್ರಯತ್ನಿಸಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.(ಚಿತ್ರ–89). ವ್ಯಕ್ತಿಯೊಬ್ಬ ಮಡಿಯಲಾಗಿ, ಅವನ ಇಬ್ಬರು ಪತ್ನಿಯರು ಸಂತೋಷದಿಂದ ಸತಿಹೋದುದನ್ನು ಈ ಶಿಲ್ಪ ಧ್ವನಿಸುತ್ತದೆ. ಇದೇ ರೀತಿ ಇಬ್ಬರು ಪತ್ನಿಯರು ಸತಿಹೋದುದನ್ನು ಹೊನ್ನಾಳಿ ತಾಲೂಕಿನ ಸೊರಟೂರಿನ ಮಾಸ್ತಿಶಿಲ್ಪವೊಂದು ಅಭಿವ್ಯಕ್ತಿಸುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಸತಿಯರಿಬ್ಬರು ಕೆಳಹಂತದಲ್ಲಿ ಬಲಗೈ ಎತ್ತಿ ನಿಂತುಕೊಂಡಿದ್ದಾರೆ. ಅವರ ತಲೆಗೆ ಕೇದಗೆಯ ಗರಿಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಲಿಂಗದ ಎಡಭಾಗದಲ್ಲಿ ಪತಿಯೊಂದಿಗೆ ಇವರಿಬ್ಬರು ಸತಿಯರು ಕೈಮುಗಿದುಕೊಂಡು ಕುಳಿತಿದ್ದಾರೆ.(ಚಿತ್ರ–90). ಇದೇ ರೀತಿ

ಹುಲಿಯೊಂದಿಗೆ ಹೋರಾಡುವ ವೀರರಿಬ್ಬರ ಚಿತ್ರ ಮತ್ತು ಅವರ ಪತ್ನಿಯರಿಬ್ಬರು ಸತಿಹೋದ ಚಿತ್ರವನ್ನೊಳಗೊಂಡ ಮಾಸ್ತಿ ಸ್ಮಾರಕವೊಂದು ಚಿತ್ರದುರ್ಗ ಜಿಲ್ಲೆಯ ಗಂಜಿಗಟ್ಟಿ ಗ್ರಾಮದಲ್ಲಿದೆ. ಈ ಶಿಲ್ಪಗಳು ಮಹಾಸತಿಯರ ಸ್ಥಾನವನ್ನು ಮುಖ್ಯಕೇಂದ್ರವಾಗಿಟ್ಟುಕೊಂಡು ರಚನೆಗೊಂಡಿರುವುದನ್ನು ನಿರೀಕ್ಷಿಸಬಹುದಾಗಿದೆ. ಹೀಗೆ ಪತಿ ಸಾಧನ ಅಮುಖ್ಯವಿಧ ಮಾಸ್ತಿಶಿಲ್ಪಗಳು ಹಲವು ಕರ್ನಾಟಕದಲ್ಲಿ ದೊರಕುತ್ತವೆ ಎಂದು ಹೇಳಬಹುದಾಗಿದೆ.

**ಆ) ವೀರಗಲ್ಲುಗಳಲ್ಲಿ ಗೌಣವಾಗಿರುವ ಸತಿಯ ಶಿಲ್ಪ :** ಸತಿಘಟನೆಯನ್ನು ಒಳಗೊಂಡ ಸ್ಮಾರಕ ಶಿಲೆಗಳಲ್ಲಿ ಸಾಮಾನ್ಯವಾದ ಕ್ರಮವೊಂದನ್ನು ಬಳಸಿಕೊಳ್ಳದಿದ್ದರೂ ಅವುಗಳ ಮೇಲ್ಭಾಗವನ್ನು ಬಿಡಿಸುವಲ್ಲಿ ನಿರ್ದಿಷ್ಟ ಸೂತ್ರವೊಂದನ್ನು ಅನುಸರಿಸಿದಂತೆ ಕಂಡುಬರುತ್ತದೆ. ಸತಿಹೋಗುವುದರ ಮುಖ್ಯಗುರಿ ಅಥವಾ ಆದರ್ಶವೆಂದರೆ ದೇವಲೋಕ ಸಂಪಾದಿಸುವುದಾಗಿತ್ತು. ಈ ಕಾರಣದಿಂದಾಗಿ ಸತಿ ಶಿಲ್ಪವನ್ನೊಳಗೊಂಡ ಸ್ಮಾರಕಶಿಲೆಯ ಮೇಲ್ಭಾಗ ಸಹಜವಾಗಿಯೇ ದೇವಲೋಕದ ಚಿತ್ರಣದಿಂದ ಕೂಡಿಕೊಂಡಿತು. ಎಲ್ಲ ಸತಿ ಸ್ಮಾರಕಗಳ ಮೇಲ್ಭಾಗವೂ ಇದೇ ಕ್ರಮದಲ್ಲಿ ರಚನೆಗೊಂಡಿದ್ದಾಗಿದೆ ಎಂದು ಅಭಿಪ್ರಾಯ ಪಡುವಂತೆಯೂ ಇಲ್ಲ. ಕೆಲವು ಸ್ಮಾರಕ ಶಿಲೆಗಳಲ್ಲಿ ಮೇಲ್ಭಾಗದ ಚಿತ್ರಣಗಳೇ ಇಲ್ಲ. ಇನ್ನೂ ಕೆಲವು ಸ್ಮಾರಕಶಿಲೆಗಳ ಮೇಲ್ಭಾಗದಲ್ಲಿ ಸೂರ್ಯ—ಚಂದ್ರರನ್ನು ಮಾತ್ರ ಕಡರಿಸಲಾಗಿದೆ.

ವೀರಗಲ್ಲುಗಳಲ್ಲಿಯ ಸತಿಘಟನೆ ವಿವರಣೆಯ ಶಿಲ್ಪದಲ್ಲಿ ಸಾಮಾನ್ಯವಾದ ಒಂದು ಕ್ರಮವನ್ನು ಗುರುತಿಸಬಹುದಾಗಿದೆ. ವೀರಗಲ್ಲುಗಳಲ್ಲಿ ವೀರನ ಶಿಲ್ಪಕ್ಕೆ ಪ್ರಾಮುಖ್ಯತೆ ಇರುತ್ತದೆ— ಎಂದು ಬೇರೆ ಹೇಳಬೇಕಾಗಿಲ್ಲವಾದರೂ ಅವನೊಡನೆ ಅಥವಾ ಅವನ ಹಿಂದೆ ತನ್ನನ್ನು ಸಾವಿಗೆ ಅರ್ಪಿಸಿಕೊಂಡ ಅವನ ಪತ್ನಿಯ ಶಿಲ್ಪವೂ ಉನ್ನತಮಟ್ಟದಲ್ಲಿ ಅಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಂಡುಕೊಳ್ಳಬಹುದಾಗಿದೆ. ಸತಿ ಶಿಲ್ಪವನ್ನೊಳಗೊಂಡ ಇಂಥ ವೀರಗಲ್ಲುಗಳ ವಿನ್ಯಾಸ ಕ್ರಮದಲ್ಲಿ ಮುಖ್ಯವಾಗಿ ಮೂರು ಹಂತಗಳಿರುತ್ತವೆ :

1. ಮೊದಲನೆಯ ಹಂತ : ವೀರನ ಹೋರಾಟ ಹಾಗೂ ಅವನ ಪತ್ನಿಯು ಸತಿಹೋದುದರ ಚಿತ್ರಣ.
2. ಎರಡನೆಯ ಹಂತ : ಪತಿ—ಪತ್ನಿಯರಿಬ್ಬರೂ ದೇವಲೋಕಕ್ಕೆ ಹೋಗುತ್ತಿರುವುದರ ಮಾರ್ಗ ಮಧ್ಯದ ಚಿತ್ರಣ.
3. ಮೂರನೆಯ ಹಂತ : ಪತಿ—ಪತ್ನಿಯರಿಬ್ಬರೂ ದೇವಲೋದಲ್ಲಿರುವ ಚಿತ್ರಣ.



ಸತಿ ಶಿಲ್ಪವನ್ನೊಳಗೊಂಡ ವೀರಗಲ್ಲುಗಳ ಶಿಲ್ಪಗಳಲ್ಲಿ ನಿರ್ದಿಷ್ಟವಾಗಿ ಈ ಮೂರೂ ಹಂತಗಳ ಕ್ರಮವನ್ನೇ ಅನುಸರಿಸಿವೆ ಎಂದೂ ಹೇಳುವಂತಿಲ್ಲ. ಸತಿ ಶಿಲ್ಪ ಕೆಲವು ಸಲ ಮೊದಲ ಮತ್ತು ಎರಡನೆಯ ಹಂತಗಳಲ್ಲಿ ಇರದೆ ಕೇವಲ ಮೂರನೆಯ ಹಂತದಲ್ಲಿ ಮಾತ್ರ ಇರುವಂತೆ ಚಿತ್ರಿಸಲಾಗಿರುತ್ತದೆ. ಕೆಲವೊಮ್ಮೆ ಎರಡು ಮತ್ತು ಮೂರನೆಯ ಹಂತಗಳಲ್ಲಿ ಮಾತ್ರ ಸತಿ ಚಿತ್ರವನ್ನು ಬಿಡಿಸಲಾಗಿರುತ್ತದೆ. ಅಲ್ಲದೆ ಹಲವು ವೀರಗಲ್ಲುಗಳಲ್ಲಿ ಈ ಮೂರು ಹಂತಗಳ ಶಿಲ್ಪಗಳನ್ನು ಬಿಡಿಸದೆ ಕೇವಲ ಮೊದಲ ಮತ್ತು ಮೂರನೆಯ ಹಂತಗಳ ಶಿಲ್ಪಗಳನ್ನು ಮಾತ್ರ ಬಿಡಿಸಲಾಗಿರುತ್ತದೆ. ಕೆಲವೊಮ್ಮೆ ವೀರಗಲ್ಲುಗಳ ಶಿಲ್ಪದ ವಿಸ್ತಾರ ನಾಲ್ಕು ಅಥವಾ ಐದು ಭಾಗಗಳ ವರೆಗೂ ವ್ಯಾಪಿಸಿಕೊಂಡಿರುತ್ತದೆ. ಹೀಗಿದ್ದಾಗಲೂ ಅವುಗಳಲ್ಲಿ ಅಭಿವ್ಯಕ್ತಗೊಳ್ಳುವ ವಿಷಯಗಳು ಮಾತ್ರ ಮೂರು ಹಂತಗಳದ್ದೇ ಆಗಿರುತ್ತದೆ ಎಂಬುದನ್ನು ಗಮನಿಸಬಹುದಾಗಿದೆ. ಅಂಥ ಶಿಲ್ಪಗಳಲ್ಲಿ ಹೋರಾಟದ ಚಿತ್ರಣ ಅಥವಾ ದೇವಲೋಕಕ್ಕೆ ಹೋಗುವ ಮಾರ್ಗಮಧ್ಯದ ಚಿತ್ರಣ ದ್ವಿಗುಣಗೊಂಡಿರುತ್ತದೆಯಷ್ಟೇ. ಈ ಶಿಲ್ಪಗಳು ವೀರನನ್ನೇ ಇನ್ನಷ್ಟು ಮುಖ್ಯವಾಗಿಟ್ಟುಕೊಂಡು ರಚನೆಗೊಂಡಿರುತ್ತವೆ. ಇಂಥ ಶಿಲ್ಪಗಳಲ್ಲಿ ಸತಿಯ ಸ್ಥಾನ ಅಮುಖ್ಯವಾಗಿರುತ್ತದೆ.

ಮೊದಲ ಹಂತವನ್ನು ಸ್ಮಾರಕ ಶಿಲೆಯ ಕೆಳಭಾಗದಲ್ಲಿ ಸಾಮಾನ್ಯವಾಗಿ ಕಂಡರಿಸಲಾಗಿರುತ್ತದೆ. ಈ ಭಾಗ ವಿಸ್ತಾರವಾದ ಹೋರಾಟದ ಚಿತ್ರಣವನ್ನೊಳಗೊಂಡಿರುತ್ತದೆ. ಹೊನ್ನಾಳಿ ತಾಲೂಕಿನ ಚಿಕ್ಕಹಾಲಿವಾಣ ಗ್ರಾಮದಲ್ಲಿಯ ನಾಲ್ಕು ಸ್ಮಾರಕ ಶಿಲೆಗಳ ಕೆಳಗಿನ ಹಂತದಲ್ಲಿ ಹೋರಾಟದ ದೃಶ್ಯಗಳನ್ನು ಅತೀ ಸುಂದರವಾಗಿ ಬಿಡಿಸಲಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ವೀರರು ಕುದುರೆಯ ಮೇಲೆ ಕುಳಿತು ಹೋರಾಡುತ್ತಿದ್ದಾರೆ. ಈ ಭಾಗದಲ್ಲಿ ಸತಿ ಶಿಲ್ಪವನ್ನು ಕಂಡರಿಸಲಾಗಿಲ್ಲವೆಂಬುದನ್ನು ಗಮನಿಸಬೇಕು. ಆದರೆ ಈ ಶಿಲ್ಪದ ಎರಡು ಮತ್ತು ಮೂರನೆಯ ಹಂತಗಳಲ್ಲಿ ಸತಿಶಿಲ್ಪಗಳನ್ನು ಬಿಡಿಸಲಾಗಿದೆ.(ಚಿತ್ರ—58). ಇದೇ ರೀತಿ ಶಿವಮೊಗ್ಗದ ಪೊಲೀಸಕಟ್ಟಡದ ಆವರಣದಲ್ಲಿರುವ ವೀರಗಲ್ಲಿನ ಶಿಲ್ಪದಲ್ಲಿ ಕೆಳಗಿನ ಭಾಗದಲ್ಲಿ ಯುದ್ಧದ ಉನ್ನತ ಚಿತ್ರಣವಿದೆ. ಐದು ಕುದುರೆಗಳನ್ನು ಒಂದೇ ಹಂತದಲ್ಲಿ ಸುಂದರವಾಗಿ ಬಿಡಿಸಲಾಗಿದೆ. ಈ ಭಾಗದಲ್ಲಿ ಸತಿಶಿಲ್ಪವನ್ನು ಕಂಡರಿಸದೇ ಎರಡನೆಯ ಮತ್ತು ಮೂರನೆಯ ಭಾಗದಲ್ಲಿ ಕಂಡರಿಸಿರುವುದನ್ನು ಸ್ಮರಿಸಬಹುದಾಗಿದೆ. ಎರಡನೆಯ ಹಂತದಲ್ಲಿ ವೀರನನ್ನು ವಿಮಾನದಲ್ಲಿಯೂ ಸತಿಯನ್ನು ಪಲ್ಲಕ್ಕಿಯಲ್ಲಿಯೂ ಒಯ್ಯಲಾಗುತ್ತಿರುವುದು ವಿಶೇಷವಾಗಿದೆ. ಗುಂಡ್ಲುಪೇಟೆ ತಾಲೂಕಿನ ಕುಣಗನಹಳ್ಳಿಯಲ್ಲಿಯ ಸ್ಮಾರಕಶಿಲೆಯ ಕೆಳಭಾಗದ ಹೋರಾಟ ಚಿತ್ರಣ ಅತ್ಯಂತ ಸುಂದರವಾಗಿದೆ. ಈ ಹಂತದಲ್ಲಿ ಎರಡು ಭಾಗಗಳನ್ನು ಮಾಡಿಕೊಂಡು

ಹೋರಾಟದ ಎರಡು ದೃಶ್ಯಗಳನ್ನು ಭಿನ್ನವಾಗಿ ಚಿತ್ರಿಸಿರುವುದು ತುಂಬ ಕಲಾತ್ಮಕವಾಗಿದೆ. ಈ ಶಿಲೆಯ ಮೂರನೆಯ ಹಂತದಲ್ಲಿ ಮಾತ್ರ ಸತಿಶಿಲ್ಪವನ್ನು ಕಂಡರಿಸಲಾಗಿದೆ. ಎರಡನೆಯ ಹಂತದಲ್ಲಿ ಮೊದಲಿನ ಹಂತದಲ್ಲಿಯಂತೆಯೇ ಎರಡು ಭಾಗಗಳನ್ನು ಮಾಡಲಾಗಿದೆ. ಎರಡೂ ಭಾಗಗಳಲ್ಲಿ ವೀರನನ್ನು ದೇವತಾಸ್ತ್ರೀಯರು ಅತ್ಯಂತ ವಿಲಾಸದಿಂದ ಒಯ್ಯುತ್ತಿರುವುದನ್ನು ತೋರಿಸಲಾಗಿದೆ.(ಚಿತ್ರ-55). ಇದೇ ರೀತಿ ಇಲ್ಲಿಯೇ ಇರುವ ಇನ್ನೊಂದು ವೀರಗಲ್ಲಿನ ಶಿಲ್ಪದಲ್ಲಿ ಕುದುರೆಯ ಮೇಲೆ ಕುಳಿತ ಯೋಧನೊಬ್ಬನು ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಗುರಿಯಿಟ್ಟು ಹೊಡೆಯಲು ಸನ್ನದ್ಧನಾದ ವೀರನಿಗೆ ತನ್ನ ಆಯುಧದಿಂದ ಚುಚ್ಚುತ್ತಿರುವ ದೃಶ್ಯ ರಣರಂಗದ ಭೀಕರತೆಯನ್ನು ಪರಿಚಯಿಸುತ್ತದೆ. ಈ ಶಿಲ್ಪದ ಮೂರನೆಯ ಹಂತದಲ್ಲಿ ಮಾತ್ರ ಸತಿಯಿದ್ದಾಳೆ.(ಚಿತ್ರ-56). ಸೊರಬ ತಾಲೂಕಿನ ಹರೂರ ಸ್ಮಾರಕಶಿಲೆಯಲ್ಲಿ ಕೆಳಗಿನ ಎರಡು ಭಾಗಗಳಲ್ಲಿ ಹೋರಾಟದ ದೃಶ್ಯವನ್ನು ಬಿಡಿಸಲಾಗಿದೆ. ಎರಡೂ ಭಾಗಗಳಲ್ಲಿ ವೀರರು ಬಿಲ್ಲುಗಳನ್ನು ಹಿಡಿದುಕೊಂಡು ಹೋರಾಡುತ್ತಿದ್ದಾರೆ. ಮೇಲ್ಭಾಗದಲ್ಲಿ ಮಾತ್ರ ಪತಿ-ಪತ್ನಿ ಕೈಮುಗಿದು ಕುಳಿತಿರುವುದನ್ನು ತೋರಿಸಲಾಗಿದೆ. ಈ ಭಾಗದಲ್ಲಿ ಎರಡನೆಯ ಹಂತವನ್ನು ಚಿತ್ರಿಸಿಲ್ಲ. (ಚಿತ್ರ-8). ಈ ಸ್ಮಾರಕಶಿಲೆಯ ಪಾಠದಲ್ಲಿ ಪತಿಯ ಹೋರಾಟ ಮರಣವನ್ನು ತಿಳಿಸಿಲ್ಲವೆಂಬುದನ್ನು ಲಕ್ಷಿಸಬೇಕು.[38] ಕೊಂಡಗುಳಿಯ ಸ್ಮಾರಕಶಿಲ್ಪವೊಂದರಲ್ಲಿ ಕೆಳಗಿನ ಹಂತದಲ್ಲಿ ಹೋರಾಟದ ಚಿತ್ರಣವಿದ್ದು, ಎರಡನೆಯ ಭಾಗದಲ್ಲಿ ವೀರ ಕುಳಿತ ಕುದುರೆಯನ್ನು ಇನ್ನೊಬ್ಬನು ಹಿಡಿದಂತೆ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಮಾತ್ರ ಸತಿ-ಪತಿಯರು ಲಿಂಗಸಾನಿಧ್ಯದಲ್ಲಿರುವುದನ್ನು ಚಿತ್ರಿಸಲಾಗಿದೆ. ಇದೇ ರೀತಿ ಶಿಗ್ಗಾಂವ ತಾಲೂಕಿನ ಕುಂದೂರಿನಲ್ಲಿಯ ವೀರಗಲ್ಲಿನಲ್ಲಿಯೂ ಮೇಲಿನ ಹಂತದಲ್ಲಿ ಮಾತ್ರ ಸತಿ ಇರುವುದನ್ನು ಕಾಣುತ್ತೇವೆ. ಸಾಗರ ತಾಲೂಕಿನ ಹುಣಸೂರು ಗ್ರಾಮದಲ್ಲಿಯ ಸ್ಮಾರಕಶಿಲ್ಪವೊಂದರಲ್ಲಿ ಕೆಳಭಾಗದಲ್ಲಿ ಒಬ್ಬ ಯೋಧ ವೀರನನ್ನು ತನ್ನ ಕಿರುಗತ್ತಿಯಿಂದ ಹೊಟ್ಟೆಯಲ್ಲಿ ಇರಿಯುತ್ತಿರುವ ದೃಶ್ಯ ರೌದ್ರವಾಗಿದೆ. ಎರಡನೆಯ ಹಂತದಲ್ಲಿ ಪತಿಯೊಡನೆ ಸತಿ ವಿಮಾನದಲ್ಲಿ ಕುಳಿತಿದ್ದನ್ನು ಚಿತ್ರಿಸಲಾಗಿದೆ. ಈ ಶಿಲ್ಪದಲ್ಲಿ ಮೂರನೆಯ ಹಂತದ ಚಿತ್ರಣವಿಲ್ಲದಿರುವುದನ್ನು ಗಮನಿಸಬೇಕು. ಕೇವಲ ಇಲ್ಲಿ ಸೂರ್ಯ-ಚಂದ್ರರನ್ನು ಮಾತ್ರ ಕಂಡರಿಸಲಾಗಿದೆ. (ಚಿತ್ರ-91). ಮಡಿದ ವೀರ 'ಹುಣಿಸೂರ ಹನುಬರ ರಾಮಣ' ನೆಂದೂ, ಸತಿಹೋದವಳು ಅವನ ಪತ್ನಿ 'ರಾಮಾಯಿ' ಎಂದೂ ಈ ಸ್ಮಾರಕದ ಪಾಠದಿಂದ ತಿಳಿದುಬರುತ್ತದೆ.[39] ಇದೇ ರೀತಿ ಶಿರೂರಿನಲ್ಲಿರುವ (ಸಾಗರ) ಸ್ಮಾರಕ ಶಿಲ್ಪವೊಂದರಲ್ಲಿ ವೀರನನ್ನು ಇರಿದು ಕೊಲ್ಲುವುದನ್ನೂ, ಮೇಲಿನ ಹಂತದಲ್ಲಿ ಪತಿ-ಪತ್ನಿಯರು ದೈವ ಸಾನಿಧ್ಯದಲ್ಲಿರುವುದನ್ನೂ ತೋರಿಸಲಾಗಿದೆ.

ಇಲ್ಲಿ ಎರಡನೆಯ ಹಂತದ ಚಿತ್ರಣ ಇಲ್ಲದಿರುವುದನ್ನು ಗಮನಿಸಬಹುದಾಗಿದೆ. (ಚಿತ್ರ—92). ಈ ಸ್ಮಾರಕ ಶಿಲೆಯ ಪಾಠದಲ್ಲಿ "ಸಿರಿಯರಸ ಗ ಉಡರ ಮಗ ರಾಮಗಉಡರೂ ಅಯಗ ಉಡರು... ಮುತ್ತಿರ್ದಲ್ಲಿ ಕಡಿದಾಡಿ ಬಿದಯ ಆತನ ಮಡವಳಿಗೆ ಚಿಯಗುಡಿಯ ಕೂಡಿ ಸಹಗಮನವ ಮಾಡಿದರು" ಎಂದು ಹೇಳಲಾಗಿದೆ.[40]

ಕುಪ್ಪಟೂರು ಶಾಸನವೊಂದು 'ತಂಮಯ್ಯಗ' ನ ಹೋರಾಟವನ್ನು ಉತ್ಕೃಷ್ಟವಾಗಿ ಚಿತ್ರಿಸುತ್ತದೆ. ಅಲ್ಲದೆ "ಶಾನಡಗಿದ ಸತಿಗೂಡಿ ಶಿವನ ಪದ ಪಂಕಜದೊಳು" ಎಂದೂ ವಿವರಿಸುತ್ತದೆ.[41] ಈ ಸ್ಮಾರಕ ಶಿಲೆಯ ಶಿಲ್ಪದಲ್ಲಿ ಕೆಳಗಿನ ಭಾಗದಲ್ಲಿ ಕುದುರೆಗಳ ಮೇಲೆ ಕುಳಿತು ಹೋರಾಡುವ ವೀರರ ಚಿತ್ರಗಳನ್ನು ಬಿಡಿಸಲಾಗಿದೆ ಮಧ್ಯಭಾಗದಲ್ಲಿ ವೀರಪೀಠದ ಮೇಲೆ ಕುಳಿತಿದ್ದಾನೆ ಅವನ ಬಲಭಾಗದಲ್ಲಿ ಮೂವರು ಹಾಗೂ ಎಡಭಾಗದಲ್ಲಿ ಇಬ್ಬರು ಪತ್ನಿಯರು ಕೈ ಮುಗಿದು ನಿಂತುಕೊಂಡಿದ್ದಾರೆ. ಬಹುಶ: ಅವರೆಲ್ಲ ಸತಿಹೋದವರಾಗಿರಬೇಕು. ಮೇಲ್ಭಾಗದಲ್ಲಿ ಲಿಂಗ ಸಾನಿಧ್ಯದಲ್ಲಿ ಪತಿಯೊಡನೆ ಸತಿಯೊಬ್ಬಳು ಕುಳಿತಿದ್ದಾಳೆ. ಇವಳು ಬಹುಶ: ತಂಮಯ್ಯಗನ ಅಗ್ರ ಮತ್ತು ಪ್ರಿಯಪತ್ನಿಯಾಗಿರಬೇಕು.

ಬೆನಕನಕೊಂಡದ ಮಾಸ್ತಿಕಲ್ಲಿನ ಶಿಲ್ಪವೊಂದರಲ್ಲಿ ಕೆಳಗಿನ ಹಂತದಲ್ಲಿ ವೀರನೊಬ್ಬನನ್ನು ನಾಲ್ವರು ಯೋಧರು ಕೂಡಿ ಇರಿಯುತ್ತಿರುವ ದೃಶ್ಯ ಹೋರಾಟದ ಭೀಕರತೆಯನ್ನು ತೋರಿಸುತ್ತದೆ. ಹೀಗೆ ಮಡಿದ ವೀರನು ತನ್ನ ಪತ್ನಿಯೊಂದಿಗೆ ವಿಮಾನದಲ್ಲಿ ಕುಳಿತು ದೇವಲೋಕಕ್ಕೆ ಪಯಣ ಬೆಳೆಸಿರುವುದನ್ನು ಎರಡನೆಯ ಹಂತದಲ್ಲಿ ಬಿಡಿಸಲಾಗಿದೆ ಮೂರನೆಯ ಹಂತದಲ್ಲಿ ಅವರು ಲಿಂಗ ಸಾನಿಧ್ಯದಲ್ಲಿ ಕೈಮುಗಿದು ಕುಳಿತುಕೊಂಡಿದ್ದಾರೆ. (ಚಿತ್ರ—53). ಈ ಸ್ಮಾರಕ ಶಿಲೆಯ ಪಾಠದಿಂದ ವೀರನು ಕಟಿಗಬಟಯನಾಯಕನೆಂದೂ, ಹಾಗೂ ಅವನೊಡನೆ ದೇವಲೋಕದ ಸಾನಿಧ್ಯ ಪಡೆದವಳು ಅವನ ಪತ್ನಿ ಎಂದೂ ತಿಳಿದುಬರುತ್ತದೆ.[42]

ನಗರ ತಾಲೂಕಿನ ಹರಿತಾಳು ಗ್ರಾಮದ ವೀರಗಲ್ಲಿನ ಮೊದಲು ಮತ್ತು ಎರಡನೆಯ ಭಾಗದಳಲ್ಲಿ ಹೋರಾಟದ ಚಿತ್ರಣವಿದೆ. ಎರಡನೆಯ ಭಾಗದಲ್ಲಿಯ ಕುದುರೆಯ ಮೇಲಿನ ಹೋರಾಟದ ಚಿತ್ರಣ ಅತ್ಯಂತ ಸುಂದರವಾಗಿದೆ. ಮೂರನೆಯ ಭಾಗದಲ್ಲಿ ವಿಮಾನದಲ್ಲಿ ಸತಿ—ಪತಿಯರನ್ನು ದೇವತಾ ಸ್ತ್ರೀಯರು ಒಯ್ಯುತ್ತಿರುವುದನ್ನು ಕಂಡಿರಿಸಲಾಗಿದೆ. ನಾಲ್ಕನೆಯ ಭಾಗದಲ್ಲಿಯೂ ದೇವತಾ ಸ್ತ್ರೀಯರು ವೀರನನ್ನು ಸತಿಯೊಂದಿಗೆ ಒಯ್ಯುತ್ತಿರುವುದನ್ನು ತೋರಿಸಲಾಗಿದೆ. ಈ ಭಾಗವನ್ನು ತುಂಬ ಶೃಂಗಾರಮಯವಾಗಿ ಚಿತ್ರಿಸಲಾಗಿದೆ. ದೇವತಾಸ್ತ್ರೀ—

ಪುರುಷರು ನಾಟ್ಯಮಾಡುವ, ವಾದ್ಯ ಬಾರಿಸುವ ಭಂಗಿಗಳು ತುಂಬ ಮನೋಹರವಾಗಿವೆ. ಮೇಲ್ಭಾಗದಲ್ಲಿ ಲಿಂಗದ ಸಾನಿಧ್ಯದಲ್ಲಿ ಪತಿ-ಪತ್ನಿಯರು ಕೈಮುಗಿದು ಕುಳಿತಿದ್ದಾರೆ. ಈ ಶಿಲ್ಪದಲ್ಲಿ ವೀರನ ಚಿತ್ರಣಕ್ಕೆ ಪ್ರಾಮುಖ್ಯತೆ ಕೊಟ್ಟಿರುವುದು ಕಂಡುಬರುತ್ತದೆ. ಈ ಸ್ಮಾರಕ ಶಿಲೆಯ ಪಾಠದಿಂದ ಇಲ್ಲಿಯ ಯುದ್ಧವೀರ 'ತಿರಿಕಗುಡ'ನೆಂದೂ, ಆತನು ಎದುರಿಸಿದುದು ಬೇಡರ ದಳವೆಂದೂ ತಿಳಿದುಬರುತ್ತದೆ. ಅಲ್ಲದೆ ಅವನೊಡನೆ ಸಹಗಮನ ಮಾಡಿದ ಸ್ತ್ರೀ 'ಬೊಂಮಯಕ್ಕ' ಎಂದೂ ಶಾಸನ ತಿಳಿಸುತ್ತದೆ.[43]

ಕೆಲವು ಶಿಲ್ಪಗಳಲ್ಲಿ ಕೆಳಗಿನ ಭಾಗದಲ್ಲಿ ಹೋರಾಟ ಚಿತ್ರದ ಬದಲಾಗಿ ವೀರ ಬಿಲ್ಲನ್ನು ಹಿಡಿದುಕೊಂಡೋ ಅಥವಾ ಕಿರುಗತ್ತಿಯನ್ನು ಹೊಂದಿಂತೋ ನಿಂತುಕೊಂಡಿರುತ್ತಾನೆ. ಅದೇ ಭಾಗದಲ್ಲಿ ಪತ್ನಿ ಕೈ ಎತ್ತಿ ನಿಂತುಕೊಂಡೋ ಅಥವಾ ವೀರನನ್ನು ಹಿಡಿದುಕೊಂಡೋ ನಿಂತಿರುವುದುಂಟು. ಶಿವಮೊಗ್ಗ ಜಿಲ್ಲೆಯ ಸ್ಮಾರಕ ಶಿಲೆಯೊಂದರಲ್ಲಿ ವೀರ ಬಿಲ್ಲು ಹಿಡಿದು ವೀರಾವೇಶದಿಂದ ನಿಂತಿರುವುದನ್ನೂ ಆತನ ಬಲಕ್ಕೆ ಸತಿ ಬಲಗೈ ಎತ್ತಿ ನಿಂತಿರುವುದನ್ನೂ ತೋರಿಸಲಾಗಿದೆ. ಅಲ್ಲದೆ ಸತಿಯ ಬಲಭಾಗದಲ್ಲಿ ಇನ್ನೊಬ್ಬಳು ಸತಿ ಕೈಮುಗಿದುಕೊಂಡು ಚಿಕ್ಕದಾಗಿ ಕುಳಿತಿದ್ದಾಳೆ. ಈ ಶಿಲ್ಪದ ಮೇಲ್ಭಾಗದಲ್ಲಿ ಲಿಂಗದ ಸಾನಿಧ್ಯದಲ್ಲಿ ಪತಿಯೊಂದಿಗೆ ಸತಿಯರಿಬ್ಬರೂ ಕೈಜೋಡಿಸಿಕೊಂಡು ಕುಳಿತಿರುವುದು ಮನೋಹರವಾಗಿದೆ. ವೀರನಿಗೆ ಇಬ್ಬರು ಪತ್ನಿಯರಿದ್ದು ಅವರಿಬ್ಬರೂ ಸತಿಹೋದುದನ್ನು ಈ ಶಿಲ್ಪ ಧ್ವನಿಸುತ್ತದೆ. ಈ ಶಿಲ್ಪದ ಎರಡೂ ಹಂತಗಳಲ್ಲಿ ಶಿಲ್ಪಿ ಸತಿಯರಲ್ಲಿದ್ದ ಸ್ಥಾನಮಾನಗಳ ಹೆಚ್ಚು ಕಡಿಮೆಯನ್ನು ಮರೆಯದೇ ಚಿತ್ರಿಸಿರುವುದನ್ನು ಗಮನಿಸಬಹುದಾಗಿದೆ.(ಚಿತ್ರ—93). ಇದೇ ರೀತಿ ಚಾಮರಾಜನಗರ ತಾಲೂಕಿನ ಮಾದಕ ಹಳ್ಳಿಯಲ್ಲಿಯ ಸ್ಮಾರಕಶಿಲೆಯಲ್ಲಿ ಎರಡು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಕೆಳಗಿನ ಭಾಗದಲ್ಲಿ ಕಿರುಗತ್ತಿಯನ್ನು ಹೊಂದಿದ ವೀರ ಪತ್ನಿಯರ ಹೆಗಲ ಮೇಲೆ ಕೈಹಾಕಿ ನಿಂತುಕೊಂಡಿದ್ದಾನೆ. ಮೇಲ್ಭಾಗದಲ್ಲಿ ಅವನ ಸತಿಯರು ಅವನ ಎತ್ತಿದ ಕೈಗಳನ್ನು ಹಿಡಿದು ನಿಂತುಕೊಂಡಿದ್ದಾರೆ. (ಚಿತ್ರ—79). ಶಾಸನದಿಂದ, ಇಲ್ಲಿಯ ವೀರ ಗುಳಿಗನೆಂದೂ, ಅವನ ಮಡದಿಯರು ಸತಿಹೋದರೆಂದೂ ತಿಳಿದುಬರುತ್ತದೆ.[44]

ಹೆಗ್ಗಡದೇವನಕೋಟೆ ತಾಲೂಕಿನ ಹೆಬ್ಬಲಗುಪ್ಪೆ ಸ್ಮಾರಕಶಿಲ್ಪದ ಮೊದಲ ಹಂತದಲ್ಲಿ ನವಲಾಪಿರಾಜನನ್ನು ಇಬ್ಬರು ಯೋಧರು ಆಯುಧದಿಂದ ಇರಿಯುತ್ತಿರುವುದನ್ನು ತೋರಿಸಲಾಗಿದೆ.[45] ಇದೇ ಭಾಗದಲ್ಲಿಯೇ ಸತಿಯನ್ನು ಕಂಡಿರಿಸಲಾಗಿದೆ. ಎರಡನೆಯ ಹಂತದಲ್ಲಿ ಮಡಿದ ವೀರನನ್ನು ದೇವತಾಸ್ತ್ರೀಯರು ನೃತ್ಯವಾದ್ಯದೊಂದಿಗೆ ಒಯ್ಯುತ್ತಿದ್ದಾರೆ. ಈ ಭಾಗದಲ್ಲಿ ಸತಿಹೋದ

ನವಲಾಕ್ಷಿರಾಜನ ಪತ್ನಿಯನ್ನು ತೋರಿಸಿಲ್ಲವೆಂಬುದನ್ನು ಗಮನಿಸಬೇಕು. (ಚಿತ್ರ–52). ಇದೇ ರೀತಿ ಕೋಟಿಮಲ್ಲೂರು ಮತ್ತು ಅರಕೆರೆ (ಶ್ರೀರಂಗಪಟ್ಟಣ) ಗ್ರಾಮಗಳಲ್ಲಿಯ ಸ್ಮಾರಕ ಶಿಲ್ಪಗಳಲ್ಲಿ ಕೆಳಹಂತದಲ್ಲಿ ವೀರನ ಹೋರಾಟದೊಂದಿಗೆ ಮಹಾಸತಿಯ ಶಿಲ್ಪವನ್ನೂ ಬಿಡಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಕೆಲವು ಸ್ಮಾರಕ ಶಿಲ್ಪಗಳ ಕೆಳಹಂತದಲ್ಲಿ ಸತಿ ಅಗ್ನಿಪ್ರವೇಶ ಮಾಡುವ ಅಪರೂಪದ ವಿವರಗಳನ್ನು ಬಿಡಿಸಲಾಗಿದೆ. ಹಿರೇಕೆರೂರ ತಾಲೂಕಿನ ರಟ್ಟಿಹಳ್ಳಿ, ಶಿಕಾರಿಪುರ ತಾಲೂಕಿನ ಬಳ್ಳಿಗಾವೆ ತೀರ್ಥಹಳ್ಳಿ ತಾಲೂಕಿನ ಕವಿಲಿದುರ್ಗ ಈ ಗ್ರಾಮಗಳಲ್ಲಿ ಇಂಥ ಶಿಲ್ಪಗಳಿರುವುದನ್ನು ಇಲ್ಲಿ ಉದಾಹರಿಸಬಹುದಾಗಿದೆ. (ಇವುಗಳ ಕುರಿತು ಹಿಂದೆ ವಿವರಿಸಲಾಗಿದೆ). ಕವಿಲೆದುರ್ಗದ ಕೆರೆಯ ದಂಡೆಯ ಮೇಲಿರುವ ಮಾಸ್ತಿ ಶಿಲ್ಪವೊಂದರಲ್ಲಿ ಕೆಳಹಂತದಲ್ಲಿ ಲಿಂಗವನ್ನು ಬಿಡಿಸಲಾಗಿರುವುದು ವಿಶೇಷವಾಗಿದೆ.

ಸ್ಮಾರಕಶಿಲೆಯ ಮೂರನೆಯ ಭಾಗ ಸಾಮಾನ್ಯವಾಗಿ ಶಿಲ್ಪದಲ್ಲಿರುವ ವ್ಯಕ್ತಿಗಳ ಮತಕ್ಕನುಗುಣವಾಗಿ ರಚನೆಗೊಂಡಿರುತ್ತದೆ. ಶೈವಮತಕ್ಕನುಗುಣವಾಗಿ ಲಿಂಗ, ಬಸವ, ಪೂಜಿಸುವ ಅರ್ಚಕರನ್ನು ಈ ಭಾಗದಲ್ಲಿ ಬಿಡಿಸಲಾಗಿರುತ್ತದೆ. ಅರ್ಚಕನ ಶಿಲ್ಪವನ್ನು ಉದ್ದದ ಜಡೆಬಿಟ್ಟಿರುವಂತೆಯೂ, ಅಥವಾ ಜಡೆ ಕಟ್ಟಿಕೊಂಡಿರುವಂತೆಯೂ ಬಿಡಿಸಲಾಗಿರುತ್ತದೆ. ಅವನು ಶಿವಲಿಂಗವನ್ನು ಪೂಜಿಸುವಂತೆ ಗಂಟೆ, ಧೂಪಾರತಿಗಳ ಸಮೇತ ನಿಂತುಕೊಂಡಿರುವಂತೆ ತೋರಿಬರುತ್ತಾನೆ. ಒಮ್ಮೊಮ್ಮೆ ಈ ಭಾಗದಲ್ಲಿ ನಾಗವನ್ನು, ಆಕಳ ಹಾಲನ್ನು ಕುಡಿಯುವ ಕರುವನ್ನು ಚಿತ್ರಿಸಲಾಗಿರುತ್ತದೆ. ಕುಣಗನಹಳ್ಳಿ ಸ್ಮಾರಕ ಶಿಲೆಯಲ್ಲಿ ದೇವಾಲಯದಲ್ಲಿ ಶಿವಲಿಂಗವನ್ನು, ಅದೀನಿಗದ್ದೆ ಸ್ಮಾರಕಶಿಲೆಯಲ್ಲಿ ಆನೆಗಳ ಮಧ್ಯ ಶಿವಲಿಂಗವನ್ನು, ತೋರಿಸಲಾಗಿದೆ. ಹಂಪೆಯ ತುಲಾಭಾರ ಸ್ತಂಭದ ಬಳಿ ಇರುವ ಸ್ಮಾರಕ ಶಿಲ್ಪವೊಂದರ ಮೂರನೆಯ ಹಂತದಲ್ಲಿ ವೀರನೊಬ್ಬನು ಸಹಗಮನ ಮಾಡಿದ ತನ್ನ ಪತ್ನಿಯರಿಬ್ಬರ ಸಮೇತ ವೈಷ್ಣವ ಲಾಂಛನಗಳಾದ ಶಂಖ, ಚಕ್ರ, ಪದ್ಮ ಮತ್ತು ತ್ರಿನಾಮಗಳಿಗೆ ನಮಸ್ಕರಿಸುತ್ತಿದ್ದುದನ್ನು ಚಿತ್ರಿಸಲಾಗಿದೆ. ಧಾರವಾಡ ಜಿಲ್ಲೆಯ ಬಾಳೂರು ಮತ್ತು ಸೊರಬ ತಾಲೂಕಿನ ಹಿರೇಆವಲಿ ಗ್ರಾಮಗಳಲ್ಲಿರುವ ಸ್ಮಾರಕ ಶಿಲ್ಪಗಳ ಮೂರನೆಯ ಹಂತದಲ್ಲಿ ತೀರ್ಥಂಕರರ ಸಾನಿಧ್ಯದಲ್ಲಿ ಸತಿಹೋದವಳನ್ನು ಬಿಡಿಸಲಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ ಹೀಗೆ ಮೂರನೆಯ ಹಂತದ ಶಿಲ್ಪದ ರಚನೆ ಹೆಚ್ಚುಕಡಿಮೆ ಘಟನೆಗೆ ಸಂಬಂಧಿಸಿದ ವ್ಯಕ್ತಿಯ ಮತಕ್ಕನುಗುಣವಾಗಿ ಇರುವುದನ್ನು ಕಾಣುತ್ತೇವೆ. ಈ ಶಿಲ್ಪ ಶಾಂತರಸದ ಉನ್ನತ ಅಭಿವ್ಯಕ್ತಿಯಾಗಿರುವುದೆಂದು ಹೇಳಿದರೂ ತಪ್ಪಾಗಲಿಕ್ಕಿಲ್ಲ.

(ಇ) <u>ಸತಿ – ಪತಿಸ್ಥಾನ ಸಮಾನವುಳ್ಳ ಸ್ಮಾರಕ ಶಿಲ್ಪಗಳು :</u> ಮೃತನಾದ ಪತಿ ಹಾಗೂ ಸತಿ ಹೋದ ಪತ್ನಿ –ಇವರನ್ನು ಸಮಾನವಾಗಿ ಕಂಡರಿಸಿದ ಸ್ಮಾರಕಶಿಲ್ಪಗಳು ಹಲವು ದೊರಕುತ್ತವೆ. ಬೆಂಗಳೂರಿನ ಬೀರೇಶ್ವರ ದೇವಾಲಯದ ಆವರಣ, ಕಿತ್ತೂರು, ಕಮಲಾಪುರ, ಮತ್ತು ಶಿವಮೊಗ್ಗದ ವಸ್ತುಸಂಗ್ರಹಾಲಯಗಳು, ಕೊಳ್ಳೇಗಾಲ ತಾಲೂಕಿನ ಮುಡಿಗುಂಡ, ತೀರ್ಥಹಳ್ಳಿ ತಾಲೂಕಿನ ಕವಲೇದುರ್ಗ, ಹೊನ್ನಾವರ ತಾಲೂಕಿನ ಉಪ್ಪಿನಗೋಳಿಗ್ರಾಮ, ಸೊರಬ ತಾಲೂಕಿನ ಕುಪ್ಪೆ – ಕುಬತಿ – ಮಂಗಳೂರು – ಕೊಂಡಗಳಲೆಗ್ರಾಮಗಳು, ಹಿರಿಯೂರು ತಾಲೂಕಿನ ಯರಬಳ್ಳಿ, ಹೊಸಪೇಟೆ ತಾಲೂಕಿನ ಹಂಪೆ –ಈ ಮೊದಲಾದೆಡೆಗಳಲ್ಲಿ ಇಂಥ ಮಾಸ್ತಿಶಿಲ್ಪಗಳು ದೊರಕುತ್ತವೆ.

ಕವಲೇದುರ್ಗದಲ್ಲಿಯ ಮಾಸ್ತಿಶಿಲ್ಪವೊಂದರಲ್ಲಿ ಪತಿ ಕೈಮುಗಿದು ನಿಂತುಕೊಂಡಿದ್ದರೆ ಪತ್ನಿಯು ನೃತ್ಯಮಾಡುತ್ತ ನಿಂತಿದ್ದಾಳೆ. ಅವಳಿಗೆ ಸುಂದರವಾಗಿ ದಂಡೆ ಬಿಡಿಸಲಾಗಿದೆ.(ಚಿತ್ರ–94). ಇದನ್ನು ಹೋಲುವ ಹಲವು ಶಿಲ್ಪಗಳು ಅಲ್ಲಿವೆ (ಚಿತ್ರ–95). ಅಲ್ಲಿಯ ಇನ್ನೊಂದು ಶಿಲ್ಪದಲ್ಲಿ ಪತಿ ಕೈಮುಗಿದು ಕುಳಿತುಕೊಂಡಿದ್ದರೆ ಪತ್ನಿ ಕುಳಿತು ಎರಡೂ ಕೈಗಳನ್ನು ಎತ್ತಿ ಹಿಡಿದು ಕೊಂಡಿದ್ದಾಳೆ. ಯರಬಳ್ಳಿಯ ಶಿಲ್ಪವೊಂದರಲ್ಲಿ ಪತಿ ಬಿಲ್ಲು ಹಿಡಿದು ನಿಂತುಕೊಂಡಿದ್ದರೆ ಪತ್ನಿ ಎಡಗೈಯಲ್ಲಿ ಕನ್ನಡಿ ಹಿಡಿದುಕೊಂಡು ಮುಖ ನೋಡಿಕೊಳ್ಳುತ್ತಿದ್ದಾಳೆ.(ಚಿತ್ರ–78). ಇನ್ನೊಂದು ಇಲ್ಲಿಯ ಶಿಲ್ಪದಲ್ಲಿ ಪತಿ ಆಯುಧ ಹಿಡಿದುಕೊಂಡು ಬಲಗೈ ಎತ್ತಿ ನಿಂತಿದ್ದರೆ ಪತ್ನಿ ಕೈಮುಂದಕ್ಕೆ ಚಾಚಿಕೊಂಡು ನಿಂತಿದ್ದಾಳೆ. ಈ ಶಿಲ್ಪದ ಮೇಲ್ಭಾಗದಲ್ಲಿ ಆಕಳು ಕರು ಹಾಲನ್ನು ಕುಡಿಯುವುದನ್ನು ಕಂಡರಿಸಲಾಗಿದೆ (ಚಿತ್ರ–83) ಮಂಗಳೂರಿನ ಶಿಲ್ಪವೊಂದರಲ್ಲಿ ಕಿರೀಟ ಧರಿಸಿದ ಪತಿ ಬಲಭಾಗದಲ್ಲಿ ನಿಂತುಕೊಂಡಿದ್ದರೆ ಪತ್ನಿ ಎಡಗೈ ಎತ್ತಿಕೊಂಡು ನಿಂತುಕೊಂಡಿದ್ದಾಳೆ. ಇವಳು ಸ್ಕರ್ಟ್‌ದಂಥ ಉಡಿಗೆ ತೊಟ್ಟಿರುವುದು ವಿಶೇಷವಾಗಿದೆ.(ಚಿತ್ರ–96). ಒಂದು ಸ್ಮಾರಕಶಿಲ್ಪದಲ್ಲಿ ಪತಿ ಕೈಮುಗಿದು ಕುಳಿತುಕೊಂಡಿದ್ದರೆ ಪತ್ನಿ ಬಲಗೈ ಎತ್ತಿ ನಿಂತಿರುವುದನ್ನು ಕಾಣುತ್ತೇವೆ.(ಚಿತ್ರ–97). ಇನ್ನೊಂದರಲ್ಲಿಪತಿ ಎರಡೂ ಕೈಯಲ್ಲಿ ಆಯುಧ ಹಿಡಿದು ನಿಂತು ಕೊಂಡಿದ್ದರೆ, ಪತಿ ಬಲಗೈ ಎತ್ತಿ ಎಡಗೈ ಇಳಿಸಿ ಗಿಂಡಿ ಹಿಡಿದುಕೊಂಡು ನಿಂತಿರುವುದನ್ನು ಕಾಣುತ್ತೇವೆ.(ಚಿತ್ರ–98). ಮುಡಿಗುಂಡ ಗ್ರಾಮದಲ್ಲಿ ದೊರಕುವ ಸ್ಮಾರಕ ಶಿಲ್ಪಗಳಂತೂ ಅಪೂರ್ವವಾಗಿವೆ. ಪತಿಯೊಂದಿಗೆ ನಿಂತುಕೊಂಡಸತಿ, ಪತಿಯ ಬೆನ್ನಿಗೆ ಕೈಹಾಕಿಕೊಂಡು ನಿಂತ ಸತಿ, ಪತಿಯೊಂದಿಗೆ ಕುಣಿಯುತ್ತಿರುವ ಸತಿ, ಕುಳಿತ ಪತಿಯೊಂದಿಗೆ ಅನ್ಯೋನ್ಯವಾಗಿ

ನಿಂತ ಸತಿ, ಪತಿಯೊಂದಿಗೆ ಉಲ್ಲಾಸದಲ್ಲಿರುವ ಸತಿ—ಇತ್ಯಾದಿ ಶೈಲಿಯ ಸ್ಮಾರಕಶಿಲ್ಪಗಳು ಅಲ್ಲಿ ಸಿಗುತ್ತವೆ. (ಚಿತ್ರ 99,100). ಕಮಲಾಪುರ ವಸ್ತುಸಂಗ್ರಹಾಲಯದಲ್ಲಿರುವ ಶಿಲ್ಪದಲ್ಲಿ ಪತಿ ಕೈಮುಗಿದು ನಿಂತುಕೊಂಡಿದ್ದರೆ ಪತ್ನಿ ಎಡಗೈ ಎತ್ತಿ ನಿಂತುಕೊಂಡಿದ್ದಾಳೆ.(ಚಿತ್ರ—101). ಹಂಪೆಯಲ್ಲಿರುವ ಸ್ಮಾರಕಶಿಲ್ಪ ಮೂವರು ಪತ್ನಿಯರು ಸತಿಹೋದುದನ್ನು ತಿಳಿಸುತ್ತದೆ. ಪತಿ ಕೈಮುಗಿದು ಕುಳಿತುಕೊಂಡಿದ್ದಾನೆ ಅವನ ಬಲಭಾಗದಲ್ಲಿ ಒಬ್ಬಳು ಮತ್ತು ಎಡಭಾಗದಲ್ಲಿ ಇಬ್ಬರು ಪತ್ನಿಯರು ಬಲಗೈ ಎತ್ತಿಕೊಂಡು ನಿಂತಿದ್ದಾರೆ. ಈ ವಿಗ್ರಹಗಳನ್ನು ಸಮಾನವಾಗಿ ಕಂಡಿರಿಸಲಾಗಿದೆ.(ಚಿತ್ರ—102). ಹೀಗೆ ಪತಿ—ಪತ್ನಿಯರನ್ನು ಸಮಾನವಾಗಿ ಕಂಡಿರಿಸಿದ ಶಿಲ್ಪಗಳ ಮೂಲ ಉದ್ದೇಶವೆಂದರೆ ಅವರಲ್ಲಿಯ ಸಮಾನ ವ್ಯಕ್ತಿತ್ವವನ್ನು ಸಾರುವುದೇ ಆಗಿತ್ತೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

(ಈ) ಸ್ವತಂತ್ರ ಮಾಸ್ತಿಶಿಲ್ಪ : ಮಾಸ್ತಿಶಿಲ್ಪಗಳು, ಕೆಲವು ಕೇವಲ ಸತಿ ವಿಗ್ರಹವನ್ನು ಮಾತ್ರ ಒಳಗೊಂಡಿರುತ್ತವೆ. ಉಂಡಿಗಣಾಳುಗ್ರಾಮದ ಚೌಡೇಶ್ವರಿ ದೇವಾಲಯ ಮುಂದಿನ ಮಾಸ್ತಿಶಿಲ್ಪದಲ್ಲಿ ಪತಿಯ ಚಿತ್ರವಿಲ್ಲದ್ದನ್ನು ಗಮನಿಸಬೇಕು ಸತಿಯು ಬಲಗೈ ಎತ್ತಿ ನಿಂತುಕೊಂಡಿದ್ದಾಳೆ. (ಚಿತ್ರ—103). ಇಲ್ಲಿಯ ಇನ್ನೊಂದು ಶಿಲ್ಪದಲ್ಲಿ ಸತಿ ಬಲಗೈ ಎತ್ತಿ ಲಿಂಬೆಹಣ್ಣನ್ನು ಹಿಡಿದುಕೊಂಡು ನಿಂತಂತೆ ಚಿತ್ರಿಸಲಾಗಿದೆ. ಈ ಮಾಸ್ತಿಶಿಲ್ಪದಲ್ಲಿಯೂ ಪತಿಯ ಚಿತ್ರ ಇಲ್ಲದಿರುವುದನ್ನು ಗಮನಿಸಬಹುದಾಗಿದೆ. ಇದೇ ರೀತಿ ಭಟ್ಕಳ ತಾಲೂಕಿನ ಶಿರಾಲಿ, ಚಿತ್ರದುರ್ಗ ಜಿಲ್ಲೆಯ ಮತ್ತಿ, ಶಿವಮೊಗ್ಗದ ವಸ್ತುಸಂಗ್ರಹಾಲಯ, ಗುಂಡ್ಲುಪೇಟೆ ತಾಲೂಕಿನ ಎರೆಯೂರು ಈ ಮೊದಲಾದೆಡೆಗಳಲ್ಲಿ ದೊರಕುವ ಮಾಸ್ತಿಶಿಲ್ಪಗಳಲ್ಲಿ ಪತಿ ಚಿತ್ರ ಇಲ್ಲದಿರುವುದನ್ನು ಸ್ಮರಿಸಬಹುದಾಗಿದೆ. ಇಂಥ ಮಾಸ್ತಿಶಿಲ್ಪಗಳು ಮುಖ್ಯವಾಗಿ ಸತಿಘಟನೆಯನ್ನು ಸಾರುವ ಉದ್ದೇಶ ಹೊಂದಿ ರಚನೆಗೊಂಡವುಗಳಾಗಿವೆ ಎಂದು ಹೇಳಬಹುದಾಗಿದೆ.

(ಉ) ಎತ್ತಿದ ತೋಳುಗೈ ಕಂಬದ ಶಿಲ್ಪ : ಕರ್ನಾಟಕದಲ್ಲಿ ಎತ್ತಿದ ತೋಳಗೈ ಕಂಬದ ಮಾಸ್ತಿ ಶಿಲ್ಪಗಳು ಹೆಚ್ಚು ಪ್ರಮಾಣದಲ್ಲಿ ದೊರಕುತ್ತವೆ. ಈ ಸಾಂಕೇತಿಕ ಶಿಲ್ಪ ಹೆಚ್ಚು ಪ್ರಿಯವಾದುದರಿಂದಲೂ, ಶಿಲ್ಪಿಗಳಿಗೆ ಅದನ್ನು ಕಂಡಿರಿಸುವಲ್ಲಿ ಸರಳತೆ ಕಂಡು ಬಂದಿರುವುದರಿಂದಲೂ, ಜನತೆಯಲ್ಲಿ ಸ್ತ್ರೀಯರ ಕುರಿತಾಗಿ ಗೌಣಭಾವ ಇದ್ದಿರುವುದರಿಂದಲೂ ಇಂಥ ಎತ್ತಿದ ತೋಳಗೈ ಕಂಬದ ಸರಳ ಶಿಲ್ಪಗಳು ಹೆಚ್ಚು ಹೆಚ್ಚು ರಚನೆಗೊಂಡವೆಂದು ಹೇಳಬಹುದಾಗಿದೆ. ಈ ಶಿಲ್ಪಗಳು ಕಲಾತ್ಮಕತೆಯಲ್ಲಿ ಸಾಮಾನ್ಯಮಟ್ಟದವುಗಳಾಗಿಯೂ, ರಚನೆಯಲ್ಲಿ ಒಂದರಪ್ರತಿಇನ್ನೊಂದಾಗಿಯೂ

ಇದ್ದರೂ ಸತಿಘಟನೆಗಳನ್ನು ಅಭಿವ್ಯಕ್ತಿಸುವಲ್ಲಿ ಇವು ಮುಖ್ಯವಾಗಿವೆ. ಅಲ್ಲದೆ ಕೆಲವು ಶಿಲ್ಪಿಗಳು ಇವುಗಳನ್ನು ಕೆತ್ತುವಲ್ಲಿ ವಿಶೇಷ ಕಲಾವಂತಿಕೆಯನ್ನು ಮೆರೆದದ್ದನ್ನೂ ಇಲ್ಲಿ ಸ್ಮರಿಸಬಹುದಾಗಿದೆ.

ಸಾಮಾನ್ಯವಾಗಿ ಕಲ್ಲಿನ ಎಡಭಾಗದಲ್ಲಿ ಕಂಬದ ರಚನೆಯನ್ನು ಬಿಡಿಸಲಾಗಿರುತ್ತದೆ. ಅದರ ಮಧ್ಯಭಾಗದಿಂದ ಬಲದ ಎತ್ತಿದ ತೋಳಗೈಯನ್ನು ತೋರಿಸಲಾಗಿರುತ್ತದೆ. ಹೆಬ್ಬೆರಳು ಮತ್ತು ತೋರಬೆರಳಿನ ಮಧ್ಯ ಲಿಂಬೆಹಣ್ಣನ್ನು ಕಂಡಿರಿಸಲಾಗಿರುತ್ತದೆ. ಕೆಲವುಸಲ ಬೆರಳುಗಳ ಉಗುರುಗಳನ್ನು ಸೌಂದರ್ಯಕ್ಕಾಗಿ ಉದ್ದಾಗಿ ಚಿತ್ರಿಸಲಾಗಿರುತ್ತದೆ. ಕಂಬದಿಂದ ಹೊರಟ ಎತ್ತಿದ ಕೈ ಯಾವತ್ತೂ ಬಲಗೈಯಾಗಿರುತ್ತದೆ ಎಂಬುದನ್ನು ಲಕ್ಷಿಸಬೇಕು. ಇದಕ್ಕಾಗಿಯೇ ಕಲ್ಲಿನ ಎಡಭಾಗದಲ್ಲಿ ಮಾತ್ರ ಕಂಬದ ರಚನೆಗಳು ಕಾಣಿಸಿಕೊಂಡವೆನ್ನಬೇಕು. ಬೀದರ ಜಿಲ್ಲೆಯ ಸಸ್ತಾಪುರ ದಂಥ ಮಾಸ್ತಿಶಿಲ್ಪದಲ್ಲಿ ಕಂಬದ ರಚನೆ ಮಧ್ಯದಲ್ಲಿದ್ದರೂ ಅದರಿಂದಲೂ ಬಲಗೈ ಎತ್ತಿದ್ದನ್ನೇ ತೋರಿಸಲಾಗಿರುವುದನ್ನು ಸ್ಮರಿಸಬಹುದಾಗಿದೆ. (ಚಿತ್ರ-62). ಇದಕ್ಕೆ ಅಪವಾದವೆಂಬಂತೆ ಉಡಿಗನಾಳು ಗ್ರಾಮದ ಮಾಸ್ತಿಶಿಲ್ಪವೊಂದರಲ್ಲಿ ಎಡಗೈ ಎತ್ತಿದ್ದನ್ನು ತೋರಿಸಲಾಗಿದೆ (ಚಿತ್ರ-104). ಈ ಕಲ್ಲಿನ ಮಧ್ಯಭಾಗದಲ್ಲಿ ಕಂಬದ ರಚನೆ ತೀರ ಸಾಧಾರಣ ಮಟ್ಟದ್ದಾಗಿದ್ದು, ಅದರಿಂದ ಎಡಗೈ ಎತ್ತಿದ ಚಿತ್ರವೂ ತೀರ ಸಾಮಾನ್ಯ ಮಟ್ಟದ್ದಾಗಿರುವುದನ್ನು ಗಮನಿಸಬಹುದಾಗಿದೆ. ಕಂಬ ಅಥವಾ ಕೈಯ ಶಿಲ್ಪ ಬಿಡಿಸುವಲ್ಲಿ ಶಿಲ್ಪಿಗೆ ಯಾವ ವಿಶೇಷ ಕಾಳಜಿಯಾಗಲೀ, ಅದರ ಮಹತ್ವದ ಅರಿವಾಗಲೀ ಇದ್ದಂತಿಲ್ಲವೆನಿಸುತ್ತದೆ. ಅಥವಾ ಈ ಸ್ಮಾರಕ ಶಿಲೆಯ ಶಿಲ್ಪಿ ಶಿಲ್ಪ ಬಿಡಿಸುವಲ್ಲಿ ಹೊಸಬನಾಗಿರಬಹುದೆಂದು) ಅಥವಾ ತರಬೇತಿ ಪಡೆಯುವವನಾಗಿರಬೇಕೆಂದೂ ಹೇಳಬಹುದಾಗಿದೆ.

ಕಂಬದಿಂದ ಹೊರಟ ತೋಳಗೈಯನ್ನು ಚಿತ್ರಿಸಲು ಸಾಮಾನ್ಯವಾಗಿ ಅಗಲ ಮತ್ತು ಉದ್ದದ ಶಿಲೆಯನ್ನು ಶಿಲ್ಪಿಗಳು ಮೊದಲಿಗೆ ಆಯ್ಕೆ ಮಾಡಿಕೊಳ್ಳುತ್ತಿದ್ದರೆನಿಸುತ್ತದೆ. ಈ ಸ್ಮಾರಕ ಶಿಲೆಯಲ್ಲಿ ಪತಿ-ಪತ್ನಿಯರನ್ನು ಕಂಡಿರಿಸಬೇಕಾಗಿದ್ದರೆ ಅಥವಾ ಪತಿಯ ಹೋರಾಟದ ದೃಶ್ಯವನ್ನು ಚಿತ್ರಿಸಬೇಕಾಗಿದ್ದರೆ ಸಹಜವಾಗಿಯೇ ಶಿಲೆ ಇನ್ನಷ್ಟು ದೊಡ್ಡದಾಗಿರುತ್ತಿತ್ತು. ಹೀಗೆ ಶಿಲ್ಪಿ ಕಲ್ಲನ್ನು ವಿಷಯ ನಿರೂಪಣೆಗೆ ತಕ್ಕಂತೆ ಆಯ್ಕೆ ಮಾಡಿಕೊಂಡಾದ ಮೇಲೆ, ಅದರಲ್ಲಿ ಕಂಬವನ್ನು ಮೊದಲಿಗೆ ಚಿತ್ರಿಸಿಕೊಂಡು, ಅದರಿಂದ ಬಲಗೈಯನ್ನು ಎತ್ತಿದಂತೆ ಬಿಡಿಸಿಕೊಳ್ಳುತ್ತಿದ್ದರೆನಿಸುತ್ತದೆ. ಇಂಥ ಸ್ಮಾರಕಶಿಲೆಗಳಲ್ಲಿ ತೋಳಗೈ ಮೇಲೆ ಪತಿ-ಪತ್ನಿಯರು ಕೈಮುಗಿದುಕೊಂಡು ಕುಳಿತಿದ್ದನ್ನು ಚಿತ್ರಿಸಲು ಶಿಲ್ಪಿ ಸಾಮಾನ್ಯವಾಗಿ ಮರೆಯುತ್ತಿರಲಿಲ್ಲ. ಕೆಲವೊಮ್ಮೆ ಅಂಕನಹಳ್ಳಿಯಂಥ ಸುಂದರ ಮಾಸ್ತಿಕಲ್ಲುಗಳಲ್ಲಿ ಪತಿ-ಪತ್ನಿಯರು ತೋಳಿನ ಕೆಳಭಾಗದಲ್ಲಿಯೂ

ನಿಂತಿರುವುದುಂಟು. ಶಿವಮೊಗ್ಗ ಜಿಲ್ಲೆಯ ಗ್ರಾಮವೊಂದರಲ್ಲಿಯ ಮಾಸ್ತಿಕಲ್ಲಿನಲ್ಲಿ ತೋಳಗೈ ಕೆಳಗೆ ಪತಿ ಕುಳಿತಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಹೀಗೆ ಎತ್ತಿದ ತೋಳಗೈ ಕಂಬದ ಸ್ಮಾರಕ ಶಿಲೆಯ ಅಂಶ್ಯ ಹಾಗೂ ಅದರ ಶಿಲ್ಪ ನಿರ್ಮಾಣದ ರೀತಿಯಲ್ಲಿ ಒಂದು ನಿರ್ದಿಷ್ಟಕ್ರಮವನ್ನು ಅನುಸರಿಸುತ್ತ ಬಂದರೆಂದು ಹೇಳಬಹುದಾಗಿದೆ.

ಮಾಸ್ತಿಸ್ಮಾರಕ ಶಿಲೆಗಳಲ್ಲಿಯ ಕಂಬಗಳು ಸಾಮಾನ್ಯವಾಗಿ ಚೌಕ ಆಕಾರಗಳನ್ನು ಪಡೆದವುಗಳಾಗಿದ್ದು ಮೇಲೆ ಚೂಪಾಗುತ್ತ ಹೋಗಿರುತ್ತವೆ. ಅವುಗಳಲ್ಲಿ ಕೆಲವೊಮ್ಮೆ ಕಂಬದ ಸ್ಪಷ್ಟತೆ ಮತ್ತು ಸೌಂದರ್ಯವನ್ನು ತೋರಿಸುವುದಕ್ಕಾಗಿ ಶಿಲ್ಪಿಗಳು ಏರು-ಪೇರುಗಳ ಕೆತ್ತನೆಯನ್ನು ಮಾಡಿರುತ್ತಾರೆ. ಕಂಬಗಳ ಮೇಲೆ ಹೂವುಗಳ ಚಿತ್ರಗಳನ್ನು, ಮುತ್ತಿನ ಹಾರಗಳನ್ನು, ಸುಂದರ ವಾದ ಬಳ್ಳಿಯ ವಿನ್ಯಾಸಗಳನ್ನು ಬಿಡಿಸಲಾಗಿರುತ್ತದೆ. ಕಂಬದಿಂದ ತೋಳಗೈ ಹೊರಡುವ ಸ್ಥಾನ ಬಹುಮುಖ್ಯವಾಗಿರುವುದರಿಂದ ಸಾಮಾನ್ಯವಾಗಿ ಅಲ್ಲಿ ಸುಂದರವಾದ ಹೂವನ್ನು ಬಿಡಿಸಲಾಗಿರುತ್ತದೆ. ಕೆಲವೊಮ್ಮೆ ಅದೇ ಸ್ಥಾನದಲ್ಲಿ ಪತಿ-ಪತ್ನಿಯರು ಕುಳಿತಿದ್ದನ್ನು ಬಿಡಿಸಲಾಗಿರುತ್ತದೆ. ಕೆಲವು ಸಲ ಅವರನ್ನು ವಿಮಾನದಲ್ಲಿ ದೇವಲೋಕಕ್ಕೆ ತಗೆದುಕೊಂಡು ಹೋಗುತ್ತಿದ್ದಂತೆಯೂ ಅಲ್ಲಿಯೇ ತೋರಿಸಲಾಗಿರುತ್ತದೆ. ಕಂಬದ ಮೇಲ್ಭಾಗವನ್ನು ಗೋಪುರಾಕಾರವಾಗಿಯೂ ಸುಂದರವಾಗಿಯೂ ಕಂಡರಿಸಲಾಗಿರುತ್ತದೆ. ಅರಸಿಕೆರೆ ತಾಲೂಕಿನ ಉಂಡಿಗನಾಳು, ಹಾಸನ ಜಿಲ್ಲೆಯ ಚೌಡನ ಹಳ್ಳಿ ಈ ಮೊದಲಾದ ಗ್ರಾಮಗಳಲ್ಲಿಯ ಮಾಸ್ತಿಶಿಲ್ಪದಲ್ಲಿಯ ಕಂಬಗಳು ದುಂಡನೆಯ ರಚನೆ ಹೊಂದಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಚೌಡನಹಳ್ಳಿಯ ಮಾಸ್ತಿಶಿಲ್ಪ ತುಂಬ ಮಹತ್ವವುಳ್ಳದಾಗಿದೆ (ಹಿಂದೆ ಈ ಶಿಲ್ಪದ ಕುರಿತು ದೀರ್ಘವಾಗಿ ವಿವರಿಸಲಾಗಿದೆ.) ಈ ಸ್ಮಾರಕ ಶಿಲೆಯಲ್ಲಿ ಮೂರುಭಾಗಗಳಿವೆ. ಎಡಭಾಗ ದಲ್ಲಿಯ ಕಂಬದ ರಚನೆ ಮೊದಲನೆಯ ಭಾಗದ ಕೆಳಗಿನಿಂದ ಎರಡನೆಯ ಭಾಗದ ಮೇಲಿನ ವರೆಗೂ ವ್ಯಾಪಿಸಿಕೊಂಡಿದೆ. ಅದರಿಂದ ಎತ್ತಿದ ಬಲಗೈ ತೋಳನ್ನು ಬಿಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ಕುದುರೆಯ ಮೇಲೆ ಸತಿ ಕುಳಿತಿರುವುದನ್ನೂ, ಎರಡನೆಯ ಭಾಗದಲ್ಲಿ ಅವಳು ತನ್ನ ಪತಿಯೊಂದಿಗೆ ಅನ್ಯೋನ್ಯವಾಗಿ ಹೆಗಲಮೇಲೆ ಕೈಹಾಕಿ ನಿಂತಿರುವುದನ್ನೂ ತೋರಿಸಲಾಗಿದೆ. ಮೇಲ್ಭಾಗದಲ್ಲಿ ದೈವ ಸಾನಿಧ್ಯದಲ್ಲಿ ಪತಿ-ಸತಿ ಕೈಮುಗಿದುಕೊಂಡು ಕುಳಿತ್ತಿದ್ದಾರೆ. ಹೀಗೆ ಪತ್ನಿ ಕುದುರೆಯ ಮೇಲೆ ಕುಳಿತು ಸತಿ ಹೋಗುವಾಗ ಮೆರವಣಿಗೆಗೊಂಡುದು ಮೊದಲ್ಗೊಂಡು ಗಂಡನನೊಡನೆ ದೇವಲೋಕ ಪಡೆದುದನ್ನು ಚಿತ್ರಿಸುವ ವರೆಗೂ ಅಪರೂಪದ ಅಭಿವ್ಯಕ್ತಿಯನ್ನು

ಹೊಂದಿರುವ ಮಾಸ್ತಿಶಿಲ್ಪ ಇದಾಗಿರುವುದು ಕಂಡುಬರುತ್ತದೆ.(ಚಿತ್ರ—60).

ಕೊಳ್ಳೇಗಾಲ ತಾಲೂಕಿನ ಮುಡಿಗುಂಡ ಹಳ್ಳಿಯಲ್ಲಿಯ ಮಾಸ್ತಿಕಲ್ಲುಗಳು ಸುಂದರವಾಗಿವೆ. ಒಂದು ಸ್ಮಾರಕಶಿಲೆಯು ಮಧ್ಯಭಾಗದಲ್ಲಿ ಸುಂದರವಾದ ಕಂಬದ ರಚನೆ ಇದೆ. ಅದರ ಮೇಲೆ ಹೂವಿನ ಚಿತ್ರಗಳಿವೆ. ತೋಳುಗಳ ಹೊರಟ ಭಾಗದಲ್ಲಿ ಮುತ್ತಿನ ಹಾರವನ್ನು ತೊಡಿಸಲಾಗಿದೆ. ತೋಳಿನ ಮೇಲೆ ಮುತ್ತಿನ ಸರ ಮತ್ತು ಮುತ್ತಿನ ಬಳೆಗಳನ್ನು, ಮುಂಗೈಯಲ್ಲಿ ಬಳೆಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಎತ್ತಿದ ತೋಳಿನ ಕೆಳಭಾಗದಲ್ಲಿ ಪತಿ-ಪತ್ನಿ ಕುಳಿತುಕೊಂಡಿರುವ ರೀತಿ ಅಪೂರ್ವವಾಗಿದೆ. ಕರಿಕಲ್ಲಿನಲ್ಲಿ ಎದ್ದುಬರುವಂತೆ ಕಂಬ, ಎತ್ತಿದ ತೋಳುಗಳು ಮತ್ತು ಪತಿ-ಪತ್ನಿಯರನ್ನು ಕಡೆದ ಈ ಶಿಲ್ಪಿಯ ಶ್ರಮ ಸಾರ್ಥಕವಾದುದು ಎನಿಸುತ್ತದೆ.(ಚಿತ್ರ—105). ಇದೇ ರೀತಿ ಕೆರೆಯ ದಕ್ಷಿಣದಲ್ಲಿರುವ ಇನ್ನೆರಡು ಮಾಸ್ತಿಕಲ್ಲುಗಳು ಬಹುಸುಂದರವಾಗಿವೆ. ಈ ಎರಡೂ ಮಾಸ್ತಿಕಲ್ಲುಗಳು ಒಂದನ್ನೊಂದು ಹೆಚ್ಚು ಹೋಲುತ್ತವೆ. ದೊಡ್ಡದಾದ ಕಲ್ಲುಗಳ ಎಡಭಾಗದಲ್ಲಿ ಕಂಬಗಳಿವೆ. ಅವುಗಳ ಕೆಳಗಿನ ಭಾಗ ವಿಶಾಲವಾಗಿವೆ. ಅವು ಮೇಲೆ ಏರುತ್ತಾ ಹೋದಂತೆ ಚಿಕ್ಕದಾಗಿವೆ. ಅವುಗಳ ಮೇಲಿನ ಭಾಗ ಗೋಪುರಾಕಾರದಲ್ಲಿವೆ. ಈ ಕಂಬಗಳಿಂದ ಎತ್ತಿದ ಬಲಗೈ ಬಿಡಿಸಿ ತೋರಿಸಲಾಗಿದೆ. (ಚಿತ್ರ— 106, 107). ಒಂದು ಮಾಸ್ತಿಕಲ್ಲಿನ ತೋಳಿನ ಕೆಳಭಾಗದಲ್ಲಿ ಪತಿ ಬಲಭಾಗದಲ್ಲಿ ಸತಿ ಎಡಭಾಗದಲ್ಲಿದ್ದರೆ, ಇನ್ನೊಂದು ಮಾಸ್ತಿಕಲ್ಲಿನ ತೋಳಿನ ಕೆಳಭಾಗದಲ್ಲಿ ಪತಿ ಎಡಭಾಗದಲ್ಲಿದ್ದು ಸತಿ ಬಲಭಾಗದಲ್ಲಿದ್ದಾಳೆ. ಒಂದರಲ್ಲಿ ಪತಿಯ ಸೊಂಟದ ಭಾಗ ಎಡಕ್ಕೆ ವಾಲಿದ್ದರೆ, ಇನ್ನೊಂದರಲ್ಲಿ ಪತಿಯ ಸೊಂಟದ ಭಾಗ ಬಲಕ್ಕೆ ವಾಲಿದೆ. ಈ ಒಂದೆರಡು ಸಣ್ಣ ಪುಟ್ಟ ವ್ಯತ್ಯಾಸಗಳನ್ನು ಬಿಟ್ಟರೆ ಈ ಎರಡೂ ಮಾಸ್ತಿಶಿಲ್ಪಗಳು ಹೆಚ್ಚುಕಡಿಮೆ ಒಂದೇ ಆಗಿರುವುದನ್ನು ಗಮನಿಸಬಹುದಾಗಿದೆ. ಬಹುಶ: ಇವೆರಡೂ ಶಿಲ್ಪಗಳು ಒಬ್ಬ ಶಿಲ್ಪಿಯಿಂದಲೇ ನಿರ್ಮಾಣಗೊಂಡಿರಬಹುದಾಗಿದೆ.

ಕುಬಟೂರು (ಸೊರಬ) ಮಾಸ್ತಿಶಿಲ್ಪವೊಂದರಲ್ಲಿ ಎಡಭಾಗದಲ್ಲಿ ಕಂಬದ ರಚನೆಯಿದ್ದು, ಅದರಿಂದ ಬಲಗೈ ಎತ್ತಿದ್ದನ್ನು ತೋರಿಸಲಾಗಿದೆ (ಚಿತ್ರ—108). ಎತ್ತಿದ ತೋಳಿನ ಕೆಳಭಾಗದಲ್ಲಿ ವೀರ ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಹೋರಾಡುತ್ತಿದ್ದಾನೆ. ತೋಳಿನ ಮೇಲ್ಭಾಗದಲ್ಲಿ ಸತಿ ಕೈ ಮುಗಿದುಕೊಂಡು ಕುಳಿತಿದ್ದಾಳೆ. ಈ ಶಿಲ್ಪದಲ್ಲಿಯ ವಿಶೇಷತೆ ಎಂದರೆ, ಕಂಬದ ಮೇಲೆ ಸುಂದರವಾಗಿ ರೇಖೆಯಿಂದ ವೀರನ ಚಿತ್ರವೊಂದನ್ನು ಕಂಡರಿಸಲಾಗಿದೆ. ಇದೇ ಶಿಲ್ಪದಂತೆ ತೋಳಿನ ಮೇಲ್ಭಾಗದಲ್ಲಿ ಪತ್ನಿ ಕೈಮುಗಿದುಕೊಂಡು ಪಕ್ಕದಲ್ಲಿ ಕತ್ತಿ ಇಟ್ಟುಕೊಂಡು ಕುಳಿತಿರುವ

ಮಾಸ್ತಿಶಿಲ್ಪವೊಂದು ಶಿಗ್ಗಾಂವ ತಾಲೂಕಿನ ಕುಂದೂರಿನಲ್ಲಿ ಸಿಗುತ್ತದೆ (ಚಿತ್ರ–109) ಈ ತೋಳಗೈ ಕಂಬದ ಶಿಲ್ಪ ಅನುಗಮನವನ್ನು ಧ್ವನಿಸುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ. ಇನ್ನೊಂದು ತೋಳಗೈ ಎತ್ತಿದ ಮಾಸ್ತಿಶಿಲ್ಪವೊಂದರಲ್ಲಿ, ತೋಳಿನ ಕೆಳಭಾಗದಲ್ಲಿ ಬಿಲ್ಲುಬಾಣ ಗಳನ್ನು ಹಿಡಿದುಕೊಂಡು ವೀರಹೋರಾಡುತ್ತಿರುವುದನ್ನೂ, ತೋಳಿನ ಮೇಲ್ಭಾಗದಲ್ಲಿ ಮಡಿದ ಪತಿಯೊಂದಿಗೆ ಕೈಮುಗಿದುಕೊಂಡು ಸತಿ ಕುಳಿತಿರುವುದನ್ನೂ ಗಮನಿಸಬಹುದಾಗಿದೆ.(ಚಿತ್ರ–110). ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಹತ್ತಳ್ಳಿಗ್ರಾಮದಲ್ಲಿಯ ಮಾಸ್ತಿಶಿಲ್ಪವೊಂದರಲ್ಲಿ ಎತ್ತಿದ ತೋಳಿನ ಕೆಳಭಾಗದಲ್ಲಿ ಪತಿ–ಪತ್ನಿಯರು ಕುಳಿತಿದ್ದಾರೆ ಪತ್ನಿ ಎಡಭಾಗದಲ್ಲಿ ಕುಳಿತುಕೊಂಡು ಪತಿಯ ಹೆಗಲಮೇಲೆ ಎಡಗೈಯನ್ನು ಹಾಕಿದ್ದಾಳೆ. ಅವಳು ತನ್ನ ಬಲಗೈಯನ್ನು ಎತ್ತಿ ಹಿಡಿದಿದ್ದಾಳೆ. ಹೀಗೆ ಅನ್ಯೋನ್ಯವಾಗಿ ಗಂಡ–ಹೆಂಡತಿ ಕುಳಿತ ಶಿಲ್ಪ ಅಪರೂಪದ್ದಾಗಿದೆ. ಅಷ್ಟೇ ಅಲ್ಲದೆ ಕುಳಿತು ಬಲಗೈ ಎತ್ತಿದ ಸತಿ ಶಿಲ್ಪ ಇನ್ನೂ ಅಪೂರ್ವವಾದುದಾಗಿದೆ. (ಚಿತ್ರ–111).

ಬಾಡ(ಶಿಗ್ಗಾಂವ), ಕೊಂಡಗಳಲೆ(ಸೊರಬ), ನಿಡಗುಂದಿ(ಶಿಗ್ಗಾಂವ), ಕುಂಟಗಳಲೆ (ಸೊರಬ), ಹಿರಿಯೂರ(ರಾಣೆಬೆನ್ನೂರು), –ಈ ಮೊದಲಾದ ಊರುಗಳಲ್ಲಿಯ ಮಾಸ್ತಿಶಿಲ್ಪದಲ್ಲಿ ಎತ್ತಿದ ತೋಳಿನ ಕೆಳಭಾಗದಲ್ಲಿ ವೀರನ ಹೋರಾಟದ ಚಿತ್ರವಿದೆ. ಕೊಂಡಗಳಲೆಯ ಮಾಸ್ತಿಶಿಲ್ಪದಲ್ಲಿ ತೋಳುಗೈ ಕೆಳಗೆ ಎರಡು ಭಾಗಗಳಿವೆ ಕೆಳಗಿನ ಭಾಗದಲ್ಲಿ ವೀರಬಿಲ್ಲುಬಾಣಗಳನ್ನು ಹಿಡಿದು ಹೋರಾಡುತ್ತಿದ್ದಾನೆ. ಮೇಲ್ಭಾಗದಲ್ಲಿ ವೀರನೊಬ್ಬ ಕುದುರೆಯ ಮೇಲೆ ಕುಳಿತಿದ್ದಾನೆ. ಇನ್ನೊಬ್ಬ ಆಯುಧಧಾರಿ ಆ ಕುದುರೆಯನ್ನು ಹಿಡಿದುಕೊಂಡಿದ್ದಾನೆ. ಹಿರಿಯೂರದ ಮಾಸ್ತಿಶಿಲ್ಪ ವಂತೂ ಇನ್ನೂ ಉತ್ಕೃಷ್ಟವಾದುದಾಗಿದೆ. ಇಲ್ಲಿ ಎತ್ತಿದ ಬಲಗೈ ತೋಳಿನ ಕೆಳಗೆ ಎರಡು ಭಾಗ ಗಳನ್ನು ಮಾಡಲಾಗಿದೆ ಕೆಳಗಿನ ಭಾಗದಲ್ಲಿ ವೀರ ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ಬಿಲ್ಲು ಹಿಡಿದುನಿಂತಿದ್ದಾನೆ. ಎರಡನೆಯ ಭಾಗದಲ್ಲಿ ಪತಿ–ಪತ್ನಿ ಕೈಮುಗಿದು ಸುಖಾಸನದಲ್ಲಿ ಕುಳಿತುಕೊಂಡಿ ದ್ದಾರೆ. ಶಿಗ್ಗಾಂವ ತಾಲೂಕಿನ ಕುಂದೂರಿನ ಮಾಸ್ತಿಶಿಲ್ಪವೊಂದರಲ್ಲಿ ಎತ್ತಿದ ತೋಳುಗೈ ಕೆಳಗೆ ಸುಖಾಸನದಲ್ಲಿ ಸತಿಯೊಬ್ಬಳು ಕೈಮುಗಿದು ಕುಳಿತುಕೊಂಡಿದ್ದಾಳೆ. ಇವಳ ಮೇಲ್ಭಾಗದಲ್ಲಿ ಇನ್ನೊಬ್ಬಳು ಸತಿಯೂ ಹೀಗೇ ಕುಳಿತುಕೊಂಡಿದ್ದಾಳೆ. ಇವಳ ಶಿಲ್ಪ ಅವಳ ಶಿಲ್ಪಕ್ಕಿಂತಲೂ ದೊಡ್ಡದಾಗಿದೆ ಬಹುಶಃ ಮೃತನಿಗೆ ಇವರಿಬ್ಬರೂ ಪತ್ನಿಯರಾಗಿದ್ದು ಸತಿಹೋಗಿರಬೇಕೆನಿಸುತ್ತದೆ.

ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಗ್ರಾಮವೊಂದರಲ್ಲಿ ಅಪರೂಪದ ಮೂರು ಮಾಸ್ತಿಕಲ್ಲುಗಳಿವೆ.(ಚಿತ್ರ–112) ನುಣುಪಾದ ಕಲ್ಲಿನಲ್ಲಿ ಸುಂದರವಾಗಿ ಕಂಬವನ್ನೂ, ಅದರಿಂದ

ಎತ್ತಿದ ತೋಳುಗಳನ್ನೂ ಬಿಡಿಸಲಾಗಿದೆ. ಇವುಗಳಲ್ಲಿ ಒಂದು ಮಾಸ್ತಿ ಶಿಲ್ಪವಂತೂ ಇನ್ನೂ ಹೆಚ್ಚಿನ ಮಹತ್ವವುಳ್ಳದಾಗಿದೆ. ಒಂದೇ ಶಿಲೆಯಲ್ಲಿ ಎರಡು ಸುಂದರವಾದ ಕಂಬಗಳನ್ನು ರಚಿಸಿ ಅವುಗಳಿಂದ ಎತ್ತಿದ ಬಲಗೈಗಳನ್ನು ಬಿಡಿಸಿತೋರಿಸಲಾಗಿದೆ. ಇಲ್ಲಿ ಎಡದ ಕಂಬದ ತೋಳಿನ ಕೆಳಗೆ ಅಂದರೆ ಎರಡೂ ಕಂಬಗಳ ನಡುವೆ ಪತಿ ಕುಳಿತಿದ್ದಾನೆ ಈ ಶಿಲ್ಪ ವ್ಯಕ್ತಿಯೊಬ್ಬನಿಗೆ ಇಬ್ಬರು ಪತ್ನಿಯರಿದ್ದು, ಆವನು ವೃದ್ಧನಾಗಿ ಹೊಂದಲಾಗಿ ಅವರಿಬ್ಬರೂ ಮರಣಹೊಂದಿದ್ದನ್ನು ತಿಳಿಸುತ್ತದೆ. ಶಿಲ್ಪಿ ಈ ಇರ್ಕೈ ಮಾಸ್ತಿಕಲ್ಲನ್ನು ರಚಿಸುವಲ್ಲಿ ವಿಶೇಷ ಯಶಸ್ಸು ಸಾಧಿಸಿದ್ದಾನೆ. ಎರಡೂ ಕಂಬಗಳನ್ನು ಅಷ್ಟೇ ಸುಂದರವಾಗಿ, ಎತ್ತರವಾಗಿ ಚಿತ್ರಿಸುವಲ್ಲಿಯೂ ಎತ್ತಿದ ತೋಳುಗೈಯನ್ನು ಆಕರ್ಷಕವಾಗಿ ಬಿಡಿಸುವಲ್ಲಿಯೂ ಅವನು ಗಣನೀಯ ಸಾಮರ್ಥ್ಯ ತೋರಿದ್ದಾನೆ. ಈ ಶಿಲ್ಪ ನೋಡಿದರೆ ಮೃತನ ಪತ್ನಿಯರಿಬ್ಬರೂ ಸಮಾನಸ್ಥಾನ ಪಡೆದವರಾಗಿದ್ದರು ಎನಿಸುತ್ತದೆ. ಪತಿಯ ವಿಗ್ರಹವನ್ನು ಎರಡೂ ಕಂಬಗಳ ನಡುವೆ ಕಂಡಿರಿಸಿರುವುದು ಶಿಲ್ಪದ ಸೌಂದರ್ಯಕ್ಕೆ ಇನ್ನಷ್ಟು ಕಳೆ ತಂದು ಕೊಟ್ಟಿದೆ. ಈ ಮೂರೂ ಮಾಸ್ತಿಕಲ್ಲುಗಳ ಶಿಲ್ಪಿ ಬಹುಶಃ ಒಬ್ಬನೇ ಆಗಿರುವ ಸಾಧ್ಯತೆಯನ್ನೂ ತಳ್ಳಿಹಾಕುವಂತಿಲ್ಲ.

ಸೊರಬ ತಾಲೂಕಿನ ಹರೂರ ಗ್ರಾಮದಲ್ಲಿಯ ಮಾಸ್ತಿಕಲ್ಲೊಂದು ಇಬ್ಬರು ಪತ್ನಿಯರು ಸತಿಹೋದುದನ್ನು ತಿಳಿಸಿಕೊಡುತ್ತದೆ. ಈ ಸ್ಮಾರಕ ಶಿಲೆಯ ಎಡಭಾಗದಲ್ಲಿ ದೊಡ್ಡ ಕಂಬವಿದೆ ಅದರಿಂದ ಹೊರಟ ಎತ್ತಿದ ಬಲಗೈ ಚಿತ್ರವನ್ನು ಬಿಡಿಸಲಾಗಿದೆ. ಬೆರಳುಗಳ ಉಗುರುಗಳನ್ನು ಚೂಪಾಗಿ ಸುಂದರವಾಗಿ ಬಿಡಿಸಲಾಗಿದೆ. ಇದೇ ರೀತಿ ಈ ಕಂಬಕ್ಕೆ ಹೊಂದಿಕೊಂಡು ಇನ್ನೊಂದು ಚಿಕ್ಕಕಂಬವನ್ನೂ, ಅದರಿಂದ ಹೊರಟ ಎತ್ತಿದ ತೋಳುಗೈಯನ್ನೂ ಕಂಡಿರಿಸಲಾಗಿದೆ. ಇವೆರಡೂ ಕಂಬಗಳಿಗೆ ಮೇಲ್ಭಾಗದಲ್ಲಿ ಆಕರ್ಷಕವಾಗಿ ಗೋಪುರಾಕಾರಗಳನ್ನು ರಚಿಸಲಾಗಿದೆ ದೊಡ್ಡ ಕಂಬದಿಂದ ಒಡೆದು ಮೂಡಿದ ತೋಳಗೈ ಮೇಲ್ಭಾಗದಲ್ಲಿ ಕೆತ್ತಿದ ವಿಮಾನದಲ್ಲಿ ಪತಿ ಮತ್ತು ಆತನ ಪಕ್ಕಗಳಲ್ಲಿ ಪತ್ನಿಯರಿಬ್ಬರು ಕುಳಿತುಕೊಂಡಿದ್ದಾರೆ. ಬಹುಶಃ ಇವರು ಸ್ವರ್ಗಾರೋಹಣದ ಮಾರ್ಗ ಮಧ್ಯದಲ್ಲಿದ್ದಂತೆ ಶಿಲ್ಪಿ ಕಂಡಿರಿಸಲು ಇಲ್ಲಿ ಪ್ರಯತ್ನಿಸಿದಂತಿದೆ. ಮೇಲೆ ಹೇಳಿದ ಮೇಲಿನ ಈ ಮಾಸ್ತಿಶಿಲ್ಪವು ಮೃತನ ಪತ್ನಿಯರಿಬ್ಬರ ಸಮಾನಸ್ಥಾನವನ್ನು ಗುರುತಿಸಿರುವುದನ್ನು ಕಂಡರೆ, ಇಲ್ಲಿಯ ಮಾಸ್ತಿಶಿಲ್ಪವು ಮೃತನ ಪತ್ನಿಯರಲ್ಲಿದ್ದ ಹೆಚ್ಚುಕಡಿಮೆಯ ಸ್ಥಾನವನ್ನು ಗುರುತಿಸಿರುವುದನ್ನು ಕಾಣುತ್ತೇವೆ. ಸತಿಹೋದವರಲ್ಲಿ ಒಬ್ಬಳು ಹಿರಿಯವಳಾಗಿರಬಹುದು, ಇನ್ನೊಬ್ಬಳು ಕಿರಿಯವಳಾಗಿರಬಹುದು, ಅಥವಾ ಒಬ್ಬಳು ಸಮಾಜದಲ್ಲಿ ಉನ್ನತ ವ್ಯಕ್ತಿತ್ವ ಹೊಂದಿದವಳು ಇನ್ನೊಬ್ಬಳು ಆ ವ್ಯಕ್ತಿತ್ವವನ್ನು

ಪಡೆದವಳಾಗಿರಲಿಕ್ಕಿಲ್ಲ. ಈ ಬಗೆಯ ಹಲವು ಊಹೆಗಳಿಗೆ ಈ ಮಾಸ್ತಿಶಿಲ್ಪ ಕಾರಣವಾಗುತ್ತದೆ.

ಲಿಂಗನಮಕ್ಕಿ ಮತ್ತು ಬಂದಳಿಕೆಯಲ್ಲಿರುವ ಮಾಸ್ತಿಕಲ್ಲುಗಳು ಐಕ್ಯಮಾಸ್ತಿಕಲ್ಲುಗಳಾಗಿದ್ದರೂ ಮೇಲಿನ ಮಾಸ್ತಿಕಲ್ಲುಗಳಿಂದ ರಚನೆಯಲ್ಲಿ ಭಿನ್ನವಾಗಿವೆ. (ಚಿತ್ರ–113, 114). ಈ ಸ್ಮಾರಕ ಶಿಲೆಗಳ ಎಡಭಾಗದಲ್ಲಿ ಕಂಬದ ರಚನೆ ಇದ್ದರೂ ಅಷ್ಟೊಂದು ಸ್ಪಷ್ಟತೆ ಇಲ್ಲವಾಗಿದೆ. ಇದಕ್ಕೆ ಮುಖ್ಯಕಾರಣವೆಂದರೆ ಕಂಬದ ಮೇಲಿಂದಲೇ ಪತಿ ಮತ್ತು ಪತ್ನಿಯರನ್ನು, ದೇವಲೋಕವನ್ನು ಚಿತ್ರಿಸಲು ಪ್ರಯತ್ನಿಸಿರುವುದೇ ಆಗಿದೆ. ಲಿಂಗನಮಕ್ಕಿಯಲ್ಲಿಯ ಮಾಸ್ತಿಶಿಲ್ಪದ ಎಡಭಾಗದಲ್ಲಿ ಅಗಲವಾದ ಕಂಬದ ರಚನೆ ಇದೆ. ಅದರ ಮೇಲೆ ಮೂರು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಕೆಳಭಾಗದಲ್ಲಿ ಪತಿಯನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಹೋಗುತ್ತಿರುವುದನ್ನು ಚಿತ್ರಿಸಲಾಗಿದೆ. ಬಹುಶಃ ಯುದ್ಧಭೂಮಿಗೆ ವೀರನು ಹೋಗುತ್ತಿರುವುದನ್ನು ಇದು ಧ್ವನಿಸುತ್ತಿರಬಹುದಾಗಿದೆ. ಎರಡನೆಯ ಭಾಗದಲ್ಲಿ ಪತಿ ಕೈಮುಗಿದು ಕುಳಿತುಕೊಂಡಿದ್ದಾನೆ. ಈತನ ಪಕ್ಕಗಳಲ್ಲಿ, ಸತಿಯರಿಬ್ಬರು ಕೈಮುಗಿದು ಕುಳಿತುಕೊಂಡಿದ್ದಾರೆ. ಮೇಲ್ಭಾಗದಲ್ಲಿ ನಂದಿಶಿವಲಿಂಗ, ಪೂಜಿಸುತ್ತಿರುವ ಜಟಾಧಾರಿ ಅರ್ಚಕ — ಈ ಚಿತ್ರಗಳನ್ನು ಕಂಡರಿಸಲಾಗಿದೆ. ಈ ಚಿತ್ರಗಳ ಮೇಲೆ ಸೂರ್ಯ–ಚಂದ್ರರಿದ್ದಾರೆ. ಕಂಬದ ಮೇಲೆ ಗೋಪುರದ ರಚನೆಯನ್ನು ಸುಂದರವಾಗಿ ಬಿಡಿಸಲಾಗಿದೆ. ಮೊದಲನೆಯ ಮತ್ತು ಎರಡನೆಯ ಭಾಗಗಳ ಬಲಭಾಗದಿಂದ ಎತ್ತಿದ ತೋಳುಗೈಗಳೆರಡನ್ನು ತೋರಿಸಲಾಗಿದೆ. ಅವುಗಳಿಗೆ ತೋಳ್ಬಳೆ, ಮುಂಗೈ ಬಳೆಗಳನ್ನು ತೊಡಿಸಲಾಗಿದೆ. ಒಂದು ಕೈಯ ಹೆಬ್ಬೆರಳು ಮತ್ತು ತೋರುಬೆರಳಿನ ಮಧ್ಯ ಲಿಂಬೆಹಣ್ಣು ಇರುವುದನ್ನು ಗಮನಿಸಬಹುದಾಗಿದೆ. ಈ ಎರಡೂ ಅಂಗೈಗಳ ಮೇಲೊಂದು ಸುಂದರವಾದ ಕಮಲದ ಹೂವನ್ನು ಬಿಡಿಸಲಾಗಿದೆ. ಬಂದಳಿಕೆಯ ಮಾಸ್ತಿಶಿಲ್ಪವೂ ಹೆಚ್ಚುಕಡಿಮೆ ಇದನ್ನೇ ಹೋಲುತ್ತದೆ. ಪತಿ–ಪತ್ನಿಯರನ್ನು ಎತ್ತಿದ ತೋಳುಗೈ ಮೇಲೆ ಹಾಗೂ ಕಂಬದ ಒಳಭಾಗದಲ್ಲಿ ಕುಳಿತಿರುವಂತೆ ಇಲ್ಲಿ ಬಿಡಿಸಲಾಗಿದೆ. ಹಾಗೂ ಎರಡೂ ಕೈಗಳ ಹೆಬ್ಬೆರಳು ಮತ್ತು ತೋರಬೆರಳಿನ ಮಧ್ಯ ಲಿಂಬೆಹಣ್ಣನ್ನು ತೋರಿಸಲಾಗಿದೆ. ಪತಿಯ ಬಲಭಾಗದಲ್ಲಿ ಕುಳಿತ ಸತಿಯನ್ನು ಸ್ವಲ್ಪಮಟ್ಟಿಗೆ ಎಡಭಾಗದಲ್ಲಿರುವ ಸತಿಗಿಂತಲೂ ಸುಂದರವಾಗಿ ಬಿಡಿಸಲಾಗಿದೆ. ಇವಳ ತಲೆಗೆ ಸುಂದರವಾದ ದಂಡೆ, ಪ್ರಭಾವಳಿಗಳಿದ್ದರೆ ಇನ್ನೊಬ್ಬಳಿಗೆ ಇವಾವೂ ಇಲ್ಲವಾಗಿವೆ. ಕಂಬದ ಸ್ವಲ್ಪ ಭಾಗವನ್ನು ಕತ್ತರಿಸಿಕೊಂಡು ಈ ಸತಿಯನ್ನು ಕಂಡರಿಸಲು ಶಿಲ್ಪಿ ಪ್ರಯತ್ನಿಸಿದ್ದರಿಂದ ಬಹುಶಃ ಸಾಮಾನ್ಯಮಟ್ಟದ ಸತಿವಿಗ್ರಹ ಇಲ್ಲಿ ನಿರ್ಮಾಣಗೊಂಡಿತೆಂದು ಹೇಳಬಹುದಾಗಿದೆ. ಈ ಸ್ಮಾರಕ ಶಿಲೆಯ ಪಾದದಲ್ಲಿ "ಕತಾರಿಯರ್ಯ ನಾರಿಯಪ್ಪನಾಯಕ್ಕರ ಮಗ ಮದವರಸನಾಯಕ್ಕರು

ಸ್ವರ್ಗಸ್ಥನಾದಲ್ಲಿ ಆತನ ಸತಿ ಬುಳ್ಳರಸಿ ಕಂನಾಂಬಿಗಳು ಗಂಡನ ವಿಜಯಶ್ರೀಯನೆಯ್ದಿ ಸುರಲೋಕ ಪ್ರಾಪ್ತರಾದರು" ಎಂದು ಹೇಳಲಾಗಿದೆ.[46] ಇಲ್ಲಿ ಮದುವರಸನಾಯ್ಕ ಸ್ವರ್ಗಸ್ಥನಾಗಲು ಅವನ ಪತ್ನಿಯರಾದ ಬುಳ್ಳರಸಿ ಮತ್ತು ಕಂನಾಂಬಿಯರು ಸತಿಹೋದರೆಂದು ತಿಳಿದು ಬರುತ್ತದೆ. ಶಿಲ್ಪದಲ್ಲಿ ಪತಿ ಮತ್ತು ಬಲದ ಸತಿ ಇವರ ಮಧ್ಯದಲ್ಲಿ ಕತ್ತಿಯನ್ನು ತೋರಿಸಲಾಗಿರುವುದನ್ನು ನೋಡಿದರೆ ಬಹುಶ: ಮದುವರಸನಾಯ್ಕನದು ಹೋರಾಟಮರಣವಾಗಿದೆ ಎನಿಸುತ್ತದೆ. ಪಾಠದಲ್ಲಿಯ ' ವಿಜಯಶ್ರೀ ' ಎನ್ನುವ ಪದ ಇದೇ ಅರ್ಥವನ್ನು ಬಚ್ಚಿಟ್ಟುಕೊಂಡಿದೆ ಎನಿಸುತ್ತದೆ.

ಧಾರವಾಡ ಜಿಲ್ಲೆಯ ಮುನಗುಂಡಿಯ ಶಾಸನವೊಂದು ನಾಡಪ್ರಭು ಮಲ್ಲಪ್ಪನ ಮರಣವನ್ನು ಸೂಚಿಸುತ್ತದೆ.[47] ಅವನ ಮೂವರು ಪತ್ನಿಯರು ಸತಿಹೋದುದನ್ನು ಶಿಲ್ಪವು ವಿಶೇಷವಾದ ರೀತಿಯಲ್ಲಿ ಅಭಿವ್ಯಕ್ತಿಸುತ್ತದೆ. (ಚಿತ್ರ—54). ಈ ಸ್ಮಾರಕ ಶಿಲೆಯಲ್ಲಿ ಮೂರು ಭಾಗಗಳಿವೆ. ಕೆಳಗಿನ ಭಾಗದಲ್ಲಿ ಮೂರು ಕಂಬಗಳು ಹಾಗೂ ಅವುಗಳಿಂದ ಹೊರಟ ಮೂರು ಎತ್ತಿದ ಬಲಗೈಗಳಿವೆ. ಈ ರೀತಿಯ ಅಭಿವ್ಯಕ್ತಿ ತುಂಬ ಅಪರೂಪವಾದುದು. ಈ ಸ್ಮಾರಕಶಿಲೆ ಹಲವು ದೃಷ್ಟಿಗಳಿಂದ ಪರಿಪೂರ್ಣವಾದುದನ್ನು ಗುರುತಿಸಬಹುದಾಗಿದೆ. ಮೊದಲನೆಯದಾಗಿ, ಈ ಸ್ಮಾರಕಶಿಲೆ ಶಾಸನವುಳ್ಳದಾಗಿದೆ. ಎರಡನೆಯದಾಗಿ ಮೂವರು ಪತ್ನಿಯರು ಸತಿಹೋದುದನ್ನು ಕೆಳಗಿನ ಭಾಗದಲ್ಲಿ ಸ್ವತಂತ್ರವಾದ ಮೂರು ಕಂಬಗಳನ್ನು ಕಡಿರಿಸಿ, ಅವುಗಳಿಂದ ಬಲಗೈ ಎತ್ತಿದ್ದನ್ನು ಇದು ತೋರಿಸುವುದಾಗಿದೆ. ಮೂರನೆಯದಾಗಿ, ಇದು ಸ್ವರ್ಗಾರೋಹಣದ ಚಿತ್ರವನ್ನು ಕೊಡುವುದಾಗಿದೆ ಎರಡನೆಯ ಭಾಗದಲ್ಲಿ ಪತಿಯು ಮಧ್ಯಭಾಗದಲ್ಲಿದ್ದಾನೆ. ಅವನ ಎಡಭಾಗದಲ್ಲಿ ಇಬ್ಬರು ಸತಿಯರು ಬಲಗೈ ಎತ್ತಿ ನಿಂತಿದ್ದಾರೆ. ಅವನ ಬಲಭಾಗದಲ್ಲಿ ಸತಿಯೊಬ್ಬಳು ಬಲಗೈ ಎತ್ತಿ ನಿಂತುಕೊಂಡಿದ್ದಾಳೆ. ಇವಳ ಪಕ್ಕಗಳಲ್ಲಿ ಸ್ತ್ರೀಯರಿಬ್ಬರು ನಿಂತುಕೊಂಡಿದ್ದಾರೆ. ಒಬ್ಬಳು ಹೆಗಲಮೇಲೆ ಚಾಮರ ಇಟ್ಟುಕೊಂಡಿದ್ದಾಳೆ ಈ ಭಾಗ ಪತಿ—ಪತ್ನಿಯರ ಸ್ವರ್ಗಾರೋಹಣವನ್ನು ಚಿತ್ರಿಸುತ್ತದೆ. ಈ ಭಾಗದ ಮೇಲ್ಭಾಗವು ದೈವಸಾನಿಧ್ಯವನ್ನು ತೋರಿಸುವುದಾಗಿದೆ. ಹೀಗೆ ಹಲವು ದೃಷ್ಟಿಗಳಿಂದ ಈ ಸ್ಮಾರಕಶಿಲೆ ಮುಖ್ಯವೆನಿಸುತ್ತದೆ.

ಸತಿ ಸಂಕೇತವಾದ ತೋಳಗೈ ಕಂಬದ ಚಿತ್ರವು ಮುನಗುಂಡಿಯ ಮಾಸ್ತಿಶಿಲ್ಪದಲ್ಲಿ ಕೆಳಭಾಗದಲ್ಲಿದ್ದರೆ, ಗುಂಡ್ಲುಪೇಟೆ ತಾಲೂಕಿನ ಕುಣಗನಹಳ್ಳಿಯ ಸ್ಮಾರಕಶಿಲೆಯಲ್ಲಿ ಮೇಲ್ಭಾಗದಲ್ಲಿದೆ. (ಚಿತ್ರ—5, 6, 8). ಈ ಭಾಗವನ್ನು ಶಿಲ್ಪಿ ಅತ್ಯಂತ ಸುಂದರವಾಗಿ ಬಿಡಿಸಿದ್ದಾನೆ. ಇಲ್ಲಿಯ ಒಂದೊಂದು ವಿಗ್ರಹ ಅಪೂರ್ವವಾಗಿವೆ. ಶಿಲೆಯ ಬಲಭಾಗದಲ್ಲಿ ಚಿಕ್ಕದಾದ ಕಂಬವಿದೆ.

ಅದರ ಕೆಳಗಿನ ಭಾಗವು ವಿಸ್ತಾರವಾಗಿಯೂ, ಮೇಲಿನ ಭಾಗವು ಗೋಪುರಾಕಾರದಲ್ಲಿಯೂ ರಚನೆಗೊಂಡಿದೆ. ತೋಳಿನಲ್ಲಿ, ಮುಂಗೈಯಲ್ಲಿ ಬಳೆಗಳಿವೆ. ಕಯದಿಂದ ಹೊರಟ ತೋಳುಗೈಯ ಸ್ಥಾನದಲ್ಲಿ ಸುಂದರವಾದ ಮುತ್ತಿನ ಹಾರವನ್ನು ತೊಡಿಸಲಾಗಿದೆ. ಸ್ಮಾರಕಶಿಲೆಯ ಮೇಲ್ಭಾಗದಲ್ಲಿ ಈ ರೀತಿಯ ಶಿಲ್ಪದ ವಿವರ ಇರುವುದು ಅಪೂರ್ವವಾದುದು. ಈ ಕಂಬದ ಎಡಭಾಗದಲ್ಲಿ ಸತಿ ಕೈ ಮುಗಿದು ಕುಳಿತಿದ್ದಾಳೆ. ಈ ಸತಿವಿಗ್ರಹವನ್ನು ಬಿಡಿಸುವಲ್ಲಿ ಶಿಲ್ಪಿ ಚಲುವನ್ನು ತುಂಬಿರುವುದು ಗಮನಕ್ಕೆ ಬರುತ್ತದೆ. ಅವಳ ಅಂಗಾಂಗಗಳನ್ನು ಮತ್ತು ಅವಳು ಕುಳಿತ ಬಗೆಯನ್ನು ಅವನು ಮನಾಕರ್ಷಿಸುವಂತೆ ಚಿತ್ರಿಸಿದ್ದಾನೆ. ಅವಳ ಕಿವಿಯಲ್ಲಿಯ ದುಂಡೋಲೆಗಳು, ಕೊರಳಿನ ಮತ್ತು ನಡುವಿನ ಆಭರಣಗಳು ಒಳ್ಳೆಯ ಕಲಾತ್ಮಕತೆಯ ಮೆರುಗನ್ನು ಪಡೆದಿವೆ. ಅಲ್ಲದೆ ಅವಳ ತಲೆಯ ಬಲಭಾಗದಲ್ಲಿರುವ ತುರುಬಿನ ರೀತಿ ಮೋಹಕವಾಗಿದೆ. ಅವಳು ಅಲಂಕಾರದಿಂದ ಕೈಮುಗಿದುಕೊಂಡು ಕುಳಿತಿರುವ ಪ್ರಶಾಂತಭಾವ ಮನಮೆಚ್ಚುವಂತಿದೆ. ಅವಳಿಗೆ ತಕ್ಕ ಹಾಗೆ ಅವಳ ಪತಿಯ ಶಿಲ್ಪ ಅವಳ ಎಡಭಾಗದಲ್ಲಿದೆ. ಅವನಿಗೆ ಬಿಡಿಸಲಾಗಿರುವ ಮೀಸೆಯ ಚಂದ ಅವನ ಪೌರುಷದ ಅಭಿವ್ಯಕ್ತಿಯನ್ನು ಮಾಡುವಂತಿದೆ. ಅವನ ಎಡಭಾಗದಲ್ಲಿ ಸುಂದರವಾಗಿ ಲಿಂಗದ ಚಿತ್ರ ಬಿಡಿಸಲಾಗಿದೆ. ಆ ಲಿಂಗಕ್ಕೆ ಹೂವಿನ ಹಾರವನ್ನು ಹಾಕಿರುವುದು ಅತ್ಯಪೂರ್ವವಾಗಿದೆ. ಈ ಲಿಂಗದ ಮೇಲೆ ರಚಿಸಿದ ಕಂಬಗಳ ಕಮಾನು ಮನಮೋಹಕವಾಗಿದೆ. ಇದನ್ನು ನಿರೀಕ್ಷಿಸಿದರೆ ಸುಂದರವಾದ ದೇವಾಲಯವನ್ನು ಕಂಡಂತೆನಿಸುತ್ತದೆ. ಶಿಲ್ಪಿಯ ಉದ್ದೇಶವೂ ಇದೇ ಆಗಿದ್ದಿರಬೇಕೆನಿಸುತ್ತದೆ. ಈ ಚಿತ್ರದ ಎಡಭಾಗದಲ್ಲಿ ಪೂಜಿಸಲು ಗಂಟೆ,ಧೂಪಾರತಿಗಳ ಸಮೇತ ನಿಂತ ಅರ್ಚಕನಿದ್ದಾನೆ. ಅವನ ಎಡಭಾಗದಲ್ಲಿ ಬಸವನನ್ನು ಕಂಡರಿಸಲಾಗಿದೆ. ಈ ಭಾಗದ ಶಿಲ್ಪ ಒಟ್ಟಿನಲ್ಲಿ ಅತ್ಯಂತ ಸುಂದರವಾಗಿದೆ ಮತ್ತು ಉನ್ನತವಾದ ರೀತಿಯಲ್ಲಿ ಪ್ರಶಾಂತಭಾವವನ್ನು ಅಭಿವ್ಯಕ್ತ ಮಾಡುವುದಾಗಿದೆ.

ಕಲ್ಲಿನ ಫಲಕದಲ್ಲಿ ಕಂಬ ರಚಿಸಿ ಅದರಿಂದ ಎತ್ತಿದ ಬಲಗೈಯನ್ನು ತೋರಿಸುವ ಮಾಸ್ತಿಶಿಲ್ಪಗಳನ್ನು ಇಲ್ಲಿಯವರೆಗೆ ವಿವರಿಸಲಾಯಿತು. ಕೆಲವು ಶಿಲ್ಪಿಗಳು ಇನ್ನೂ ವಿಶೇಷವಾದ ಮಾಸ್ತಿಶಿಲ್ಪಗಳನ್ನು ರಚಿಸುವ ಪ್ರಯತ್ನ ಮಾಡಿರುವುದನ್ನು ಕಾಣುತ್ತೇವೆ. ಕಲ್ಲನ್ನೇ ಕಂಬದ ಆಕಾರದಲ್ಲಿ ಕಡೆದುಕೊಂಡು, ಅದರ ಮೇಲೆ ಬಲಭಾಗದಲ್ಲಿ ಎತ್ತಿದ ತೋಳುಗೈಗೆ ಎಷ್ಟುಬೇಕೋ ಅಷ್ಟು ಕಲ್ಲನ್ನು ಮಾತ್ರ ಕತ್ತರಿಸಿಕೊಂಡು ಅದರಲ್ಲಿ ಬಲಗೈಯನ್ನು ಎತ್ತಿದಂತೆ ಬಿಡಿಸುವ ಕೆಲವು ಪ್ರಯತ್ನಗಳು ನಡೆದಿರುವುದು ಕಂಡುಬರುತ್ತದೆ.

ಸಾಗರ ತಾಲೂಕಿನ ಹುಣಸೂರಿನಲ್ಲಿ ಕಂಬದ ಆಕಾರದಲ್ಲಿ ಸ್ಮಾರಕ ಶಿಲೆಯನ್ನು ಕಡೆದುಕೊಳ್ಳಲಾಗಿರುವುದನ್ನು ಗಮನಿಸಬಹುದಾಗಿದೆ.(ಚಿತ್ರ-115). ಅದರ ಮೇಲ್ಭಾಗದ ಬಲಕ್ಕೆ ಎತ್ತಿದ ತೋಳುಗೈಯನ್ನು ಬಿಡಿಸಿಕೊಳ್ಳಲಾಗಿದೆ. ತೋಳು ಮತ್ತು ಮುಂಗೈಯಲ್ಲಿ ಬಳೆಗಳನ್ನು ತೊಡಿಸಲಾಗಿದೆ. ಬೆರಳುಗಳ ಉಗುರುಗಳನ್ನು ಉದ್ದಗಿ ಬಿಡಿಸಲಾಗಿದೆ. ಹೆಬ್ಬೆರಳಿನ ಉಗುರು ಮತ್ತು ತೋರುಬೆರಳಿನ ಮಧ್ಯ ಲಿಂಬೆಹಣ್ಣನ್ನು ಕಂಡರಿಸಲಾಗಿದೆ. ಮೇಲ್ಭಾಗದಲ್ಲಿ ಕಂಬದ ಮೇಲೆಯೇ ಪತಿ-ಪತ್ನಿಯರು ಕೈಮುಗಿದುಕೊಂಡು ಕುಳಿತಿದ್ದಾರೆ. ಅವರ ಎಡಭಾಗದಲ್ಲಿ ಬಾತುಕೋಳಿಯೊಂದನ್ನು ಆಕರ್ಷಕವಾಗಿ ಚಿತ್ರಿಸಲಾಗಿದೆ. ಕಂಬದ ಮೇಲೆ ಗೋಪುರಾಕಾರವನ್ನು ಸುಂದರವಾಗಿ ಕೆತ್ತಲಾಗಿದೆ. ಕೆಳದಿಯಲ್ಲಿಯ (ಸಾಗರ.ತಾ) ಮಾಸ್ತಿಕಲ್ಲೊಂದು ವಿಶೇಷ ಗಮನ ಸೆಳೆಯುವಂಥದ್ದಾಗಿದೆ. ಈ ಸ್ಮಾರಕ ಶಿಲೆಯನ್ನು ಕಂಬದಂತೆ ಕಡೆಯುವುದಲ್ಲದೆ ಅದನ್ನು ಎತ್ತಿದ ತೋಳುಗೈಯಂತೆಯೆ ಕಡೆಯಲು ಪ್ರಯತ್ನಿಸಿರುವುದು ಸ್ತುತ್ಯವಾದುದಾಗಿದೆ. ಕಾಯ್ಕಿಣಿಯ ಮಾಸ್ತಿಕಲ್ಲಿನಲ್ಲಿ ಹಾಗೂ ಹರಿತಾಳಿನ ಮೂರು ಮಾಸ್ತಿಕಲ್ಲುಗಳಲ್ಲಿಯೂ ಇದೇ ಬಗೆಯ ಪ್ರಯತ್ನ ನಡೆದಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಕಾರವಾರ ತಾಲೂಕಿನ ಮಾಜಾಳಿಯಲ್ಲಿ ಒಂದೇ ಸ್ಥಳದಲ್ಲಿ ಕಂಬದಿಂದ ಹೊರಟ ಎತ್ತಿದ ತೋಳುಗೈ ಮಾಸ್ತಿಶಿಲ್ಪಗಳು ಒಟ್ಟು ಆರು ಇವೆ. ಒಂದರಲ್ಲಿ, ತೋಳಿನ ಮೇಲ್ಭಾಗದಲ್ಲಿ ಪತಿಯ ಪಕ್ಕದಲ್ಲಿ ಪತ್ನಿ ಎರಡೂ ಕೈಎತ್ತಿ ನಿಂತಿರುವುದು ವಿಶೇಷವಾಗಿದೆ. ಇನ್ನೊಂದರಲ್ಲಿ ತೋಳಿನ ಮೇಲ್ಭಾಗದಲ್ಲಿ ಖಡ್ಗ ಹಿಡಿದ ವೀರನಿದ್ದಾನೆ ಆತನ ಬಲಭಾಗದಲ್ಲಿ ಚಿಕ್ಕದಾಗಿ ಕೈಮುಗಿದುಕೊಂಡು ಸತಿ ಕುಳಿತಿದ್ದಾಳೆ. ಪತಿಯ ಎಡಭಾಗದಲ್ಲಿ ಎರಡೂ ಕೈ ಎತ್ತಿದ ಸತಿ ಇದ್ದಾಳೆ. ಇವಳ ಒಂದು ಕೈಯಲ್ಲಿ ಲಿಂಬೆಹಣ್ಣು ಇದೆ. ಈ ಶಿಲ್ಪ ಮೃತನ ಪತ್ನಿಯರಿಬ್ಬರು ಸತಿಹೋದುದನ್ನು ಧ್ವನಿಸುತ್ತದೆ. ಇಲ್ಲಿಯ ಆರೂ ಮಾಸ್ತಿಶಿಲ್ಪಗಳ ಕಂಬಗಳ ಮೇಲೆ ಸುಂದರವಾಗಿ ಗೋಪುರಾಕಾರಗಳನ್ನು ತೋರಿಸಲಾಗಿರುವುದು ಮನಮೆಚ್ಚುವಂತಿದೆ. ಸೊರಬ ತಾಲೂಕಿನ ಬೆನ್ನೂರು ಗ್ರಾಮದಲ್ಲಿಯ ಮಾಸ್ತಿಶಿಲ್ಪವು ಕಂಬದಿಂದ ಹೊರಟ ಎತ್ತಿದ ತೋಳುಗೈಯನ್ನು ತೋರಿಸುವುದಾಗಿದ್ದರೂ ಪತಿ-ಪತ್ನಿಯರನ್ನು ಇಲ್ಲಿ ಕಂಡರಿಸಿದ ಸ್ಥಾನವು ಇನ್ನುಳಿದವುಗಳಿಂದ ಭಿನ್ನವಾಗಿದೆ. ಕಂಬದಿಂದ ತೋಳುಗೈ ಹೊರಟ ಭಾಗದ ಕೆಳಗೆ ಕಂಬದ ಮೇಲೆ ಗಂಡ-ಹೆಂಡತಿ ವಿಮಾನದಲ್ಲಿ ಕೈಮುಗಿದುಕೊಂಡು ಕುಳಿತಿರುವಂತೆ ಇಲ್ಲಿ ಚಿತ್ರಿಸಲಾಗಿದೆ.(ಚಿತ್ರ-116). ಈ ಸ್ಮಾರಕ ಶಿಲೆಯ ಪಾಠದಲ್ಲಿ ''ವೀರಪ್ಪ ಕಾಲಗೆಯ್ದ ಆತನ ಹೆಂಡತಿ ನಾಕವ ಹಾಯ್ದಳು'' ಎಂದು ಹೇಳಲಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[48]

ಸೊರಬ ತಾಲೂಕಿನ ಮಂಗಳೂರು ಗ್ರಾಮದಲ್ಲಿ ಕಂಬದಿಂದ ಎತ್ತಿದ ತೋಳಗೈ ಹೊರಟ ಮಾಸ್ತಿ ಶಿಲ್ಪಗಳು ಎರಡು ಇವೆ. ಎರಡೂ ಸ್ಮಾರಕಶಿಲೆಗಳಲ್ಲಿ ಎತ್ತಿದ ತೋಳಿನ ಮೇಲ್ಭಾಗದಲ್ಲಿ ಪತಿ–ಪತ್ನಿಯರು ಕುಳಿತಿರುವುದನ್ನು ತೋರಿಸಲಾಗಿದೆ. ಇವುಗಳಲ್ಲಿ ಒಂದು ಸ್ಮಾರಕಶಿಲೆಯ ಪಾತದಲ್ಲಿ ''ಮಂಗಳೂರು ನಾಗಗೌಡರ ಮಗ ಸೆಟ್ಟಿ. ಉಡರು ಸ್ವರ್ಗಸ್ಥರಾಗಲು ಆತನ ಮದವಳಿಗೆ ..ಯಂಗೌಡಿ ಅಗ್ನಿಪ್ರವೇಶವನು ಮಾಡಿದಳು'' ಎಂದು ಹೇಳಲಾಗಿದೆ.[49] ಸಾಗರ ತಾಲ್ಲೂಕಿನ ಮಲಂದೂರಿನಲ್ಲಿ ಕಲ್ಲುಗಳನ್ನು ಕಂಬದಂತೆ ಸುಂದರವಾಗಿ ಕಡಿದಿರುವುದನ್ನೂ ಅವುಗಳಿಂದ ಬಲಗೈ ಎತ್ತಿದಂತೆ ತೋರಿಸಿರುವುದನ್ನೂ ಇದೇ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ. ಕಂಬದ ಮೇಲೆಯೇ ಪತಿ–ಪತ್ನಿಯರು ಕುಳಿತದ್ದನ್ನು ಕಂಡರಿಸಿರುವುದು ಸುಂದರವಾಗಿದೆ. ಇದೇ ರೀತಿ ಶಿವಮೊಗ್ಗ ಜಿಲ್ಲೆಯ ಗ್ರಾಮವೊಂದರಲ್ಲಿ ಜೊತೆಯಾಗಿ ಎರಡು ಕೈ ಎತ್ತಿದ ಮಾಸ್ತಿಕಲ್ಲುಗಳಿರುವುದನ್ನು ಗಮನಿಸಬಹುದಾಗಿದೆ.(ಚಿತ್ರ–117). ಒಂದರಲ್ಲಿ ಪತಿ–ಪತ್ನಿಯರು ಕಂಬದ ಮೇಲೆ ವಿಮಾನದಲ್ಲಿ ಕೈಮುಗಿದುಕೊಂಡು ಕುಳಿತಿದ್ದರೆ, ಇನ್ನೊಂದರಲ್ಲಿ ಪತಿ–ಪತ್ನಿಯರು ತೋಳಗೈ ಮೇಲ್ಭಾಗದಲ್ಲಿ ಕುಳಿತಿದ್ದಾರೆ. ಒಂದು ಸ್ಮಾರಕ ಶಿಲೆಯಲ್ಲಿ ಎತ್ತಿದ ಕೈಯನ್ನು ಬಲಭಾಗದಲ್ಲಿ ಸ್ವತಂತ್ರವಾಗಿ ಬಿಡಿಸದೇ ಇರುವುದು ವಿಶೇಷವಾಗಿದೆ. ಈ ಸ್ಮಾರಕ ಶಿಲ್ಪ ಕಂಬದಿಂದ ಎತ್ತಿದ ತೋಳುಗೈ ಮತ್ತು ಕಲ್ಲಿನಲ್ಲಿ ಎತ್ತಿದ ತೋಳುಗೈ ಕಂಬ ಈ ಎರಡೂ ಶಿಲ್ಪಗಳ ಅಂಶಗಳನ್ನು ಒಳಗೊಳ್ಳಲು ಪ್ರಯತ್ನಿಸಿದಂತಿದೆ. ಇದೇ ರೀತಿ ಚಿತ್ರಟಹಳ್ಳಿ(ಸೊರಬ) ಮಾಸ್ತಿಶಿಲ್ಪವೂ ತುಂಬ ವಿಶೇಷವಾಗಿದೆ. ಈ ಸ್ಮಾರಕ ಶಿಲೆಯಲ್ಲಿ ಕಂಬದಿಂದ ಎತ್ತಿದ ತೋಳಗೈ ಬಿಡಿಸಿ, ತೋಳಿನ ಮೇಲ್ಭಾಗದಲ್ಲಿ ಅಂದರೆ ಕಂಬದ ಮೇಲೆ ಪತಿ–ಪತ್ನಿಯರು ಕೈಮುಗಿದುಕೊಂಡು ಕುಳಿತಿರುವಂತೆ ಚಿತ್ರಿಸಲಾಗಿರುವುದು ವಿಲಕ್ಷಣವಾಗಿದೆ. ಕಂಬ, ಎತ್ತಿದ ತೋಳಗೈ ಮತ್ತು ಪತಿ–ಪತ್ನಿಯರು —ಈ ಎಲ್ಲ ಶಿಲ್ಪಗಳನ್ನು ಒಂದೆಡೆಯಲ್ಲಿಯೇ ಕೂಡಿ ಬಿಡಿಸುವಲ್ಲಿ ಶಿಲ್ಪಿ ಹೊಸತನವನ್ನು ತೋರಿಸಿದ್ದಾನೆ. ಈ ಚಿತ್ರಗಳು ಒಂದರೊಳಗೊಂದು ಕೂಡಿಕೊಂಡು ಅಭಿನ್ನವಾಗಿವೆ. (ಚಿತ್ರ–118). ಇದು ಶಿಲ್ಪಿಯ ಸಾಮರ್ಥ್ಯದ ಪರಿಪೂರ್ಣ ಕೃತಿಯೋ ಅಥವಾ ಅವನ ಪ್ರಯೋಗಾವಸ್ಥೆಯ ಕೃತಿಯೋ ಎಂಬುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೂ ಇದು ಶಿಲ್ಪಿಯೊಬ್ಬನ ಪ್ರಯೋಗಾವಸ್ಥೆಯ ಅಭಿವ್ಯಕ್ತಿಯೇ ಆಗಿರಬೇಕೆಂದು ತೋರುತ್ತದೆ.

ರಾಣಿಬೆನ್ನೂರು ತಾಲೂಕಿನ ಬೆನಕನಕೊಂಡದ ಮಾಸ್ತಿಶಿಲ್ಪವು ಅತ್ಯಂತ ಆಕರ್ಷಕವಾಗಿದೆ. (ಚಿತ್ರ–53) ಪ್ರತಿಭಾನ್ವಿತ ಶಿಲ್ಪಿಯೊಬ್ಬನ ಸಮರ್ಥಕೃತಿ ಇದಾಗಿದೆ. ದೊಡ್ಡದಾದ ಶಿಲೆಯಲ್ಲಿ

ಸಮಾನವಾದ ಮೂರುಭಾಗಗಳನ್ನು ಗುರುತಿಸಿಕೊಂಡು, ಅದರ ಮೇಲ್ಭಾಗದ ಬಲಕ್ಕೆ ಎತ್ತಿದ ತೋಳನ್ನು ಸ್ವತಂತ್ರವಾಗಿ ಬಿಡಿಸಿ ತೋರಿಸಿರುವುದು ಶಿಲ್ಪಿಯ ಕಲಾಕೌಶಲ್ಯವನ್ನು ಸಾರುತ್ತದೆ. ಇಲ್ಲಿ ಎತ್ತಿದ ತೋಳುಗೈ ಕಂಬದಿಂದ ಹೊರಟುದಲ್ಲ, ವೀರಗಲ್ಲಿನಿಂದ ಹೊರಟುದಾಗಿದೆ. ಹೀಗೆ ವೀರಗಲ್ಲೊಂದರ ಬಲಭಾಗದಲ್ಲಿ ಎತ್ತಿದ ಬಲಗೈಯನ್ನು ಸ್ವತಂತ್ರವಾಗಿ ಬಿಡಿಸಿ ತೋರಿಸುವಶಿಲ್ಪ ಕರ್ನಾಟಕದಲ್ಲಿ ನಮಗೆ ತಿಳಿದಮಟ್ಟಿಗೆ ಇದೊಂದೇ ಎಂದು ಹೇಳಬಹುದಾಗಿದೆ. ಇದು ಒಡೆಯನಿಗೆ ಕೊಟ್ಟಭಾಷೆಗೆ ಮಡಿದ (ವೇಳೆವಾಳಿ) ವೀರನ ಪತ್ನಿಯೊಬ್ಬಳ ಸಹಗಮನವನ್ನು ಚಿರಂತನವಾಗಿ ಸಾರುತ್ತ ನಿಂತಿದೆ.[50]

ತೀರ್ಥಹಳ್ಳಿ ತಾಲೂಕಿನ ಮೂರು ಮಾಸ್ತಿಶಿಲ್ಪಗಳು ಉತ್ಕೃಷ್ಟ ಕಲಾತ್ಮಕತೆಯಿಂದ ರಚಿಸಿದವುಗಳಾಗಿವೆ. ಈ ಮೂರೂ ಸ್ಮಾರಕಶಿಲ್ಪಗಳು ಕಂಬವನ್ನು ರಚಿಸಿಕೊಳ್ಳುವಲ್ಲಿ ಒಂದೇ ಮಾದರಿಯನ್ನು ಅನುಸರಿಸಿವೆ. ಆದರೆ ವಿಷಯವನ್ನು ನಿರೂಪಿಸುವಲ್ಲಿ ಅವು ಒಂದರಿಂದ ಇನ್ನೊಂದು ಭಿನ್ನವಾಗಿವೆ. (ಹಿಂದೆ ಇವುಗಳ ಕುರಿತು ವಿವರಿಸಲಾಗಿದೆ.) ಈ ಸ್ಮಾರಕ ಶಿಲೆಗಳ ಕಂಬಗಳನ್ನು ಚೌಕಾಗಿ ಸುಂದರವಾಗಿ ಕಂಡರಿಸಲಾಗಿದೆ. ಅವುಗಳ ಮೇಲೆ ಚೌಕಾಕಾರದ ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಅವುಗಳಲ್ಲಿ ಸತಿಘಟನೆಯ ವಿವರಗಳನ್ನು ಬಿಡಿಸಲಾಗಿದೆ ಇವುಗಳ ಕೆಳಗೆ ಮೇಲೆ ಗೆರೆಗಳನ್ನು ಕೊರೆದು, ಹೂಗಳನ್ನು ಬಿಡಿಸಿ ಕಂಬಗಳನ್ನು ಸುಂದರಗೊಳಿಸಲಾಗಿದೆ. ಇವುಗಳ ಬಲಭಾಗದಲ್ಲಿ ಎತ್ತಿದ ತೋಳು ಗೈಗಳನ್ನು ಬಿಡಿಸಲಾಗಿದೆ. ಈ ಕಂಬಗಳನ್ನು ನೋಡಿದರೆ ದೇವಾಲಯದ ಕಂಬಗಳು ಸ್ಮರಣೆಗೆ ಬರುತ್ತವೆ.

ನಗರ ತಾಲೂಕಿನ ಹರಿತಾಳು ಗ್ರಾಮದಲ್ಲಿಯ ಮೂರು ಮಾಸ್ತಿಕಲ್ಲುಗಳು ವಿಶೇಷವಾದ ಕೆತ್ತನೆಯನ್ನೊಳಗೊಂಡಿವೆ. ಈ ಸ್ಮಾರಕ ಶಿಲೆಗಳು ಸುಂದರವಾದ ಕಂಬಗಳ ರಚನೆಯನ್ನೊಳಗೊಂಡಿವೆ. ಇವುಗಳ ಬಲಭಾಗಕ್ಕೆ ಎತ್ತಿದ ತೋಳುಗೈಯನ್ನು ಬಿಡಿಸಿತೋರಿಸಲಾಗಿದೆ. ಇಲ್ಲಿಯ ಎರಡು ಮಾಸ್ತಿಶಿಲ್ಪಗಳಲ್ಲಿ ಪತಿಯ ಚಿತ್ರವಾಗಲೀ, ಸತಿಯ ಚಿತ್ರವಾಗಲೀ ಇಲ್ಲದಿರುವುದು ವಿಶೇಷವಾಗಿದೆ. ಕಂಬಗಳನ್ನು ಏರುಪೇರಾಗಿ ಸುಂದರವಾಗಿ ಕಡೆದು, ಅವುಗಳ ಮೇಲೆ ಹೂಗಳನ್ನು ಮಾತ್ರ ಬಿಡಿಸಲಾಗಿದೆ ಇಲ್ಲಿಯ ಇನ್ನೊಂದು ಮಾಸ್ತಿಶಿಲ್ಪವು ಅತ್ಯಪೂರ್ವವಾಗಿದೆ. ಕಲ್ಲನ್ನು ಚೌಕಾಗಿಯೂ, ಉಂಡಾಗಿಯೂ ಕಂಡರಿಸುತ್ತ ಹೋಗಿ ಮೇಲ್ಭಾಗದಲ್ಲಿ ಗೋಪುರಾಕಾರವನ್ನು ಬಿಡಿಸಲಾಗಿದೆ. ಕಂಬದ ಮೇಲೆ ಮೊದಲನೆಯ ಭಾಗವಿದೆ. ಅದರಲ್ಲಿ ಪಲ್ಲಕ್ಕಿಯನ್ನು ಇಬ್ಬರು ಹೊತ್ತುಕೊಂಡು ನಡೆಯುತ್ತಿರುವಂತೆ ಚಿತ್ರಸಲಾಗಿದೆ. ಈ ಪಲ್ಲಕ್ಕಿಯಲ್ಲಿ

ಸತಿಯಾಗಲೀ , ಪತಿಯಾಗಲೀ ಕುಳಿತಿಲ್ಲದಿರುವುದನ್ನು ಗಮನಿಸಬಹುದಾಗಿದೆ. ಇದರ ಮೇಲ್ಭಾಗದಲ್ಲಿ ದೊಡ್ಡದಾದ ಚೌಕಭಾಗವನ್ನು ಕಂಬದ ಎರಡೂ ಪಕ್ಕಗಳಲ್ಲಿ ವಿಸ್ತರಿಸಿಕೊಂಡು ನಿರ್ಮಿಸಿಕೊಳ್ಳಲಾಗಿದೆ. ಇದರಲ್ಲಿಯೇ ಮತ್ತೆ ಎರಡು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಕೆಳಭಾಗದಲ್ಲಿ ಬಲದಿಂದ ಸತಿ, ಪತಿ, ಸತಿ, ಸತಿ ಹೀಗೆ ಅನುಕ್ರಮವಾಗಿ ಕೈಮುಗಿದು ಕುಳಿತುಕೊಂಡಿದ್ದಾರೆ. ಮೃತನ ಮೂವರು ಪತ್ನಿಯರು ಸತಿಹೋದುದನ್ನು ಈ ಶಿಲ್ಪ ಧ್ವನಿಸುತ್ತದೆ. ಅವರ ಮೇಲ್ಭಾಗದಲ್ಲಿ ಪೂಜಿಸುವ ಅರ್ಚಕ, ಶಿವಲಿಂಗ ಮತ್ತು ನಂದಿಗಳನ್ನು ತೋರಿಸಲಾಗಿದೆ. ಅದರ ಬಲಭಾಗಕ್ಕೆ ಬಲಗೈ ಎತ್ತಿದ್ದನ್ನು ಬಿಡಿಸಲಾಗಿದೆ. ಅದರ ತೋರುಬೆರಳು ಮತ್ತು ಹೆಬ್ಬೆರಳು ಮಧ್ಯ ಲಿಂಬೆಹಣ್ಣನ್ನು, ಅಂಗೈಯಲ್ಲಿ ಹೂವಿನ ಚಿತ್ರವನ್ನು ಬಿಡಿಸಲಾಗಿದೆ. ಒಟ್ಟಿನಲ್ಲಿ ಈ ಮಾಸ್ತಿಶಿಲ್ಪದ ರಚನೆ, ವಿಷಯವು ಅಭಿವ್ಯಕ್ತಿಸುವ ಬಗೆ ವಿಶಿಷ್ಟವಾದುದೆಂದು ಬೇರೆ ಹೇಳಬೇಕಾಗಿಲ್ಲ. (ಚಿತ್ರ—61).

ಕಲ್ಲನ್ನೇ ಕಂಬದಂತೆ ಕಡೆದು ಅದರಿಂದ ಕೇವಲ ಎತ್ತಿದ ಬಲಗೈಯನ್ನು ತೋರಿಸುವ ಈ ಮಾಸ್ತಿಸ್ಮಾರಕ ಶಿಲ್ಪಗಳಲ್ಲಿ ಶಿಲ್ಪಿಗೆ ಸತಿಘಟನೆಗಳ ವಿವರ ಕೆತ್ತುವಲ್ಲಿ ಅನಾನುಕೂಲತೆಗಳೇ ಹೆಚ್ಚಿಗೆ ಇರಬೇಕೆನಿಸುತ್ತದೆ, ಎತ್ತಿದ ತೋಳಿನ ಕೆಳಭಾಗದಲ್ಲಿಯ ಕಲ್ಲನ್ನು ಕಡೆದು ಬೇರೆಗೊಳಿಸಿದ್ದರಿಂದ ಅಲ್ಲಿ ಪೂರಕ ಶಿಲ್ಪಗಳನ್ನು ಬಿಡಿಸಬಹುದಾಗಿದ್ದ ಅವಕಾಶ ಅವನಿಗೆ ತಪ್ಪಿಹೋಯಿತು. ಈ ಅವಕಾಶದಿಂದ ತಪ್ಪಿಸಿಕೊಂಡ ಈ ಸ್ಮಾರಕ ಶಿಲೆಗಳ ಶಿಲ್ಪಿಗಳು ಕಂಬಗಳ ಮೇಲೆ ಮತ್ತು ಎತ್ತಿದ ತೋಳಿನ ಮೇಲ್ಭಾಗದಲ್ಲಿ ಶಿಲ್ಪದ ವಿವರಗಳನ್ನು ಬಿಡಿಸಿಡುವ ಪ್ರಯತ್ನ ಮಾಡಿದರೆನಿಸುತ್ತದೆ. ಇಲ್ಲಿ ಅವರಿಗಿರುವ ಸ್ಥಳಾವಕಾಶದ ಕೊರತೆಯಿಂದ ಶಿಲ್ಪದ ವಿವರಗಳು ಸಹಜವಾಗಿಯೇ ಸಂಕ್ಷಿಪ್ತಗೊಂಡವು. ಕವಿಲೆದುರ್ಗ, ಹರಿತಾಳು ಗ್ರಾಮದಂಥ ಶಿಲ್ಪಿಗಳು ದೊಡ್ಡದಾದ ಶಿಲೆಯನ್ನು ಆಯ್ಕೆ ಮಾಡಿಕೊಂಡಿದ್ದರೆ ಉನ್ನತವಾದ ಸತಿಚಿತ್ರಣಗಳನ್ನು ಶಿಲ್ಪದಲ್ಲಿ ಅಭಿವ್ಯಕ್ತಿಸುತ್ತಿದ್ದರೆನಿಸುತ್ತದೆ.

ಮಾಸ್ತಿ ಕಲ್ಲಿನಲ್ಲಿಯ ಕಂಬದಿಂದ ಎತ್ತಿದ ಬಲಗೈ ಬಿಡಿಸುವಲ್ಲಿ ಸಾಮಾನ್ಯವಾದ ಯಾವ ಒಂದು ನಿರ್ದಿಷ್ಟ ಕ್ರಮವನ್ನೂ ಶಿಲ್ಪಿಗಳು ಅನುಸರಿಸಿದಂತಿಲ್ಲ. ಕೆಲವು ಶಿಲ್ಪಿಗಳು ಕೈ ಎತ್ತಿರುವ ಭಂಗಿಯನ್ನು ಇಂಗ್ಲೀಷಿನ 'L' ಆಕಾರದಲ್ಲಿ ಬಿಡಿಸಿದರೆ ಇನ್ನು ಕೆಲವರು 'V' ಆಕಾರದಲ್ಲಿ ಬಿಡಿಸಿದ್ದಾರೆ. (ಚಿತ್ರ—115, 119). ಇನ್ನೂ ಕೆಲವರು ಈ ಆಕಾರಗಳಲ್ಲಿಯೇ ಹೆಚ್ಚುಕಡಿಮೆ ಮಾಡಿಕೊಂಡು ಎತ್ತಿದ ಕೈಭಂಗಿಯನ್ನು ಚಿತ್ರಿಸಲು ಪ್ರಯತ್ನಿಸಿರುವುದುಂಟು. ಇದೇ ರೀತಿ ಮಾಸ್ತಿಕಲ್ಲಿನಲ್ಲಿಯ ಕೈ ಎತ್ತಿರುವ ಭಂಗಿಗಳೂ ಇರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅಷ್ಟೇ

ಏಕೆ ಕೆಲವು ಶಿಲ್ಪಗಳಲ್ಲಿ ಸತಿಯರು ಮೇಲಕ್ಕೆ ನೇರವಾಗಿ ಕೈ ಎತ್ತಿ ನಿಂತಂತೆಯೂ ಚಿತ್ರಿತ
ವಾಗಿರುವುದನ್ನು ಕಂಡುಕೊಳ್ಳಬಹುದಾಗಿದೆ. ಇಂಥ ಚಿತ್ರಣಗಳು ಕಂಬದಿಂದ ಹೊರಟ ತೋಳುಗೈ
ಸಾಂಕೇತಿಕತೆಯನ್ನು ಸಂಪೂರ್ಣ ಗ್ರಹಿಸಿಕೊಂಡು ಇಂಥ ತೋಳುಗೈಕಂಬಗಳನ್ನು ಶಿಲ್ಪಿಗಳು
ಬಿಡಿಸುತ್ತಿದ್ದರೆನಿಸುತ್ತದೆ. ಹೀಗಾಗಿ ಕಂಬದಿಂದ ಹೊರಟ ಎತ್ತಿದ ತೋಳುಗೈಗಳು ಇಂಗ್ಲೀಷಿನ
'L' ಮತ್ತು 'V' ಗಳಂತೆ ಭಿನ್ನ ಆಕಾರಗಳನ್ನೊಳಗೊಂಡಿದ್ದರೂ, ಅವು ಧ್ವನಿಸುವ ಸಾಂಕೇತಿಕ
ವಸ್ತು ಮಾತ್ರ ಒಂದೇಯಾಗಿರುವುದನ್ನು ಮರೆಯಬಾರದು.

ಮೃತನ ಪತ್ನಿಯು ಸತಿಹೋದುದನ್ನು ಕಂಬದಿಂದ ಬಿಡಿಸಿ ತೋರಿಸಿದ ತೋಳು
ಗೈಯು ಸೂಚಿಸುತ್ತದಷ್ಟೇ. ಹೀಗೆ ಕಂಬದಿಂದ ಎತ್ತಿದ ಕೈಗಳು ಎಷ್ಟು ಇವೆಯೋ ಅಷ್ಟುಜನ
ಮೃತನ ಪತ್ನಿಯರು ಸತಿಹೋಗಿದ್ದಾರೆಂದು ಸಾಮಾನ್ಯವಾಗಿ ಗ್ರಹಿಸಿಕೊಳ್ಳಲಾಗುತ್ತದೆ. ಕಂಬ
ದಿಂದ ಹೊರಟ ಒಂದು ಕೈ ಒಬ್ಬಳು ಸತಿಹೋದುದನ್ನು, ಎರಡು ಕೈಗಳು ಇಬ್ಬರು ಸತಿ
ಹೋದುದನ್ನು, ಮೂರು ಕೈಗಳು ಮೂವರು ಸತಿಹೋದುದನ್ನು ಧ್ವನಿಸುತ್ತವೆ ಎಂದು
ಹೇಳಬಹುದಾಗಿದೆ.[51] ಆದರೆ ಎಲ್ಲ ಶಿಲ್ಪಗಳೂ ಇದನ್ನೇ ಅನುಸರಿಸಿಕೊಂಡು ಬಂದರೆಂದು ಹೇಳುವುದು
ತಪ್ಪಾಗುತ್ತದೆ. ನಗರ ತಾಲೂಕಿನ ಹರಿತಾಳುಗ್ರಾಮದಲ್ಲಿಯ ಮಾಸ್ತಿಕಲ್ಲೊಂದು ಮೃತನ
ಮೂವರು ಪತ್ನಿಯರು ಸತಿಹೋಗಿದ್ದರೂ, ಕಂಬದಿಂದ ಎತ್ತಿದ ಒಂದೇ ಕೈಯನ್ನು ಬಿಡಿಸಿ
ತೋರಿಸಲಾಗಿದೆ. ಇಲ್ಲಿ ಶಿಲ್ಪದಲ್ಲಿ ಮಡಿದ ಪತಿಯೊಂದಿಗೆ ಬಲಭಾಗದಲ್ಲಿ ಒಬ್ಬಳು ಹಾಗೂ ಎಡ
ಭಾಗದಲ್ಲಿ ಇಬ್ಬರು ಪತ್ನಿಯರು ಕೈಮುಗಿದು ಕುಳಿತಿರುವುದನ್ನು ಗಮನಿಸಬಹುದಾಗಿದೆ. ಶಿಲ್ಪಿಯು
ಮೃತನ ಮೂವರು ಪತ್ನಿಯರು ಸತಿಹೋದುದನ್ನು ಸೂಚಿಸಲೆಂದೇ ಸ್ಮಾರಕ ಶಿಲೆಯಲ್ಲಿ
ಈ ಭಾಗವನ್ನು ದೊಡ್ಡದಾಗಿ ಚಿತ್ರಿಸಿದ್ದಾನೆ. (ಚಿತ್ರ—61 ). ಇದೇ ರೀತಿ ಕಾರವಾರ ತಾಲೂಕಿನ
ಮಾಜಾಳಿಯ ಮಾಸ್ತಿಶಿಲ್ಪದಲ್ಲಿ ಮೃತನ ಇಬ್ಬರು ಪತ್ನಿಯರು ಸತಿಹೋಗಿದ್ದನ್ನು ಚಿತ್ರಿಸಿಯೂ,
ಕಂಬದಿಂದ ಮಾತ್ರ ಒಂದೇ ಕೈಯನ್ನು ಬಿಡಿಸಿತೋರಿಸಲಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.
ಈ ನಿದರ್ಶನಗಳಿಂದಾಗಿ, ಕಂಬದಿಂದ ಎತ್ತಿದ ಒಂದೇ ಕೈಯು ಕಡ್ಡಾಯವಾಗಿ ಕೇವಲ ಒಬ್ಬಳು
ಪತ್ನಿಯು ಸತಿಹೋದುದನ್ನು ಸೂಚಿಸುತ್ತದೆ ಎಂದು ಹೇಳಲಿಕ್ಕಾಗದೆಂದೂ, ಅಂಥ ಸಾಂಕೇತಿಕತೆ
ಯನ್ನು ಕೆಲವು ಸಲ ಮೃತನ ಹಲವರು ಪತ್ನಿಯರು ಸತಿಹೋದುದನ್ನು ಸೂಚಿಸಲು ಬಳಸಿ
ಕೊಳ್ಳಲಾಯಿತೆಂದೂ ಹೇಳಬಹುದಾಗಿದೆ.

(ಊ) <u>ಎತ್ತಿದ ತೋಳುಗೈ ಶಿಲ್ಪ :</u> ಎತ್ತಿದ ತೋಳುಗೈ ಶಿಲ್ಪ ತುಂಬ ಅಪರೂಪವೆಂದೇ ಹೇಳಬೇಕು. ಸತಿಯ ಶುಭಹಸ್ತವನ್ನು ಮಾತ್ರ ಸ್ಮಾರಕಶಿಲ್ಪದಲ್ಲಿ ಕಂಬವಿಲ್ಲದೆ ಕಂಡರಿಸುವ ಪ್ರಯತ್ನವನ್ನು ಒಂದಿಬ್ಬರು ಶಿಲ್ಪಿಗಳು ಮಾಡಿರುವುದು ಮಹತ್ವದ್ದಾಗಿದೆ. ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಉಮರಾಣಿ, ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವೆ ಮತ್ತು ಸೊರಬ ತಾಲೂಕಿನ ಕುಂಬತಿಗ್ರಾಮ —ಈ ಊರುಗಳಲ್ಲಿ ಎತ್ತಿದ ತೋಳಗೈ ಮಾಸ್ತಿಶಿಲ್ಪಗಳು ದೊರಕುತ್ತವೆ.

ಉಮರಾಣಿಯ ಸ್ಮಾರಕಶಿಲೆಯಲ್ಲಿ ಕಲ್ಲಿನ ತುಂಬ ಸತಿಯ ಬಲ ತೋಳುಗೈಯನ್ನು ದೊಡ್ಡದಾಗಿ ಬಿಡಿಸಲಾಗಿದೆ ಆ ಕೈಯ ತೋಳುಮತ್ತು ಮುಂಗೈಗಳಲ್ಲಿ ಬಳೆಗಳನ್ನು ತೊಡಿಸಲಾಗಿದೆ. ತೋಳಿನ ಮೇಲ್ಭಾಗದಲ್ಲಿ ಪತಿ-ಪತ್ನಿಯರನ್ನು ರೇಖೆಗಳಿಂದ ಸೂಕ್ಷ್ಮವಾಗಿ ಚಿತ್ರಿಸಲಾಗಿದೆ. ಇಲ್ಲಿಯ ಸತಿಯ ಚಿತ್ರ ತನ್ನ ಎಡಗೈಯನ್ನು ಎತ್ತಿ ಹಿಡಿದಿದೆ. ಮೇಲ್ಭಾಗದಲ್ಲಿ ಚಂದ್ರ ಮತ್ತು ಸೂರ್ಯರನ್ನು ಕಂಡರಿಸಲಾಗಿದೆ. (ಚಿತ್ರ-121). ಬಳ್ಳಿಗಾವೆಯ ಸ್ಮಾರಕಶಿಲೆಯಲ್ಲಿ ಎತ್ತಿದ ತೋಳುಗೈಯನ್ನು ಮನೋಹರವಾಗಿ ಬಿಡಿಸಲಾಗಿದೆ. ಬೆರಳುಗಳ ಉದ್ದದ ಉಗುರುಗಳನ್ನು ಸುಂದರವಾಗಿ ಕಂಡರಿಸಲಾಗಿದೆ. ಹೆಬ್ಬೆರಳಿನ ಉಗುರು ಮತ್ತು ತೋರುಬೆರಳಿನ ಮಧ್ಯ ಲಿಂಬೆ ಹಣ್ಣನ್ನು ತೋರಿಸಲಾಗಿದೆ. ತೋಳಿನ ಮೇಲೆ ವಿಮಾನದಲ್ಲಿ ಪತಿ-ಪತ್ನಿಯರು ಅತ್ಯಂತ ವಿನಯ ಭಾವದಿಂದ ಕೈಮುಗಿದುಕೊಂಡು ಕುಳಿತಿದ್ದಾರೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನು ಕಂಡರಿಸಲಾಗಿದೆ. ಇದೇ ರೀತಿಯ ಶಿಲ್ಪ ಕುಂಬತಿಗ್ರಾಮದಲ್ಲಿದೆ. ವಿಮಾನದಲ್ಲಿ ಕೈಮುಗಿದು ಕುಳಿತ ಪತಿ-ಪತ್ನಿಯರಿಗೆ ಕೊರಳಲ್ಲಿ, ಕಿವಿಯಲ್ಲಿ ಸುಂದರವಾದ ಆಭರಣಗಳನ್ನು ತೊಡಿಸಲಾಗಿದೆ. ಹೀಗೆ ಕೇವಲ ಎತ್ತಿದ ತೋಳಗೈ ಇರುವ ಕೆಲವು ಸಾಂಕೇತಿಕ ಶಿಲ್ಪ ಕರ್ನಾಟಕದಲ್ಲಿ ದೊರಕುವುದನ್ನು ಕಾಣಬಹುದಾಗಿದೆ.

(ಋ) <u>ಮಾಸ್ತಿಸ್ಮಾರಕ ಸ್ತಂಭ :</u> ಮಹಾಸತಿಯರ ನೆನಪಿಗಾಗಿ ಕಂಬಗಳನ್ನು ರಚಿಸಿ ನಿಲ್ಲಿಸಿರುವುದನ್ನು ಕರ್ನಾಟಕದ ಹಳ್ಳಿಗಳಲ್ಲಿ ಕಾಣುತ್ತೇವೆ. ಇವುಗಳನ್ನು ನೋಡಿದರೆ ಛಾಯಾಸ್ತಂಭಗಳು ಸ್ಮರಣೆಗೆ ಬರುತ್ತವೆ. ನಾಗಾರ್ಜುನಕೊಂಡದಲ್ಲಿ ದೊರಕಿರುವ ಛಾಯಾಸ್ತಂಭಗಳನ್ನು ಇಲ್ಲಿ ಸ್ಮರಿಸಬಹುದಾಗಿದೆ ಈ ಶಿಲೆಗಳು ಭಾರತದಲ್ಲಿ ದೊರಕಿರುವ ಅತೀ ಪ್ರಾಚೀನ ಸ್ಮಾರಕಗಳಾಗಿವೆ. ಇವುಗಳನ್ನು ವಿವೇಚಿಸುತ್ತ ಶ್ರೀ. ಹೆಚ್. ಸರಕಾರ ಅವರು, ಇವುಗಳನ್ನು ವಿಶಿಷ್ಟ ವ್ಯಕ್ತಿಗಳಿಗಾಗಿ ನಿಲ್ಲಿಸುತ್ತಿದ್ದರೆಂದೂ, ಅಂಥವರು ಯಾರೇ ಆಗಿರಬಹುದೆಂದೂ ಹೇಳಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.[52]

ಹೀಗೆಯೇ ಸತಿಹೋದ ವಿಶಿಷ್ಟ ಸ್ತ್ರೀಯರಿಗಾಗಿ ಕಂಬಗಳನ್ನು ಕರ್ನಾಟಕದ ಜನ ರಚಿಸಿರಬಹುದಾಗಿದೆ.

ಹಾಸನ ಜಿಲ್ಲೆಯ ಅರಸಿಕೆರೆ ತಾಲೂಕಿನ ಶಂಕರನಹಳ್ಳಿ ಶಾಸನವೊಂದರಲ್ಲಿ " ಸುರಿಗೆಯ ನಯಿಹನ ಮಗಳು ಬೆಯಿಕನ ಸಾಯಿಂಯನಯಿಕನ ಮಗ ವೀರಪನ ಕರಾಡಿ ಕಿಚ್ಚುಹಗಲು ಶ್ರೀ ವೀರದಂಕ " ಎಂದು ಹೇಳಲಾಗಿದೆ.[53] (ಮೇಲೆ ಇದೆ. (ಚಿತ್ರ-122).) ಈ ಶಾಸನವು ಕಂಬದ 'ಮಸಣಿಗವುಡಿ' ಯ ಸಹಗಮನವನ್ನು ಹೇಳುವ ಶಾಸನದಲ್ಲಿ 'ಕಂಬ' ಎಂಬ ಉಲ್ಲೇಖ ಬಂದಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.[54] ಶಂಕರನಹಳ್ಳಿಯ ಸತಿಸ್ಮಾರಕ ಕಂಬವು ಸು.4 ಫೂಟು ಎತ್ತರವಿದೆ. ಇದು ಕೆಳಭಾಗದಲ್ಲಿ ದೊಡ್ಡದಾಗಿದ್ದು ಮೇಲೆ ಹೋದಂತೆ ಸಣ್ಣರೂಪ ಪಡೆಯುತ್ತ ಹೋಗಿ ಮತ್ತೆ ಮೇಲ್ಭಾಗದಲ್ಲಿ ದೊಡ್ಡದಾಗಿರುವುದು ಕಂಡುಬರುತ್ತದೆ. ಇದರ ಮೇಲ್ಭಾಗ ದುಂಡಾಗಿದೆ. ಈ ಸ್ಮಾರಕಶಿಲೆಯ ಮಧ್ಯದ ಮೇಲ್ಭಾಗದಲ್ಲಿ ಮಾಡಿನಾಕಾರವನ್ನು ರಚಿಸಿ, ಅದರಲ್ಲಿ ಕೈ ಮುಗಿದುಕೊಂಡು ಕುಳಿತಿರುವ ಸತಿಯನ್ನು ಕಂಡರಿಸಲಾಗಿದೆ. ಸತಿಯ ತಲೆಯ ಮೇಲ್ಭಾಗದಲ್ಲಿ ವಾಲಿಕೊಂಡಿರುವ ತುರುಬದ ರೀತಿ ಸುಂದರವಾಗಿದೆ. ಹೀಗೆ ಸತಿಯನ್ನು ಹೊಂದಿದ ಈ ಕಂಬ ಚೌಕಾಕಾರದಲ್ಲಿದ್ದು ವಿಶೇಷ ಗಮನ ಸೆಳೆಯುತ್ತದೆ. ಇದೇ ರೀತಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಕವಲೆದುರ್ಗದಲ್ಲಿ ತೋಳಗೈ ಕಂಬದ ಮಾಸ್ತಿಶಿಲ್ಪಗಳೊಡನೆ ಹೊಂದಿ ಇರುವ ನಾಲ್ಕು ಚೌಕಾಕಾರದ ಕಂಬಗಳೂ ಸತಿಯರ ಸ್ಮರಣೆಗಾಗಿ ನೆಟ್ಟವುಗಳಾಗಿರಬೇಕೆನಿಸುತ್ತದೆ. ಇವುಗಳು ತೋಳಗೈ ಕಂಬದ ಸ್ಮಾರಕಶಿಲೆಗಳಲ್ಲಿರುವ ಕಂಬದ ರಚನೆಯನ್ನೇ ಹೊಂದಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

## 6. ತೋಳುಗೈ-ಕಂಬದ ಸಾಂಕೇತಿಕತೆ :

ಮಾಸ್ತಿಕಲ್ಲಿನ ಶಿಲ್ಪದಲ್ಲಿ ಸಾಮಾನ್ಯವಾಗಿ ಕಂಬ ಮತ್ತು ಅದರಿಂದ ಎತ್ತಿದ ತೋಳುಗೈ ಇರುವುದನ್ನು ಕಾಣುತ್ತೇವೆ. ಶಿಲ್ಪಿಗಳು ಮಹಾಸತಿ ಶಿಲ್ಪ ಬಿಡಿಸುವಾಗ ಹೆಚ್ಚಾಗಿ ಇದನ್ನು ಅನುಸರಿಸಿಕೊಂಡು ಬಂದರು. ಈ ಸಾಂಕೇತಿಕ ಶಿಲ್ಪ ಕೇವಲ ಕರ್ನಾಟಕದಲ್ಲಿ ಮಾತ್ರ ಕಾಣಿಸಿಕೊಂಡಿರದೆ ಭಾರತದ ಇನ್ನುಳಿದ ಭಾಗಗಳಲ್ಲೂ ಕಾಣಿಸಿಕೊಂಡಿದೆ. ಇಷ್ಟೊಂದು ಪ್ರಚಲಿತದಲ್ಲಿದ್ದ ಈ ಶಿಲ್ಪ ನಿರ್ಮಾಣದ ವೈಶಿಷ್ಟ್ಯದ ಕುರಿತು ವಿವರಣೆಗಳು ಎಲ್ಲಿಯೂ ದೊರಕದೇ ಇರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಬಹುಶಃ ಅದು ಜನಸಾಮಾನ್ಯರಲ್ಲಿ ಅತೀ ಸಾಮಾನ್ಯ ವಿಷಯವಾಗಿದ್ದರಿಂದ ಯಾವುದೇ ಕವಿ, ಶಾಸನಕರ್ತೃ ಅದರ ವಿವರಣೆಯ ಪ್ರಯತ್ನಕ್ಕೆ ಹೋಗಲಿಲ್ಲವೆನಿಸುತ್ತದೆ.

ಹೀಗಾಗಿ ಇಂದು ಮಾಸ್ತಿಶಿಲ್ಪದಲ್ಲಿಯ ಈ ಸಾಂಕೇತಿಕತೆಯನ್ನು ಬಿಡಿಸುವುದು ಜಟಿಲ ಸಮಸ್ಯೆಯಾಗಿಬಿಟ್ಟಿದೆ. ಈ ಸಾಂಕೇತಿಕ ಶಿಲ್ಪದಲ್ಲಿ ಮುಖ್ಯವಾಗಿ ಎರಡು ವಿಷಯಗಳಿವೆ:

ಒಂದು : ಮಾಸ್ತಿಶಿಲ್ಪದಲ್ಲಿಯ ಎತ್ತಿದ ತೋಳಗೈ,

ಎರಡು : ಮಾಸ್ತಿಶಿಲ್ಪದಲ್ಲಿಯ ಕಂಬ.

ಎತ್ತಿದ ತೋಳಗೈ ಮತ್ತು ಕಂಬ ಇವೆರಡನ್ನು ಕೂಡಿಸಿ ಸಾಮಾನ್ಯವಾಗಿ ಮಾಸ್ತಿಕಲ್ಲಿನ ಶಿಲ್ಪವನ್ನು ಬಿಡಿಸಲಾಗಿರುತ್ತದೆ. ಕೆಲವು ಸಲ ಇವೆರಡರಲ್ಲಿ ಒಂದನ್ನೇ ಚಿತ್ರಿಸಿ ಮಾಸ್ತಿ ಶಿಲ್ಪವನ್ನು ರಚಿಸಲಾಗಿರುವುದೂ ಉಂಟು. ಆದರೆ ಇಂಥ ಉಲ್ಲೇಖಗಳು ತೀರ ಕಡಿಮೆ ಎಂಬುದನ್ನು ಮರೆಯಬಾರದು. ಮಾಸ್ತಿಶಿಲ್ಪದಲ್ಲಿಯ ಎತ್ತಿದ ತೋಳಗೈ ಮತ್ತು ಕಂಬ ಇವು ಏನನ್ನು ಅಭಿವ್ಯಕ್ತಿಸುತ್ತವೆ ಎಂಬುದು ಪ್ರಸ್ತುತ ಪ್ರಶ್ನೆಯಾಗಿದೆ. ಈ ಸಮಸ್ಯೆಯನ್ನು ಕುರಿತು ರೈಸ್ ಅವರು ಹೀಗೆ ಬರೆಯುತ್ತಾರೆ: "What is Symbalised by the piller I regret that I am Unable to explain---- The human arm I have heard called Madanakai, the hand or arm of Mada, that is, of Cupid, love, or passion."[55]

ಇಲ್ಲಿ ವಿದ್ವಾಂಸರು ಮಾಸ್ತಿಕಲ್ಲಿನ ಶಿಲ್ಪದ ಸಾಂಕೇತಿಕತೆಯನ್ನು ವಿವರಿಸುವಲ್ಲಿ ತಮಗೆ ಅಸಾಧ್ಯವಾದುದನ್ನು ಹೇಳಿಕೊಂಡಿದ್ದಾರಲ್ಲದೆ, ಅದನ್ನು 'ಮದನಕೈ' ಎಂದು ಕರೆಯುವುದನ್ನೂ ತಿಳಿಸಿದ್ದಾರೆ. ಆದರೆ ಮಾಸ್ತಿಕಲ್ಲನ್ನು 'ಮದನಕೈ' ಎಂದು ಕರೆಯುವುದಕ್ಕೂ ಆ ಶಿಲ್ಪದ ವಿವರಕ್ಕೂ ಯಾವ ಸಂಬಂಧವೂ ಇಲ್ಲವೆಂದು ಬೇರೆ ಹೇಳಬೇಕಾಗಿಲ್ಲ. 'ಮದನಕೈ' ಎಂದು ಕರೆಯುವಂತೆ, 'ವ್ಯಾಸನ ತೋಳು' ಎಂದೂ ಅದನ್ನು ತಪ್ಪಾಗಿ ಗ್ರಾಮ್ಯ ಜೀವನದಲ್ಲಿ ಕರೆಯುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[56]

ಮಾಸ್ತಿಶಿಲ್ಪದಲ್ಲಿಯ ಎತ್ತಿದ ತೋಳಗೈಯು ಮಾಸ್ತಿಯ ಕೈಯನ್ನು ಸೂಚಿಸುತ್ತದೆ. ಇಂಥ ಸ್ಮಾರಕಶಿಲೆಗಳ ಮೇಲೆ ಸತಿಘಟನೆಗಳ ಬರವಣಿಗೆ ಇರುವುದನ್ನು ಗಮನಿಸಬಹುದಾಗಿದೆ. ರೈಸ್ ಅವರು : "These stones never have any inscription, so far as I have noticed"[57] ಎಂದು ಹೇಳಿದ್ದರೂ ಇಂಥ ಶಿಲ್ಪಗಳ ಮೇಲೆ ಸತಿಘಟನೆಯನ್ನು ತಿಳಿಸುವ ಪಾಠಗಳಿರುವುದನ್ನು

ಕಾಣುತ್ತೇವೆ. ಡಾ. ಬಿ. ಎ. ಸಾಲೆತೊರೆ ಅವರು ರೈಸ್ ಅವರ ಮಾತನ್ನು ಗಮನಿಸಿ :

"This last statement, however, is not always borne out by facts. The mastikal of A.D. 1430 as related above, found at Arunavalli, Malavalli taluka, states the name of the woman who committed sati and of her son Basappa who set up the stone",

ಎಂದು ಹೇಳಿದ್ದಾರೆ.[58] ಇದೇ ರೀತಿ ಬಂದಳಿಕೆ, ಬೆನಕ್ಕೂರು, ಮಂಗಳೂರು ಗ್ರಾಮಗಳಲ್ಲಿರುವ ಎತ್ತಿದ ತೋಳುಗೈ ಕಂಬದ ಸ್ಮಾರಕಶಿಲೆಗಳ ಮೇಲೆ ಮಾಸ್ತಿ ಘಟನೆಯನ್ನು ಸೂಚಿಸುವ ಶಾಸನವಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.[59] ಅಲ್ಲದೆ, ತೋಳುಗೈ ಎತ್ತಿದ ಶಿಲ್ಪದಲ್ಲಿ ಮುಂಗೈ ಬಳೆಗಳು, ತೋಳ್ಬಳೆಗಳು ಇರುವುದರಿಂದಲೂ, ಗ್ರಾಮ್ಯಜೀವನದಲ್ಲಿ ಇವು ಮಾಸ್ತಿ ಕಲ್ಲೆಂಬ ಹೇಳಿಕೆ ಪ್ರಚಲಿತದಲ್ಲಿರುವುದರಿಂದಲೂ, ಕೈ ಎತ್ತಿ ನಿಂತಿರುವ ಮಹಾಸತಿಯರ ಸ್ವತಂತ್ರ ವಿಗ್ರಹಗಳು ಬೇರೆ ದೊರಕುವುದರಿಂದಲೂ, "ಎತ್ತಿದ ತೋಳುಗೈ" ಯು ಮಾಸ್ತಿಯ ಕೈಯನ್ನು ಸೂಚಿಸುವುದೇ ಆಗಿದೆ — ಎಂದು ಸ್ಪಷ್ಟ ಅಭಿಪ್ರಾಯ ತಾಳಬಹುದಾಗಿದೆ.

ಎತ್ತಿದ ಕೈದೋಳಿನ ಶಿಲ್ಪವನ್ನು ಶಿಲ್ಪಿಗಳು ಶಿಲೆಯಲ್ಲಿ ಹೇಗೆ ಬಿಡಿಸುತ್ತಿದ್ದರು ಎಂಬುದೂ ಚರ್ಚಣೀಯ ವಿಷಯವಾಗಿದೆ. ಎಡ್ವರ್ಡ್ ಥಾಮ್ಸನ್ ಈ ವಿಷಯದ ಕುರಿತು ಹೀಗೆ ಹೇಳಿದ್ದಾನೆ: " ಸತಿಯರು ಚಿತೆಯನ್ನೇರಲು ಹೋಗುವಾಗ ಕೆಂಪುಬಣ್ಣದಲ್ಲಿ ಕೈಯನ್ನು ಅದ್ದಿ ಬಾಗಿಲಿನ ಮೇಲೆ ಬೆರಳುಗಳನ್ನು ಮೂಡಿಸುತ್ತಿದ್ದರು. ಆ ಬೆರಳುಗಳ ಚಿತ್ರದ ಮೇಲೆ ಬೆರಳುಗಳನ್ನು, ಅದಕ್ಕೆ ಸೇರಿದಂತೆ ತೋಳನ್ನು ಶಿಲ್ಪಿಗಳು ಬಿಡಿಸುತ್ತಿದ್ದರು".[60] ಡಾ. ಚಿದಾನಂದ ಮೂರ್ತಿ ಅವರು ಇದನ್ನು ವಿವರಿಸುತ್ತ "ಬಹುಶಃ ಈಗ ದೊರಕುವ ಮಾಸ್ತಿಕಲ್ಲುಗಳ ಮೇಲಿನ ತೋಳುಗಳು ಸಹಗಮನವನ್ನು ಮಾಡಿದ ಸ್ತ್ರೀಯ ಬೆರಳುಗಳ ಪಡಿಯಚ್ಚಾಗಿದ್ದರೂ ಇರಬಹುದು. ಮಹಾಸತಿಯ ಬಲಗೈ ಶುಭದ, ಸೌಭಾಗ್ಯದ, ಧನ್ಯಜೀವನದ ಸಂಕೇತ" ಎಂದು ಹೇಳುತ್ತಾರೆ.[61] ಇಂಥ ವಿವರಗಳು ನಮಗೆ ತಿಳಿದ ಮಟ್ಟಿಗೆ ಕರ್ನಾಟಕದಲ್ಲಿ ಸಿಗುವುದಿಲ್ಲವೆಂದೇ ಹೇಳಬೇಕು. ಅನಂತನಾಥ ಪುರಾಣದಲ್ಲಿ ಚಂಡಶಾಸನನ ಪತ್ನಿಯರು ಸಹಗಮನಕ್ಕೆ ಸಿದ್ಧವಾಗುತ್ತಿದ್ದ ಸಂದರ್ಭದಲ್ಲಿ ಬರುವ

" ಸಹಗಮನ ಸಮುತ್ಸುಕತೆಯಿಂ ಕೈಬಿಡಿಸೆ ಕೈಗುಡುವ ಕೈದುವರ್ಪ ಕೈವಿಡಿದ ಪೆಂಡಿರ ತಂಡದ " ಎಂಬ ಮಾತು ಈ ವಿಷಯದ ಹಿನ್ನೆಲೆಯಲ್ಲಿ ಕುತೂಹಲ ಕೆರಳಿಸುತ್ತದೆ.[62] ಇಲ್ಲಿಯ 'ಕೈಬಿಡಿಸೆ', 'ಕೈಗುಡುವ', 'ಕೈದುವರ್ಪ', 'ಕೈವಿಡಿದ' ಎಂಬ ಪದಗಳು ಬಹುಮುಖ್ಯವಾದವುಗಳಾಗಿವೆ. ಬಹುಶಃ 'ಕೈಬಿಡಿಸೆ' ಎಂಬುದು ಕೈ(ಚಿತ್ರ)ಬಿಡಿಸಲು, ಕೈ(ಚಿತ್ರ)ಬಿಡಿಸಲಿಕ್ಕಾಗಿ ಎಂಬ ಅರ್ಥವನ್ನು ಕೊಡುತ್ತಿರಬೇಕೆನಿಸುತ್ತದೆ. ಹೀಗೆ ತಿಳಿದುಕೊಂಡಾಗ ಸಹಗಮನದ ಉತ್ಸುಕತೆಯಿಂದ ಕೈ(ಚಿತ್ರ)ಬಿಡಿಸಲಿಕ್ಕಾಗಿ ಚಂಡಶಾಸನನ ಪತ್ನಿಯರು 'ಕೈಗುಡುತ್ತಿದ್ದರು', 'ಕೈದುಬರುತ್ತಿದ್ದರು' (ಚಿತ್ರಕ್ಕಾಗಿ ಕೈ ಅಚ್ಚು ಮಾಡಿಸಿ ಬರುತ್ತಿದ್ದರು), (ಕೈಮಾಡಿಸಿ ಕೊಳ್ಳುವವರು) 'ಕೈ ಹಿಡಿಯುತ್ತಿದ್ದರು' ಎಂದು ಹೇಳಬಹುದಾಗಿದೆ. ಅವರು ಯಾವುದಕ್ಕಾಗಿ ಕೈಕೊಡುತ್ತಿದ್ದರು, ಯಾರು ಕೈ ಹಿಡಿಯುತ್ತಿದ್ದರು ಮತ್ತು ಏನನ್ನು ಕೈದು ಬರುತ್ತಿದ್ದರು ಎಂಬ ವಿಷಯಗಳು ಇಲ್ಲಿ ಸ್ಪಷ್ಟವಾಗುತ್ತಿಲ್ಲ. ಬಹುಶಃ ಎಡ್ವರ್ಡ್ ಥಾಮ್ಸನ್ ಹೇಳುವ ರೀತಿಯಲ್ಲಿ ಶಿಲೆಯ ಮೇಲೆ ಕೈಬಿಡಿಸಲಿಕ್ಕಾಗಿ ಚಂಡಶಾಸನನ ಪತ್ನಿಯರು ಕೆಂಪುಬಣ್ಣದಲ್ಲಿ ಕೈ ಅದ್ದಿ ಅದನ್ನು ಬಾಗಿಲಿಗೋ, ಇನ್ನೆಲ್ಲಿಯೋ ಮಾಡಿಸಲು ತವಕಿಸುತ್ತಿದ್ದರೇ? ಆಗ ಸಹಜವಾಗಿ 'ಕೈಗುಡುವ', 'ಕೈದುವರ್ಪ', 'ಕೈವಿಡಿದ' ಚಟುವಟಿಕೆಗಳು ಅವರಿಂದ ಜರುಗಿರಬಹುದೇ? ಏನಿದ್ದರೂ ಜನ್ನನು ಅತ್ಯಪೂರ್ವವಾದ ಸತಿ ಆಚರಣೆಯ ಮುಖ್ಯ ವಿವರಗಳನ್ನು ಸಂಕ್ಷಿಪ್ತವಾಗಿ ತಿಳಿಸಿ ಈ ವಿಷಯದ ಆಸಕ್ತರಿಗೆ ನಿರಾಶೆ ಮಾಡಿದ್ದಾನೆಂದೇ ಹೇಳಬೇಕಾಗಿದೆ.

ಡಾ. ಎಂ. ಎಂ. ಕಲಬುರ್ಗಿ ಅವರು ಅನಂತನಾಥ ಪುರಾಣದಲ್ಲಿಯ ಈ ಮೇಲಿನ ಮಾತನ್ನು ವಿವರಿಸುತ್ತ, ಈ "ವಾಕ್ಯವು" ತೋಳುಗಂಟು ಕೊಡುವುದನ್ನು ಸೂಚಿಸುತ್ತಿರಬಹುದು" ಎಂದು ಸಂದೇಹಿಸುತ್ತಾರೆ.[63] ಶಾಸನಗಳಲ್ಲಿ ಈ ವಿಷಯವಾಗಿ ಬರುವುದನ್ನು ಈಗ ನೋಡಬಹುದು. ಪುರ ಶಾಸನವೊಂದರಲ್ಲಿ "ಬುತಿಖರನು ಸ್ವರ್ಗಸ್ಥನಾದಲ್ ಆತನ ಹೆಂಡತಿಯರು ಮೂವರು ತೋಳಕಯ್ಯ ಕೊಟ್ಟ ಕಂಬ" ಎಂದು ಹೇಳಲಾಗಿದೆ.[64] ಇಲ್ಲಿ 'ತೋಳ್ಕಯ್' ಎಂಬುದು ವಿವರವನ್ನು ಬಯಸುತ್ತದೆ. ಶಾಸನವೊಂದರಲ್ಲಿ ರಾಮದೇವ ನಾಯಕ ಸತ್ತ ಕಾರಣಕಾ ಬೈರಿಸೆಟ್ಟಿಯ ಮಗಳು ಪೆನುಗೊಂಡೆಯಲ್ಲಿ ಅಗ್ನಿ ಪ್ರವೇಶ ಮಾಡುವುದನ್ನೂ, ಅವಳಿಗಾಗಿ ಪಾನಪೋಳುವಿನಲ್ಲಿ ಶಿವನಾಯಕ 'ವೀರಕೈ' ನಡೆಸುವುದನ್ನೂ ಹೇಳಲಾಗಿದೆ.[65] ಈ ಎರಡೂ ಪಾಠಗಳನ್ನು ನೋಡಿದರೆ ತೋಳುಕೆಯ್ — ವೀರಕೈ ಎಂದು ಹೇಳಲು ಮನಸ್ಸಾಗುತ್ತದೆ.

ಮಹಾಸತಿಯಾಗುವುದು ವೀರತನವೇ ಎಂದು ತಿಳಿದ ಜನ ಹೀಗೆ ಕರೆದಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಇದೇ ರೀತಿ 'ವೀರದಂಕ' ಎಂಬ ಉಲ್ಲೇಖ ಶಂಕರನಹಳ್ಳಿ ಶಾಸನದಲ್ಲಿ ಬಂದಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.[66] ಸಂತೆಮಾವತ್ತೂರಿನ ಶಾಸನದಲ್ಲಿ "ಮ ಉತರ ಗಂಗಗಾಡನ ಸೊಸೆ ಮಗಸಿ ತಿಪುಠ ಉಡದಲ್ಲಿ ತೋಳುಕೈಗೊಟ್ಟಳು" ಎಂದು ಹೇಳಲಾಗಿದೆ.[67] ಈ ಶಾಸನದಲ್ಲಿ ಕಂಬದಿಂದ ಎತ್ತಿದ ಕೈ ಬಿಡಿಸಿದುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಈ ಶಾಸನದಲ್ಲಿ 'ಗಂಗಗಾಡನ ಸೊಸೆ ತೋಳುಕೈಗೊಟ್ಟಳು" ಎಂದು ಹೇಳಿರುವುದು ಸ್ಪಷ್ಟವಿದೆ. ಇದೇ ರೀತಿ ಹಾರೋಬೆನವಳ್ಳಿ ಶಾಸನವೊಂದರಲ್ಲಿ, ಹೊಸಗುಂದದ ಬೊಮ್ಮರಸನ ಮಡದಿ ಬಸವಾಯಕಿತ್ತಿ ತೋಳು ಕೈಗೊಟ್ಟು ಸ್ವರ್ಗ ಪಡೆದ ವಿಷಯವನ್ನು ನಿರೂಪಿಸಲಾಗಿದೆ.[68] ಈಗ ಸಧ್ಯಕ್ಕೆ ತೋಳುಗೈ ಕೊಡುವುದು ಸತಿಹೋಗುವುದನ್ನು ಸೂಚಿಸುವ ಒಂದು ಸಾಮಾನ್ಯ ಪದದಂತೆ ಬಳಕೆಯಾಗುತ್ತಿದೆ ಎಂದು ಹೇಳಬಹುದಾಗಿದೆ.

ಡಾ. ಎಂ. ಎಂ. ಕಲಬುರ್ಗಿ ಅವರು ಈ ವಿಷಯವನ್ನು ಚಿಂತಿಸುತ್ತ ಇನ್ನೊಂದು ಸಮಸ್ಯೆಯೆಡೆಗೆ ಗಮನ ಸೆಳೆದಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಅವರು ಶಿಲೆಯ ಮೇಲೆ ಸತಿಯ ಕೈ ಪಡಿಯಚ್ಚು ಮೂಡಿಸುವುದನ್ನು ಹೀಗೆ ಸಂದೇಹಿಸುತ್ತಾರೆ : "ಬಲಗೈ ಮುದ್ರೆ ಕಲ್ಲ ಮೇಲೆ ತಿರುವು ಮುರುವು ಆಗುತ್ತದೆ. ಕಾರಣ ಹೆಣ್ಣಿಗೆ ಎಡಗೈ ಶುಭವಾದುದರಿಂದ ಅರಿಷಿಣ ದ್ರವದಲ್ಲಿ ಅದ್ದಿದ ಎಡಗೈಯನ್ನು ಕಲ್ಲಮೇಲೆ ಮೂಡಿಸುತ್ತಿರಬಹುದೇ".[69] ಇದು ಗಮನಿಸಬಹುದಾದ ಮಾತಾದರೂ, ಎಡಗೈಯನ್ನು ಪಡಿಯಚ್ಚಾಗಿ ಶಿಲೆಯಲ್ಲಿ ಬಿಡಿಸುತ್ತಿದ್ದರೆಂದು ಹೇಳುವುದಕ್ಕೆ ಆಧಾರಗಳಿಲ್ಲ. ಸತಿವಿಗ್ರಹಗಳು ಹೆಚ್ಚಾಗಿ ಬಲಗೈ ಎತ್ತಿ ಇರುವುದನ್ನು ಇಲ್ಲಿ ಗ್ರಹಿಸಬಹುದಾಗಿದೆ. ಇದರಿಂದಾಗಿ ಬಲಗೈಯನ್ನೇ ಮಾಸ್ತಿಸ್ಮಾರಕ ಶಿಲೆಯಲ್ಲಿ ಕಂಡರಿಸುವ ಉದ್ದೇಶವನ್ನು ಶಿಲ್ಪಿಗಳು ಮತ್ತು ಅವರಿಗೆ ಹಿನ್ನೆಲೆಯಾಗಿದ್ದ ಸಮಾಜ ಹೊಂದಿತ್ತೆಂದು ಹೇಳಬಹುದಾಗಿದೆ. ಥಾಮ್ಸನ್ ಹೇಳಿದ ಬಾಗಿಲಿಗೆ ಕೈಮುದ್ರೆ ಒತ್ತುತ್ತಿದ್ದರು ಎಂಬ ಒಂದು ಮಾತನ್ನು ಡಾ. ಚಿದಾನಂದಮೂರ್ತಿಗಳು ಎಳೆದು ಶಿಲ್ಪಕ್ಕೆ ತಂದರು. ಡಾ. ಕಲಬುರ್ಗಿ ಅವರು ಶಿಲ್ಪದ ಮೇಲೆ ಬಲಗೈ ತಿರುವು-ಮುರುವು ಆಗುವುದನ್ನು ಸಹಜವಾಗಿಯೇ ಸಂದೇಹಿಸಿದರು. ಹೀಗಾಗಿ ಒಟ್ಟು ಈ ವಿಚಾರವೇ ಅಪ್ರಸ್ತುತವೆನಿಸುತ್ತದೆ. ಇದಲ್ಲದೆ ಮಾಸ್ತಿಶಿಲ್ಪದಲ್ಲಿ ಎತ್ತಿದ ತೋಳುಗೈಗಳು ಸತಿಯರ ಕೈಗಳ ಆಕಾರದಷ್ಟೇ ಇವೆ ಎಂದು ಹೇಳುವುದು ಅತಿರೇಕವೆನಿಸುತ್ತದೆ. ಸ್ಮಾರಕ ಶಿಲೆಯಲ್ಲಂತು ಕೆಲವು ಕೈಗಳ ಚಿತ್ರಗಳು ಅತೀ ದೊಡ್ಡವಿದ್ದರೆ, ಇನ್ನು ಕೆಲವು ಕೈಗಳ ಚಿತ್ರಗಳು ಅತೀ ಚಿಕ್ಕವಾಗಿವೆ.

ಕೆಲವಂತೂ ತೀರ ಸಾಧಾರಣ ಮಟ್ಟದಲ್ಲೂ, ಅಸ್ತವ್ಯಸ್ತವಾಗಿಯೂ ಕೆತ್ತಲಾಗಿವೆ. ಈ ಕಾರಣದಿಂದಾಗಿ, ಸಾಮಾನ್ಯವಾಗಿ ಶಿಲ್ಪಿಗಳು ಸ್ಮಾರಕಶಿಲೆಯಲ್ಲಿ ಸತಿಯ ಬಲಗೈಯನ್ನು ಕೆತ್ತುತ್ತಿದ್ದರೆಂದು ಹೇಳಬಹುದಾಗಿದೆ.

ಮಹಾಸತಿ ಸ್ಮಾರಕಶಿಲೆಗಳಲ್ಲಿ ಸತಿಯಬಲಗೈ ಚಿತ್ರಿಸುವುದರ ಉದ್ದೇಶ ಇಂದು ಸ್ಪಷ್ಟ ವಾಗಿ ಹೇಳಲು ಸಾಧ್ಯವಾಗುತ್ತಿಲ್ಲ. ಡಾ. ಎಂ. ಚಿದಾನಂದಮೂರ್ತಿ ಅವರು ಹೇಳಿರುವಂತೆ " ಮಹಾಸತಿಯ ಬಲಗೈ ಶುಭದ, ಸೌಭಾಗ್ಯದ, ಧನ್ಯ ಜೀವನದ ಸಂಕೇತ " ವಾಗಿರಬಹುದು.[70] ಅದನ್ನೇ ಶಿಲ್ಪದಲ್ಲಿ ಪಡಿಯಚ್ಚಾಗಿ ಮಾಡಿಸಿರಬಹುದು. ಈ ವಿದ್ವಾಂಸರೇ ಇನ್ನೊಂದೆಡೆ ಯಲ್ಲಿ ಹೇಳಿರುವಂತೆ, " ಎತ್ತಿದ ಬಲಗೈ ಜನತೆಗೆ ಆಶೀರ್ವಾದವನ್ನು ಮಾಡುವುದನ್ನು ಸೂಚಿಸು ತ್ತದೆ "[71] ಎಂದೂ ಅಭಿಪ್ರಾಯ ಪಡಬಹುದಾಗಿದೆ. ಡಾ. ಎಂ. ಎಂ. ಕಲಬುರ್ಗಿ ಅವರು "ರಾಮನಾಥ ಚರಿತೆಯಲ್ಲಿ ಬರುವ " ಮಾಸತಿಯರು ಪುರಜನರನು ಪರಸುತ " ಎಂಬ ಮಾತನ್ನು ಆಧಾರವಾಗಿಟ್ಟು ಕೊಂಡು ಇದು ಹರಸುವ ಹಸ್ತವನ್ನು ಸಂಕೇತಿಸುತ್ತದೆಂದು ಹೇಳಬಹುದು " ಎಂದು ವ್ಯಕ್ತಪಡಿಸಿದ ಅಭಿಪ್ರಾಯ ಸರಿಯಿರಬಹುದು.[72]

ಜನಪದ ಸಾಹಿತ್ಯದಲ್ಲಿ ಬರುವ ಒಂದು ಪದ್ಯ ಈ ವಿಷಯದ ದೃಷ್ಟಿಯಿಂದ ತುಂಬ ಮಹತ್ವದ್ದೆನಿಸುತ್ತದೆ. (ಇದನ್ನು ಈಗಾಗಲೇ ಹಿಂದೆ ವಿವರಿಸಿದೆ.) ಗಂಡನ ಯುದ್ಧಕ್ಕೆ ಹೊರಟಿದ್ದಾನೆ. ಆಗ ಅವನು ತನ್ನ ಹೆಂಡತಿಯನ್ನು ಕುರಿತು ಹೀಗೆ ಕೇಳುತ್ತಾನೆ:[73]

ದಂಡೀಗ್ ಹೋಗುತೇ ಗಿಂಡೀಲ್ ಉದಕತಾರೇ
ಬಂದೀಯ ತ್ಯಾರಿ ಕುದರೀಗೆ ॥ ಯಲು ಹೆಣ್ಣೇ
ನಂಬ್ಯಾಗಿ ಕೊಡೇ ಬಲಗೈಲಿ ॥

ಇಲ್ಲಿ ಯುದ್ಧಕ್ಕೆ ಹೊರಟ ಗಂಡನು ಪತ್ನಿಗೆ 'ನಂಬಾಗಿ ಕೊಡೇ' ಎಂದು ಕೇಳುತ್ತಾನೆ. ಇಲ್ಲಿಯ ಯೋಧ ತಾನು ಮರಣ ಹೊಂದಿದರೆ ಪತ್ನಿಯು ಸತಿಹೋಗುವುದರ ಕುರಿತಾಗಿ " ನಂಬ್ಯಾಗಿ ಕೊಡೇ ಬಲಗೈಲಿ " ಎಂದು ಕೇಳಿಕೊಳ್ಳುತ್ತಿದ್ದಾನೆ ಎನಿಸುತ್ತದೆ. 'ಬಲಗೈ ಭಾಷೆ' ಕೊಡುವುದರ ಕುರಿತಾಗಿ ಇಂದೂ ಗ್ರಾಮ್ಯ ಜೀವನದಲ್ಲಿ ಅತ್ಯಂತ ಶ್ರದ್ಧೆಯಿಂದ ನಡೆದುಕೊಳ್ಳುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ. ನಿಕೊಲೊಡಿ–ಕೊಂತಿ ಎಂಬ ವಿದೇಶಿ ಪ್ರವಾಸಿ ವಿಜಯನಗರದ ರಾಣಿಯರನ್ನು ಕುರಿತು ಹೇಳುತ್ತ, " ಇವರಲ್ಲಿ ಎರಡು ಮೂರು ಸಾವಿರ ಹೆಂಡತಿಯರು ರಾಜನು ಸತ್ತಾಗ ತಮ್ಮ ಆತ್ಮಸಂತೋಷದಿಂದ ಚಿತೆಯೊಳಗೆ ಬಿದ್ದು ಪ್ರಾಣತ್ಯಾಗ ಮಾಡುತ್ತೇವೆಂಬ ವಾಗ್ದಾನ ಮಾಡಿ ರಾಜನ ಕೈ ಹಿಡಿದಿರುತ್ತಾರೆ " —ಎಂದು

ಹೇಳಿದ್ದಾನೆ.[74] ಇಲ್ಲಿ ಬಹುಶಃ ವಾಗ್ದಾನ ಎಂಬುದು 'ಭಾಷೆ', 'ಕೈ ಮೇಲೆ ಕೈ ಹಾಕಿಕೊಟ್ಟ ವಚನ' ಎಂಬುದನ್ನೇ ಸೂಚಿಸುತ್ತಿರಬಹುದಾಗಿದೆ. ಜನಪದ ಸಾಹಿತ್ಯದಲ್ಲಿ ವಿವರಿಸಲ್ಪಟ್ಟ ಯೋಧ ಯುದ್ಧಕ್ಕೆ ಹೋಗುವಾಗ ಪತ್ನಿಗೆ ವಚನ ಕೇಳುತ್ತಿದ್ದಾನೆ; ಇಲ್ಲಿಯ ಪತ್ನಿಯರು ಅರಸನಿಗೆ ಮೊದಲೇ ವಚನಕೊಟ್ಟು ಕೈ ಹಿಡಿದವರಾಗಿದ್ದಾರೆ. ಎರಡರಲ್ಲಿಯ ಉದ್ದೇಶವೂ ಸತಿಹೋಗುವುದೇ ಆಗಿದೆ. ಕಮಲಾಪುರ ವಸ್ತುಸಂಗ್ರಹಾಲಯದಲ್ಲಿರುವ ಮಾಸ್ತಿಶಿಲ್ಪವೊಂದರಲ್ಲಿ ಪತಿ ತನ್ನ ಪತ್ನಿಗೆ ವಚನಕೇಳುತ್ತಿರುವುದನ್ನೂ, ಪತ್ನಿ ವಚನ ಕೊಡುತ್ತಿರುವುದನ್ನೂ ಶಿಲ್ಪಿ ತನ್ನ ಪರಿಮಿತಿಯಲ್ಲಿ ಬಿಡಿಸಿರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದಾಗಿದೆ. (ಈ ಕುರಿತು ಇದೇ ಅಧ್ಯಾಯದಲ್ಲಿ ಹಿಂದೆ ವಿವರಿಸಲಾಗಿದೆ.)

ಷಣ್ಮುಖ ಶಿವಯೋಗಿಯ ವಚನವೊಂದು ಸತಿ ಚಿತ್ರಣವನ್ನು ಹೀಗೆ ಕೊಡುತ್ತದೆ.[75]

"ಗಂಡ ಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು
ಪುಂಡ ವೀರಸ್ತ್ರೀ ತಾನು ದಂಡೆಯ ಕಟ್ಟಿಕೊಂಡು ಖಂಡೆಯವ ಪಿಡಿದು
ತಂಡ ತಂಡದ ಜನರ ಮುಂದೆ ಮೆರೆದುಕೊಂಡು ಬಂದು
ಕಿಚ್ಚಿನ ಹೊಂಡವ ಕಂಡು ಹೆದರಿ ಹಿಮ್ಮೆಟ್ಟಿದರೆ
ಅವಳಿಗದೆ ಭಂಗವಲ್ಲದೆ ಶೃಂಗಾರ ಮೆರೆವುದೆ ಅಯ್ಯಾ?
ಪತಿಲಿಂಗ, ಸತಿಶರಣ ತನ್ನ ಪತಿವ್ರತಾಭಾಷೆಯ ನುಡಿದು ನಡೆಯಲ್ಲಿ ತಪ್ಪಿದಡೆ
ಅವನ ಭಂಗಕ್ಕೆ ತುದಿದಮೊದಲಿಲ್ಲ ನೋಡಾ ಅಖಂಡೇಶ್ವರಾ"

ಇಲ್ಲಿ ಬಳಕೆಗೊಂಡ 'ಪತಿವ್ರತಾ ಭಾಷೆ' ಎಂಬುದು ಮುಖ್ಯವಾದುದು. ಮೃತನ ಪತ್ನಿ ಸತಿಹೋಗುವ ವಿವರ ಈ ಪದ್ಯದಲ್ಲಿದೆ. ಇಂಥ ಸತಿ ಮೊದಲು ಗಂಡನಿಗೆ ಪತಿವ್ರತಾ ಭಾಷೆ ನುಡಿದವಳಾಗಿದ್ದಳು. ಆ ಭಾಷೆ ಎಂದರೆ, "ಗಂಡನೊಡನೆ ಕೆಂಡವ ಬೀಳುವೆನು" ಎಂಬುದೇ ಆಗಿರಬೇಕು. ಹೀಗೆ ಕೆಲವು ವಿವರಗಳು ಪತ್ನಿಯು ಪತಿಗೆ ಸತಿಯಾಗುವ ಕುರಿತಾಗಿ ಭಾಷೆ ಕೊಡುತ್ತಿದ್ದ ಸೂಚನೆಗಳನ್ನು ನೀಡುತ್ತವೆ. ಸತಿಯು ಇಂಥ ಭಾಷೆ ಕೊಡುತ್ತಿದ್ದುದು ಬಲಗೈಯಿಂದಲೇ ಎಂಬುದಾಗಿ "ನಂಬೂಗಿ ಕೊಡೇ ಬಲಗೈಲಿ" ಎಂಬ ಮಾತಿನ ಹಿನ್ನೆಲೆಯಲ್ಲಿ ಗ್ರಹಿಸಬಹುದಾಗಿದೆ. ಈ ನಿರೂಪಣೆಯ ಹಿನ್ನೆಲೆಯಲ್ಲಿ ಪತಿಗೆ ಭಾಷೆ ಕೊಟ್ಟು ಪೂರೈಸಿದ ಸತಿಯ ಬಲಗೈ ಚಿತ್ರವನ್ನು ಸ್ಮಾರಕ ಶಿಲೆಯ ಮೇಲೆ ಶಿಲ್ಪಿಗಳು ಬಿಡಿಸುತ್ತಿರಬೇಕೆಂದು ಹೇಳಬಹುದಾಗಿದೆ. ಅದು ಮುಂದೆ ಅವಳ ಸೌಭಾಗ್ಯದ, ಧನ್ಯ ಜೀವನದ ಸಂಕೇತವಾಗಿಯೂ, ಜನತೆಗೆ ಆಶೀರ್ವಾದದ, ಹರಸುವ ಸಂಕೇತವಾಗಿಯೂ ಪರಿಣಮಿಸಿರಬಹುದು.

ಮಾಸ್ತಿಶಿಲ್ಪದಲ್ಲಿರುವ ಕಂಬದ ಚಿತ್ರವು ಕುತೂಹಲ ಕೆರಳಿಸುತ್ತದೆ. ಶಿಲ್ಪಿಗಳಿಗೆ ಸತಿಯು ಎತ್ತಿದ ತೋಳಗೈಯನ್ನು ಮಾತ್ರ ಸ್ಮಾರಕಶಿಲೆಯಲ್ಲಿ ಕಂಡರಿಸುವುದು ಅಷ್ಟು ಸಹಜವಾಗಿ ಕಾಣಿಸದ್ದರಿಂದ ಅವರು ಜೊತೆಗೆ ಕಂಬವೊಂದನ್ನು ಕಂಡರಿಸಲು ಪ್ರಯತ್ನಿಸಿದರೆಂದು ಹೇಳಬಹುದಾಗಿದೆ. ಇದಕ್ಕಿಂತಲೂ ಹೆಚ್ಚಾಗಿ ಸತಿಯು ತೋಳಗೈ ಚಿತ್ರಿಸಿದ ಶಿಲ್ಪಿಗಳಿಗೆ ಅವಳ ಇನ್ನುಳಿದ ಶರೀರದ ಪ್ರತೀಕವಾಗಿ ಕಂಬವನ್ನು ಚಿತ್ರಿಸುವ ಆವಶ್ಯಕತೆ ಕಂಡುಬಂದಿರಬೇಕು ಎನಿಸುತ್ತದೆ. ಎತ್ತಿದ ತೋಳಗೈ ಚಿತ್ರವೇ ಸತಿಹೋದುದನ್ನು ಮುಖ್ಯವಾಗಿ ಧ್ವನಿಸುವ ಶಿಲ್ಪವಾಗಿದೆ. ಅದನ್ನು ಸ್ಮಾರಕ ಶಿಲೆಯಲ್ಲಿ ಚಿತ್ರಿಸಿದರೆ ಸಾಕು ಎಂದು ತಿಳಿದ ಜನತೆ ಮುಖ್ಯವಾಗಿ ಅದನ್ನು ಕಂಡರಿಸಲು ಪ್ರಯತ್ನಿಸಿರಬೇಕು. ಆಗ ಸಹಜವಾಗಿ ಸತಿಯ ಪ್ರಾತಿನಿಧಿಕ ಸ್ವರೂಪವೆಂಬಂತೆ ಕಂಬವೊಂದನ್ನು ಜೊತೆಗೆ ಬಿಡಿಸಿರಬೇಕು. ಹೀಗಾಗಿ ಒಟ್ಟು ಮಾಸ್ತಿಶಿಲ್ಪದ ರಚನೆ ಎತ್ತಿದ ತೋಳುಗೈ ಕಂಬದ ರೂಪ ಪಡೆಯಿತೆಂದು ಹೇಳಬಹುದಾಗಿದೆ. ಕೆಲವು ಮಾಸ್ತಿಶಿಲ್ಪಗಳು ತೋಳುಗೈ ಎತ್ತಿದ ಕಂಬಗಳನ್ನೊಳಗೊಂಡಿದ್ದರೆ, ಇನ್ನೂ ಕೆಲವು ಮಾಸ್ತಿಶಿಲ್ಪಗಳು ತೋಳುಗೈ ಎತ್ತಿನಿಂತ ಸತಿಯರನ್ನೊಳಗೊಂಡಿವೆ ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಇವೆರಡರಲ್ಲಿ ಅಂದಿನ ಜನತೆ ಭಿನ್ನತೆಯನ್ನೇ ಕಾಣಲಿಲ್ಲ. ಇಂಥ ಸತಿ ಸ್ಮಾರಕಗಳನ್ನು ಬಿಡಿಸುವಲ್ಲಿ ಜನತೆಗಿದ್ದ ಅನಾಸಕ್ತಿಯನ್ನು ಇಲ್ಲಿ ಸ್ಮರಿಸಬಹುದಾಗಿದೆ. ಸತಿ ವಿಗ್ರಹಗಳನ್ನು ಸುಂದರವಾಗಿ ಬಿಡಿಸುವ ಪ್ರಯತ್ನಗಳು ನಡೆಯಲಿಲ್ಲ. ಅಷ್ಟೇ ಅಲ್ಲ, ಅವರು ಅದಕ್ಕಿಂತಲೂ ಸರಳ ಮಾರ್ಗ ಹುಡುಕಿಕೊಂಡರು; ಅದೇ ಇಂದು ನಾವು ಕಾಣುವ ಎತ್ತಿದ ತೋಳುಗೈ ಕಂಬದ ಮಾಸ್ತಿಶಿಲ್ಪ.

ತೀರ್ಥಹಳ್ಳಿಯ ಕವಿಲೆದುರ್ಗದ ಮಾಸ್ತಿಕಲ್ಲಿನ ಶಿಲ್ಪವೊಂದನ್ನು ಕುರಿತು ಇಲ್ಲಿ ವಿವರಿಸಬಹುದಾಗಿದೆ. ಇಲ್ಲಿ ಕಲ್ಲನ್ನು ಕಂಬದ ಆಕಾರದಲ್ಲಿ ಕಂಡರಿಸಲಾಗಿದೆ. ಅದರಿಂದ ಬಲಗೈ ಎತ್ತಿದ್ದನ್ನು ತೋರಿಸಲಾಗಿದೆ. ಇಲ್ಲಿ ಕಂಬದಿಂದ ಬಲಗೈ ಹೊರಡುವ ಭಾಗ ಅತೀ ವಿಶೇಷವಾದ ರೀತಿಯಲ್ಲಿ ರಚನೆಗೊಂಡಿದೆ. ಸತಿಯ ಬಗಲಿನ ಕೆಳಭಾಗ ಮತ್ತು ಅವಳ ಭುಜದ ಭಾಗ —ಇವುಗಳನ್ನು ಈ ಶಿಲ್ಪದಲ್ಲಿ ತೋರಿಸಿರುವುದು ಅಪೂರ್ವವಾಗಿದೆ. ಬಹುಶಃ ಕಂಬವೇ ಸತಿ ಎಂಬುದನ್ನು ತೋರಿಸಲು ಶಿಲ್ಪಿ ಇಲ್ಲಿ ಪ್ರಯತ್ನಿಸಿದಂತಿದೆ. (ಚಿತ್ರ—63). ಇದೇ ರೀತಿ ಕೊಳ್ಳೆಗಾಲ ತಾಲೂಕಿನ ಮುಡಿಗೊಂಡ, ಗುಂಡ್ಲುಪೇಟೆ ತಾಲೂಕಿನ ಕುಣಗನಹಳ್ಳಿ, ಶಿಕಾರಿಪುರ ತಾಲೂಕಿನ ತಾಲೂಕಿನ ಶಿರಾಳಕೊಪ್ಪ —ಈ ಊರುಗಳಲ್ಲಿರುವ ಫಲಕದ ಮೇಲೆ ಕೆತ್ತಿದ ಕಂಬದ ಮೇಲಿನ

ಭಾಗದಲ್ಲಿ ಸತಿಯು ಕೊರಳಿಗೂ ಎನ್ನುವಂತೆ ಹಾರಗಳನ್ನು ತೊಡಿಸಲಾಗಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಕಂಬವನ್ನು ಸತಿ ಎಂದೇ ತಿಳಿದು ಶಿಲ್ಪ ಬಿಡಿಸುತ್ತಿದ್ದ ಶಿಲ್ಪಿ ಅವಳ ಕೊರಳಿಗೊಂದು ಹಾರ ತೊಡಿಸುವ ಉದ್ದೇಶದಿಂದ ಇಂಥ ಹಾರಗಳ ನಿರ್ಮಾಣವನ್ನು ಇಲ್ಲಿ ಮಾಡಿದಂತಿದೆ. ಮದ್ದೂರ ತಾಲೂಕಿನ ದೇಶಹಳ್ಳಿ ಮಾಸ್ತಿಶಿಲ್ಪ ಈ ಮಾತಿಗೆ ಉತ್ಕೃಷ್ಟ ಉದಾಹರಣೆಯಾಗಿ ನಿಲ್ಲುತ್ತದೆ. ಎತ್ತಿದ ತೋಳಗೈಯನ್ನು ಕಂಬದಿಂದ ಬಿಡಿಸಿ, ತೋರಿಸಲಾಗಿದೆ. ಅಲ್ಲದೆ ಕಂಬದ ಮೇಲ್ಭಾಗದಲ್ಲಿ ಮೂಗು ಕಣ್ಣುಗಳನ್ನು ಚಿತ್ರಿಸಿ, ಅದು ಸತಿಯ ಮುಖವೆಂಬಂತೆ ಶಿಲ್ಪಿ ಅಭಿವ್ಯಕ್ತಿಸಲು ಪ್ರಯತ್ನಿಸಿದ್ದಾನೆ. (ಚಿತ್ರ—123). ಒಂದೇ ಸ್ಮಾರಕ ಶಿಲೆಯಲ್ಲಿ ಎತ್ತಿದ ಕೈಯ ಎರಡು ಪ್ರತ್ಯೇಕ ಕಂಬಗಳಿರುವುದು, ಮೃತನಿಗೆ ಇಬ್ಬರು ಪತ್ನಿಯರಿದ್ದರೆಂಬುದನ್ನೂ, ಅವರಿಬ್ಬರ ಪ್ರತೀಕವಾಗಿ ಎರಡು ಕಂಬಗಳನ್ನು ಕೆತ್ತಲಾಗಿದೆಯೆಂಬುದನ್ನೂ ತಿಳಿಸುತ್ತದೆ. ಮೃತನಿಗೆ ಮೂವರು ಪತ್ನಿಯರಿದ್ದು, ಅವರೆಲ್ಲ ಸತಿಹೋಗಿದ್ದರೆ ಎತ್ತಿದ ಮೂರು ತೋಳಗೈಗಳ ಮೂರು ಪ್ರತ್ಯೇಕ ಕಂಬಗಳನ್ನು ಶಿಲ್ಪದಲ್ಲಿ ಬಿಡಿಸಲಾಗುತ್ತಿತ್ತು. ಇದರಿಂದ ಕಂಬ ಸತಿಯ ಶರೀರವನ್ನು ಪ್ರತಿನಿಧಿಸುವುದೆಂದು ಸ್ಪಷ್ಟವಾಗುತ್ತದೆ.

ಆದರೆ ಒಬ್ಬೊಬ್ಬರಿಗೆ ಒಂದೊಂದು ಕಂಬ ಕೆತ್ತುವುದು ಕೊನೆಯವರೆಗೂ ಉಳಿದುಕೊಳ್ಳಲಿಲ್ಲವೇನೋ. ಒಂದೇ ಕಂಬದಲ್ಲಿ ಎರಡು ಎತ್ತಿದ ಕೈಗಳನ್ನು ತೋರಿಸಿ ಮೃತನ ಇಬ್ಬರು ಪತ್ನಿಯರು ಸತಿಹೋದುದನ್ನು ತಿಳಿಸುವ ಶಿಲ್ಪಗಳೂ ನಿರ್ಮಾಣಗೊಂಡವು. ಅಂಥ ಶಿಲ್ಪಗಳಲ್ಲಿಯ ಎತ್ತಿದ ತೋಳಗೈಗಳು ಎಷ್ಟು ಜನ ಮೃತನ ಪತ್ನಿಯರು ಸತಿಹೋದರೆಂಬುದನ್ನು ತಿಳಿಸುವವುಗಳಾಗಿರುತ್ತವೆ. ಕಂಬ ಒಂದೇ ಇದ್ದರೂ ಅವರನ್ನೆಲ್ಲ ಅದು ಪ್ರತಿನಿಧಿಸುವುದಾಗಿರುತ್ತದೆ. ಒಮ್ಮೊಮ್ಮೆ ತೋಳಗೈಕಂಬ ಒಂದನ್ನೇ ಚಿತ್ರಿಸಿ ಹಲವರು ಪತ್ನಿಯರು ಸಹಿಹೋದುದನ್ನು ಚಿತ್ರಿಸಲಾಗಿರುತ್ತದೆ.(ಚಿತ್ರ—61). ಆಗ ತೋಳುಗೈಕಂಬ ಹಲವರು ಸತಿಹೋದುದ್ದನ್ನು ತಿಳಿಸುವ ಸಂಕೇತವಾಗಿರುತ್ತದೆ.

——oo——

ಅಡಿಟಿಪ್ಪಣಿಗಳು:

1. ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ. ಎಂ. ಎಂ. ಕಲಬುರ್ಗಿ, ಪುಟ 42.
2. ಇ. ಸಿ. VIII–II, 25 ಕಳೂರು, ನಗರ ಕ್ರಿ. ಶ. 1425.
3. ಇ. ಸಿ. VII–I 306, ಸಂಡದ, ಶಿಕಾರಿಪುರ, ಕ್ರಿ. ಶ. 1402.
4. ಕರ್ನಾಟಕದ ವೀರಗಲ್ಲುಗಳು : ಡಾ. ಆರ್. ಶೇಷಶಾಸ್ತ್ರಿ, ಪುಟ, 277,
4 (ಅ) ಅದೇ, ಪುಟ, 289.
5. ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ. ಎಂ. ಎಂ. ಕಲಬುರ್ಗಿ, ಚಿತ್ರ — 10.
6. ಪ್ರ. ಕಂ. ಇಂ. ಸಂ— 2: ಸಂ. ಎಚ್. ಎಲ್. ನಾಗೇಗೌಡ. ಪುಟ. 75; 460, ಅದೇ ಸಂ— 4, ಪುಟ 241.
7. ಕತ್ತಾಲ ದಾರಿ ದೂರ: ಸಂ. ಕೃಷ್ಣಮೂರ್ತಿ ಹನೂರು, ಪುಟ, 114 — 115.
8. ಪ್ರ. ಕಂ. ಇಂ. ಸಂ— 2: ಸಂ. ಎಚ್. ಎಲ್. ನಾಗೇಗೌಡ, ಪುಟ, 298.
9. ಕರ್ನಾಟಕದ ವೀರಗಲ್ಲುಗಳು: ಡಾ. ಆರ್. ಶೇಷಶಾಸ್ತ್ರಿ, ಪುಟ 272.
10. ಪ್ರ. ಕಂ. ಇಂ. ಸಂ— 2: ಸಂ. ಎಚ್. ಎಲ್. ನಾಗೇಗೌಡ, ಪುಟ 126.
11. ಸುವ್ವೀ ಸುವ್ವೀ ಸುವ್ವಾಲಿ: ಸಂ. ಡಾ. ಎಲ್. ಆರ್. ಹೆಗಡೆ, ಪುಟ 72.
12. ಅದೇ.
13. ಕರ್ನಾಟಕದ ವೀರಗಲ್ಲುಗಳು: ಡಾ. ಆರ್. ಶೇಷಶಾಸ್ತ್ರಿ, ಪುಟ272.
14. ಇ. ಸಿ. III 61 ಹೆಬ್ಬಳಗುಪ್ಪೆ, ಹೆಗ್ಗಡದೇವನಕೋಟೆ ಕ್ರಿ. ಶ. 1088 — 89.
15. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ. ಎಂ. ಚಿದಾನಂದಮೂರ್ತಿ, ಪುಟ, 33 —
16. ಇ. ಸಿ. V–II, 21 ಉಂಡಿಗನಾಳು ಗ್ರಾಮ, ಅರಸೀಕೆರೆ ?
17. ಇ. ಸಿ. VIII–II, 29 ಹರಿತಾಳು, ನಗರ ಕ್ರಿ. ಶ. 1228.
18. ಅದೇ 559, ಕೊಂಡಗಳಲೆ, ಸೊರಬ ಕ್ರಿ. ಶ. 1448.
19. ಎಸ್. ಐ. ಐ. XVIII 262, ಬೆನಕನಕೊಂಡ, ರಾಣೆಬೆನ್ನೂರು, ಕ್ರಿ. ಶ. 1284.
20. ಇ. ಸಿ. III, 61 ಹೆಬ್ಬಳಗುಪ್ಪೆ, ಹೆಗ್ಗಡದೇವನಕೋಟೆ ಕ್ರಿ. ಶ. ಸು. 1088 — 89.
21. ಇ. ಸಿ. VIII–II, 163 ಹಂಚಾರ ಗ್ರಾಮ, ಸೊರಬ, ಕ್ರಿ. ಶ. 1442 (?)
22. ಇ. ಸಿ. IV, 70 ಮಾದಕಹಳ್ಳಿ, ಚಾಮರಾಜನಗರ, 16ನೇಯ ಶತಮಾನ.
23. ಪ್ರಜಾವಾಣಿ: 12 — 3 — 1982, ಹುಲಿಯೊಡನೆ ಹೋರಾಡಿದ ವೀರನ ಶಿಲ್ಪ ಸ್ಮಾರಕ: ಕೃಷ್ಣಮೂರ್ತಿ ಹನೂರು.

24. ಇ. ಸಿ. VIII-II, 433 ದುಗೂರು, ಸೊರಬ, ಕ್ರಿ. ಶ. 1388.

25. ಧಾರವಾಡ ಜಿಲ್ಲೆಯ ಶಾಸನ ಸೂಚಿ: 178 ಬಾಳೂರು, ಹಾನಗಲ್ಲ (ತಾ) ಕ್ರಿ. ಶ. 1197.

26. ಇ. ಸಿ. VIII-II, 106, ಹಿರೇಚವಳಗ್ರಾಮ, ಸೊರಬ, ಕ್ರಿ. ಶ. 1376.

27. ಅದೇ. 104.

28. ಎಸ್. ಐ. ಐ. XVIII 413 ಹಿಡಿಯೂಲ, ರಾಣಿಬೆನ್ನೂರ. ಕ್ರಿ. ಶ. 1404.

29. ಶಿವಮೊಗ್ಗ ವಸ್ತು ಸಂಗ್ರಹಾಲಯದಲ್ಲಿ ಇಂಥ ಮಾಸ್ತಿಶಿಲ್ಪಗಳು ಹಲವು ಇವೆ.

30. ವಡ್ಡಗೆರೆ ನಾಗಮ್ಮ: ಸಂ. ವೈಜಯಂತಿಮಾಲ, ಪುಟ. 85, ಜನಪದ ಖಂಡಕಾವ್ಯಗಳು: ಸಂ. ಜೀ. ಶಂ. ಪರಮಶಿವಯ್ಯ, ಪುಟ 18, ಇದೇ, ಈರೋಟಿಯು ಕಳಸ ಹೊತ್ತು ಸತಿ ಹೋದ ವಿವರಗಳಿವೆ. ಪುಟ. 12: ನಂಜುಂಡ ಕವಿ ವಿರಚಿತ ರಾಮನಾಥ ಚರಿತ: (ಉತ್ತರಾರ್ಧ) (ಸಂ-3) ಸಂ. ಎಚ್. ದೇವೀರಪ್ಪ, ಪುಟ 336 — 336, ಪ್ರ. ಕಂ. ಇಂ. ಸಂ —4, ಎಚ್. ಎಲ್. ನಾಗೇಗೌಡ, ಪುಟ 241, ಇದೇ ಸಂ — 2, ಪುಟ 460 — 461.

31. ವಡ್ಡಗೆರೆ ನಾಗಮ್ಮ: ಸಂ. ವೈಜಯಂತಿಮಾಲ, ಪುಟ 4.

32. ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ. ಎಂ. ಎಂ. ಕಲಬುರ್ಗಿ, ಪುಟ 41.

33. ಸತಿ ಎರಡೂ ಕೈಯಲ್ಲಿ ಲಿಂಬೆಹಣ್ಣು ಹಿಡಿದ ಮಾಸ್ತಿಶಿಲ್ಪಗಳು ನಗರ ತಾಲೂಕಿನ ಹುಲ್ಲುಕಲ್ಲು ಮಾಸ್ತಿಕಟ್ಟೆಗಳಲ್ಲಿವೆ.

34. ಮುಗಳೂರಿನ ಮಾಸ್ತಿಶಿಲ್ಪವೊಂದರಲ್ಲಿ ಲಿಂಬೆಹಣ್ಣು ಸತಿಯ ಮುಷ್ಟಿಯಲ್ಲಿ ಕಂಡರಿಸಲಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

35. ಗ್ರಾಮಿಲು: ಡಾ. ಎಂ. ಚಿದಾನಂದಮೂರ್ತಿ, ಪುಟ, 129 — 130.

36. "ಕ್ವಚಿತ್ತಾಗಿ ತಲೆಯ ಹಿಂದೆ ಸೂರ್ಯಕಿರಣ ರೂಪದ ರೇಖೆಗಳಿರುತ್ತವೆ. ಇವು ಜ್ವಾಲೆಗಳೆಂದು ಹೇಳುವರಾದರೂ ಬಹುಶಃ ಕೇದಗೆಯ ಗರಿಗಳಿರಬಹುದು. ಕುಮಾರರಾಮನ ಸಂಗತ್ಯ, ಇಮ್ಮಡಿ ಚಿಕ್ಕಭೂಪಾಲನ ಸಂಗತ್ಯಗಳು ಗರಿಯನ್ನು ತಪ್ಪದೇ ಉಲ್ಲೇಖಿಸುತ್ತವೆ." ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ. ಎಂ. ಎಂ. ಕಲಬುರ್ಗಿ, ಪುಟ 42.

37. ಇ. ಸಿ. VII-I, 366 ಸಂಡದ, ಶಿಕಾರಿಪುರ, ?

38. ಇ. ಸಿ. VIII-II, 163 ಹರೂರು, ಸೊರಬ, ಕ್ರಿ. ಶ. 1442 (?)

39. ಅದೇ, 47 ಹುಣಸೂರು, ಸಾಗರ, ?

40. ಅದೇ, 48 ಸಿರೂರ, ಕ್ರಿ. ಶ. 1454.

41. ಅದೇ, 259 ಕುಪ್ಪಟೂರು, ಸೊರಬ, ?

42. ಎಸ್. ಆಯ್. ಆಯ್. XVIII, 262 ಬೆನಕನಕೊಂಡ, ರಾಣಿಬೆನ್ನೂರು. ಕ್ರಿ. ಶ. 1284.

43. ಇ. ಸಿ. VIII-II, 29 ಹರಿತಾಳು, ನಗರ, ಕ್ರಿ. ಶ. 1228.

44. ಇ. ಸಿ. IV, 70 ಮಾದಹಳ್ಳಿ, ಚಾಮರಾಜನಗರ, 16ನೇಯ ಶತಮಾನ.

45. ಇ. ಸಿ. III, 61 ಹೆಬ್ಬಲಗುಪ್ಪೆ, ಹೆಗ್ಗಡದೇವನಕೋಟೆ, ಕ್ರಿ. ಶ. ಸು. 1088 – 89.

46. ಇ. ಸಿ. VII-I, 239 ಬಂದಲಿಗ್ರಾಮ, ಶಿಕಾರಿಪುರ, ಕ್ರಿ. ಶ. 1447, (ಕಲ್ಲಿನ ಕೆಳಭಾಗ ನೆಲದಲ್ಲಿ ಹೂತುಹೋಗಿದೆ ).

47. ಎಸ್. ಆಯ್. ಆಯ್. XV, 65k ಮುನಗುಂಡಿ, ಧಾರವಾಡ, ಕ್ರಿ. ಶ. 1384.

48. ಇ. ಸಿ. VIII-II 361 ಬಿಸ್ಸೂರು, ಸೊರಬ , ಕ್ರಿ. ಶ. 1259 (?).

49. ಅದೇ 467 ಮುಂಗಳೂರು, ಕ್ರಿ. ಶ. 1412.

50. ಎಸ್. ಆಯ್. ಆಯ್. XVIII 262 ಬೆನಕನಕೊಂಡ, ರಾಣಿಬೆನ್ನೂರು, ಕ್ರಿ. ಶ. 1284.

51. ಅರುಹನಹಳ್ಳಿ ಮಾಸ್ತಿಶಿಲ್ಪದಲ್ಲಿ ಐದು ತೋಳಿಗೆ ಕಂಬಗಳ ಚಿತ್ರಗಳಿರುವುದನ್ನು ಸ್ಮರಿಸಬಹುದಾಗಿದೆ (ಚಿತ್ರ – 120).

52. ಎಚ್. ಸರ್ಕಾರ್: ಫಾಯಿಲಾ ಸ್ತಂಭಾಜ್ ಫ್ರಾಮ್ ನಾಗಾರ್ಜುನಕೊಂಡ–ಸೆಮಿನಾರ್ ಆನ್ ಹೀರೋ ಸ್ಟೋನ್ಸ್: ನಾಗಸ್ವಾಮಿ, ಪುಟ 93.

53. ಎಮ್. ಎ. ಆರ್. ಶಂಕರನಹಳ್ಳಿ, ಅರಸಿಕೆರೆ, ?

54. ಕೆ. ಆಯ್. V 116, ಸಿದ್ದಾಪುರ ?

55. ರೈಸ್. ಮೈಸೂರು ಇನ್ಸ್ಕ್ರಿಪ್ಷನ್ಸ್ ಇಂಟ್ರೊಡಕ್ಷನ್. ಪುಟ

56. ವೈಷ್ಣವ ಮತವು ಶೈವ ಮತಕ್ಕಿಂತ ಉನ್ನತವಾದುದೆಂದು ಸಾರಲು ಎತ್ತಿದ ವ್ಯಾಸನ ತೋಳನ್ನು ವೀರಭದ್ರ ಮೊದಲಾದ ಗಣಪ್ರಥಮರು ಅದನ್ನು ಕತ್ತರಿಸಿ ಹಾಕಿದರೆಂದೂ, ಅದೇ ವ್ಯಾಸನ ತೋಳು ಎಂದೂ ಒಂದು ಮಿಥ್ ಇರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

57. ರೈಸ್, ಮೈಸೂರ ಇನ್ಸ್ಕ್ರಿಪ್ಷನ್ಸ್ ಇಂಟ್ರೊಡಕ್ಷನ್, ಪುಟ.

58. ಸೋಶಿಯಲ್ ಆ್ಯಂಡ್ ಪೊಲಿಟಿಕಲ್ ಲೈಫ್ ಇನ್ ವಿಜಯನಗರ ಎಂಪಾಯರ್.
ಡಾ. ಬಿ. ಎ. ಸಾಲೆತೊರೆ, ಪುಟ 95 – 96.

59. ಇ. ಸಿ. VII-I, 239 ಬಂದಲಿಕೆ, ಶಿಕಾರಿಪುರ. ಕ್ರಿ. ಶ. 1447.
ಇ. ಸಿ. VIII-II 361 ಬಿಸ್ಸೂರು, ಸೊರಬ ಕ್ರಿ. ಶ. 1259 (?) ಅದೇ, 467 ಮುಂಗಳೂರು, ಕ್ರಿ. ಶ. 1412.

60. ಸತಿ: ಎಡ್ವರ್ಡ್ ಥಾಮಸ್, ಪುಟ 30.

61. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಡಾ. ಎಂ. ಚಿದಾನಂದಮೂರ್ತಿ, ಪುಟ 318.

62. ಅನಂತನಾಥ ಪುರಾಣ: 11 — 74 ಗ

63. ಸಮಾಧಿ — ಬಲಿದಾನ — ವೀರಮರಣಸ್ಮಾರಕಗಳು: ಡಾ. ಎಂ. ಎಂ. ಕಲಬುರ್ಗಿ, ಅಡಿಟಿಪ್ಪಣಿ, ಪುಟ — 37.

64. ಇ. ಸಿ. III, 103 ಪುರ, ಮಂಡ್ಯ, ಕ್ರಿ. ಶ. 1417.

65. ಎಮ್. ಎ. ಆರ್. 1917. ಕ್ರಿ. ಶ. 1405.

66. ಎಮ್. ಎ. ಆರ್. 1938. ಶಂಕರನಹಳ್ಳಿ, ಅರಸಿಕೆರೆ ?

67. ಎಮ್. ಎ. ಆರ್. 1936 ಸಂತೆಮಾವತ್ತೂರು, ಕುಣಿಗಲ್, 16ನೇಯ ಶತಮಾನ.

68. ಇ. ಸಿ. VII, 61, ಹಾರೋಬೆನವಳ್ಳಿ, ಶಿವಮೊಗ್ಗ ಕ್ರಿ. ಶ. 1286.

69. ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ. ಎಂ. ಎಂ. ಕಲಬುರ್ಗಿ, ಅಡಿಟಿಪ್ಪಣಿ ಪುಟ — 41.

70. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಡಾ. ಎಂ. ಚಿದಾನಂದಮೂರ್ತಿ, ಪುಟ — 318.

71. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು: ಡಾ. ಎಂ. ಚಿದಾನಂದಮೂರ್ತಿ, ಪುಟ — 16.

72. ಸಮಾಧಿ — ಬಲಿದಾನ — ವೀರಮರಣ ಸ್ಮಾರಕಗಳು: ಡಾ. ಎಂ. ಎಂ. ಕಲಬುರ್ಗಿ, ಪುಟ— 41.

73. ಸುವ್ವೀ ಸುವ್ವೀ ಸುವ್ವಾಲೆ : ಸಂ. ಎಲ್ ಆರ್. ಹೆಗಡೆ, ಪುಟ 72.

74. ಪ್ರ. ಕಂ. ಇಂ. — ಸಂ — 2: ಎಚ್. ಎಲ್. ನಾಗೇಗೌಡ, ಪುಟ — 126.

75. ಅಖಂಡೇಶ್ವರ ವಚನ (ಷಣ್ಮುಖಸ್ವಾಮಿ) ವ. 138.

## ಅಧ್ಯಾಯ – 10

Chapter-10

## ಸಮಾರೋಪ

' ಸತಿ ' ಆಚರಣೆ ಇಂದು ಸಾಮಾನ್ಯವಾಗಿ ಮರೆಯಾಗಿದೆ. ಅದು ಮಾನವ ಇತಿಹಾಸದಲ್ಲಿ ಉಗಮಗೊಂಡ, ಬೆಳೆದ, ಮರೆಯಾದ ಬಗೆ ವಿಸ್ಮಯಕರವಾದುದು. ಮಾನವ ಕುಲಕ್ಕೇ ಅವಹೇಳನಕರವೆಂದು ಆಧುನಿಕರಾದ ನಮಗೆ ತೋರುವ ಅದು ಮರೆಯಾಗಿ ಹೋದುದರ ಕುರಿತಾಗಿ ನೆಮ್ಮದಿಯೇ ಇದೆ.

ಸತಿಪದ್ಧತಿ ಕ್ರೂರ-ಅಸಹ್ಯವೆಂದು ಹೇಳಿದರೂ ಸತಿಹೋದ ಹೆಣ್ಣುಮಕ್ಕಳ ಕುರಿತು ಗೌರವ ಅನುಕಂಪಗಳು ಮೂಡದೇ ಇರುವುದಿಲ್ಲ. ಈ ಹೆಣ್ಣುಮಕ್ಕಳು " ಯಾವುದೋ ಆದರ್ಶಕ್ಕಾಗಿ ತಮ್ಮನ್ನು ತಾವು ಬಲಿಕೊಟ್ಟುಕೊಂಡವರು. ಆ ಆದರ್ಶದ ಮುಂದೆ ಸಾವೂ ಕೂಡ ಕ್ಷುದ್ರವಾಗಿ ತೋರಿತು. . ದೇಹಾಭಿಮಾನ, ಬಾಳಬೇಕೆಂಬ ಬಯಕೆ ಮನುಷ್ಯನಿಗೆ ತೀರ ಸಹಜ. ಒಂದು ಆದರ್ಶ ಇವನ್ನೂ ಹಿಂದಕ್ಕೆ ಹಾಕಬೇಕಾದರೆ, ಆ ಆದರ್ಶಕ್ಕಿಂತ ಅದನ್ನು ವಾಸ್ತವವಾಗಿ ನಂಬಿ ನಡೆದ ವ್ಯಕ್ತಿಗಳು ಪೂಜನೀಯರಾಗುತ್ತಾರೆ "[1] ಅವರು ನಿಜವಾಗಿಯೂ ತ್ಯಾಗದ ಸಂಕೇತಗಳು.

ಕರ್ನಾಟಕದಲ್ಲಿ ಸತಿಹೋದ ಅಮರ ಸ್ತ್ರೀಯರ ಚರಿತ್ರೆ ಹಲವು ಆಕರಗಳಲ್ಲಿ ಹಂಚಿಹೋಗಿದೆ. ಶಾಸನ, ಶಿಲ್ಪ, ಗುಡಿ, ಗೋಂಬೆ, ಸಾಹಿತ್ಯ (ಗ್ರಂಥ-ಜನಪದ-ದಿನಚರಿಸಾಹಿತ್ಯ) ಇವುಗಳಲ್ಲದೆ ಮರ, ಹಳ್ಳ, ಹೊಲ, ಕಾಡು, ಕಳಸ, ಕನ್ನಡಿ, ಸೀರೆ, ವ್ಯಕ್ತಿನಾಮ, ಮನೆತನ ಈ ಮೊದಲಾದ ಆಕರಗಳಲ್ಲೂ ಸತಿಯರ ಇತಿಹಾಸ ಅಡಕಗೊಂಡಿದೆ. ಈ ಎಲ್ಲವುಗಳನ್ನೂ ಸಾಧ್ಯವಿದ್ದಮಟ್ಟಿಗೆ ಒಂದೆಡೆಗೆ ಸಂಗ್ರಹಿಸಿ, ವಿಶ್ಲೇಷಿಸಿ, ಸತಿಪದ್ಧತಿಯ ಕುರಿತಾದ ಸಮಗ್ರ ಅಧ್ಯಯನ ಕೈಕೊಂಡ ಪ್ರಯತ್ನವಿದು. ಆದರೂ ಈ ವಿಷಯದಲ್ಲಿ ಇನ್ನೂ ಹಲವಾರು ಕೆಲಸ ಮಾಡಲು ಅವಕಾಶ ಇದ್ದೇ ಇದೆ. ಪ್ರತಿ ಜಿಲ್ಲೆಯ ಹಳ್ಳಿ-ಹಳ್ಳಿಗಳಲ್ಲಿರುವ ಸತಿಸಂಗತಿಗಳನ್ನು ಸಂಗ್ರಹಿಸುವ ಕಾರ್ಯ ಇನ್ನೂ ವ್ಯಾಪಕವಾಗಿ ನಡೆಯಬೇಕಾಗಿದೆ. ಹೀಗೆ ಕೆಲಸ ಕೈಕೊಳ್ಳುವವರಿಗೆ ಈ ಕಾರ್ಯಕ್ಷೇತ್ರ ಒಂದು " ನಿಧಿ " ಯಾಗಿದೆ.

ಮಾಸ್ತಿಕಲ್ಲುಗಳ ಪಾಠಗಳು ಸತಿಸಂಗತಿಗಳನ್ನು ತಿಳಿಸುತ್ತವೆ. ಅವು ತಿಳಿಸುವ ವಿಧಾನ ಮಾತ್ರ ತೀರ ಸಂಕ್ಷಿಪ್ತವಾಗಿರುತ್ತದೆ. ಈ ಕಾರಣದಿಂದಾಗಿ, ಅವುಗಳ ಶಿಲ್ಪವನ್ನೂ ಗಮನಿಸುವುದು ಇನ್ನೂ ಅನಿವಾರ್ಯವಾಗುತ್ತದೆ. ಶಾಸನ ಪಾಠ ಮತ್ತು ಶಿಲ್ಪದ ಸಹಾಯದಿಂದ

ಸತಿವಿಷಯದ ಹೆಚ್ಚಿನ ಸಂಗತಿಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಉದಾಹರಣೆಗೆ ಹೆಬ್ಬಲಗುಪ್ಪೆ ಶಾಸನವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.[2] ಈ ಕಲ್ಲಿನ ಪಾಠದಲ್ಲಿ ನವಲಾಕ್ಷಿರಾಜ ಸತ್ತುದೆ ಎಂದು ಮಾತ್ರ ತಿಳಿಸಲಾಗಿದೆ. ಆದರೆ ಈ ಕಲ್ಲಿನಲ್ಲಿಯ ಶಿಲ್ಪದಲ್ಲಿ ನವಲಾಕ್ಷಿರಾಜ ಹೋರಾಡಿ ಮಡಿದುದನ್ನು ಚಿತ್ರಿಸಲಾಗಿದೆ. ಹೀಗೆ ಇಲ್ಲಿ ಪಾಠದ ವಿಷಯಕ್ಕೆ ಶಿಲ್ಪ ನೆರವಾಗುವುದನ್ನು ಕಾಣಬಹುದಾಗಿದೆ. ಈ ಬಗೆಯ ಅಭ್ಯಾಸ ಈ ಅಧ್ಯಯನದಲ್ಲಿ ನಡೆದಿದೆ

ಮಾಸ್ತಿಕಲ್ಲುಗಳ ಪಾಠಗಳಂತೆ ನಿರ್ದಿಷ್ಟ ಮತ್ತು ಸ್ಪಷ್ಟ ಸಂಗತಿಗಳನ್ನು ಮಾಸ್ತಿ ಕಲ್ಲುಗಳ ಶಿಲ್ಪಗಳಿಂದ ತಿಳಿದುಕೊಳ್ಳಬಹುದಾಗಿದ್ದರೂ , ಕೆಲವೊಮ್ಮೆ ಅವುಗಳನ್ನು ಹೀಗೇ ಎಂದು ಅರ್ಥೈಸಿಕೊಳ್ಳುವುದು ಕಷ್ಟವಾಗುತ್ತದೆ. ಕಮಲಾಪುರ ವಸ್ತುಸಂಗ್ರಹಾಲಯದಲ್ಲಿರುವ ಮಾಸ್ತಿಕಲ್ಲನ್ನು ಶಿಲ್ಪವನ್ನು ಇಲ್ಲಿ ಉದಾಹರಿಸಬಹುದಾಗಿದೆ.(ಚಿತ್ರ—72). ಈ ಕಲ್ಲಿನಲ್ಲಿ ಕಂಬ ದಿಂದ ಹೊರಟ ಬಲಗೈಯನ್ನು ಎತ್ತಿದಂತೆ ತೋರಿಸಲಾಗಿದೆ. ಪತಿ ದಿಂಬಿಗೆ ಆನಿಸಿಕೊಂಡು ಕುಳಿತು ಬಲಗೈಯನ್ನು ಮುಂದೆ ಚಾಚಿ ಅಂಗೈಯನ್ನು ಸತಿಗೆ ತೋರಿಸುವಂತೆ ಹಿಡಿದುಕೊಂಡಿದ್ದಾನೆ. ಸತಿಯು ಅವನ ಮುಂದೆ ನಿಂತು ಕೈಮಾಡಿ ಏನೋ ಹೇಳುತ್ತಿರುವಂತಿದೆ. ಈ ಶಿಲ್ಪದ ಅಭಿವ್ಯಕ್ತಿ ಇದೇ ಎಂದೂ ಹೇಳುವಂತಿಲ್ಲ.[0]

ಕೆಲವು ಮಾಸ್ತಿಕಲ್ಲುಗಳ ಪಾಠಗಳು ಈಗ ಪ್ರಕಟಗೊಂಡಂತಿರುವುದು ಪ್ರಶ್ನಾರ್ಹ ವಾಗಿವೆ. ಅವುಗಳನ್ನು ಇನ್ನೊಮ್ಮೆ ಸಂಗ್ರಹಿಸುವ ಅವಶ್ಯಕತೆ ಬಹಳವಿದೆ. ಕೊಳಗುಂದ ಶಾಸನ ಪಾಠ ಹೀಗಿದೆ : " ರೋಜನ ಸೂಸಿ ಮಹಾದೇವಿ ತನ್ನಗಂಡನಂ ಕೊನ್ದಂ ಸುರಲೋಕಪ್ರಾಪ್ತಿಯಾದಳು".[3] ಇಲ್ಲಿ ಮಹಾದೇವಿ ಸ್ವತ: ತನ್ನ ಗಂಡನನ್ನು ಕೊಂದು ಸತಿ ಹೋದಳೆಂದು ತಿಳಿದುಬರುತ್ತದೆ. ಬಹುಶ: ಶಾಸನಪಾಠ 'ಕೊನ್ದಂ' ಎಂದು ಇರದೆ 'ಕೊನ್ದು' ಎಂದು ಇರಬೇಕು. ಈ ಕಲ್ಲು ಈಗ ಲಭ್ಯವಿಲ್ಲ. ಈ ಕಲ್ಲು ಇರುವ ಸ್ಥಾನದ ಹೊಂಡಗಟ್ಟಿನಲ್ಲಿ ಯಾವತ್ತೂ ನೀರು ತುಂಬಿಕೊಂಡಿರುವುದು ದುರದೃಷ್ಟಕರ ಸಂಗತಿಯಾಗಿದೆ. ಇದೇ ರೀತಿ ಹೆಬ್ಬಲಗುಪ್ಪೆ ಶಾಸನಪಾಠವನ್ನು ಇಲ್ಲಿ ಲಕ್ಷಿಸಬಹುದಾಗಿದೆ. " ನವಲಾಕ್ಷಿರಾಜ ಸತ್ತುದೆ ಆತನ ಎಳಿತಿ ತಪರ್ಗ್ಗಿಯಕಮ್ಮಾರಿವೂಯುದ್ದ ಸತ್ತಡವರ್ಗೆ".[4] ಎಂಬ ಈ ಪಾಠದಲ್ಲಿಯ 'ಎಳಿತಿ' ಎಂಬುದು 'ಎಳೆ' ಎಂಬುದಾಗಿರಬೇಕು. ಹೀಗಿದ್ದುದಾದರೆ ಈ ಶಾಸನಪಾಠದ ಅರ್ಥವೇ ಬೇರೆಯಾಗಿ ನಿಲ್ಲುತ್ತದೆ. ( ಈ ಕುರಿತು ದೀರ್ಘವಾಗಿ ಹಿಂದೆ ವಿವರಿಸಲಾಗಿದೆ). ಈ ಕಾರಣದಿಂದಾಗಿ ಹಲವು ಮಾಸ್ತಿಕಲ್ಲಿನ ಪಾಠಗಳನ್ನು ಇನ್ನೊಮ್ಮೆ ಸಂಗ್ರಹಿಸುವ ಅನಿವಾರ್ಯತೆ ಉಂಟಾಗಿರುವುದನ್ನು ಮರೆಯಬಾರದು.

ಸತಿಹೋದವರ ನೆನಪಿನಲ್ಲಿ ಇನ್ನೂವರೆಗೂ ಜಾತ್ರೆಗಳು ಹಳ್ಳಿಹಳ್ಳಿಗಳಲ್ಲಿ ಜರುಗುತ್ತಿವೆ. ಆ ಜಾತ್ರೆಗಳಲ್ಲಿ ನಡೆಯುವ ಆಚರಣೆಗಳು ಸತಿಪದ್ಧತಿಯ ಮೇಲೆ ತುಂಬ ಹೊಸ ಬೆಳಕನ್ನು ಬೀರುವಂಥವುಗಳಾಗಿವೆ. ಇಂಥ ಹಲವು ಜಾತ್ರೆಗಳ ಅಮೂಲ್ಯ ಸಹಾಯವನ್ನು ಈ ಪ್ರಬಂಧದಲ್ಲಿ ಪಡೆಯಲಾಗಿದೆ. ಉದಾಹರಣೆಗೆ ಅಂಕೋಲೆಯಲ್ಲಿ ಬಂಡಿಹಬ್ಬದಂದು ನಡೆಯುವ ಮಾಸ್ತಿಜಾತ್ರೆಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಮಾಸ್ತಿ ಮದುವೆಯಾದುದರ ಮೊದಲ್ಗೊಂಡು ಗಂಡ ಯುದ್ಧದಲ್ಲಿ ಮಡಿದು ಅವಳು ಚಿತೆಯಲ್ಲಿ ಹಾರಿ ಸತಿಹೋಗುವ ವರೆಗೂ ಅಂದು ನಡೆದ ಸಂಗತಿಗಳನ್ನು ಇಂದಿನ ವರೆಗೂ ಜಾತ್ರೆಯಂದು ಆಡಿ ತೋರಿಸಲಾಗುತ್ತದೆ. ಇಂಥ ಅಪರೂಪದ ಆಚರಣೆಗಳನ್ನು ಸಂಗ್ರಹಿಸುವ ಕಾರ್ಯ ಭರದಿಂದ ನಡೆಯಬೇಕಾಗಿದೆ. ಕೆಲವು ದಿನಗಳಲ್ಲಿ ಇಂಥ ಸಂಗತಿಗಳು ಮರೆಯಾಗಿ ಹೋಗುತ್ತವೆಂಬುದರಲ್ಲಿ ಸಂಶಯವಿಲ್ಲ.

ಗ್ರಾಮಗಳಲ್ಲಿರುವ ಮಾಸ್ತಿಕಲ್ಲುಗಳ ರಕ್ಷಣೆಯ ಆವಶ್ಯಕತೆ ತುಂಬ ಇದೆ. ಈ ದೃಷ್ಟಿಯಿಂದ ಕರ್ನಾಟಕ ಸರಕಾರದ ಪ್ರಾಚ್ಯವಸ್ತು ಸಂಗ್ರಾಲಯ ವಿಭಾಗದವರು, ಮತ್ತು ಕೇಂದ್ರ ಸರಕಾರದ ಪ್ರಾಚ್ಯ ಇಲಾಖೆಯವರು ಸ್ತುತ್ಯವಾದ ಕಾರ್ಯವನ್ನು ಮಾಡಿದ್ದಾರೆ. ಬೆಂಗಳೂರು, ಶಿವಮೊಗ್ಗ, ರಾಯಚೂರು, ಚಿತ್ರದುರ್ಗ, ವಿಜಾಪುರ, ಬೆಳಗಾವಿ, ಐಹೊಳೆ, ಪಟ್ಟದಕಲ್ಲು, ಬಾದಾಮಿ ಮೊದಲಾದ ಕಡೆಗಳಲ್ಲಿ ಆಯಾ ಭಾಗಗಳಲ್ಲಿ ದೊರಕಿದ ಮಾಸ್ತಿ ಕಲ್ಲುಗಳನ್ನು ಸಂಗ್ರಹಿಸಿ ಇಡಲಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯವರು ಮಹತ್ವದ ಕೆಲವು ಮಾಸ್ತಿ ಕಲ್ಲುಗಳನ್ನು ಸಂಗ್ರಹಿಸಿ ರಕ್ಷಿಸಿಕೊಂಡು ಬರುತ್ತಿರುವುದನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ ಹೀಗಿದ್ದಾಗಲೂ, ಕೇವಲ ಸರಕಾರ, ವಿಶ್ವವಿದ್ಯಾಲಯಗಳು ಮಾತ್ರ ಈ ದಿಕ್ಕಿನಲ್ಲಿ ಕೆಲಸ ಮಾಡಿದರೆ ಸಾಲದು. ಗ್ರಾಮದ ಯುವಕರು, ನಾಯಕರು ಮಾಸ್ತಿಕಲ್ಲುಗಳನ್ನು ಮತ್ತು ಸ್ಮಾರಕ ಶಿಲೆಗಳನ್ನು ಗುಡಿಗಳ ಮುಂದೆಯೋ, ಪಂಚಾಯತ ಕಛೇರಿಗಳ ಮುಂದೆಯೋ ಸಂಗ್ರಹಿಸಿ ರಕ್ಷಿಸಿಡುವ ಮಹತ್ವದ ಕೆಲಸಕ್ಕೆ ಮನಸ್ಸು ಮಾಡಬೇಕಾಗಿದೆ.

ಹೀಗೆ ಹಲವು ದಿಕ್ಕಿನಲ್ಲಿ ಮಾಸ್ತಿ ವಿಷಯಕ್ಕೆ ಸಂಬಂಧಪಟ್ಟ ಅಧ್ಯಯನ ನಡೆಯಲು ಇನ್ನೂ ಅವಕಾಶವಿದೆ.

o—o

<u>ಅಡಿಟಿಪ್ಪಣಿಗಳು :</u>

1· ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು : ಡಾ·ಎಂ·ಚಿದಾನಂದಮೂರ್ತಿ, ಪುಟ–44·

2· ಇ·ಸಿ III ,61 ಹೆಬ್ಬಲಗುಪ್ಪೆ, ಹೆಗ್ಗಡೆದೇವನಕೋಟೆ, ಸು·ಕ್ರಿ·ಶ·1088–89·

3· ಇ·ಸಿ V-II, 81 ಕೋಳಿಗುಂದ, ಅರಸೀಕೆರೆ, ಕ್ರಿ·ಶ·1225·

4· ಇ ಸಿ III ,61 ಹೆಬ್ಬಲಗುಪ್ಪೆ, ಹೆಗ್ಗಡೆದೇವನಕೋಟೆ, ಸು·ಕ್ರಿ·ಶ·1088–89·



# ಗ್ರಂಥಸೂಚಿ

Bibliography


**ಶಾಸನ ಸಂಪುಟಗಳು :**

1. Epigraphia Carnatica
2. Epigraphia Indica
3. Hydrabad Archeological Series
4. Karnatak Inscriptions
5. Mysore Archeological Reports
6. South Indian Inscriptions

## ಗ್ರಂಥಗಳು

**ಕನ್ನಡ :**

(ಅ) ಪ್ರಾಚೀನ ಕೃತಿಗಳು:

1. ಅಖಂಡೇಶ್ವರ ವಚನ : (ಸಂ) ಸಿದ್ಧವೀರದೇವರು ಹೊಸಮಠ, 1944.
2. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ : (ಸಂ) ಡಾ.ಎಂ.ಎಂ.ಕಲಬುರ್ಗಿ, ಬಿ.ಆರ್.ಹಿರೇಮಠ, 1977.
3. ಕನಕದಾಸರ ಮೋಹನ ತರಂಗಿಣೀ ಸಂಗ್ರಹ: (ಸಂ) ಬಿ.ಎಸ್.ಸಣ್ಣಯ್ಯ, 1968
4. ಕವಿಚಕ್ರವರ್ತಿ ಜನ್ನವಿರಚಿತ ಅನಂತನಾಥಪುರಾಣಂ : (ಸಂ) ಬಿ.ಬಿ.ಮಹೀಶವಾಡಿ, 1975.
5. ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ : (ಸಂ) ಕುವೆಂಪು ಮತ್ತು ಮಾಸ್ತಿವೆಂಕಟೇಶ ಅಯ್ಯಂಗಾರ, 1958.
6. ಕುಮಾರ ವಾಲ್ಮೀಕಿ ವಿರಚಿತ ತೊರವೆರಾಮಾಯಣ (ಸಂ-1) : (ಸಂ) ಎನ್.ಬಸವಾರಾಧ್ಯ, 1956.
7. ಕುಮಾರವಾಲ್ಮೀಕಿ ವಿರಚಿತ ತೊರವೆರಾಮಾಯಣ (ಸಂ-2) : (ಸಂ) ಬಿ.ಎಸ್.ಸಣ್ಣಯ್ಯ, 1959.
8. ಗದಾಯುದ್ಧ ದರ್ಪಣಂ : (ಸಂ) ಪ್ರೊ.ತಿ.ಬಾಸುಬ್ರಾಂಯಭಟ್, 1975.
9. ದೇವಪ್ಪಕವಿ ವಿರಚಿತ ರಾಮವಿಜಯಕಾವ್ಯ : (ಸಂ) ಪ್ರೊ.ಟಿ.ಕೇಶವಭಟ್ಟ, 1969.

10. ನಂಜುಂಡಕವಿ ವಿರಚಿತ ರಾಮನಾಥ ಚರಿತ (ಉತ್ತರಾರ್ಧ) (ಸಂ-3) : (ಸಂ) ಎಚ್. ದೇವೀರಪ್ಪ, 1964.
11. ನಯಸೇನ ವಿರಚಿತ ಧರ್ಮಾಮೃತಂ : ಗದ್ಯಾನುವಾದ : ಕೆ.ವೆಂಕಟರಾಮಪ್ಪ, 1978.
12. ನಾಗಚಂದ್ರ ವಿರಚಿತ ರಾಮಚಂದ್ರ ಚರಿತ ಪುರಾಣಂ : (ಸಂ) ಡಾ.ಆರ್.ಸಿ.ಹಿರೇಮಠ, 1975.
13. ನಾಗವರ್ಮ ವಿರಚಿತ ಕರ್ಣಾಟಕ ಕಾದಂಬರಿ : (ಸಂ) ಎನ್.ಅನಂತರಂಗಾಚಾರ್, 1973.
14. ಪಂಪಕವಿ ವಿರಚಿತ ಪಂಪಭಾರತಂ: ಗದ್ಯಾನುವಾದ : ಎನ್ ಅನಂತರಂಗಾಚಾರ್, 1977.
15. ಪಂಪ ಮಹಾಕವಿ ವಿರಚಿತ ಆದಿಪುರಾಣಂ : ಗದ್ಯಾನುವಾದ : ಶ್ರೀ.ಕೆ.ಎಲ್.ನರಸಿಂಹಶಾಸ್ತ್ರೀ, 1977.
16. ಬಸವಣ್ಣನವರ ವಚನಗಳು : (ಸಂ) ಆರ್.ಸಿ.ಹಿರೇಮಠ, 1968.
17. ಮಹಾಕವಿ ರನ್ನ ವಿರಚಿತಮಪ್ಪ ಅಜಿತತೀರ್ಥಂಕರಪುರಾಣತಿಲಕಂ : (ಸಂ) ಮಂ.ಅ. ರಾಮಾನುಜಯ್ಯಂಗಾರ್ಯ, 1910.
18. ಮುದ್ರಾಮಂಜೂಷ : ರೆವ್॥ ಜಿ.ಸ್ಟೀವನ್‌ಸನ್, 1953.
19. ಯಶೋಧರ ಚರಿತೆ : (ಸಂ) ಕ.ವೆಂ.ರಾಘವಾಚಾರ್, 1952
20. ವಿಶ್ವಕವಿ ರತ್ನಾಕರನ ಭರತೇಶವೈಭವ : (ಸಂ) ಶ್ರೀ.ಜಿ.ಬ್ರಹ್ಮಪ್ಪ; ಶ್ರೀ ಹಂಪನಾಗರಾಜಯ್ಯ, ಶ್ರೀಮತಿ.ಕಮಲಮ್ಮ ಹಂಪನಾ, 1967.
21. ಶ್ರೀ.ಸಿದ್ಧೇಶ್ವರ-ಮಹಾಪುರಾಣ : (ಸಂ) ಪಿ.ಆರ್.ಕರಿಬಸವಶಾಸ್ತ್ರೀ, 1895.
22. ಶಿವಶರಣೆಯರ ವಚನಗಳು : ಡಾ. ಆರ್ ಸಿ. ಹಿರೇಮಠ
23. ಸಕಲಪುರಾತನರ ವಚನಗಳು: (ಸಂ) ಆರ್.ಸಿ.ಹಿರೇಮಠ, 1972.
24. ಸಮಯಪರೀಕ್ಷೆ : (ಸಂ) ಬಿ.ಎಸ್.ಕುಲಕರ್ಣಿ, 1958.
25. ಸಿಂಗಿರಾಜ ಕವಿಕೃತ ಸಿಂಗಿರಾಜಪುರಾಣ : (ಸಂ) ಎಚ್.ದೇವೀರಪ್ಪ, 1950.
26. ಸಿರುಮಣನಾಯಕನ ಸಾಂಗತ್ಯ : (ಸಂ) ಡಾ.ಎಂ ಎಂ.ಕಲಬುರ್ಗಿ, 1983.
27. ಹರಿಹರ ಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧ : ಗದ್ಯಾನುವಾದ: ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ, 1976.

(ಆ) ಜಾನಪದ ಸಂಗ್ರಹಗಳು :

1. ಅವರು ನೀಡಿದ ದೀಪ : (ಸಂ) ಕೆ.ವಿ.ಸುಬ್ಬಣ್ಣ,
2. ಆಯ್ದ ಜನಪದ ಕಥನಗೀತಗಳು: (ಸಂ) ಡಾ.ಎಂ.ಎಸ್.ಸುಂಕಾಪುರ, ಡಾ.ಬಿ.ಬಿ.ಹೆಂಡಿ, 1978.

3. ಆಂಧ್ರ ಜನಪದ ಕಥೆಗಳು : (ಸಂ) ಜೀ.ಶಂ.ಪರಮಶಿವಯ್ಯ, 1970.

4. ಉತ್ತರ ಕರ್ನಾಟಕದ ಗಾದೆಗಳು : (ಸಂ) ಡಾ.ಬಿ.ಬಿ.ಹೆಂಡಿ, ಡಾ.ಎಂ.ಎಸ್.ಲಠ್ಠೆ, 1934.

5. ಕರ್ನಾಟಕ ಜನಪದ ಕಥೆಗಳು : (ಸಂ) ರಾಗೌ, 1979.

6. ಕತ್ತಲ ದಾರಿ ದೂರ : (ಸಂ) ಕೃಷ್ಣಮೂರ್ತಿ ಹನೂರ, 1981.

7. ಕನ್ನಡ ಐತಿಹ್ಯಗಳು : (ಸಂ) ಜಿ.ವಿ.ತಿ 1978.

8. ಕನ್ನಡ ಜಾನಪದ ಗೀತೆಗಳು : ಡಾ.ಜಿ.ಎಸ್.ಗದ್ದಗಿಮಠ, 1963.

9. ಕಾರವಾರ ಜಿಲ್ಲೆಯ ಜನಪದ ಗೀತೆಗಳು : (ಸಂ) ಎನ್.ಆರ್.ನಾಯಕ, 1975.

10. ಕೋಲೆಲ್ ಕೋಲೆಲ್ ಕೂಡಿ ಬರಲಿ : (ಸಂ) ಡಾ.ಎಸ್.ವಿ.ರಂಗಣ್ಣ, 1981.

11. ಗರತಿಯ ಹಾಡು : (ಸಂ) ಹಲಸಂಗಿ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಮೊದಲಾದ ಗೆಳೆಯರು, 1978.

12. ಗ್ರಂಥಸ್ಥ ಗಾದೆಗಳು : (ಸಂ) ಎಚ್.ಎಸ್.ಅಚ್ಚಪ್ಪ, 1969.

13. ಗಾದೆಗಳ ಭಂಡಾರ : (ಸಂ) ಜಂಗಮಕೋಟೆ ಕೃಷ್ಣಶಾಸ್ತ್ರಿ, 1956.

14. ಗೊಂಡರಪದಗಳು (ಸಂ) ಡಾ.ಎಲ್.ಆರ್.ಹೆಗಡೆ, 1977.

15. ಜನಪದ ಕಥನಗೀತೆಗಳು: (ಸಂ) ಕ.ರಾ.ಕೃ 1957.

16. ಜನಪದ ಕಥಾಸಂಗಮ: (ಸಂ) ತಿ.ಲಿಂಗಯ್ಯ, 1978.

17. ಜನಪದ ಖಂಡಕಾವ್ಯಗಳು : (ಸಂ) ಜೀ.ಶಂ.ಪರಮಶಿವಯ್ಯ, 1933.

18. ಜನಪದ ನಂಬಿಕೆಗಳು : (ಸಂ) ರಾಗೌ, 1972.

19. ಜಾನಪದ ಕಿರುಕತೆಗಳು : (ಸಂ) ಎಂ.ಎ.ಜಯಚಂದ್ರ, 1977.

20. ಜಾನಪದ ನರಗುಂದ : (ಸಂ) ಎ.ಎಸ್.ಹೂಗಾರ, 1973.

21. ಜೀವನ ಜೋಕಾಲಿ (ಭಾಗ–2) : (ಸಂ) ಡಾ.ಎಂ.ಎಸ್.ಸುಂಕಾಪುರ, 1971.

22. ಜೀವನ ಜೋಕಾಲಿ (ಭಾಗ–3) :(ಸಂ) ಡಾ.ಎಂ.ಎಸ್.ಸುಂಕಾಪುರ, 1972.

23. ಜೀವನ ಜೋಕಾಲಿ:(ಸಂ)ಡಾ.ಎಂ.ಎಸ್.ಸುಂಕಾಪುರ, 1976.

24. ಶಿವಮ್ಮಕ್ಕನ ಪದಗಳು : (ಸಂ) ಡಾ.ಎಲ್.ಆರ್.ಹೆಗಡೆ, 1969.

25. ನಮ್ಮ ಜನಪದ ಕಥೆಗಳು : (ಸಂ) ಡಾ.ಎಲ್.ಆರ್.ಹೆಗಡೆ, 1976.

26. ಬಯಲು ಸೀಮೆಯ ಜನಪದ ಗೀತೆಗಳು : (ಸಂ) ತಿ.ಲಿಂಗಯ್ಯ, 1973.

27. ಬಯಲು ಸೀಮೆಯ ಜನಪದ ಗೀತೆಗಳು: (ಸಂ) ಡಿ. ಲಿಂಗಯ್ಯ, 1973.

28. ಚಿತ್ತರಗಿ ಗಾದೆಗಳು : (ಸಂ) ಚ. ಚ. ಬಿರಾದಾರ, 1981.

29. ಲಾವಣಿಗಳು : (ಸಂ) ಕೆ. ಮರುಳಸಿದ್ಧಪ್ಪ, 1972.

30. ವಡ್ಡಗೆರೆ ನಾಗಮ್ಮ : (ಸಂ) ವೈಜಯಂತಿಮಾಲ, 1981.

31. ಸುವ್ವೀ ಸುವ್ವೀ ಸುವ್ವಾಲೆ : (ಸಂ) ಡಾ. ಎಲ್. ಆರ್. ಹೆಗಡೆ, 1971.

32. ಹಾಡಿನಲ್ಲಿ ನಾಡಕತೆಗಳು : (ಸಂ) ಕ. ರಾ. ಕೃಷ್ಣಸ್ವಾಮಿ, 1972.

33. ಹಾಡ್ಹೇಳೆ ತಂಗೀ ನೀ ದನಿ ಎತ್ತಿ : (ಸಂ) ಕಾವ್ಯಜೀವಿ, 1979.

34. ಹಾಲಸ್ವಾಮಿಯ ಸುತ್ತ ಯಾಲಕ್ಕಿ ಬದಾಂವ : (ಸಂ) ಎಸ್. ಎಂ. ಬದರಿ, 1976.

35. ಹುಟ್ಟಿದ ಹಳ್ಳಿ : (ಸಂ) ಅರ್ಚಕ ಬಿ. ರಂಗಸ್ವಾಮಿ, 1971.

(ಇ) ನೂತನ ಕೃತಿಗಳು :

1. ಉತ್ತರ ಕರ್ನಾಟಕದ ಜನಪದ ಸಾಹಿತ್ಯ : ಡಾ. ಎಂ. ಎಂ. ಕಲಬುರ್ಗಿ, 1978.

2. ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಡಾ. ಎಚ್. ತಿಪ್ಪೇರುದ್ರಸ್ವಾಮಿ, 1974.

3. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ. ಎಂ. ಚಿದಾನಂದಮೂರ್ತಿ, 1966.

4. ಕರ್ನಾಟಕದ ಇತಿಹಾಸ : ಪಂಚಮುಖಿ ಆರ್. ಎಸ್. 1966.

5. ಕರ್ನಾಟಕದ ವೀರಗಲ್ಲುಗಳು : ಡಾ. ಆರ್. ಶೇಷಶಾಸ್ತ್ರಿ, 1982.

6. ಕುಮಾರರಾಮನ ಸಾಂಗತ್ಯಗಳು : ಜೀ. ವರದರಾಜನ್, 1966.

7. ಗ್ರಾಮೀಣ : ಡಾ. ಎಂ. ಚಿದಾನಂದಮೂರ್ತಿ, 1977.

8. ಜಾನಪದ : ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ :
ದೇವೇಂದ್ರಕುಮಾರ ಹಕಾರಿ, 1979.

9. ಜಾನಪದ ಸೌಂದರ್ಯ : ದೇ. ಜವರೇಗೌಡ, 1977.

10. ನವಭಾರತ ಪಿತ ರಾಜಾರಾಮ ಮೋಹನರಾಯ : ಡಬ್ಲ್ಯೂ. ಹೆಚ್. ಹನುಮಂತಪ್ಪ, 1978.

11. ಪ್ರವಾಸಿ ಕಂಡ ಇಂಡಿಯಾ : ಸಂ–1 : (ಸಂ) ಎಚ್. ಎಲ್. ನಾಗೇಗೌಡ,

12. " : ಸಂ–2 : " , 1966.

13. " : ಸಂ–3 : " , 1969.

14. " : ಸಂ–4 : " , 1972.

15. ಪ್ರವಾಸಿಕಂಡ ಇಂಡಿಯಾ : ಸಂ-5 : (ಸಂ) ಎಚ್.ಎಲ್.ನಾಗೇಗೌಡ, 1975.

16. " " : ಸಂ-6 : (ಸಂ) " " , 1977.

17. ಮಣ್ಣಿನ ಮಿಡಿತ : ಡಿ.ಲಿಂಗಯ್ಯ, 1969.

18. ಮಹಾಸತಿ ಆಚರಣೆ ಒಂದು ಅಧ್ಯಯನ : ಡಾ.ಬಸವರಾಜ ಕಲ್ಗುಡಿ, 1985.

19. ಮಾತನಾಡುವ ಕಲ್ಲು : ಆನಂದಕಂದ, 1977.

20. ಮಾಸ್ತಿ ಕಲ್ಲುಗಳು : ಚನ್ನಕ್ಕ ಎಲಿಗಾರ, 1977.

21. ಯುಗಯಾತ್ರೀ ಭಾರತೀಯ ಸಂಸ್ಕೃತಿ : (ಪ್ರ.ಸಂ) ಕೆ.ವಿ.ಪುಟ್ಟ, 1971.

22. ವಚನಕಾರರ ದೃಷ್ಟಿಯಲ್ಲಿ ಸ್ತ್ರೀ : ಶ್ರೀಮತಿ ಶೈಲಜಾ ಉಡಚಣ, 1978.

23. ವಾಗರ್ಥ : ಡಾ.ಎಂ.ಚಿದಾನಂದಮೂರ್ತಿ, 1981.

24. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು : ಡಾ.ಎಂ.ಚಿದಾನಂದಮೂರ್ತಿ, 1975.

25. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ : ಡಾ.ಚೆನ್ನಕ್ಕ ಎಲಿಗಾರ, 1980.

26. ಸಂಗಮ್ ರಾಜಕೀಯ-ಸಾಮಾಜಿಕ ವ್ಯವಸ್ಥೆ : ಮೂಲ: ಎನ್.ಸುಬ್ರಮಣಿಯನ್, ಅನು : ನಿರಂಜನ, 1979.

27. ಸಂಭಾವನೆ : (ಶ್ರೀಕಂಠಯ್ಯನವರಿಗೆ), 1979.

28. ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು : ಡಾ.ಎಂ.ಎಂ.ಕಲಬುರ್ಗಿ, 1980.

29. ಸೌಭಾಗ್ಯವತಿ : (ಸಂ) ವಿದ್ಯಾ ಪುರಾಣಿಕ, 1978.

30. ಹೊನ್ನಮ್ಮನ ಹದಿಬದೆಯ ಧರ್ಮ : ಡಾ.ಸದಾನಂದ ನಾಯಕ್, ಶ್ರೀಮತಿ.ಸರೋಜಿನಿದೇವಿ ನಾಯಕ್, 1968.

<u>ಸಂಸ್ಕೃತ :</u>

1. ಅರ್ಥಶಾಸ್ತ್ರ : ಕೌಟಿಲ್ಯ : ಅನು: ಕೆ.ಕೃಷ್ಣಭಟ್ಟ, 1972.

2. ಋಗ್ವೇದ ಸಂಹಿತಾ : ಆಸ್ಥಾನ ಮಹಾವಿದ್ವಾನ್ ಎಚ್.ಪಿ.ವೆಂಕಟರಾವ್, 1954.

3. ಕಥಾಮೃತ (ಕಥಾಸರಿತ್ಸಾಗರದ ಸಾರಸಂಗ್ರಹ) : ಎ.ಆರ್.ಕೃಷ್ಣಶಾಸ್ತ್ರಿ.

4. ಪದ್ಮಪುರಾಣ : (ಉ.ಖಂ) : ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ, 1946.

5. ಮನುಸ್ಮೃತಿ : ಚಕ್ರಕೋಡಿ ಈಶ್ವರಶಾಸ್ತ್ರಿ, 1969.

6. ಮೃಚ್ಛಕಟಿಕ : (ಸಂ) ಎಂ.ಆರ್.ಕಾಳೆ, 1962.

7. Agnipurana : Anandasrma Press, Ed, Poona, 1900

8. Kadambari : Nirnaya Sagara Press, Ed, Bombay, 1910

9. Kamasutra - of Vastyayana, Kshi Sanskrit Series, Banaras, 1929

10. Kumarasambava of Kalidas : R.D.Karmanakar, 1951

11. Mahabharata : Kumbhakenam, Ed., 1906-9, Kumbhakonam

**ఇంగ్లీష్ :**

1. Basa - A Study : A.D. Pusalkar, 1940

2. History of Dharmasastra - II : P.V.Kane, 1941

3. History of Sucide in India Upendra Thakur

4. Manners and Customs of people of India : Dubious, 1879

5. Memorial Stones : Ed: S.Settar, Gunther D.Sontheimer, 1982

6. New light on the most ancient East : Gordon Childe

7. Sati: V.N.Datta, 1988

8. Seminar on Hero Stones : Ed, R.Nagaswamy, 1973

9. Social and Political life in Vijayanagar Empire: Vol-II Dr.B.A.Saletore, 1934

10. Sutte : Edward. Thomson, London, 1926

11. The Deeds of Harsha : V.S.Agrawala, 1969

12. The Oxford History of India : Vincent Smith, 1938

13. The Position of Women in Hindu Civilization: Dr.A.S. Altekar, 1956

14. The Village Gods of South India : White Head.

## ವಿಶ್ವಕೋಶ – ಪತ್ರಿಕೆಗಳು :

1. Encyclopedia of Religion and Ethics, XII
2. Mirror, January, 1981
3. Sunday Standard Magazine, January, 11, 1981; 5.12.80
4. The Inllustrated Weekly of India, January, 18-24,1981
5. ಉತ್ಥಾನ, ಆಗಸ್ಟ್, 1980
6. ಜಯಕರ್ನಾಟಕ, ಸಂ–36, ಸಂ–9, 1958; ಸಂ–2, 1932
7. ತರಂಗ, 4 ಅಕ್ಟೋಬರ್, 1987
8. ಪ್ರಜಾವಾಣಿ, 10–5–1981; 12–9–1982
9. ಪ್ರಬುದ್ಧ ಕರ್ನಾಟಕ, ಸಂ–56, ಸಂ–1, 1974
10. ಸಂಯುಕ್ತ ಕರ್ನಾಟಕ, 4–12–1980
11. ಸಾಧನೆ, 4–2.

### ಸಂಕ್ಷಿಪ್ತಗಳು :

1. E.C. - Epigraphia Carnatica
2. E.I. - Epigraphia India
3. H.A.S. - Hydrabad Archeological Series
4. K.I. - Karnataka Inscriptions
5. M.A.R. - Mysore Archaeological Report
6. S.I.I. - South Indian Insćriptions

o—o

# ಛಾಯಾ ಚಿತ್ರಗಳು



1 ಗಂಡು ಹೆಣ್ಣಿನ ಜೋಡಿ ಅಸ್ಥಿಪಂಜರಗಳು, ಲೋಥಾಲ್ (ಗುಜರಾತ).



9. ವಾಸ್ತಿಕಟ್ಟ. (ಮಾಸ್ತಿಗುಡಿ).



10. ವಡ್ಡಗೆರೆ (ವಾಸ್ತಿಗುಡಿ).



11.
(ಹೊಂಬುಜ).



12.
(ಕಾರ್ಕಳ).



33. ಮಾಸ್ತಿ ಕುಟುಂಬ, (ಶ್ರೀರಂಗಪಟ್ಟಣ).



36. ಮಾಸ್ತಿ ಕೊಂಡ ಬೀಳುವುದು. (ಅಂಕೋಲಾ)



43. ಮಾಸ್ತಿದಿಬ್ಬ, (ಮನಸುಂಡಿ).



44. ಮಾಸ್ತಿಕಟ್ಟೆ (ಮಾರಕಟ್ಟೆ-ಹೊನ್ನಾಳಿ).



45. ಮಸ್ತಿನಿ ಸಮಾಧಿ, (ಸತ್ತಲು).



46. ಮಸ್ತಿ ಬಳೆ. (ಶ್ರೀರಂಗಪಟ್ಟಣ).



47. ವಗಸ್ತಿ ಪೀಠ. (ಶ್ರೀರಂಗಪಟ್ಟಣ).



48. ವಗಸ್ತಿ ಕನ್ನಡಿ. (ಶ್ರೀರಂಗಪಟ್ಟಣ).



49. ಮಾಸ್ತಿಕಳಸ. (ಶ್ರೀರಂಗಪಟ್ಟಣ).



50. ಮಾಸ್ತಿಹಳ್ಳ, (ಉಪ್ಪಿನಹೊಳೆ)



51. ಮಾಸ್ತಿಗಿಡ, (ಮಾನಗುಂಡಿ).



52. ಹೆಬ್ಬಲಗುಪ್ಪೆ.



53. ಚಿನಕನಕೊಂಡಿ.



54. ಮುನಗುಂಡಿ.



55.
(ಕುಣಿಗೆನಹಳ್ಳಿ)



56.
(ಕುಣಿಗೆನಹಳ್ಳಿ)



57
(ಚಿಕ್ಕ ಹಾಲಿವಾಣ).



58
(ಚಿಕ್ಕ ಹಾಲಿವಾಣ).



65
(ಬಾಚಹಳ್ಳಿ).



75
(ಬಂಡಿಹಾಳ).



76
(ಮಾರಕಟ್ಟೆ-ಹೊನ್ನಾವರ).



103
(ಉಂಡಿಗನಾಳು)



104
(ಉಂಡಿಗನಾಳು)

